# ಭಾರತಾರ್ಯರ
# ಧಾರ್ಮಿಕ ಸಂಸ್ಕೃತಿ

ಆಸ್ಥಾನ ಮಹಾವಿದ್ವಾನ್
**ಎಡತೊರೆ ಚಂದ್ರಶೇಖರ ಶಾಸ್ತ್ರೀ**, ಎಂ.ಎ.,
ವಿಶ್ರಾಂತ, ಸಂಸ್ಕೃತ ಮಹಾಪಾಠಶಾಲಾಧ್ಯಕ್ಷ

*

ಪ್ರಕಾಶಕರು :
ಮೈಸೂರು ಸಂಸ್ಥಾನದ
ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ,
ವಿಧಾನಸೌಧ, ಬೆಂಗಳೂರು.

*

ಬೆಂಗಳೂರು
ಮೈಸೂರು ಸರ್ಕಾರದ ಮುದ್ರಣಾಲಯದ ಡೈರೆಕ್ಟರವರಿಂದ
ಮುದ್ರಿಸಲ್ಪಟ್ಟಿತು
೧೯೫೮.

ಬೆಲೆ : ರೂ. ೨.೮೫

॥ ಶ್ರೀ ॥

ನನ್ನ ಯಜಮಾನರು ದಿವಂಗತ ಸರ್ವಜ್ಞ ಸೇವಾ ಧುರೀಣ

**ಶ್ರೀ ಕೆ. ವಿ. ರಾಮಚಂದ್ರರಾಯರ**

ಸ್ಮರಣೆಯಾಗಿ ಪೂರ್ಣಪ್ರಜ್ಞ ವಿದ್ಯಾಪೀಠದ ಪುಸ್ತಕ ಭಂಡಾರಕ್ಕೆ

ಗ್ರಂಥ ದಾನ

**ಶ್ರೀಮತಿ ಡಿ. ವಿ. ಪದ್ಮಾವತಮ್ಮ**

**15–12–1986**

# ಭಾರತೀಯರ
# ಧಾರ್ಮಿಕ ಸಂಸ್ಕೃತಿ

ಆಸ್ಥಾನ ಮಹಾವಿದ್ವಾನ್
**ಎಡತೊರೆ ಚಂದ್ರಶೇಖರ ಶಾಸ್ತ್ರೀ**, ಎಂ.ಎ.,
ವಿಶ್ರಾಂತ, ಸಂಸ್ಕೃತ ಮಹಾಪಾಠಶಾಲಾಧ್ಯಕ್ಷ



ಪ್ರಕಾಶಕರು :
ಮೈಸೂರು ಸಂಸ್ಥಾನದ
ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ,
ವಿಧಾನಸೌಧ, ಬೆಂಗಳೂರು.



ಬೆಂಗಳೂರು :
ಮೈಸೂರು ಸರ್ಕಾರದ ಮುದ್ರಣಾಲಯದ ಡೈರೆಕ್ಟರವರಿಂದ
ಮುದ್ರಿಸಲ್ಪಟ್ಟಿತು
೧೯೫೮

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ

# ಪ್ರಸ್ತಾವನೆ

ಧರ್ಮದ ತಿಳಿವಳಿಕೆ, ಅದನ್ನು ಅನುಸರಿಸಿರುವ ನಡೆವಳಿಕೆ, ಧಾರ್ಮಿಕ ಸಂಸ್ಕೃತಿ—ಇವು ಈ ಭಾರತ ದೇಶದಲ್ಲಿರುವ ಜನರ ದಿನಗಟ್ಟಲೆಯ ಜೀವನದಲ್ಲಿ ಹಾಸುಹೊಕ್ಕುಗಳಂತೆ ಬೆರೆದು ಬೆಳೆಯುತ್ತಾ ಬಂದಿವೆ. ಇವು ಹೇಗೆ ಪ್ರಾರಂಭವಾಗಿ ಬೇರೂರಿ ಬಲಗೊಂಡವು, ಇವುಗಳ ಹುಟ್ಟು ಬೆಳವಣಿಗೆ, ಏಳು ಬೀಳುಗಳು, ಇತರ ಸಂಸ್ಕೃತಿಗಳೊಡನೆ ಸಂಪರ್ಕ, ಪರಸ್ಪರ ಪರಿಣಾಮ, ಈಗಿನ ಸ್ಥಿತಿ, ಮುಂದೆ ಇವುಗಳ ಮುನ್ನಡೆ–ಈ ವಿಷಯದಲ್ಲಿ ತಿಳಿವಳಿಕೆಯನ್ನು ಪಡೆಯಬೇಕೆಂದು ವಿಚಾರಶೀಲರಾದ ಮನುಷ್ಯರೆಲ್ಲರೂ ಆಶಿಸುವುದು ಸ್ವಾಭಾವಿಕವಾಗಿದೆ. ಈ ವಿಷಯವನ್ನು ಕುರಿತು ಒಂದು ಚಿಕ್ಕ ಗ್ರಂಥವನ್ನು ಬರೆಯಬೇಕೆಂಬ ಕುತೂಹಲವು ನಾನು ಉಪಾಧ್ಯಾಯನಾದಾಗಿನಿಂದಲೂ ನನಗೂ ಇತ್ತು. ಈಚೆಗೆ ಸರ್ಕಾರದವರು—ಮಾದರಿಯ ಮೈಸೂರು ಸರ್ಕಾರದವರು—ಈ ವಿಷಯದಲ್ಲೂ ಮುಂದಾಲೋಚನೆಯಿಂದ ಸಂಸ್ಕೃತಿ ಪ್ರಚಾರ ಕಾರ್ಯವನ್ನು ಕ್ರಮವಾಗಿ ನೆರವೇರಿಸಲು ಒಂದು ಪ್ರತ್ಯೇಕ ಶಾಖೆಯನ್ನು ಪ್ರಾರಂಭಿಸಿ ಈ ಕಾರ್ಯದಲ್ಲಿ ನೆರವಾಗಬಲ್ಲ, ಸೇವೆಯನ್ನು ಸಲ್ಲಿಸಲು ಇಚ್ಛೆಯುಳ್ಳ ಜನರನ್ನು ಆರಿಸಿ ಸಂಸ್ಕೃತಿ ಪ್ರಚಾರೋಪನ್ಯಾಸಗಳನ್ನು ನಗರಗಳಲ್ಲೂ ಗ್ರಾಮಾಂತರಗಳಲ್ಲೂ ಕೊಡಲು ಏರ್ಪಡಿಸಿದರು.

ಈ ಉಪನ್ಯಾಸಕರ ಪೈಕಿ ನಾನೂ ಒಬ್ಬನಾಗಿ ಅನೇಕ ಗ್ರಾಮಗಳಲ್ಲೂ ನಗರಗಳಲ್ಲೂ ಉಪನ್ಯಾಸಗಳನ್ನು ಕೊಟ್ಟೆನು ಈ ಸಂದರ್ಭದಲ್ಲಿ ನಾನು ಪಡೆದ ಅನುಭವಗಳು ಮತ್ತು ಗ್ರಂಥ ವ್ಯಾಸಂಗ_ಇವುಗಳ ಫಲವಾಗಿ ಈ ಸಣ್ಣ ಗ್ರಂಥವನ್ನು ಬರೆಯಲು ಉದ್ದೇಶವಿತ್ತು. ಆ ಕಾಲಕ್ಕೆ ಸರಿಯಾಗಿ ನಮ್ಮ ಈ ಇಲಾಖಾ ಡೈರೆಕ್ಟರವರಿಂದ ಇಂತಹ ಒಂದು ಗ್ರಂಥವನ್ನು ಬರೆದುಕೊಡಬೇಕೆಂದು ಕರೆಯೂ ಬಂದಿತು. ಅದನ್ನನುಸರಿಸಿ ಈ ಗ್ರಂಥವನ್ನು ಬರೆದಿದ್ದೇನೆ. ಇದಲ್ಲದೆ ನಮ್ಮ ಶ್ರೀಮನ್ಮಹಾರಾಜರವರ ಅಪ್ಪಣೆ ಪ್ರೋತ್ಸಾಹಗಳಿಂದ ಕೆಲವು ಪುರಾಣಗಳ ಸಂಸ್ಕೃತ ಮೂಲದೊಡನೆ ಅವುಗಳ ಕನ್ನಡ ಅನುವಾದವನ್ನೂ " ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ " ಎಂಬ ಹೆಸರಿನಲ್ಲಿ ಬರೆದು ಮುದ್ರಿಸಿ ಪ್ರಕಟಮಾಡಲು ಸಹಕರಿಸಿ ಸೇವೆಯನ್ನು ಸಲ್ಲಿಸಿರುವೆನು. ಈ ಗ್ರಂಥಮಾಲೆಯಲ್ಲಿ ಅಷ್ಟಾವಕ್ರಗೀತಾ, ಸೂತಸಂಹಿತಾ, ದೇವೀಭಾಗವತ, ಲಿಂಗಮಹಾಪುರಾಣ, ತ್ರಿಪುರಾ ರಹಸ್ಯ, ದುರ್ಗಾಸಪ್ತಶತೀ, ಕಲ್ಕಿಪುರಾಣ, ಆದಿಪುರಾಣ, ಪಂಚೋಪನಿಷತ್ತುಗಳು, ಶ್ರೀವಿದ್ಯಾಮಂತ್ರ ಭಾಷ್ಯ—ಇಷ್ಟು ಗ್ರಂಥಗಳನ್ನು ಸಂಸ್ಕೃತ ಮೂಲ ಕನ್ನಡ ಅರ್ಥಾನುವಾದದೊಡನೆ ಅಚ್ಚುಮಾಡಿ ಪ್ರಕಟಿಸಲಾಗಿವೆ. ಈ ಕೆಲಸದಿಂದಲೂ ಈಗ ಬರೆದಿರುವ " ಭಾರತಾರ್ಯರ ಧಾರ್ಮಿಕ ಸಂಸ್ಕೃತಿ "ಗೆ ತುಂಬಾ ಸಹಾಯವಾಗಿದೆ. ಆದರೂ ಈ ಗ್ರಂಥದಲ್ಲಿ ಲೋಪದೋಷಗಳಿವೆ. ಸಹೃದಯರಾದ ಓದುಗಮಹಾಶಯರು ತಮಗೆ ಕಾಣಬರಬಹುದಾದ ಲೋಪ ದೋಷಗಳನ್ನೂ ಇನ್ನೂ ಇದನ್ನು

ಉತ್ತಮಗೊಳಿಸಲು ಅನುಕೂಲವಾಗಬಹುದಾದ ಸಲಹೆಗಳನ್ನೂ ದಯೆಯಿಟ್ಟು ನನಗೆ ತಿಳಿಸಿದರೆ ಕೃತಜ್ಞತೆಯಿಂದ ಸ್ವೀಕರಿಸಿ ಉತ್ತಮಗೊಳಿಸಲು ಸಿದ್ಧನಾಗಿರುತ್ತೇನೆಂದು ವಿಜ್ಞಾಪಿಸುತ್ತೇನೆ. ಇಂತಹ ಉತ್ತಮ ರೀತಿಯ ಸೇವಾವಕಾಶವನ್ನು ನನಗೆ ಒದಗಿಸಿ ಕೊಟ್ಟ, ಡೈರೆಕ್ಟರ ಪದವಿಯಿಂದ ವಿಶ್ರಾಂತಿಯನ್ನು ಪಡೆದಿರುವ, ನನ್ನ ಮಾನ್ಯ ಮಿತ್ರರಾದ ರಾಜಸೇವಾಸಕ್ತ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ.,ಎಲ್ಎಲ್.ಬಿ., ಅವರನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ.

ಇಂತು ವಿಜ್ಞಾಪಿಸುವ,
ಮಹಾವಿದ್ವಾನ್,
**ವೈ. ಚಂದ್ರಶೇಖರಶಾಸ್ತ್ರೀ.**

" ಗಣೇಶಂ ವಿಘ್ನನಾಶಾಯ ವಾಣೀಂ ವಾಗರ್ಥಬುದ್ಧಯೇ |
ಗುರುಂ ಗೂಢಾರ್ಥಭಾನಾರ್ಥಂ ಪ್ರಣಮಾಮಿ ಸದಾ ಮುದಾ ||"

# ವಿಷಯ ನಿರೂಪಣೆ

ಈ ಭರತಖಂಡದಲ್ಲಿರುವ ಆರ್ಯರು ಮನಗಂಡು ಬೆಳಸಿಕೊಂಡು ಬಂದಿರುವ ಸಂಸ್ಕೃತಿಯ ಸ್ವರೂಪ, ಈ ಸಂಸ್ಕೃತಿಯು ಧಾರ್ಮಿಕ ಅಥವಾ ಧರ್ಮ ಮೂಲವಾದುದು ಎಂಬುದರ ಅರ್ಥ ವಿಶೇಷ, ಈ ಧಾರ್ಮಿಕ ಸಂಸ್ಕೃತಿಯ ಹೆಚ್ಚುಗಾರಿಕೆ, ಹಿರಿಮೆ, ಮೇಲ್ಮೆಗಳು ಇದರಿಂದ ಪ್ರಾಚೀನಕಾಲದಿಂದಲೂ ಜನಜೀವನಕ್ರಮದಲ್ಲಿ ಉಂಟಾದ ಈಗ ಆಗುತ್ತಿರುವ, ಮುಂದೆ ಉಂಟಾಗಬೇಕಾದ ಫಲ ಪರಿಣಾಮ ಗಳು, ಇದರ ಪ್ರಸಾರಕ್ಕಾಗಿ ಜನರೂ ಸರ್ಕಾರವೂ ಕೈಗೊಂಡಿರುವ ಕೈಗೊಳ್ಳಬೇಕಾದ ಕಾರ್ಯಕ್ರಮಗಳು, ಇದರಿಂದ ದೊರೆಯುವ ಮಾನವ ಜನ್ಮದ ಸಾರ್ಥಕತೆ, ಪುರುಷಾರ್ಥಗಳ ಪ್ರಾಪ್ತಿ—ಇವು ಎಲ್ಲರಿಗೂ ಹೇಗೆ ಉಂಟಾಗುತ್ತವೆ—ಈ ಮುಂತಾದ ಅಂಶಗಳನ್ನು ಆಯಾ ಕಾಲಗಳಲ್ಲಿ ರಚಿತವಾದ ಗ್ರಂಥಗಳ ಆಧಾರದ ಮೇಲೆ ಈ ಗ್ರಂಥದಲ್ಲಿ ಸಂಗ್ರಹವಾಗಿ ಆದರೂ ಸಾಧ್ಯವಾದಷ್ಟು ವಿಶದವಾಗಿ ನಿರೂಪಿಸಲು ಪ್ರಯತ್ನಿಸಲಾಗಿದೆ.

---

# ವಿಷಯಾನುಕ್ರಮಣಿಕೆ


ಪುಟ

1. ಪ್ರಸ್ತಾವನೆ ... i
2. ವಿಷಯ ನಿರೂಪಣೆ ... v
3. ಮೊದಲನೆಯ ಅಧ್ಯಾಯ:—ವೈದಿಕಸಾಹಿತ್ಯದಲ್ಲಿ ಸಂಸ್ಕೃತಿ... ೧
    - ಸಂಸ್ಕೃತಿ ಶಬ್ದಾರ್ಥ, ಅದರಲ್ಲಿ ಎರಡುಬಗೆ ... ೧
        - ಬಾಹ್ಯಸಂಸ್ಕೃತಿ ... ೧
        - ಅಭ್ಯಂತರ ಸಂಸ್ಕೃತಿ ... ೨
    - ಸಂಸ್ಕೃತಿಯಿಂದ ಶೀಲವು ರೂಪುಗೊಳ್ಳುತ್ತದೆ ... ೪
    - ಸಂಸ್ಕೃತಿಗಳಲ್ಲಿ ಗುಣತಾರತಮ್ಯ ... ೫
    - ಸಂಸ್ಕಾರ ಎಂದರೆ ಕರ್ಮವೆಂದೂ ಅರ್ಥ ... ೬
    - ಭಾರತ ಶಬ್ದಾರ್ಥ ... ೭
    - ಆರ್ಯಶಬ್ದಾರ್ಥ ... ೯
    - ಸಂಸ್ಕೃತಿಯ ಸ್ವರೂಪ ಮತ್ತು ಮೂಲಾಧಾರಗಳು ... ೧೦
    - ಧಾರ್ಮಿಕ ಶಬ್ದಾರ್ಥ ... ೧೨
    - ಧರ್ಮಶಬ್ದಾರ್ಥ ... ೧೨
    - ಸಂಸ್ಕಾರ, ಕರ್ಮ, ಧರ್ಮ, ಜನ್ಮಾಂತರಗಳು ಸಂಬದ್ಧವಾಗಿವೆ. ೧೩
    - ಸಾಮಾನ್ಯಧರ್ಮ ಅಥವಾ ವಿಶ್ವಧರ್ಮ ... ೧೪
    - ಧಾರ್ಮಿಕ ಸಂಸ್ಕೃತಿಯ ಸ್ವರೂಪ, ಶಕ್ತಿ, ಫಲಗಳು ... ೧೫
    - ಧರ್ಮಸ್ವರೂಪವಿಶೇಷ ... ೧೬
    - ಸಂಸ್ಕೃತಿಯು ಸಾಹಿತ್ಯದಲ್ಲಿ ಅಮರವಾಗಿರುತ್ತದೆ ... ೧೭
    - ಸಂಸ್ಕೃತಿಗಳ ತಾರತಮ್ಯ ... ೧೯
    - ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯು ಜೀವಂತವಾಗಿದೆ ೨೦
    - ಧರ್ಮಲಕ್ಷಣ ನಿರ್ಣಯದ ಮೂಲಾಧಾರಗಳು ... ೨೧
    - ಧರ್ಮದ ವಿಸ್ತಾರದ ರೀತಿನೀತಿಗಳು ಪ್ರವೃತ್ತಿಧರ್ಮ ... ೨೨

ಪುಟ

ಧರ್ಮದಲ್ಲಿ ಎರಡು ಬಗೆ :—ಪ್ರವೃತ್ತಿ ಧರ್ಮ, ನಿವೃತ್ತಿ ಧರ್ಮ. ೨೨

ಇಹಜೀವನದಲ್ಲಿ ಸುಖದುಃಖಗಳು ಬೆರೆತೇ ಇರುತ್ತವೆ ... ೨೩

ಕರ್ಮದ ಸ್ವರೂಪ ಫಲಗಳು ... ೨೫

ಧರ್ಮಕರ್ಮಗಳು ಒಂದೇ ಅರ್ಥವುಳ್ಳವು ... ೨೬

ಧರ್ಮದ ಸ್ವರೂಪ ಮತ್ತು ಫಲಗಳು ... ೨೬

ಧರ್ಮವೂ, ದಾನವೂ, ಲೋಕಾಂತರ ಕಲ್ಪನೆಯೂ ... ೨೭

ದೇವತೆಗಳು ನೀತಿಧರ್ಮಪರರು, ಧಾರ್ಮಿಕರನ್ನು ರಕ್ಷಿಸುತ್ತಾರೆ. ೨೮

ಧರ್ಮಾಚರಣೆಯು ಅಂತಃ ಪ್ರೇರಣೆಯಿಂದ ... ೨೯

ಧರ್ಮದ ಬಗೆಗಳೂ ಪ್ರಯೋಜನಗಳೂ ... ೨೯

ಧರ್ಮವು ಪುರುಷಾರ್ಥಗಳಿಗೆ ಏಕಮಾತ್ರಸಾಧನ ... ೩೦

ಧರ್ಮದಿಂದ ಪ್ರೇಯಸ್ಸೂ ಮತ್ತು ಶ್ರೇಯಸ್ಸೂ ದೊರೆಯುತ್ತದೆ ೩೨

ಋಷಿಗಳು ಮಂತ್ರದ್ರಷ್ಟೃಗಳು ... ೩೩

ಮಾನವನ ಮನಸ್ಸಿನ ಮೇಲೆ ಪ್ರಕೃತಿಯ ಪ್ರಭಾವ ... ೩೪

ಪ್ರಕೃತಿಯು ಮಾನವನ ಎದುರಾಳಿಯಲ್ಲ ... ೩೬

ಪ್ರಕೃತಿಯು ಮಾನವನೊಡನೆ ಸಹಕರಿಸುವ ತಾಯಿ ... ೩೬

ಪ್ರಕೃತಿದೃಶ್ಯಗಳ ಹಿನ್ನೆಲೆಯಾಗಿ ದೇವತಾ ಶಕ್ತಿಗಳು — ದೇವತೆಗಳಲ್ಲಿ ಮೂರುಪಂಗಡಗಳು. ೩೭

ದೇವತೆಗಳು ನೀತಿಧರ್ಮಾಸಕ್ತರು ... ೩೮

ಇವೆಲ್ಲ ಭಿನ್ನಾಭಿಪ್ರಾಯಗಳಿದ್ದರೂ ಇದು ವಿಚಾರ ಪ್ರಚೋದಕ ೩೮

ಮಾನವನು ದೇವರನ್ನು ಮನಗಂಡ ಬಗೆ ... ೩೯

ಪ್ರಕೃತಿಯಲ್ಲಿರುವ ಕ್ರಮ ನಿಯಮಗಳು ... ೪೦

ಪ್ರಕೃತಿಯಲ್ಲಿ ಸೌಂದರ್ಯವು ಆಕರ್ಷಕವಾಗಿರುತ್ತದೆ ... ೪೨

ಪ್ರಕೃತಿಯಿಂದ ಮಾನವನಿಗೆ ಆಗುವ ಪ್ರಯೋಜನಗಳು ... ೪೩

ವೈಜ್ಞಾನಿಕರಂತೆ ಆರ್ಯರೂ ಪ್ರಕೃತಿಯನ್ನು ಪರಿಶೀಲಿಸಿದರು. ... ೪೩

ದೇವರು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನು ೪೩

ದೇವರು ಸರ್ವಜ್ಞನೂ, ಸರ್ವಶಕ್ತನೂ ಆಗಿರಬೇಕು ... ೪೪ ೫

ದೇವರು ಎಲ್ಲಕ್ಕೂ ವ್ಯವಸ್ಥಾಪಕನು, ಅಂತರ್ಯಾಮಿಯು... ೪೬
ದೇವತೆಗಳ ಲಕ್ಷಣಗಳು ಸಮಾನ

ಪುಟ

ದೇವತ್ವವು ಒಂದೇ ಆಗಿರಬೇಕು, ಹೆಸರುಗಳುಮಾತ್ರ ಬೇರೆ ೪೭—೮
ಜ್ಞಾನದ ಉತ್ಕರ್ಷ, ಮಹಿಮೆ, ಫಲಗಳು .. ೪೯
ಜ್ಞಾನಾರ್ಜನೆ ಮಾನವನ ಹುಟ್ಟುಗುಣ ಸ್ವಭಾವ ವಾಗಿದೆ. ... ೫೧
ಸಂಸ್ಕೃತಿಯೂ ಕಲೆಗಳೂ ... ೫೨
ಸಾಹಿತ್ಯವು ಕಲೆಗಳಲ್ಲಿ ಉತ್ತಮವಾದುದು ... ೫೨
ಸಾಹಿತ್ಯವೂ ಸಂಗೀತವೂ ಇತರ ಕಲೆಗಳೂ ... ೫೩
ಸಾಹಿತ್ಯದ ಸ್ವರೂಪ ಮತ್ತು ಫಲಗಳು ... ೫೩
ಸಾಹಿತ್ಯವು ಜನಜೀವನದ ಕನ್ನಡಿ ... ೫೩
ಕಾವ್ಯಕಲೆಯಿಂದ ಜನರಿಗೆ ಆಗುವ ಫಲಗಳು ... ೫೫
ಸಾಹಿತ್ಯದಲ್ಲಿ ಕರ್ಮವಾದ ಸಿದ್ಧಾಂತ, ಜನಜೀವನ ... ೫೬
ವೈದಿಕ ಸಾಹಿತ್ಯದಲ್ಲಿಯೇ ತತ್ತ್ವಜ್ಞಾನದ ಪ್ರಾರಂಭ ... ೫೭
ಸಾಹಿತ್ಯವು ಸಂಸ್ಕೃತಿಯವಾಹನ ... ೫೯
ಆರ್ಯರು ಏಕತತ್ತ್ವವನ್ನು ಮಾನಗಂಡರು ... ೫೯
ವೇದದಲ್ಲಿ ತತ್ತ್ವಜ್ಞಾನದ ಬೆಳವಣಿಗೆ ... ೬೧
ಸತ್ ಅಸತ್ ಶಬ್ದಗಳ ಅರ್ಥ ... ೬೧
ಸಂಸ್ಕೃತಿಯಲ್ಲಿ ಧರ್ಮದ ಸ್ಥಾನಮಾನಗಳು ... ೬೩
ಸಂಸ್ಕೃತಿಯಲ್ಲಿ ಧಾರ್ಮಿಕತೆಯಿಂದ ಪರಮತ ಸಹನೆ ಗೌರವಗಳು ಮತಪರಿವರ್ತನೆ ದೋಷವುಳ್ಳುದು. .. ೬೪
ವೈದಿಕ ಸಂಸ್ಕೃತಿಯಲ್ಲಿ ಮದ್ಯಮಾಂಸಗಳ ಉಲ್ಲೇಖನಗಳು. ... ೬೫
ವೈದಿಕ ಸಾಹಿತ್ಯದಲ್ಲಿ ಸ್ತ್ರೀಯರ ಸ್ಥಾನಮಾನಗಳು ... ೬೬
ವೈದಿಕ ಸಂಸ್ಕೃತಿ ಮತ್ತು ಋಣತ್ರಯ (ಮೂರು ಸಾಲಗಳು). ... ೬೭
ಋಣತ್ರಯ ಸ್ವಾಭಾವಿಕ ಜನರೆಲ್ಲರೂ ಅದನ್ನು ತೀರಿಸಬೇಕು ೬೮
ಋಣತ್ರಯಮೋಚನ, ಧರ್ಮದಿಂದ ವೇದಾಂತಜ್ಞಾನಕ್ಕೆ ಅಧಿಕಾರ, ಸಂಸ್ಕೃತಿಗಳ ತಾರತಮ್ಯ ೬೯
ಋಣತ್ರಯವನ್ನು (ಮೂರು ಸಾಲಗಳನ್ನು) ತೀರಿಸುವ ಬಗೆ ೭೦
ಪಿತೃಋಣ, ಋಷಿಋಣ, ದೇವಋಣಗಳ, ಸ್ವರೂಪ ... ೭೦
ಪ್ರವೃತ್ತಿಧರ್ಮದಲ್ಲೂ, ಕಾಮ್ಯಕರ್ಮಗಳಲ್ಲೂ ವ್ಯವಸ್ಥೆ ... ೭೨

| | | |
|---|---|---|
| | | ಪುಟ |
| ಮಾಂಸ ಭಕ್ಷಣದೋಷ ಮತ್ತು ಅದರ ನಿಷೇಧ | ... | ೭೩ |
| ಋಣತ್ರಯಮೋಚನೆಯು ನಿತ್ಯವಾದ ವಿಶ್ವಧರ್ಮ | ... | ೭೫ |
| ವಿದ್ಯಾಭ್ಯಾಸ ಕ್ರಮದಲ್ಲಿ ಧರ್ಮದ ತಿಳಿವಳಿಕೆಗೆ ಮುಖ್ಯಸ್ಥಾನವಿರಬೇಕು. | | ೭೫ |
| ಮಾನವ ಜನ್ಮವು ಶ್ರೇಷ್ಠತಮವಾದುದು. ಜೀವರ ಪ್ರಗತಿ ಮಾರ್ಗ. | | ೭೬ |
| ಆತ್ಮಗುಣ ವಿಕಾಸಕ್ರಮದಲ್ಲಿ ಮಾನವನು ಎಲ್ಲಕ್ಕೂ ಮೇಲಿರುತ್ತಾನೆ. | ... | ೭೭ |
| ಸೃಷ್ಟ್ಯಾತ್ಮಕ ಪರಿವರ್ತನೆ. (Creative Evolution) | | ೭೮ |
| ಪರಿಣಾಮವಾದ (Thery of Evolution) ಅಥವಾ ಜೀವನ ಆತ್ಮೋನ್ನತಿಕ್ರಮ. | | ೭೯ |
| ಚೇತನ ಚೋದಿತ ಪ್ರಕೃತಿಪರಿಣಾಮವಾದ, ಉಪಾಧಿಗುಣ ವಿಕಾಸಕ್ರಮ. | | ೮೦ |
| ಜನ್ಮಗಳ ಮೇಲ್ಮೆಗೆ ತಿಳಿವಳಿಕೆಯ ಹೆಚ್ಚಿಗೆಯೇ ಆಧಾರವು | | ೮೦ |
| ವೈದಿಕ ಸಾಹಿತ್ಯದ ಕರ್ಮವಾದ (The Law of-Karma). | | ೮೧ |
| ಕರ್ಮವಾದ ಸಿದ್ಧಾಂತಗಳ ವಿವರಣೆ | ... | ೮೧ |
| ಕರ್ಮವಾದವೂ ಜನ್ಮಾಂತರಗಳೂ | ... | ೮೨ |
| ಕಾಮ್ಯಕರ್ಮದಿಂದ ಸಂಸಾರವು ಜನನ ಮರಣ ಪರಂಪರೆಯು ಅನಂತವಾಗಿ ಸಾಗುತ್ತಿರುತ್ತದೆ. | | ೮೩ |
| ನಿಷ್ಕಾಮಕರ್ಮದಿಂದ ಚಿತ್ತಶುದ್ಧಿಯೂ ಉತ್ತಮ ಪುರುಷಾರ್ಥ ಪ್ರಾಪ್ತಿಯೂ. | | ೮೫ |
| ವೈದಿಕ ಸಾಹಿತ್ಯದಲ್ಲಿ ಚಾತುರ್ವರ್ಣ್ಯದ ಸ್ಥಿತಿ | ... | ೮೬ |
| ಪುರುಷ ಸೂಕ್ತದಲ್ಲಿ ಚಾತುರ್ವರ್ಣ್ಯದ ಸೂಚನೆ | ... | ೮೭ |
| ಚಾತುರ್ವರ್ಣ್ಯವು ಪ್ರಾರಂಭವಾದ ಬಗೆ | ... | ೯೦ |
| ಚಾತುರ್ವರ್ಣ್ಯದ ಗುಣವಿಶೇಷಗಳು | ... | ೯೨ |
| ಚಾತುರ್ವರ್ಣ್ಯವು ಸ್ವಾಭಾವಿಕವಾದುದು; ಆವಶ್ಯಕವಾದುದು. | | ೯೩ |
| ಅದು ಸ್ವಾರ್ಥಪರರಿಂದ ಕಲ್ಪಿತವಾಗಿ ಇತರರ ಮೇಲೆ ಹೇರಲ್ಪಟ್ಟದ್ದಲ್ಲ. | | ೯೪ |
| ಸಂಸ್ಕೃತಿಯಿಂದ ಗುಣಕರ್ಮ ಶಕ್ತಿಗಳು | ... | ೯೫ |

| | | ಪುಟ |
|---|---|---|
| ಸಾಮಾನ್ಯ ಅಥವಾ ವಿಶ್ವಧರ್ಮ | ... | ೯೬ |
| ಸಂಧ್ಯಾವಂದನ_ಅರ್ಘ್ಯಪ್ರದಾನ | ... | ೯೬ |
| ಗಾಯತ್ರೀಜಪ ಸೂರ್ಯೋಪಸ್ಥಾನ | ... | ೯೯ |
| ಗುರುಕುಲ ವೇದಾಭ್ಯಾಸ | ... | ೧೦೦ |
| ನಚಿಕೇತನ ಕಥೆ | ... | ೧೦೨ |
| ಅತಿಥಿಸತ್ಕಾರದ ಮಹಿಮೆ | ... | ೧೦೪ |
| ನಚಿಕೇತನ ಮೂರು ವರಗಳು ಮೊದಲನೆಯ ಮತ್ತು ಎರಡನೆಯ ವರಗಳು. | | ೧೦೪ |
| ಮೂರನೆಯವರ | ... | ೧೦೫ |
| ಐಹಿಕ ಫಲಗಳಲ್ಲಿನ ದೋಷಗಳು | ... | ೧೦೬ |
| ಮೂರನೆಯ ವರದ ಹೆಚ್ಚುಗಾರಿಕೆ | ... | ೧೦೭ |
| ಕಠೋಪನಿಷತ್ತಿನಲ್ಲಿ ಆತ್ಮಸ್ವರೂಪ ; ಇಂದ್ರಿಯಗಳು ಬಹಿರ್ಮುಖಗಳೇಕೆ ? | | ೧೦೯ |
| ಧರ್ಮದ ಪ್ರಮಾಣಗಳು | ... | ೧೧೧ |
| ಧರ್ಮದ ಪ್ರಮಾಣಗಳಲ್ಲಿ ತಾರತಮ್ಯ | ... | ೧೧೨ |
| ಆತ್ಮತುಷ್ಟಿಪ್ರಮಾಣವು | ... | ೧೧೪ |
| ವೇದಗಳು ಅಪೌರುಷೇಯ ಗಳೆಂದರೇನು ? | ... | ೧೧೬ |
| ಮಂತ್ರಗಳನ್ನು ಋಷಿಗಳು ಮನಗಂಡು ಸಾರಿದ ಬಗೆ | ... | ೧೧೮ |
| ರಾಮಾಯಣ ರಚನೆಯ ಕಾಲ ಸನ್ನಿವೇಶ | ... | ೧೧೮ |
| ಶುದ್ಧ ಸಂಸ್ಕೃತಿಯು ಕಾವ್ಯಕ್ಕೆ ಮೂಲ | ... | ೧೨೦ |
| ಪರಿಣಾಮಕ್ರಮದಿಂದ ಸೃಷ್ಟಿಕ್ರಮ | ... | ೧೨೧ |
| ಧರ್ಮ ಪ್ರಹ್ಲಾದನ ಕುಮಾಲನರ ಕಥೆ | ... | ೧೨೨ |
| ಧರ್ಮಗತಿಯು ಬಹು ಸೂಕ್ಷ್ಮವಾದುದು | ... | ೧೨೩ |
| ಧರ್ಮದ ಅರಿವು ಉಂಟಾಗುವ ಬೆಳೆಯುವ ಬಗೆ | ... | ೧೨೪ |
| ಮನುಷ್ಯನಿಗೆ ಸ್ವಾಭಾವಿಕವಾಗಿ ಬೇಕಾದುದೇನು ? | ... | ೧೨೫ |
| ಧರ್ಮ ವಿಸ್ತರಣವು ಸಹಾನುಭೂತಿ ಸ್ವಾರ್ಥಗಳಿಂದಲೂ ಆಗುತ್ತದೆ. | | ೧೨೬ |
| ಪ್ರವೃತ್ತಿ ಧರ್ಮದ ಸ್ವರೂಪ | ... | ೧೨೭ |
| ಐಹಿಕ ಪುರುಷಾರ್ಥದ ಪರಮಾವಧಿ ; ಪ್ರವೃತ್ತಿಧರ್ಮದ ಲೋಪದೋಷಗಳು. | | ೧೨೮ |

| | ಪುಟ |
|---|---|
| ಪ್ರವೃತ್ತಿಧರ್ಮದ ಎರಡನೆಯ ದೋಷ, ಮೂರನೆಯ ದೋಷ. | ೧೨೮-೯ |
| ಪ್ರವೃತ್ತಿಧರ್ಮ ನಿವೃತ್ತಿಧರ್ಮಗಳಲ್ಲಿ ಯಾವುದು ಮೇಲು? ಏಕೆ? | ೧೩೦ |
| ಮಾನವನು ಗೃಹಸ್ಥನಾಗಿರುವಾಗಲೂ ನಿವೃತ್ತಿಧರ್ಮಪರನಾಗಿರಬಹುದು. | ೧೩೧ |
| ಯಾಜ್ಞವಲ್ಕ್ಯ—ಮೈತ್ರೇಯಿ ಸಂವಾದ ... | ೧೩೧ |
| ಐಹಿಕಾಮುಷ್ಮಿಕ ಸುಖಗಳು ಪರಮಪುರುಷಾರ್ಥಗಳಲ್ಲವು | ೧೩೩ |
| ಆತ್ಮನೇ ಪರಮ ಪ್ರೇಮಾಸ್ಪದನು ... | ೧೩೪ |
| ಹಿಂದಿನಕಾಲದ ವಿದ್ಯಾಭ್ಯಾಸ ಕ್ರಮ ... | ೧೩೭ |
| ಎರಡು ಬಗೆಯ ಉಪದೇಶಗಳ ತಾರತಮ್ಯ ... | ೧೪೦ |
| ಪ್ರಗತಿಪರರೂ ಪ್ರಾಚೀನ ಪ್ರೇಮಿಗಳು ... | ೧೪೧ |
| ವಿದ್ಯಾಭ್ಯಾಸವು ಧಾರ್ಮಿಕ ನಡೆವಳಿಕೆಗಾಗಿ | ೧೪೨-೧೪೪ |
| ಬುದ್ಧದೇವನ ಅವತಾರಕ್ಕೆ ಕಾರಣ ... | ೧೪೬ |
| ಬೌದ್ಧಮತವು ಹಿಂದೂ ಮತದಲ್ಲಿ ಸೇರಿಯೇ ಇದೆ ... | ೧೪೭ |
| ಬುದ್ಧದೇವನ ಉಪದೇಶ ಕ್ರಮದಲ್ಲಿ ಹೊಸ ರೀತಿ ... | ೧೪೯ |
| ಬುದ್ಧದೇವನೂ ವರ್ಣಧರ್ಮಗಳೂ ... | ೧೫೦ |
| ಎರಡನೆಯ ಅಧ್ಯಾಯ—ಸಾಹಿತ್ಯವು ಸಂಸ್ಕೃತಿಯ ಕನ್ನಡಿ ... | ೧೫೩ |
| ಸಂಸ್ಕೃತಿಯಿಂದ ಜನಜೀವನ ಹಸನಾಗುತ್ತದೆ ... | ೧೫೪ |
| ಸಂಸ್ಕೃತಿಯೂ ಸಾಹಿತ್ಯವೂ ... | ೧೫೪ |
| ಜನಜೀವನದ ಗುರಿಗಳೇ ಪುರುಷಾರ್ಥಗಳು ... | ೧೫೫ |
| ಜನರ ಪ್ರವೃತ್ತಿ ಮತ್ತು ಗುರಿಗಳು ... | ೧೫೬ |
| ಜನರಲ್ಲಿ ನಾಲ್ಕು ಬಗೆ ... | ೧೫೭ |
| ಸಾಮಾಜಿಕ ಮತ್ತು ವೈಯಕ್ತಿಕ ಗುರಿಗಳು ... | ೧೫೭ |
| ಪಾಮರರಿಗೆ ಆರ್ಥಿಕ ಸಂಪತ್ತೇ ಲೌಕಿಕ ಜೀವನದ ಗುರಿ | ೧೫೯ |
| ಶ್ರೀಮಂತ ಜನರ ಗುರಿಗಳು ... | |
| ಆಶೆಯನ್ನು ತಣಿಸುವುದು ಅತ್ಯಾಶೆ, ದುರಾಶೆ, ದುರಂತಗಳಿಗೆ ದಾರಿ. | ೧೫೯-೬೦ |
| ರಾಜಕೀಯ ಗುರಿಗಳು ... | ೧೬೧ |

| | |
|---|---|
| | ಪುಟ |
| ಐಹಿಕ ಗುರಿಗಳ ಲೋಪಗಳು ... | ೧೬೨ |
| ಕೇವಲ ಲೌಕಿಕ ಗುರಿಗಳು, ಪ್ರೇಯೋಜೀವನವು ಕಡೆಗಾದರೂ ಅತೃಪ್ತಿಕರವಾಗಿರುತ್ತದೆ. | ೧೬೩ |
| ಪ್ರೇಯೋಜೀವನಕ್ಕಿಂತ ಶ್ರೇಯೋ ಜೀವನವು ಮೇಲಾದುದು | ೧೬೪ |
| ತೃಪ್ತಿಕರವಾಗಲಾರದ ಸಂಪತ್ತು ಪುರುಷಾರ್ಥವಾಗಲಾರದು. | ೧೬೫ |
| ಧರ್ಮದಿಂದ ಸುಖ, ಅಧರ್ಮದಿಂದ ದುಃಖ ... | ೧೬೭ |
| ಧರ್ಮದ ಸರಳ ಪ್ರಥಮ ಸ್ವರೂಪ ... | ೧೬೮ |
| ನಮ್ಮಂತೆಯೇ ಇತರರೂ ಎಂಬ ಭಾವನೆಯೇ ಧರ್ಮ ... | ೧೬೯ |
| ವಿಶ್ವಧರ್ಮದ ಮೂಲಸ್ವರೂಪ ... | ೧೬೯ |
| ಪುರುಷಾರ್ಥಗಳು ಮೂರು, ಸಾಮಾನ್ಯ ಜನರಿಗೆ ... | ೧೭೦ |
| ಪುರುಷಾರ್ಥಗಳ ಸಾಲಿನಲ್ಲಿ ಮೊದಲು ಧರ್ಮ ಏಕೆ ... | ೧೭೧ |
| ಧನಮದವು ದುಃಖಕ್ಲೇಶಗಳನ್ನು ಮರೆಮಾಡಿರುತ್ತದೆ ... | ೧೭೩ |
| ಜನರಲ್ಲಿ ಮೂರು ಬಗೆ—ನಾಸ್ತಿಕರು, ಸಂಶಯ ವಾದಿಗಳು ಮತ್ತು ಆಸ್ತಿಕರು. | ೧೭೫ |
| ಸಂಶಯವಾದಿಗಳು ... | ೧೭೬ |
| ವೈಜ್ಞಾನಿಕರೂ ಸಂಶಯವಾದಿಗಳಾದರೂ ಜೀವನದಲ್ಲಿ ನೀತಿ ಧರ್ಮಗಳನ್ನು ಬಿಡಬಾರದೆನ್ನುತ್ತಾರೆ. | ೧೭೭ |
| ವೈಜ್ಞಾನಿಕರ ಜೀವನ ದೃಷ್ಟಿ ... | ೧೭೭ |
| ವಿಜ್ಞಾನವು ಏಕತತ್ವಕ್ಕೆ ತಲಪುತ್ತಿದೆ ... | ೧೭೯ |
| ಭಾರತೀಯ ದರ್ಶನಗಳ ಗುರಿ ... | ೧೮೦ |
| ಆಸ್ತಿಕರು ... ... | ೧೮೧ |
| ವೇದವೆಂದರೇನು? ... ... | ೧೮೩ |
| ಕರ್ಮಕಾಂಡದಲ್ಲಿ ಪ್ರವೃತ್ತಿ ಧರ್ಮದ ತೆಗಳಿಕೆ ... | ೧೮೫-೬ |
| ವೇದಗಳು ಅನಂತ ಅಪೌರುಷೇಯ ಎಂದರೇನು? ... | ೧೮೭ |
| ನಾಲ್ಕು ವರ್ಣಗಳು, ನಾಲ್ಕು ಆಶ್ರಮಗಳು ... | ೧೮೮ |
| ವೈದಿಕ ಕಾಲದ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು | ೧೮೯ |
| ವರ್ಣಾಶ್ರಮ ಧರ್ಮಗಳಲ್ಲಿ ಮೇಲು ಕೀಳು ಎಂಬ ಭಾವನೆ ಇರಲಿಲ್ಲ. | ೧೮೯ |
| ಬಾಹ್ಯ ಪ್ರಪಂಚ ಪರಿಶೀಲನೆಯಿಂದ ಏಕತತ್ವದರ್ಶನ ... | ೧೯೦ |

ಪುಟ

ಮೂರನೆಯ ಅಧ್ಯಾಯ—ಸಂಸ್ಕೃತಿ ಮತ್ತು ಇತಿಹಾಸಪುರಾಣಗಳು ೧೯೧

ಸಂಸ್ಕೃತಿಯಲ್ಲಿ ಇತಿಹಾಸಗಳ ಸ್ಥಾನಮಾನಗಳು ... ೧೯೧
ವಿಶ್ವಧರ್ಮದ ಸ್ವರೂಪಗಳು ... ೧೯೩
ಬಾಹ್ಯ ಪ್ರಕೃತಿಯಲ್ಲೂ ಧರ್ಮದರ್ಶನ ... ೧೯೪
ಸಾಮಾನ್ಯ ವಿಶ್ವಧರ್ಮದ ಸರಳ ಸ್ವರೂಪ ... ೧೯೫
ಧರ್ಮದಿಂದಲೇ ರಕ್ಷಣೆ ಮತ್ತು ಜಯ ... ೧೯೫
ವಿಶ್ವಧರ್ಮದ ಲಕ್ಷಣ ... ೧೯೫
ಇತಿಹಾಸ ಪುರಾಣಗಳಲ್ಲೂ ಧರ್ಮಕ್ಕೆ ಪ್ರಾಮುಖ್ಯವಿದೆ ... ೧೯೬
ಭಗವದ್ಗೀತೆಯು ಧರ್ಮಶಾಸ್ತ್ರವೇ ? ... ೧೯೬
ಗೀತೆಯು ಮಾನವ ಸಾಮಾನ್ಯಕ್ಕಾಗಿ ಹೊರಟಿದೆ ... ೧೯೮
ಯೋಗಗಳಲ್ಲಿ ಮುಖ್ಯವಾದುವು ನಾಲ್ಕು ಎನ್ನಬಹುದು ... ೧೯೯
ಕರ್ಮಪರರು, ನಿಷ್ಕಾಮ ಕರ್ಮಯೋಗ ... ೧೯೯
ಭಕ್ತಿಪರರು, ನಿಷ್ಕಾಮ ಭಕ್ತಿ ಯೋಗ ... ೨೦೧
ಧ್ಯಾನಪರರು, ನಿಷ್ಕಾಮ ರಾಜಯೋಗ ... ೨೦೪
ಜ್ಞಾನಪರರು, ನಿಷ್ಕಾಮ ಜ್ಞಾನಯೋಗ ... ೨೦೫
ಈ ನಾಲ್ಕು ಯೋಗಗಳಿಗೂ ಸಮನ್ವಯವಿದೆ. ವಿರೋಧವಿಲ್ಲ ೨೦೮
ಗೀತೆಯಲ್ಲಿ ಎರಡು ಯೋಗಗಳನ್ನೇ ಹೇಳಿದೆ ... ೨೦೯
ಗೀತೆಯು ಜ್ಞಾನಯೋಗ ಒಂದನ್ನೇ ಮುಖ್ಯವಾಗಿ ಉಪದೇಶಿಸುತ್ತದೆ. ೨೧೦
ಪ್ರತಿಯೊಬ್ಬರಲ್ಲೂ ಈ ನಾಲ್ಕು ಧರ್ಮಗಳೂ ಇರುತ್ತವೆ, ಆದರೆ ಒಂದು ಮುಂದಾಗಿರುತ್ತದೆ. ೨೧೧
ಗೀತೆಯನ್ನು ಧರ್ಮಶಾಸ್ತ್ರವೆಂದು ಒಪ್ಪಬೇಕು ... ೨೧೨
ವಾಕ್ಯದ ತಾತ್ಪರ್ಯವನ್ನು ಗೊತ್ತುಮಾಡಲು ಗುರುತುಗಳು ೨೧೪
ಧರ್ಮಜ್ಞಾನಕ್ಕೆ ತತ್ವಜ್ಞಾನವು ಹಿನ್ನೆಲೆ ... ೨೧೫
ಇತಿಹಾಸ ... ... ೨೧೬
ಪುರಾಣ ... ... ೨೧೬
ಧರ್ಮ ಮತ್ತು ಲೋಕಸಂಗ್ರಹ ... ೨೧೮
ಆತ್ಮದರ್ಶನವೇ ಉತ್ತಮ ಧರ್ಮವು ... ೨೧೯
ಯೋಗ ಧರ್ಮ ಎರಡೂ ಒಂದೇ ಅರ್ಥವುಳ್ಳ ಪದಗಳು ... ೨೧೯

| | | ಪುಟ |
|---|---|---|
| ಕರ್ಮಯೋಗವು ಯಾರಿಗೆ ? | ... | ೨೨೦ |
| ಕರ್ಮಯೋಗದ ಸ್ವರೂಪ | ... | ೨೨೦ |
| ಯೋಗ ಶಬ್ದದ ಅರ್ಥಗಳು | ... | ೨೨೨ |
| ಧರ್ಮಚಕ್ರದ ಸ್ವರೂಪ ಮತ್ತು ಫಲ | ... | ೨೨೩ |
| ದೇವರ ಅವತಾರಗಳ ಉದ್ದೇಶವೂ ಧರ್ಮ ರಕ್ಷಣೆಯೇ ಆಗಿದೆ | | ೨೨೪ |
| ಧರ್ಮ ಯುಕ್ತವಾದ ಕಾಮವು ದೇವ ಸ್ವರೂಪ | ... | ೨೨೭ |
| ಆದರ್ಶ ಧರ್ಮಾಚರಣೆಗೆ ವಿಶ್ವರೂಪ ದರ್ಶನವೂ ಫಲ | ... | ೨೨೯ |
| ಅಮಾನಿತ್ವಾದಿ ಧರ್ಮಗಳು | ... | ೨೩೧ |
| ಸ್ವಧರ್ಮಾಚರಣೆಯಿಂದ ದೈವೀ ಸಂಪತ್ತು | ... | ೨೩೨ |
| ಉಪಸಂಹಾರವೆಂಬ ಲಿಂಗದಿಂದಲೂ ಗೀತೆಯು ಧರ್ಮ ಶಾಸ್ತ್ರ. | | ೨೩೩ |
| ಜ್ಞಾನದಿಂದ ಕರ್ಮ ಅಕರ್ಮವಾಗುತ್ತದೆ | ... | ೨೩೫ |
| ನಿಷ್ಕಾಮ ಕರ್ಮ, ಚಿತ್ತ ಶುದ್ಧಿ, ಜ್ಞಾನಪ್ರಾಪ್ತಿ, ಮೋಕ್ಷ | | ೨೩೭ |
| ಕರ್ಮ ಸನ್ಯಾಸ ಯುಕ್ತ ಜ್ಞಾನಯೋಗ | ... | ೨೩೭ |
| ಗೀತೆಯ ಉಪದೇಶಗಳ ವೈಶಿಷ್ಟ್ಯ | ... | ೨೩೯ |
| ಗೀತೆಯು ಒಂದು ವಿಶ್ವವಿದ್ಯಾ ಶಾಲೆಯಂತಿದೆ | ... | ೨೪೨ |
| ಯೋಗದ ಸ್ವರೂಪ ... | ... | ೨೪೩ |
| ಗೀತೆಯ ಅಂತರ ರಾಷ್ಟ್ರೀಯ ಮನೋಭಾವ | ... | ೨೪೪ |
| ವಿಶ್ವಧರ್ಮದ ಅಂತಸ್ತುಗಳು | ... | ೨೪೭ |
| ವಿಶ್ವಧರ್ಮದ ವಿಸ್ತರಣೆಯ ರೀತಿ | ... | ೨೪೮ |
| ವಿಶ್ವಧರ್ಮದ ಈಗಿನ ಸ್ವರೂಪ | ... | ೨೫೦ |
| ವಿಶ್ವಧರ್ಮವೂ ಆಚರಣೆಯಲ್ಲಿದೆ | ... | ೨೫೧ |
| ಶಿವಪುರಾಣಗಳ ವೈಶಿಷ್ಟ್ಯ | ... | ೨೫೪ |
| ಸಾಹಿತ್ಯದ ಸ್ವರೂಪ ಮತ್ತು ಪ್ರಯೋಜನಗಳು | ... | ೨೫೫ |
| ಸಾಹಿತ್ಯವು ಸಂಸ್ಕೃತಿಯ ವಾಹನ | ... | ೨೫೫ |
| ಸಂಸ್ಕೃತ ಸಾಹಿತ್ಯವು ಸ್ಫೂರ್ತಿಗೆ ಮೂಲವು | ... | ೨೫೬. |
| ಸಂಸ್ಕೃತ ಭಾಷೆಯೂ, ಧಾರ್ಮಿಕ ಸಂಸ್ಕೃತಿಯೂ | ... | ೨೫೬ |
| ಸಂಸ್ಕೃತ ಭಾಷೆಯ ವಿಶೇಷ ಗುಣಗಳು | ... | ೨೫೮ |
| ಸಂಸ್ಕೃತ ಸಾಹಿತ್ಯದಲ್ಲಿ ಜ್ಞಾನ ಭಂಡಾರ | ... | ೨೫೮ |

| | ಪುಟ |
|---|---|
| ಸಂಸ್ಕೃತ ಭಾಷೆಯಲ್ಲಿ ರಾಷ್ಟ್ರೀಯ ಮನೋಭಾವವೂ ಜೀವಂತವಾಗಿದೆ. | ೨೫೯ |
| ಸಂಸ್ಕೃತ ಭಾಷೆಯನ್ನು ಕಲಿಯುವುದು ಕಷ್ಟವಲ್ಲ .. | ೨೬೦ |
| ಸಂಸ್ಕೃತವು ರಾಷ್ಟ್ರಭಾಷೆಯಾಗಲು ತಕ್ಕ ಗುಣ ವಿಶೇಷಗಳನ್ನು ಹೊಂದಿದೆ. | ೨೬೧ |
| ರಾಷ್ಟ್ರಭಾಷೆಯಲ್ಲಿರಬೇಕಾದ ಗುಣವಿಶೇಷಗಳು ... | ೨೬೧ |
| ಉಪದೇಶಗಳೂ ರಾಷ್ಟ್ರೀಯ ಭಾವನೆಗೆ ಅನುಕೂಲವಾಗಿವ | ೨೬೨ |
| ರಾಷ್ಟ್ರೀಯ ಭಾವನೆಯನ್ನು ಬೆಳೆಸುವ ಬಗೆ, ಸಮತಾ ಭಾವನೆ. | ೨೬೪ |
| ವಿಶ್ವಧರ್ಮದ ಅರಿವು ಮೊದಲು ಮೂಡಿದ ಕಥೆ ... | ೨೬೫ |
| ಧರ್ಮದ ಆವಿರ್ಭಾವದ ಕಥೆ, ಪದ್ಮವರ್ಣನ ಗೌತಮ ಋಷಿಯ ಕಥೆ. | ೨೬೬ |
| ಧರ್ಮನಿಷ್ಠರ ಉಪದೇಶವು ಸಾರ್ಥಕವಾಗುತ್ತದೆ ... | ೨೬೭ |
| ಧಾರ್ಮಿಕ ಸಂಸ್ಕೃತಿ, ಪಾಶ್ಚಾತ್ಯರ ಅಭಿನಂದನೆಗಳು ... | ೨೬೮ |
| ಮನುವೂ, ಸ್ತ್ರೀಯರ ಸ್ಥಾನಮಾನಗಳೂ ... | ೨೭೦ |
| ಇತಿಹಾಸ ಪುರಾಣಗಳ ಸ್ಥಾನ, ಧರ್ಮನಿರ್ಣಯ ಬಗೆ ... | ೨೭೫ |
| ಶಿಷ್ಟಪುರುಷರ ಆತ್ಮ ತುಷ್ಟಿಯೂ ಧರ್ಮಕ್ಕೆ ಪ್ರಮಾಣ ... | ೨೭೭ |
| ಕಾಳಿದಾಸನ ಶಾಕುಂತಳದಲ್ಲಿ ಧರ್ಮದ ನಿರೂಪಣ ... | ೨೭೮ |
| ಧರ್ಮತತ್ತ್ವ ಜ್ಞಾನವು ದೇವತತ್ತ್ವ ಜ್ಞಾನಕ್ಕೆ ದಾರಿ ... | ೨೭೯ |
| ವಿಜ್ಞಾನ ಪ್ರಪಂಚದಲ್ಲೂ ಧರ್ಮತತ್ತ್ವ ಜ್ಞಾನದ ಪ್ರಾರಂಭ | ೨೮೦ |
| ವಿಜ್ಞಾನವೂ ಶಕ್ತಿತತ್ತ್ವವೂ ... | ೨೮೧ |
| ಈ ಪ್ರಪಂಚವು ಸ್ಪಂದ ಶಕ್ತಿರೂಪವಾಗಿದೆ ... | ೨೮೨ |
| ವೈಜ್ಞಾನಿಕರ ದೃಷ್ಟಿಯಲ್ಲಿ ಪಂಚಭೂತಗಳು ... | ೨೮೪ |
| ಸರ್ವಪ್ರತ್ಯಯ ಸಾಕ್ಷೀ ಆತ್ಮಾ ... | ೨೮೬ |
| ಮಾನವ ಜನ್ಮದಲ್ಲೂ ಪ್ರಗತಿ ಸಾಧನೆಯ ಮೆಟ್ಟಲುಗಳು | ೨೮೮ |
| ಧರ್ಮದಲ್ಲಿ ಮುಖ್ಯವಾದ ಎರಡು ಬಗೆ ... | ೨೮೯ |
| ಸಂಸ್ಕೃತಿಯ ಅಂತಸ್ತಿನ ಭೇದಕ್ಕೆ ತಕ್ಕಂತೆ ಧರ್ಮಭೇದ | ೨೯೦ |
| ಅಧಿಕಾರಿ ಭೇದದಿಂದ ಧ್ಯೇಯ ಭೇದ ... | ೨೯೦ |
| ತತ್ತ್ವದೃಷ್ಟಿಗೆ ಅವಿರೋಧವಾಗಿ ದೇವರೂಪ ಕಲ್ಪನೆ ... | ೨೯೧ |
| ಪರ ಅಪರ ಎಂದು ಬ್ರಹ್ಮರೂಪಗಳು ಎರಡು ... | ೨೯೨ |

ಪುಟ

ವೇದಾಂತ ದೃಷ್ಟಿಯಿಂದ ಸೃಷ್ಟಿ ಕ್ರಮ ... ೨೯೨
ಜೀವನದ ಗುರಿಗಳು ಎರಡು ಅಜ್ಞಾನ ನಿವೃತ್ತಿ, ಸುಖ ಪ್ರಾಪ್ತಿ. ೨೯೪
ಸೂಕ್ಷ್ಮದೃಷ್ಟಿಯಲ್ಲಿ ಜೀವನದ ಗುರಿ ಒಂದೇ ... ೨೯೫
ಅಜ್ಞಾನ ನಿವೃತ್ತಿಯೇ ಏಕಮಾತ್ರ ಪುರುಷಾರ್ಥವು ... ೨೯೫
ಸಂಸ್ಕೃತಿ, ಜೀವನ, ಸಾಹಿತ್ಯ, ಭಾಷೆಗಳ ನಿಕಟ ಸಂಬಂಧ ೨೯೬
ಸಂಸ್ಕೃತ ಸಾಹಿತ್ಯದ ವ್ಯಾಸಂಗದ ಪ್ರಯೋಜನ ... ೨೯೭
ಪುರಾಣಗಳ ಮೇಲಿನ ಆಕ್ಷೇಪ ಸಮಾಧಾನಗಳು ೨೯೮
ತತ್ವಜಿಜ್ಞಾಸುಗಳಲ್ಲಿ ಎರಡು ದೃಷ್ಟಿ ... ೨೯೯
ಕೆಲವು ಪುರಾಣಗಳು ತಾಮಸಗಳು ಎನ್ನುವುದು ಸಂಕುಚಿತ ಬುದ್ಧಿ. ೩೦೦
ಸಾಧಕನ ಪ್ರಗತಿ ಮಾರ್ಗದಲ್ಲಿ ಮಜಲುಗಳು ೩೦೨
ಪುರಾಣಗಳ ವ್ಯಾಸಂಗದಿಂದ ಹೃದಯ ವೈಶಾಲ್ಯ ಫಲಿಸಬೇಕು ೩೦೨
ಪುರಾಣಗಳ ಸ್ಥಾನಮಾನಗಳು ... ೩೦೫
ಪುರಾಣಗಳ ಸಾಮಂಜಸ್ಯ ... ೩೦೬
ಪುರಾಣಗಳಲ್ಲಿ ಧಾರ್ಮಿಕ ಸಂಸ್ಕೃತಿ ... ೩೦೬
ಇತಿಹಾಸಗಳಲ್ಲಿ ಧಾರ್ಮಿಕ ಸಂಸ್ಕೃತಿ ... ೩೦೭
ರಾಮಾಯಣದಲ್ಲಿ ಸತ್ಯಧರ್ಮ ಶೀಲಗಳಿಗೆ ಪ್ರಾಧಾನ್ಯ ... ೩೦೮
ಶ್ರೀರಾಮನಲ್ಲಿ ಸತ್ಯಧರ್ಮಗಳ ವಜ್ರಶೀಲ ... ೩೧೦
ವಜ್ರಶೀಲದ ಸತ್ಪರಿಣಾಮಗಳು ... ೩೧೧
ಇಹಜೀವನದಲ್ಲಿ ಆದರ್ಶ ಸುಖ ... ೩೧೩
ಶ್ರೀರಾಮನು ಗೀತೆಯಲ್ಲಿಯ ಸ್ಥಿತಪ್ರಜ್ಞನು ... ೩೧೪
ಸೋದರಸ್ನೇಹ, ಕ್ಷಮೆಯೇ ಕವಚ, ಧರ್ಮವೇ ರಕ್ಷಕ ... ೩೧೭–೮
ಧರ್ಮಸ್ಯ ಸೂಕ್ಷ್ಮಾಗತಿಃ, ಲಕ್ಷ್ಮಣನ ಮೇಲೆ ರಾಮನ ಶೀಲ ಪ್ರಭಾವ. ೩೧೯
ಸುಖ ದುಃಖ ಪ್ರಾಪ್ತಿಗಳಲ್ಲಿ ಏರುಪೇರುಗಳಿಲ್ಲದಿರುವಿಕೆ ... ೩೨೧
ರಾಮಾಯಣದಲ್ಲಿ ಧಾರ್ಮಿಕ ಸಂಸ್ಕೃತಿ, ಭರತನ ಮೇಲೆ ರಾಮನ ಶೀಲದ ಪ್ರಭಾವ. ೩೨೨
ವನವಾಸದಲ್ಲೂ ರಾಮನು ಧಾರ್ಮಿಕರ ರಕ್ಷಕ ... ೩೨೪
ಲಕ್ಷ್ಮಣನ ಇಂದ್ರಿಯನಿಗ್ರಹ, ಬ್ರಹ್ಮಚರ್ಯಸ್ವರೂಪ ... ೩೨೫

ಪುಟ

ಉಪಾಸನೆಯಿಂದ ಉಪಾಸ್ಯ ಸಾಯುಜ್ಯ, ಸೀತೆಯ ಮೇಲೆ ರಾಮನ ಶೀಲಪ್ರಭಾವ. ೩೨೭

ಗಾದೆಯ ಮಾತು ಸತ್ಯ ... ೩೨೯

ಹನುಮಂತನು ಆದರ್ಶ ದೂತನು ... ೩೩೧

ರಾಮನು ಸತ್ಯವ್ರತನು—ತಿರ್ಯಕ್ ಪ್ರಾಣಿಗಳ ಮೇಲೂ ರಾಮನ ಶೀಲದ ಪ್ರಭಾವ. ೩೩೨

ಶತ್ರುವಾದ ರಾವಣನ ಮೇಲೂ ಧಾರ್ಮಿಕ ಶೀಲದ ಪ್ರಭಾವವು ಆಗುತ್ತದೆ. ೩೩೩

ಸತ್ಯಧರ್ಮಶೀಲದ ಸತ್ಪರಿಣಾಮಗಳು ... ೩೩೪

ರಾಮರಾಜ್ಯಕ್ಕೆ ಸತ್ಯಧರ್ಮಗಳೇ ಮೂಲ ... ೩೩೫

ಮಹಾಭಾರತದಲ್ಲಿ ಧಾರ್ಮಿಕ ಸಂಸ್ಕೃತಿ—ಧರ್ಮರಾಯನೂ ಸ್ಥಿತಪ್ರಜ್ಞನು. ೩೩೬

ಧರ್ಮರಾಯನಿಂದ ಭೀಮನ ರಕ್ಷಣೆ, ಅಜಗರ ವೃತ್ತಾಂತ ೩೩೮

ಯಕ್ಷ ಪ್ರಶ್ನೆಗಳಿಗೆ ಧರ್ಮರಾಯನ ಉತ್ತರಗಳಿಂದ ತಮ್ಮಂದಿರೆಲ್ಲರ ರಕ್ಷಣೆ. ೩೪೦

ಮಹಾಪ್ರಸ್ಥಾನ; ಧರ್ಮರಾಯನು ಮೂರು ಪರೀಕ್ಷೆಗಳಲ್ಲೂ ಉತ್ತೀರ್ಣನಾದುದು. ೩೪೩

ಧರ್ಮಸೂಕ್ಷ್ಮ ವಿಮರ್ಶೆ ... ೩೪೪

ನಾಲ್ಕನೆಯ ಅಧ್ಯಾಯ—ಕಲೆ ಸಾಹಿತ್ಯಗಳಲ್ಲಿ ಧಾರ್ಮಿಕಸಂಸ್ಕೃತಿ ೩೪೭

ಗ್ರಂಥಗಳ ಪರಿಶೀಲನೆಯಲ್ಲಿ ಮೂರು ದೃಷ್ಟಿಗಳು ... ೩೪೭

ಕಥಾದೃಷ್ಟಿ, ಸೌಂದರ್ಯದೃಷ್ಟಿ, ಧರ್ಮತತ್ತ್ವದೃಷ್ಟಿ ... ೩೪೭

ಪ್ರಭು ಸಂಮಿತ, ಮಿತ್ರ ಸಂಮಿತ, ಕಾಂತಾ ಸಂಮಿತ ರೀತಿಗಳು. ೩೪೯

ವೇದಸಾಹಿತ್ಯವು ಪ್ರಭುಸಂಮಿತ, ಪುರಾಣೇತಿಹಾಸಗಳು ಮಿತ್ರಸಂಮಿತ, ಕಾವ್ಯ ನಾಟಕಗಳು ಕಾಂತಾ ಸಂಮಿತ. ೩೪೯

ಕಾವ್ಯದಿಂದ ಆನಂದಾನುಭವವೂ ಧರ್ಮೋಪದೇಶವೂ ಫಲಗಳು. ೩೫೨

ಕಾವ್ಯ ಅಥವಾ ಗ್ರಂಥರಚನೆಗೆ ಕಾರಣಗಳು ... ೩೫೫

ಜ್ಞಾನಾರ್ಜನೆ ಮಾನವನ ಹುಟ್ಟುಗುಣ. ... ೩೫೬

ಜ್ಞಾನ ಪ್ರಚಾರಣಾ ಮಾನವನ ವಿಶಿಷ್ಟ ಗುಣ ... ೩೫೮

ಪುಟ

ಋಣ ತ್ರಯವೂ, ಸಂಸ್ಕೃತಿಯೂ, ದೇಶಭಕ್ತಿಯೂ ... ೩೫೯
ವಿಶ್ವಧರ್ಮದಿಂದ ರಾಷ್ಟ್ರೀಯ ಮನೋಭಾವವನ್ನು ಬೆಳೆಸಿದ ರೀತಿ. ೩೬೧
ರಾಜಕೀಯವೂ ಸಂಸ್ಕೃತಿಯೂ ... ೩೬೨
ದೇಶದ ಆಡಳಿತದ ಬಗೆಗಳು, ರಾಜ್ಯಭಾರ ನಿರ್ವಾಹದ ಪ್ರಕಾರಗಳು. ೩೬೩
ಜನರಿಂದ ಕಾಲ, ಕಾಲದಿಂದ ಜನ ... ೩೬೪
ಹಿಂದೂ ಮತವೂ ಇತರ ಮತಧರ್ಮಗಳೂ .. ೩೬೫
ಭಾರತಾರ್ಯರು ಪರದೇಶಕ್ಕೂ ಹೋದುದು ಧರ್ಮ ಪ್ರಚಾರಕ್ಕೆ ಮಾತ್ರ. ೩೬೬
ರಾಜ್ಯಭಾರದಲ್ಲೂ ಧರ್ಮಕ್ಕೆ ಪ್ರಾಮುಖ್ಯವಿರಬೇಕು ... ೩೬೭
ದೇವರು ಜನರನ್ನು ಕಾಪಾಡುವ ಬಗೆ ... ೩೬೮
ಸ್ವಸಹಾಯ ಒಂದೇ ಉತ್ತಮ ಸಹಾಯ ... ೩೬೯
ಬೌದ್ಧ ಮತದ ಏಳು ಬೀಳುಗಳಿಗೆ ಕಾರಣಗಳು ... ೩೭೧
ಜೈನಮತದ ಮುಖ್ಯ ಧರ್ಮಗಳು ... ೩೭೧-೨
ಬೌದ್ಧಮತದ ಮುಖ್ಯ ಉಪದೇಶಗಳು ... ೩೭೩
ಮಾಂಸಾಹಾರದ ಸ್ಥಾನಮಾನಗಳು ... ೩೭೩
ಅದ್ವೈತ ದರ್ಶನದ ವಿಶೇಷ ಗುಣಗಳು ... ೩೭೫
ಜನಜೀವನದಲ್ಲಿ ಮತಧರ್ಮಗಳ ಪ್ರಭಾವ ... ೩೭೬
ಶಂಕರಾಚಾರ್ಯರ ಉಪದೇಶದ ರೀತಿನೀತಿಗಳು ... ೩೭೭
ವಿಶ್ವಧರ್ಮದ ಅರಿವು ಆಚರಣೆಗಳು ವಿದ್ಯಾಭ್ಯಾಸಕ್ಕೆ ಫಲವಾಗಬೇಕು. ೩೭೯
ದ್ವೇಷವು ಕ್ಷಮೆಯಿಂದಲೇ ನಾಶವಾಗಬೇಕು ... ೩೮೦
ಯುದ್ಧವು ಯುದ್ಧದಿಂದ ನಿಲ್ಲದು ... ೩೮೧
ಧಾರ್ಮಿಕ ಸಂಸ್ಕೃತಿಯ ಫಲ, ಮಹಾತ್ಮ ಗಾಂಧೀಜಿಯವರು ೩೮೨
ಶ್ರೀ ಶಂಕರಾಚಾರ್ಯರ ವಿಶೇಷ ಗುಣಗಳು ... ೩೮೫
ವಿಶಾಲ ಧರ್ಮದ ಉದಾಹರಣೆಗಳು ... ೩೮೬
ದರ್ಶನಗಳ ವಿಶೇಷ ಗುಣಗಳು ... ೩೮೭
ಶ್ರೀಮಧ್ವಾಚಾರ್ಯರು, ಶ್ರೀರಾಮಾನುಜಾಚಾರ್ಯರು ೩೮೯
ದ್ವೈತ, ವಿಶಿಷ್ಟಾದ್ವೈತ ಮತಗಳಲ್ಲಿನ ಉಪದೇಶಗಳ ಸಂಗ್ರಹಗಳು. ೩೯೦

ಪುಟ

ಶ್ರುತ್ಯರ್ಥ ನಿರ್ಣಯದಲ್ಲಿ ತೊಡಕುಗಳು ... ೩೯೧

ಅವಸ್ಥಾತ್ರಯ—ಬ್ರಹ್ಮಸೂತ್ರದಲ್ಲಿ ಉದಾಹೃತರಾಗಿರುವ ಆಚಾರ್ಯರು. ೩೯೨

ಅದ್ವೈತಮತದ ಉಪದೇಶಗಳ ಸಂಗ್ರಹ ... ೩೯೩

ಶೈವ, ಶಾಕ್ತೇಯ, ವೈಷ್ಣವ ಮತಗಳು ... ೩೯೪

ಶಕ್ತಿ ತತ್ವದ ಸ್ವರೂಪ ವಿಶೇಷ ... ೩೯೫

ಐದನೆಯ ಅಧ್ಯಾಯ—ಈಗಿನ ವೈಜ್ಞಾನಿಕರ ಸಿದ್ಧಾಂತಗಳೂ, ಧರ್ಮತತ್ವವೂ, ಪ್ರಕೃತಿಯಲ್ಲಿ ಪ್ರಾಣಶಕ್ತಿ ವಿವೇಚನೆ. ೩೯೭

ವಿಜ್ಞಾನ, ವೇದಾಂತ, ಮತಗಳು ... ೪೦೦

ಸ್ವತಂತ್ರ ವಿಮರ್ಶೆಯಿಂದ ಜೀವಪ್ರಗತಿಯ ಮೆಟ್ಟಲುಗಳು ೪೦೩–೪

ಧಾರ್ಮಿಕ ಸಂಸ್ಕೃತಿ, ಮತಗಳು, ವಿಜ್ಞಾನ ... ೪೦೫

ಧಾರ್ಮಿಕ ಸಂಸ್ಕೃತಿಯು ಪ್ರಗತಿಗೆ ಸಹಾಯಕಾರಿ .. ೪೦೫

ಕ್ರಿಶ್ಚಿಯನ್, ಮುಸ್ಲಿಂ, ಮತಗಳ ಉತ್ತಮ ಉಪದೇಶಗಳು ೪೦೭

ಬೈಬಲ್, ಖುರಾನ್‌ಗಳಲ್ಲಿಯೂ ಕೆಲವು ತತ್ವಗಳು ... ೪೦೭

ವಿಶ್ವಧರ್ಮದ ಸ್ವರೂಪ ವಿವರಗಳು, ಪಂಚಶೀಲಗಳು ... ೪೦೮

ವಿಶ್ವಧರ್ಮದ ಆಚರಣೆಯಿಂದಲೇ ಪ್ರಪಂಚದ ಮುಂದಿನ ಕಲ್ಯಾಣಸಾಧನೆಯು ಸಾಧ್ಯವಾಗುತ್ತದೆ. ೪೦೯

ವಿಶ್ವಧರ್ಮದಿಂದಲೇ ಶಾಂತಿ ಸುಖ ಲಾಭವು ಸಾಧ್ಯವಾಗ ಬಲ್ಲದು. ೪೧೧

ಉಪಸಂಹಾರ

ಧಾರ್ಮಿಕ ಸಂಸ್ಕೃತಿಯ ಚರಿತ್ರೆ ಸಂಗ್ರಹ ... ೪೧೩–೬

ಹಿಂದೂ ಸಂಸ್ಕೃತಿಯು ಎಲ್ಲ ಧರ್ಮಗಳನ್ನೂ ಒಳಗೊಳ್ಳ ಬಲ್ಲುದು. ೪೧೫

ಆದುದರಿಂದಲೇ ಇದು ಉಳಿದಿದೆ, ಉಳಿಯುತ್ತದೆ ... ೪೧೬

ಗುಣವೂ ಅತಿಯಾದರೆ ದೋಷವೇ ... ೪೧೭

ಜೀವನ ಪ್ರಗತಿಯು ಕಲಾಮಯವಾಗಿರುತ್ತದೆ ... ೪೧೯

ವಿಜ್ಞಾನವೂ ವೇದಾಂತವೂ

ನಿವೃತ್ತಿ ಧರ್ಮಾಚರಣೆಯ ಸ್ವರೂಪ ... ೪೨೦

ವೇದಾಂತದಿಂದಲೇ ಜೀವನದಲ್ಲಿ ಶಾಂತಿ ಸುಖ ಸಾಧನೆ ... ೪೨೧

# ಭಾರತಾಯರ

# ಧಾರ್ಮಿಕ ಸಂಸ್ಕೃತಿ

## ಮೊದಲನೆಯ ಅಧ್ಯಾಯ

## ವೈದಿಕ ಸಾಹಿತ್ಯದಲ್ಲಿ ಸಂಸ್ಕೃತಿ

ಸಂಸ್ಕೃತಿ ಶಬ್ದಾರ್ಥ —ಬಾಹ್ಯ ಸಂಸ್ಕೃತಿ.

ಸಂಸ್ಕೃತಿ ಎಂಬ ಮಾತು ಈಚಿನದಲ್ಲ. ಸಂಸ್ಕೃತಿ, ಸಂಸ್ಕಾರ- ಎಂಬ ಈ ಎರಡು ಶಬ್ದಗಳೂ ಒಂದೇ ಅರ್ಥವನ್ನು ಬೋಧಿಸುವ ಪದಗಳಾಗಿವೆ. ಇವೆರಡೂ 'ಸಂ' ಎಂಬ ಉಪಸರ್ಗ, ಮತ್ತು 'ಕೃ' ಎಂಬ ಧಾತುವಿನಿಂದ ರೂಪಗೊಂಡಿವೆ. ಒಂದರಲ್ಲಿ 'ತಿ' ಎಂಬ ಪ್ರತ್ಯಯುವಿದೆ. ಇನ್ನೊಂದರಲ್ಲಿ 'ಅ' ಎಂಬ ಪ್ರತ್ಯಯುವಿದೆ. ಒಟ್ಟಿನಲ್ಲಿ ಚೆನ್ನಾಗಿ ಮಾಡುವಿಕೆ ಎಂದು ಅರ್ಥವನ್ನು ತಿಳಿಸುತ್ತವೆ. ಸಂಸ್ಕೃತಿಯು ಬಾಹ್ಯ, ಅಂತರ ಎಂದು ಎರಡು ಬಗೆಯುಳ್ಳದ್ದಾಗಿರುತ್ತದೆ. ಬಾಹ್ಯ ಸಂಸ್ಕಾರಗಳಿಗೆ ಈ ಉದಾಹರಣೆಗಳನ್ನು ಕೊಡಬಹುದು. ಒಂದು ಮನೆಯನ್ನು ನಿರ್ಮಲವಾಗಿಟ್ಟು ಗೋಡೆಗಳಿಗೆ ಒಳಗೂ ಹೊರಗೂ ಯಥಾಯೋಗ್ಯವಾಗಿ ಸುಣ್ಣ ಬಣ್ಣಗಳನ್ನು ಹತ್ತಿಸಿ, ನೆಲವನ್ನು ಗುಡಿಸಿ, ಸಾರಿಸಿ ಅಥವಾ ತೊಳೆದು ರಂಗವಲ್ಲಿ ಕಾರಣಿಗಳನ್ನು ರಚಿಸಿ, ದೀಪವನ್ನು ಹಚ್ಚಿಸಿದರೆ ಆ ಮನೆಗೆ ಒಂದು ಸಂಸ್ಕಾರವನ್ನು ಮಾಡಿದಂತಾಗುತ್ತದೆ. ಹಾಗೆಯೇ ಒಂದು ಕೊಳೆಯಾಗಿರುವ ಪಾತ್ರೆಯನ್ನು ಹುಳಿ ರಸದಿಂದ

ಸವರಿ, ಮಣ್ಣಿನಿಂದ ತಿಕ್ಕಿ, ನೀರಿನಿಂದ ತೊಳೆದರೆ ಅದು ಹೊಳೆಯುತ್ತದೆ. ಅದಕ್ಕೆ ಇದು ಒಂದು ಸಂಸ್ಕಾರವಾಗುತ್ತದೆ. ಅಂತೆಯೇ ಮಲಿನವಾಗಿರುವ ಒಂದು ಬಟ್ಟೆಯನ್ನು ನೆನೆಯಿಸಿ, ಸಾಬೂನನ್ನು ಹಾಕಿ, ಒಗೆದು ಶುಭ್ರವಾಗಿ ಮಾಡಿದರೆ ಆ ಬಟ್ಟೆಗೆ ಅದು ಒಂದು ಸಂಸ್ಕಾರವಾಗುತ್ತದೆ. ಇವುಗಳಂತೆಯೇ ನಮ್ಮ ದೇಹವು ಕೊಳೆಯಾಗಿದ್ದರೆ—

"ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ |
ಸಕೃದ್ಗೀತಾಂಭಸಿ ಸ್ನಾನಂ ಸಂಸಾರ ಮಲಮೋಚನಂ ||"

ಎಂದರೆ, ಮಾನವರು ಪ್ರತಿನಿತ್ಯವೂ ನೀರಿನಿಂದ ಸ್ನಾನವನ್ನು ಮಾಡಿದರೆ ದೇಹದ ಹೊರಗಿನ ಕೊಳೆಯನ್ನು ಕಳೆಯಲಾಗುತ್ತದೆ. ಅದರಂತೆಯೇ ಭಗವದ್ಗೀತೆಯು ತಿಳಿಸುವ ಜ್ಞಾನವೆಂಬ ನೀರಿನಲ್ಲಿ ನಮ್ಮ ಮನಸ್ಸು ಹೃದಯಗಳನ್ನು ನೆನೆಯಿಸಿ ಎಂದರೆ, ಆ ತಿಳಿವಳಿಕೆಯನ್ನು ಮನನಮಾಡುತ್ತಿದ್ದರೆ, ಅಜ್ಞಾನದಿಂದ ಉಂಟಾಗಿರುವ ಈ ಸಂಸಾರವೆಂಬ ಕೊಳೆಯನ್ನೂ ಹೋಗಲಾಡಿಸಲಾಗುತ್ತದೆ ಎಂದು ಈ ಪದ್ಯದ ಅರ್ಥವಾಗಿದೆ. ಈ ಶ್ಲೋಕದಲ್ಲಿ ಬಾಹ್ಯ ಮಲ ಅಥವಾ ಹೊರಗಿನ ಕೊಳೆಯಂತೆ, ಅಂತರ ಮಲ ಅಥವಾ ಮನಸ್ಸಿನಲ್ಲಿರುವ ಅಜ್ಞಾನವೆಂಬ ಕೊಳೆಯನ್ನೂ ಅದನ್ನು ಕಳೆಯುವ ರೀತಿಯನ್ನೂ ತಿಳಿಸಿದೆ.

ಆಭ್ಯಂತರ ಸಂಸ್ಕೃತಿ.

ಈ ಅಂತರ ಸಂಸ್ಕೃತಿಗೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಒಂದು ಪದ್ಯವನ್ನು ನಾವು ಕಲಿಯಬೇಕಾದರೆ, ಕಂಠಪಾಠ ಮಾಡಬೇಕಾದರೆ ಆ ಪದ್ಯವನ್ನು ನಾವು ಅನೇಕಾವೃತ್ತಿ ಉಚ್ಚರಿಸಬೇಕಾಗುತ್ತದೆ. ಒಂದೊಂದು ಸಲವೂ ಅದನ್ನು ಉಚ್ಚರಿಸಿದಾಗಲೆಲ್ಲ ನಮ್ಮ ಮನಸ್ಸಿನ ಮೇಲೆ ಒಂದು ಬಗೆಯ ಸಂಸ್ಕಾರವಾಗುತ್ತದೆ. ಇದರಿಂದ ನಮ್ಮ ಮನಸ್ಸು ಸಂಸ್ಕೃತ ಎಂದರೆ, ಸಂಸ್ಕೃತಿ ಅಥವಾ ಸಂಸ್ಕಾರವನ್ನು ಪಡೆದುದು, ಆಗುತ್ತದೆ. ಇದರಂತೆಯೇ ಒಳ್ಳೆಯ ಆಲೋಚನೆಗಳನ್ನು ನಾವು ಮಾಡುತ್ತಿದ್ದರೆ ಅದರಿಂದ ನಮ್ಮ ಮನಸ್ಸು ಸಂಸ್ಕೃತವಾಗುತ್ತದೆ. ಇದನ್ನು ಮಾನಸಿಕ ಸಂಸ್ಕೃತಿ ಎನ್ನುತ್ತಾರೆ.

ಇದರಂತೆಯೇ ಒಳ್ಳೆಯ ಪದ್ಯಗಳನ್ನೂ ವಾಕ್ಯಗಳನ್ನೂ ನಾವು ಉಚ್ಚರಿಸುತ್ತಿದ್ದರೆ ನಮ್ಮ ಮಾತು ಶುದ್ಧವೂ ಸ್ಪಷ್ಟವೂ ಆಗುತ್ತದೆ. ಹೀಗೆ ನಮ್ಮ ದಿನಗಟ್ಟಲೆಯ ಜೀವನ ಕ್ರಮದಲ್ಲಿ ನಾವು ಮನಸ್ಸಿನಲ್ಲಿ ಯೋಚಿಸುತ್ತಿರುವ ಉತ್ತಮವಾದ ಭಾವಗಳು, ಅವಕ್ಕೆ ಅನುಸಾರ ವಾಗಿರುವ ಎಂದರೆ, ಅವನ್ನು ಸ್ವಲ್ಪವೂ ಮರೆಮಾಚದೆ ಧೈರ್ಯದಿಂದ ಪ್ರಕಟಿಸುವ ಮೃದುವಾದ ಮಾತುಗಳು–ಈ ಎರಡಕ್ಕೂ ಅವಿರೋಧ ವಾಗಿ ಅನುಕೂಲವಾಗಿ ಹೊಂದಿಕೊಂಡು ಮಾದರಿಯ ಉದಾಹರಣೆ ಯಂತಿರುವ ನಡೆವಳಿಕೆ—ಈ ಮೂರರ ಸಮ್ಮೇಳನಕ್ಕೆ, ಈ ಒಳ್ಳೆಯ ನಡೆ ನುಡಿ ಭಾವಗಳೆಂಬ ತ್ರಿವೇಣೀ ಸಂಗಮಕ್ಕೆ ಪ್ರೇರಕವಾದ ಮನೋಧರ್ಮಕ್ಕೆ ಸಂಸ್ಕೃತಿ ಎಂದು ಅರ್ಥವಾಗುತ್ತದೆ. ಒಳ್ಳೆಯ ಬಾಳನ್ನು ಬಾಳಬೇಕೆಂಬ, ಉದಾತ್ತ ಜೀವನವನ್ನು ನಡೆಸಬೇಕೆಂಬ ಮನೋವೃತ್ತಿಗೆ ಸಂಸ್ಕೃತಿ ಎಂದು ಹೇಳಬಹುದು. ಸಂಸ್ಕೃತಿಯೂ ನಡೆವಳಿಕೆಯೂ ಒಂದನ್ನೊಂದು ಮಾರ್ಪಡಿಸುತ್ತಲೂ ಮೇಲ್ಪಡಿಸು ತ್ತಲೂ ಇರುತ್ತವೆ. ಅಲ್ಲದೆ ವ್ಯಾಕರಣಶಾಸ್ತ್ರದಲ್ಲಿ ವಿವರಿಸಿರುವ ನಿಯ ಮಗಳಿಗೆ ಅನುಸಾರವಾಗಿರುವ ಪದರೂಪಗಳಿಂದ ಕೂಡಿರುವ ಮಾತು ಗಳೂ ವಾಕ್ಯಗಳೂ ಸಂಸ್ಕೃತವೆನ್ನಿಸಿಕೊಂಡಿರುತ್ತವೆ. ಪಾಣಿನಿಯು ರಚಿಸಿರುವ ವ್ಯಾಕರಣ ನಿಯಮಗಳನ್ನು ಮೀರದಿರುವ ಭಾಷೆಗೆ ಸಂಸ್ಕೃ ತವೆಂದು ವ್ಯವಹಾರವು ರೂಢಿಯಲ್ಲಿದೆ. ಆ ನಿಯಮಗಳಿಗೆ ಒಳಪಡದೆ ಇರುವ ಪೂಜ್ಯ ಋಷಿಗಳೂ ಮಹಾಕವಿಗಳೂ ಬಳಸಿರುವ ಪ್ರಯೋಗಗ ಳನ್ನು ಆರ್ಷವೆಂದೂ ವೈದಿಕವೆಂದೂ ಹೇಳಿರುತ್ತಾರೆ. ಭಾಷೆಯಲ್ಲಿ ಈ ಸಂಸ್ಕೃತಿ ಅಥವಾ ಸಂಸ್ಕಾರ ಶಬ್ದದ ಬಳಕೆಯೂ ಪಾಣಿನಿಯ ಕಾಲ ದಿಂದಲೂ ಬಂದಿರುತ್ತದೆ. ಸಂಸ್ಕೃತ, ಪ್ರಾಕೃತ ಎಂಬ ಭಾಷಾ ಭೇದ ಗಳಲ್ಲಿ ಈ ಅಂಶವೂ ಸೇರಿದೆ. ಅರ್ಥವನ್ನು ಚೆನ್ನಾಗಿ ತಿಳಿದು ಅದಕ್ಕೆ ತಕ್ಕ ಪದವಾಕ್ಯಗಳನ್ನು ಪ್ರಯೋಗಿಸುತ್ತಾ ಒಳ್ಳೆಯ ಮಾತನ್ನೇ ಮೃದು ವಾಗಿ ಆಡುತ್ತಿದ್ದರೆ ಅದು ನಮಗೆ ಸ್ವಭಾವವೇ ಆಗಿಬಿಡುತ್ತದೆ. ಇದನ್ನು ವಾಚಿಕ ಸಂಸ್ಕೃತಿ ಎನ್ನುತ್ತಾರೆ. ವಿದ್ಯಾಭ್ಯಾಸ, ಸತ್ಸಹವಾಸ

ದಿಂದ ಈ ಬಾಹ್ಯ ಅಂತರ ಎಂಬ ಎರಡು ಬಗೆಯ ಎಂದರೆ, ದೈಹಿಕವಾದ ಮತ್ತು ವಾಚಿಕವಾದ ಮತ್ತು ಮಾನಸಿಕವಾದ ಸಂಸ್ಕೃತಿಯು ನಮ್ಮಲ್ಲಿ ಸಹಜವಾಗಿ ಬೆಳೆಯುತ್ತಿರುತ್ತದೆ. ಒಳ್ಳೆಯ ವಾತಾವರಣದಲ್ಲಿ ಹುಟ್ಟಿ ಬೆಳೆಯುತ್ತಿರುವ ಮಕ್ಕಳು ಮತ್ತು ಹುಡುಗರಲ್ಲೂ ಈ ಸಂಸ್ಕೃತಿಯು ಅವರಿಗೆ ಅರಿವಿಲ್ಲದೆಯೇ, ಅವರ ಪ್ರಯತ್ನ ವಿಶೇಷವಿಲ್ಲದೆಯೇ ಬೆಳೆಯುತ್ತಿರುತ್ತದೆ. ಇದನ್ನೇ ಆನುವಂಶಿಕವಾದ ಸಂಸ್ಕೃತಿ ಎನ್ನುತ್ತಾರೆ. ಇದು ಸ್ವಾಭಾವಿಕವಾದ ನಿಯಮ. ಇದಕ್ಕೂ ಪ್ರತ್ಯುದಾಹರಣೆಗಳನ್ನು ಅಲ್ಲಲ್ಲಿ ಕಾಣಬಹುದು. ಇಷ್ಟುಮಾತ್ರದಿಂದ ಸಾಮಾನ್ಯ ನಿಯಮಕ್ಕೆ ಭಂಗವಿಲ್ಲವೆಂಬುದನ್ನು ಗಮನಿಸಬೇಕು.

ಸಂಸ್ಕೃತಿಯಿಂದ ಶೀಲವು ರೂಪುಗೊಳ್ಳುತ್ತದೆ.

ನಮ್ಮ ಮನಸ್ಸಿನಲ್ಲಿ ಒಳ್ಳೆಯ ಭಾವಗಳನ್ನೇ ಆಲೋಚಿಸುತ್ತಿದ್ದರೆ ಅದೂ ನಮಗೆ ಸ್ವಭಾವವೇ ಆಗಿಬಿಡುತ್ತದೆ. ಒಳ್ಳೆಯವರ ಸಹವಾಸದಿಂದ ನಮಗೆ ಉತ್ತಮವಾದ ಭಾವಗಳೂ, ಮೃದುವಾದ ಮಾತುಗಳೂ, ಶ್ರೇಯಸ್ಕರವಾದ ನಡೆವಳಿಕೆಯೂ ದೊರೆಯುತ್ತವೆ. ಈ ಸಂದರ್ಭದಲ್ಲಿ ರಾಮಗಿಳಿ ಲಕ್ಷ್ಮಣಗಿಳಿಗಳ ಕಥೆಯನ್ನು ಜ್ಞಾಪಿಸಿಕೊಳ್ಳಬಹುದು. ಹಿಂದಿನ ಕಾಲದ ಗುರುಕುಲಗಳಲ್ಲಿ ಇಂತಹ ಸಂಸ್ಕೃತಿಯು ಬಾಲಕರಿಗೂ ಯುವಕರಿಗೂ ದೊರೆಯುತ್ತಿತ್ತು. ಈ ಸಂಸ್ಕೃತಿಯು ಈ ಒಂದು ಜನ್ಮದಲ್ಲಿಯೇ ರೂಪಗೊಳ್ಳುತ್ತದೆ ಎನ್ನುವಹಾಗಿಲ್ಲ; ಅಲ್ಲದೆ ಅದು ಸಾಧ್ಯವೂ ಅಲ್ಲ. ಆನುವಂಶಿಕವಾಗಿ ಬರುತ್ತಿರುವ ಪೂರ್ವಜನ್ಮದ ಸಂಸ್ಕಾರದಿಂದಲೂ ಜನರಲ್ಲಿ ಶ್ರೇಯಸ್ಕರವಾದ ಸಂಸ್ಕೃತಿಯು ಬಲಗೊಳ್ಳುತ್ತಿರುತ್ತದೆ. ಅಷ್ಟೇ ಅಲ್ಲದೆ ಈ ಸಂಸ್ಕೃತಿಯು ಆನುವಂಶಿಕವಾಗಿ, ಅನುಸ್ಯೂತವಾಗಿ, ವಿಚ್ಛಿನ್ನವಾಗದೆ ಪ್ರತಿಯೊಂದು ತಲೆಮಾರಿನಲ್ಲೂ ಮಾರ್ಪಡುತ್ತಾ ಮೇಲ್ಪಡುತ್ತಾ ಬೆಳೆದುಬರುತ್ತಿರುತ್ತದೆ. ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯೂ ಹೀಗೆಯೇ ಬೆಳೆದುಬರುತ್ತಿದೆ. ಈ ಅಂಶವೂ ಜೀವರಿಗೆ ಅನೇಕ ಜನ್ಮಗಳು ಉಂಟೆಂಬ ವಿಷಯವನ್ನು ಸಮರ್ಥಿಸುತ್ತದೆ ಎನ್ನಬೇಕು.

ಸಂಸ್ಕೃತಿಗಳಲ್ಲಿ ಗುಣತಾರತಮ್ಯ.

ಏಕಜನ್ಮವಾದಿಗಳಾದ ಕ್ರಿಶ್ಚಿಯನ್ನರೂ ಮುಸಲ್ಮಾನರೂ ಪೂರ್ವಜನ್ಮದ ಸಂಸ್ಕಾರವನ್ನು ಒಪ್ಪದಿರಬಹುದು. ಈಗ ನಾವು ಮಾಡುತ್ತಿರುವ ಸತ್ಕರ್ಮಗಳಿಂದ ಸುಖವೂ ದುಷ್ಕರ್ಮಗಳಿಂದ ದುಃಖವೂ ಉಂಟಾಗುತ್ತವೆ ಎಂದು ಅವರೂ ಒಪ್ಪುತ್ತಾರೆ. ಅದರಂತೆ ಈ ಜನ್ಮದಲ್ಲಿ ಜನರು ಮಾಡುವ ಸತ್ಕರ್ಮ, ದುಷ್ಕರ್ಮಗಳಿಗೆ ಮರಣಾನಂತರದಲ್ಲಿ ಒಂದಾನೊಂದು ದಿನ (Judgment Day)ದಲ್ಲಿ ದೇವರು ಜನರ ಕರ್ಮಗಳನ್ನು ಪರಿಶೀಲಿಸಿ ಅವಕ್ಕೆ ಫಲವಾಗಿ ಅನಂತವಾದ ಸ್ವರ್ಗವನ್ನೂ, ನರಕವನ್ನೂ ವಿಧಿಸುತ್ತಾನೆಂದು ಆ ಕ್ರಿಶ್ಚಿಯನ್ನರೂ ಮುಸ್ಲಿಮರೂ ನಂಬಿ ಬೋಧಿಸುತ್ತಿದ್ದಾರೆ. ಈ ಉಪದೇಶ ಆಚರಣೆಗಳಿಂದ ಸೂಚಿತವಾಗುವುದೇನೆಂದರೆ ಹಿಂದೂ ಮತದಲ್ಲಿ ಪ್ರಧಾನವಾದ ನಾಲ್ಕು ಅಂಶಗಳ ಪೈಕಿ ಕರ್ಮವಾದ (The Law of Karma) ಸಿದ್ಧಾಂತವನ್ನು ಅರ್ಧಮಟ್ಟಿಗೆ ಮಾತ್ರ ಈ ಮತಗಳೂ ಒಪ್ಪಿದಂತಾಗುತ್ತದೆ. ಅಲ್ಲದೆ ಮುಂದೆ ಮರಣಾನಂತರದಲ್ಲಿ ದೊರೆಯುವ ಶಾಶ್ವತವಾದ ಸ್ವರ್ಗ ನರಕಗಳಿಗೆ, ಅಲ್ಲಿ ಜೀವರು ಅನುಭವಿಸುವ, ಸುಖದುಃಖಗಳಿಗೆ ಇಲ್ಲಿ ಈಗ ಆ ಜೀವರು ಮಾಡಿರುವ ಕರ್ಮಗಳು ಕಾರಣವಾಗುವುದಾದರೆ, ಈಗ ಜನರು ಇಲ್ಲಿ ಹುಟ್ಟಿದಾಗಿನಿಂದಲೇ ಅನುಭವಿಸುತ್ತಿರುವ ಸುಖದುಃಖಗಳಿಗೆ ಕಾರಣವಾಗಿರಬೇಕಾದ ಸತ್ಕರ್ಮ ದುಷ್ಕರ್ಮಗಳನ್ನು ಅವರು ಯಾವಾಗ ಎಲ್ಲಿ ಮಾಡಿದ್ದರೆಂಬ ವಿಷಯದಲ್ಲಿ ಸಮಾಧಾನವನ್ನೂ ವಿವರಣೆಯನ್ನೂ ಆ ಮತಧರ್ಮಗಳಿಂದ ತಿಳಿಯಲಾಗುತ್ತಿಲ್ಲ. ಈ ಸುಖದುಃಖಗಳಿಗೆ ಕಾರಣವಾದ ಕರ್ಮಗಳನ್ನು ಆ ಜೀವರು ಇಲ್ಲಿಯಂತೂ ಮಾಡಿರುವುದಿಲ್ಲ. ಹಾಗಲ್ಲದೇ ಅವರಿಗೆ ದೇವರೇ ಈ ಸುಖದುಃಖಗಳನ್ನು ಕೊಡುತ್ತಾನೆಂದರೆ ಜೀವರಿಗೆ ಅಕೃತಾಭ್ಯಾಗಮ ದೋಷವೂ ದೇವರಿಗೆ ವೈಷಮ್ಯ ನೈರ್ಘೃಣ್ಯ ದೋಷಗಳೂ ತಪ್ಪುವಂತಿಲ್ಲ. ಈ ಅಂಶವನ್ನು ಮುಂದೆ ಇನ್ನೂ ಸ್ವಲ್ಪ ವಿಸ್ತಾರವಾಗಿ ವಿಶದವಾಗಿ ನಿರೂಪಿಸಲಾಗುತ್ತದೆ.

ಸಂಸ್ಕಾರ ಶಬ್ದಕ್ಕೆ ಕರ್ಮಗಳೆಂಬ ಅರ್ಥವೂ ರೂಢಿಯಲ್ಲಿ ಬಂದಿರುತ್ತದೆ. ಈ ಸಂಸ್ಕಾರ ಕರ್ಮಗಳನ್ನು ವೇದಗಳು, ಸೂತ್ರಗಳು, ಧರ್ಮಶಾಸ್ತ್ರಗಳು, ಸ್ಮೃತಿಗಳು-ಇವುಗಳಲ್ಲಿ ವಿವರಿಸಿ ವಿಧಿಸಲಾಗಿದೆ. ಇಂತಹ ಸಂಸ್ಕಾರಗಳಲ್ಲಿ ಮುಖ್ಯವಾಗಿ ಹನ್ನೆರಡು ಕರ್ಮಗಳು ಆಚರಣೆಯಲ್ಲಿವೆ. ಅವು ಯಾವುವೆಂದರೆ :—

ಸಂಸ್ಕಾರವೆಂದರೆ ಕರ್ಮಗಳೆಂದೂ ಅರ್ಥ.

೧. ಗರ್ಭಾಧಾನ, ೨. ಸೀಮಂತೋನ್ನಯನ, ಪುಂಸವನ, ೩. ಜಾತ ಕರ್ಮ, ೪. ನಾಮಕರಣ, ೫. ಅನ್ನಪ್ರಾಶನ, ೬. ಚೂಡಾಕರ್ಮ, ಅಕ್ಷರಾಭ್ಯಾಸ, ೭. ಉಪನಯನ, ಸಮಾವರ್ತನ, ೮. ವಿವಾಹ, ೯. ಔಪಾಸನ, ೧೦. ತ್ರೇತಾಗ್ನಿಗಳ ಆಧಾನ, ೧೧. ದರ್ಶಪೂರ್ಣ ಮಾಸಾದಿ ಇಷ್ಟಿಯಾಗಗಳು, ೧೨. ಅಪರ ಕರ್ಮಗಳು, ಅಂತ್ಯೇಷ್ಟಿ ಕರ್ಮಗಳು. ಇವುಗಳಲ್ಲೂ ೧. ಜಾತಕರ್ಮ, ನಾಮಕರಣ, ೨. ಉಪ ನಯನ, ೩. ವಿವಾಹ, ೪. ಅಂತ್ಯೇಷ್ಟಿ-ಎಂಬ ನಾಲ್ಕು ಕರ್ಮಗಳು ಮಾತ್ರ ಆಚರಣೆಯಲ್ಲಿವೆ. ಮಿಕ್ಕವು ಲುಪ್ತವಾಗಿ ಹೋಗುತ್ತಿವೆ. ಈ ಕರ್ಮ ಸಂಸ್ಕಾರಗಳಿಂದ ಉಂಟಾಗುವ ಅಂತರ ಸಂಸ್ಕೃತಿಯಿಂದ—

"ಏವಮೇನಃ ಶಮಂ ಯಾತಿ ಬೀಜ ಗರ್ಭ ಸಮುದ್ಭವಂ॥"

—ಯಾಜ್ಞವಲ್ಕ್ಯಸ್ಮೃತಿ

ಎಂದರೆ, ಈ ಸಂಸ್ಕಾರ ಕರ್ಮಗಳಿಂದ ಬೀಜದಲ್ಲೂ, ಕ್ಷೇತ್ರದಲ್ಲೂ ಸಂಭ ವಿಸಿ ಬರಬಹುದಾದ ದೋಷಗಳು ನಷ್ಟವಾಗುತ್ತವೆ ಎಂದು ಧರ್ಮ ಶಾಸ್ತ್ರದಲ್ಲಿ ಹೇಳಿದೆ. ಇವುಗಳಲ್ಲಿ ನಂಬಿಕೆ ಇರುವವರಿಗೆ ಫಲವೂ ದೊರೆಯುತ್ತದೆ. ಇವುಗಳ ಪೈಕಿ ಉಪನಯನ, ವಿವಾಹ ಕರ್ಮಗಳ ವಿಷಯವನ್ನು ಮುಂದೆ ಸ್ವಲ್ಪ ಹೆಚ್ಚಿನ ವಿವರಗಳೊಡನೆ ತಿಳಿಸಲಾಗು ತ್ತದೆ. ಅರ್ಥವಿಲ್ಲದ ಆಚಾರಗಳು ಕಾಲಕ್ರಮದಲ್ಲಿ ನಷ್ಟವಾಗುತ್ತಿರು ತ್ತವೆ. ಅದನ್ನು ತಡೆಯಲಾಗುವುದೂ ಇಲ್ಲ. ವ್ಯರ್ಥವಾದುವನ್ನು ತಡೆಯಬೇಕಾಗಿಯೂ ಇರುವುದಿಲ್ಲ.

ಅನೇಕರು ತಮ್ಮ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ಮಾತಿನಿಂದ ಪ್ರಕಟಿಸಲು ಹಿಂಜರಿಯುವುದುಂಟು. "ಕಂಡದ್ದನ್ನು ಹೇಳಿದರೆ ಕೆಂಡದಂತಹ ಕೋಪ" ಎಂಬ ಗಾದೆಯಂತೆ ಇತರರಿಗೆ ಅಸಮಾಧಾನವನ್ನು ಉಂಟುಮಾಡಬಾರದೆಂದು ಹೆದರಿ ಸುಮ್ಮನಿರುತ್ತಾರೆ.

"ಅಪ್ರಿಯಸ್ಯ ಚ ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ॥"

ಎಂದರೆ, ಅಪ್ರಿಯವಾಗಿರಬಹುದಾದರೂ ಹಿತಕರವಾದ ಬುದ್ಧಿವಾದವನ್ನು ಧೈರ್ಯವಾಗಿ ಹೇಳುವವರೂ, ಅದನ್ನು ಕೇಳಿ ಅದರಂತೆ ನಡೆಯುವವರೂ ಈ ಲೋಕದಲ್ಲಿ ವಿರಳವಾಗಿರುತ್ತಾರೆ. ಮತ್ತೆ ಅನೇಕರು ತಮ್ಮ ದುಷ್ಟವಾದ ಭಾವಗಳನ್ನು ಪ್ರಕಟಿಸದೆ ಮರೆಮಾಚಿ ಒಳ್ಳೆಯ ಮಾತಿನಿಂದ ಇತರರನ್ನು ಮೋಸಗೊಳಿಸುವುದೂ ಉಂಟು. ಕಪಟ ದ್ಯೂತದಿಂದ ಪಾಂಡವರನ್ನು ವಂಚಿಸಿದ ಕೌರವರ ನಡೆವಳಿಕೆಯನ್ನು ಇಲ್ಲಿ ಉದಾಹರಣೆಯಾಗಿ ಜ್ಞಾಪಿಸಿಕೊಳ್ಳಬಹುದು.

"ಕರ್ಮಣ್ಯೇಕಂ ಮನಸ್ಯೇಕಂ ವಚಸ್ಯೇಕಂ ಮಹಾತ್ಮನಾಂ।
ಕರ್ಮಣ್ಯನ್ಯತ್ ವಚಸ್ಯನ್ಯತ್ ಮನಸ್ಯನ್ಯತ್ ದುರಾತ್ಮನಾಂ॥"

ಎಂದರೆ, ನಡೆವಳಿಕೆಯಲ್ಲೂ, ಮಾತಿನಲ್ಲೂ, ಮನಸ್ಸಿನ ಭಾವ ಉದ್ದೇಶಗಳಲ್ಲೂ ಒಂದೇ ವಿಧವಾಗಿರುವ ಧೀರರನ್ನು ಮಹಾತ್ಮರೆನ್ನುತ್ತಾರೆ. ನಡೆವಳಿಕೆಗೂ, ಮಾತಿಗೂ, ಭಾವಕ್ಕೂ ಹೊಂದಿಕೆ ಇಲ್ಲದೆ ವಿರೋಧವಾಗಿ ವರ್ತಿಸುವ ವಂಚಕರನ್ನು ದುರಾತ್ಮರೆನ್ನುತ್ತಾರೆ. ಧಾರ್ಮಿಕ ಸಂಸ್ಕೃತಿಯುಳ್ಳ ಮಾನ್ಯರಾದ ಮಾನವರನ್ನು ಜನರು ಪ್ರೀತಿಸುತ್ತಾರೆ, ಗೌರವಿಸುತ್ತಾರೆ, ಅನುಸರಿಸುತ್ತಾರೆ—ಎಂಬುದು ಈಗಲೂ ನಿಜವಾಗಿದೆ. ಇಂತಹ ಸುಸಂಸ್ಕೃತಿಯುಳ್ಳ ಉದಾತ್ತವಾದ ನಡೆವಳಿಕೆಗೆ ಉತ್ತಮವಾದ ಉದಾಹರಣೆಯನ್ನು ಮಹಾತ್ಮಾ ಗಾಂಧೀಜಿಯವರಲ್ಲಿ ನಾವೂ ಕಂಡಿರುತ್ತೇವೆ.

ಭಾರತ ಶಬ್ದಾರ್ಥ.

"ಭಾರತಾರ್ಯರ ಧಾರ್ಮಿಕ ಸಂಸ್ಕೃತಿ" ಎಂಬ ಹೆಸರಿನಲ್ಲಿರುವ ಸಂಸ್ಕೃತಿ ಶಬ್ದದ ಅರ್ಥವನ್ನು ಸ್ವಲ್ಪಮಟ್ಟಿಗೆ ತಿಳಿದ ಮೇಲೆ ಭಾರತ ಶಬ್ದದ

ಅರ್ಥವನ್ನೂ ತಿಳಿಯುವುದು ನ್ಯಾಯವಾಗಿರುತ್ತದೆ. ಭಾರತ ಶಬ್ದವು ವೇದದಲ್ಲೂ ಬಳಕೆಗೆ ಬಂದಿರುತ್ತದೆ.

"ಯ ಇಮೇರೋದಸೀ ಉಭೇ ಅಹಮಿಂದ್ರಮತುಷ್ಟವಂ ।
ವಿಶ್ವಾಮಿತ್ರಸ್ಯ ರಕ್ಷತಿ ಬ್ರಹ್ಮೇದಂ ಭಾರತಂ ಜನಂ ॥"
—ಋಗ್ವೇದ ೩-೫೩-೧೨

ಇದರ ಅರ್ಥವು ಹೀಗಿದೆ. ಆಕಾಶ, ಭೂಮಿ ಇವುಗಳ ಮಧ್ಯದಲ್ಲಿ ಇರುವ ಇಂದ್ರನನ್ನು ಸ್ತುತಿಸಿದೇನೆ, ಆರಾಧಿಸಿ ಪ್ರಾರ್ಥಿಸಿದೇನೆ. ಈ ವೇದವಾಣಿಯು ವಿಶ್ವಾಮಿತ್ರನ ಬ್ರಹ್ಮರೂಪವಾದ ವೇದಮಂತ್ರವು, ಗಾಯತ್ರಿಯು ಈ ಭಾರತದ ಜನವನ್ನು ಕಾಪಾಡುತ್ತದೆ.

"ಭಾಸಿ ವಾ ಭಾಯಾಂ ವಾರ ತಃ ಭಾರತಃ" ಯಾಸ್ಕನಿರುಃಕ್ತ.

ಯಾಸ್ಕಾಚಾರ್ಯನ ನಿರುಕ್ತಗ್ರಂಥದಲ್ಲಿ ಭಾರತ ಪದಕ್ಕೆ ಅರ್ಥವನ್ನು ಹೀಗೆ ಹೇಳಿದೆ.—

"ಭಾರೂಪಂ ಪರಂಬ್ರಹ್ಮ ಸ್ವಯಂಪ್ರಕಾಶತ್ವಾತ್
ತಸ್ಮಿಭಾರೂಪೇ ಬ್ರಹ್ಮಣಿರತಃ ಆಸಕ್ತಃ"

ಸ್ವಪ್ರಕಾಶ ರೂಪವಾದ ಪರಬ್ರಹ್ಮ ತತ್ವದ ತಿಳಿವಳಿಕೆ, ಸಾಕ್ಷಾತ್ಕಾರಗಳಲ್ಲಿ ಆಸಕ್ತಿಯುಳ್ಳವನಿಗೆ ಭಾರತ ಎಂದು ಹೇಳಬಹುದೆಂದು ಅದರ ವ್ಯಾಖ್ಯಾನದಲ್ಲಿದೆ. ಅಲ್ಲದೆ—

"ಭಾರೂಪ ಆತ್ಮಾ ಸರ್ವಗತಃ ತಸ್ಮಿನ್ ಆತ್ಮನಿರತಃ ಭಾರತಃ ।
ಭಾ ಬ್ರಹ್ಮವಿದ್ಯಾ ತಸ್ಯಾಮೇವ ರಮತೇ ಇತಿ ಭಾರತಃ ॥"

ಸ್ವಪ್ರಕಾಶರೂಪವಾದ ಸರ್ವವ್ಯಾಪಿಯಾಗಿರುವ ಆತ್ಮಚೈತನ್ಯದ ಸ್ವರೂಪವನ್ನು ತಿಳಿದು ಅದನ್ನು ಅಪರೋಕ್ಷಾನುಭವಕ್ಕೆ ಬರುವಂತೆ ಮಾಡಿಕೊಳ್ಳುವುದರಲ್ಲಿ ಆಸಕ್ತನಾಗಿರುವವನಿಗೆ ಭಾರತ ಎಂದು ವ್ಯವಹಾರವು. ಅಥವಾ ಬ್ರಹ್ಮವಿದ್ಯಾಪ್ರಾಪ್ತಿಯಲ್ಲಿಯೇ ಸಂತೋಷಪಡುವವನಿಗೆ ಭಾರತ ಎಂದು ಹೇಳಬಹುದು. ಈ ವಿವರಣೆಗಳು ಈಚಿನ ಕಾಲದವು. ಅದರಂತೆಯೇ "ಭರತಃ ಆದಿತ್ಯಃ ತಸ್ಯಭಾ ಸ್ವಭೂತಾ

ದೀಪ್ತಿಃ ಭಾರತೀ '' (ಯಾಸ್ಕಃ.) ಭರತನೆಂದರೆ ಸೂರ್ಯನು. ಅವನ ಸ್ವರೂಪವಾದ ಬೆಳಕಿಗೆ ಭಾರತೀ ಎಂದು ವ್ಯವಹಾರವಿದೆ. ಪದಾರ್ಥಗಳನ್ನು ನೋಡಿ ತಿಳಿಯಲು ಬೆಳಕು ಸಹಾಯಮಾಡುವಂತೆ, ಮಾತು, ಅಭಿಪ್ರಾಯಗಳನ್ನು ತಿಳಿಯಲೂ ತಿಳಿಸಲೂ ಸಹಾಯ ಮಾಡುತ್ತದೆ. ಆದುದರಿಂದಲೇ ಕೋಶದಲ್ಲಿ "ಬ್ರಾಹ್ಮೀತು ಭಾರತೀ ಭಾಷಾಗೀರ್ವಾಗ್ವಾಣೀ ಸರಸ್ವತೀ '' ಎಂದು ಅಮರಕೋಶದಲ್ಲಿಯೂ ಹೇಳಿದೆ. ಇದರಿಂದ ಸಂಸ್ಕೃತಿಯೂ, ಭಾಷೆಯೂ, ಸಾಹಿತ್ಯವೂ ನಿಕಟಸಂಬಂಧವುಳ್ಳವೆಂಬ ಅರ್ಥವನ್ನೂ ಭಾರತಾರ್ಯರು ಮನಗಂಡಿದ್ದರು. ಎನ್ನಬಹುದು.

ಆರ್ಯಶಬ್ದಾರ್ಥ. ಆರ್ಯಶಬ್ದವು ಶ್ರೇಷ್ಠ ಎಂಬ ಅರ್ಥದಲ್ಲಿ ಋಗ್ವೇದದಲ್ಲಿ ಪ್ರಯೋಗಿಸಲ್ಪಟ್ಟಿದೆ.

" ಜ್ಯೋತಿಶ್ಚಕೃಥುರಾರ್ಯಾಯ '' ಋಗ್ವೇದ ೧.೧೧೭.೨೧.

ಹಾಗೆಯೇ ಯಾಸ್ಕಾಚಾರ್ಯರ ನಿರುಕ್ತ ಗ್ರಂಥದಲ್ಲಿ

"ಆರ್ಯಃ ಈಶ್ವರಪುತ್ರಃ" ಯಾಸ್ಕಃ ನಿರುಕ್ತೇ ೬.೫.೨೬

ಆರ್ಯ ಎಂದರೆ, ಶ್ರೇಷ್ಠನು, ಈಶ್ವರನೆಂಬ ಮುನಿಯ ಮಗನು ಎಂದು ವಿವರಿಸಿರುತ್ತದೆ. ಹಾಗೆಯೇ

" ಶಾಂತಃ ತಿತಿಕ್ಷುಃ ದಾಂತಶ್ಚ ಸತ್ಯವಾದೀ ಜಿತೇಂದ್ರಿಯಃ ।
ದಾತಾ ದಯಾಳುಃ ನಮ್ರಶ್ಚ ಆರ್ಯಃ ಸ್ಯಾದಷ್ಟಭಿರ್ಗುಣೈಃ॥ ''

ಶಾಂತ ಎಂದರೆ, ಅಂತರಿಂದ್ರಿಯ ನಿಗ್ರಹವುಳ್ಳವನು ; ತಿತಿಕ್ಷು ಎಂದರೆ, ಸುಖ ದುಃಖ, ಶೀತೋಷ್ಣ, ಚಳಿಸೆಕೆ, ರಾಗದ್ವೇಷ ಮುಂತಾದ ದ್ವಂದ್ವಗಳನ್ನು ಸಹಿಸಬಲ್ಲವನು ; ದಾಂತ ಎಂದರೆ, ಬಹಿರಿಂದ್ರಿಯ ನಿಗ್ರಹವುಳ್ಳವನು ; ಸತ್ಯವನ್ನು ಹೇಳುವವನು ; ಜಿತೇಂದ್ರಿಯ ಎಂದರೆ, ಇಂದ್ರಿಯಗಳನ್ನು ಜಯಿಸಿ ಅವುಗಳನ್ನು ವಿಷಯಗಳಿಂದ ಹಿಂತಿರುಗಿಸಿರುವವನು ; ದಾನಮಾಡುವವನು ; ಕೃಪಾಶೀಲನಾಗಿರುವವನು; ಇಷ್ಟು ಸುಗುಣಗಳಿದ್ದರೂ ಅಹಂಕಾರವಿಲ್ಲದೆ ವಿನೀತನಾಗಿರುವವನು ;

—ಈ ಎಂಟು ಸದ್ಗುಣಗಳುಳ್ಳವನು ಆರ್ಯನೆನಿಸಿಕೊಳ್ಳಲು ಅರ್ಹನಾಗಿರುತ್ತಾನೆ.

ಸಂಸ್ಕೃತಿಯು ಸಾಹಿತ್ಯದಲ್ಲಿ ಅಮರವಾಗಿರುತ್ತದೆ. ಸಂಸ್ಕೃತಿಯು ಮೇಲ್ಮೆಯನ್ನು ಪಡೆದ ಹಾಗೆಲ್ಲ ಸಾಹಿತ್ಯವೂ ಉತ್ತಮ ಗುಣ ರೂಪಗಳಿಂದ ಹೊರಹೊಮ್ಮುತ್ತಿರುತ್ತದೆ. ಸಂಸ್ಕೃತಿ, ಸಾಹಿತ್ಯ, ಭಾಷೆ—ಈ ಮೂರೂ ಪರಸ್ಪರವಾಗಿ ಪೂರಕ ಪೋಷಕಗಳಾಗಿರುತ್ತವೆ.

ಸಂಸ್ಕೃತಿಯ ಸ್ವರೂಪ ಮತ್ತು ಮೂಲಾಧಾರಗಳು.

ಭಾರತಾರ್ಯರ ಸಂಸ್ಕೃತಿ ಸ್ವರೂಪವನ್ನೂ ಹಿಂದಿನಕಾಲಗಳಲ್ಲಿ ಉಂಟಾದ ಅದರ ಪ್ರಾರಂಭ ಬೆಳವಣಿಗೆಗಳನ್ನೂ ಮತ್ತು ಅದರಿಂದ ದೊರೆಯುವ ಫಲಗಳನ್ನೂ, ಇವನ್ನು ತಿಳಿಸುವ ಮೂಲಾಧಾರಗಳನ್ನೂ ಈ ಪದ್ಯದಲ್ಲಿ ಸಂಗ್ರಹಿಸಿದೆ:—

"ಆಚಾರೇ ವಾಚಿ ಭಾವೇ ಸಮುದಿತಸುಗುಣಾ ಸಂಸ್ಕೃತಿರ್ಯಾ ಪ್ರಸಿದ್ಧಾ
ಪ್ರಾಚೀನೈಃ ಭಾರತಾರ್ಯೈಃ ಪ್ರಗತಿಮತಿಯುತೈಃ ವರ್ಧಿತಾ ಧರ್ಮಮೂಲಾ ।
ಸಾಹಿತ್ಯೇ ವೇದಮಂತ್ರೇಷ್ವುಪನಿಷದಿ ಕಲಾಕಾವ್ಯಶಾಸ್ತ್ರೇ ಪುರಾಣೇ
ಶಾಂತಿಂ ಸೌಖ್ಯಂ ದದಾನಾ ಭುವಿ ಸಕಲಬುಧೈರಾದೃತಾ ಶ್ರೇಯಸೇ ಸ್ಯಾತ್ ॥"

ಇದರ ಅರ್ಥವನ್ನು ಹೀಗೆ ವಿವರಿಸಬಹುದು. ಜನರ ನಡೆವಳಿಕೆಯಲ್ಲೂ, ಮಾತಿನಲ್ಲೂ, ಮನಸ್ಸಿನಲ್ಲಿ ಉಂಟಾಗುತ್ತಿರುವ ಭಾವಗಳಲ್ಲೂ ಒಳ್ಳೆಯ ಗುಣಗಳು ಎಂದರೆ, ಸತ್ಯ, ಧರ್ಮ, ಅಹಿಂಸೆ, ಸಹಾನುಭೂತಿ, ಪರೋಪಕಾರ, ಸೇವೆಯ ಮತ್ತು ಸಹಕಾರದ ಮನೋಭಾವ-ಈ ಆರು ಸದ್ಗುಣಗಳು ಕೂಡಿದ್ದರೆ ಅಂತಹ ನಡೆವಳಿಕೆಗೆ ಪ್ರೇರಕವಾಗಿರುವ ಸ್ವಭಾವಕ್ಕೆ ಸಂಸ್ಕೃತಿ ಎಂದು ಹೆಸರು ಪ್ರಸಿದ್ಧಿಯನ್ನು ಪಡೆದಿರುತ್ತದೆ. ಇಂತಹ ಸಂಸ್ಕೃತಿಯನ್ನು ಹಿಂದಿನ ಕಾಲದ

ಭಾರತಾರ್ಯರು ಬೆಳಸಿಕೊಂಡು ಬರುತ್ತಿದ್ದರು. ಇದು ನಮ್ಮಲ್ಲೂ ಆನುವಂಶಿಕವಾಗಿ ಬಂದಿರುತ್ತದೆ. ಮಾನವನ ಪ್ರಗತಿಯು ಸಂಸ್ಕೃತಿಯಿಂದ ಮುಂದುವರಿಯುತ್ತದೆಂಬುದನ್ನು ಅವರು ಬಲ್ಲವರಾಗಿದ್ದರು. ಅದು ಧರ್ಮದ ತಿಳಿವಳಿಕೆ ಆಚರಣೆಗಳಿಂದ ಉಂಟಾಗುತ್ತದೆಂದೂ, ಧರ್ಮಾಚರಣೆಯಿಂದ ಸಂಸ್ಕೃತಿಯು ಮೇಲ್ಪಡುತ್ತಿರುತ್ತದೆಂದೂ ಅವರು ಮನಗಂಡಿದ್ದರು. ಈ ಅಂಶಗಳನ್ನು ಸಾಹಿತ್ಯದಲ್ಲಿ ಎಂದರೆ, ಆಯಾ ಕಾಲಗಳಲ್ಲಿ ನಮ್ಮ ಪೂರ್ವಜರಿಂದ ರಚಿತವಾದ ಮತ್ತು ಕಾಪಾಡಲ್ಪಟ್ಟಿರುವ ಉತ್ತಮ ಗ್ರಂಥಗಳ ಸಮುದಾಯದಲ್ಲಿ ವರ್ಣಿಸಲಾಗಿದೆ. ಅದನ್ನು ವೇದಮಂತ್ರಗಳಲ್ಲೂ, ಉಪನಿಷತ್ತುಗಳಲ್ಲೂ, ಕುಶಲ ಕಲೆಗಳಲ್ಲೂ ಎಂದರೆ, ಸಂಗೀತ, ಚಿತ್ರಲೇಖನ, ಪ್ರತಿಮಾ ರಚನೆ, ವಾಸ್ತು ಶಿಲ್ಪ-ಇವುಗಳಲ್ಲೂ, ಪುರಾಣಗಳಲ್ಲೂ, ದರ್ಶನಗಳಲ್ಲೂ, ಧರ್ಮಶಾಸ್ತ್ರಗಳಲ್ಲೂ, ಕಾವ್ಯ ನಾಟಕಗಳಲ್ಲೂ ಮತ್ತು ವಿಮರ್ಶ ಗ್ರಂಥಗಳಲ್ಲೂ ನಾವು ನೋಡಬಹುದಾಗಿದೆ. ಈ ಸಂಸ್ಕೃತಿಯು ಧರ್ಮಮೂಲವಾಗಿರುವುದರಿಂದ ಜನತೆಗೆ ಶಾಂತಿಯನ್ನೂ ಸೌಖ್ಯವನ್ನೂ ಸಂತತವಾಗಿ ಬಾಳುವ ಶಕ್ತಿಯನ್ನೂ ಇದುವರೆಗೂ ಕೊಟ್ಟಿರುವಂತೆ ಮುಂದಕ್ಕೂ ಕೊಡಬಲ್ಲದ್ದಾಗಿಯೂ ಇದೆ. ಆದುದರಿಂದಲೇ ಈ ಜಗತ್ತಿನ ಎಲ್ಲ ದೇಶಗಳಲ್ಲಿರುವ ವಿಚಾರಶೀಲರಾದ ವಿದ್ವಾಂಸರೂ ಈ ಸಂಸ್ಕೃತಿಯನ್ನು ಶ್ಲಾಘಿಸುತ್ತಿದ್ದಾರೆ; ಅಲ್ಲದೆ ಅನುಸರಿಸುತ್ತಿದ್ದಾರೆ ; ಮತ್ತು ಇದರಲ್ಲಿರುವ ಗುಣಗಳನ್ನು ಪ್ರಚಾರಮಾಡುತ್ತಿದ್ದಾರೆ. ಅದರ ಫಲವಾಗಿ ಆ ದೇಶೀಯರಾದ ಕೆಲವರು ವಿದ್ಯಾವಂತರು ಈ ದೇಶಕ್ಕೆ ಬಂದು ಇಲ್ಲಿಂದ ತಮ್ಮ ಮತ್ತು ತಮ್ಮ ಜನಾಂಗದ ಜೀವನ ಕ್ರಮದ ಮೇಲ್ಮೆಗಾಗಿ ಸಂದೇಶವೇನಾದರೂ ಈಗಲೂ ದೊರೆಯುತ್ತದೆಯೆ ? ಎಂದು ಅರಸುತ್ತಿರುವುದೂ ಪಡೆಯುತ್ತಿರುವುದೂ ಕಂಡುಬರುತ್ತಿದೆ. ಇಂತಹ ಧಾರ್ಮಿಕ ಸಂಸ್ಕೃತಿಯು ಜನರೆಲ್ಲರಿಗೂ ಶ್ರೇಯಸ್ಸನ್ನುಂಟುಮಾಡುತ್ತಿರಲಿ.

ಧಾರ್ಮಿಕ ಶಬ್ದಾರ್ಥ

ಭಾರತಾರ್ಯರ ಧಾರ್ಮಿಕ ಸಂಸ್ಕೃತಿ—ಎಂಬ ಹೆಸರಿನಲ್ಲಿರುವ ಭಾರತ, ಆರ್ಯ, ಸಂಸ್ಕೃತಿ, ಈ ಶಬ್ದಗಳ ಅರ್ಥವನ್ನು ಸ್ವಲ್ಪಮಟ್ಟಿಗೆ ತಿಳಿದ ಮೇಲೆ, ಅದರಲ್ಲಿರುವ 'ಧಾರ್ಮಿಕ' ಶಬ್ದದ ಅರ್ಥವನ್ನೂ ತಿಳಿಯಬೇಕಾದುದು ನ್ಯಾಯವಾಗಿರುತ್ತದೆ. ಧಾರ್ಮಿಕ ಎಂದರೆ, ಧರ್ಮಕ್ಕೆ ಸಂಬಂಧಪಟ್ಟಿರುವ, ಒಳ್ಳೆಯ ಸಂಸ್ಕೃತಿಯಿಂದ ಉಂಟಾಗುತ್ತಿರುವ, ಧರ್ಮದ ತಿಳಿವಳಿಕೆ, ಆಚರಣೆಗಳಿಂದ ಉಂಟಾಗುತ್ತಿರುವ ಈ ಸಂಸ್ಕೃತಿಗೆ ಮೂಲವಾಗಿಯೂ ಇರುವ, ಮೇಲು ಮೇಲಾದ ಧರ್ಮಸೂಕ್ಷ್ಮಗಳನ್ನು ತಿಳಿಯಲು ಸಹಾಯ ಮಾಡುತ್ತಿರುವ, ಸಂಸ್ಕೃತಿಯನ್ನು ಬೆಳೆಯಿಸುತ್ತಾ ಪರಿಷ್ಕರಿಸುತ್ತಲೂ ಇರುವ, ಎಂದು ಮುಂತಾದ ಅರ್ಥಗಳು ಸೂಚಿತವಾಗುತ್ತವೆ. 'ಧರ್ಮ' ಶಬ್ದಕ್ಕೆ 'ಇಕ' ಎಂಬ ತದ್ಧಿತ ಪ್ರತ್ಯಯುವುಸೇರಿ 'ಧಾರ್ಮಿಕ' ಎಂಬ ರೂಪವಾಗುತ್ತದೆ.

ಧರ್ಮ ಶಬ್ದಾರ್ಥ.

ಈಗ 'ಧರ್ಮ' ಶಬ್ದದ ಅರ್ಥವನ್ನು ವಿಮರ್ಶಿಸಿ ತಿಳಿಯಬೇಕಾಗಿದೆ. ಧರ್ಮ ಶಬ್ದವು 'ಧೃ' ಎಂಬ ಧಾತುವಿಗೆ 'ಮ' ಎಂಬ ಪ್ರತ್ಯಯವನ್ನು ಸೇರಿಸುವುದರಿಂದ ರೂಪಗೊಂಡಿರುತ್ತದೆ.

"ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ।"

ಎಂದರೆ, ಜನರನ್ನು ಹಿಡಿದು ನಿಲ್ಲಿಸಿರುವ, ಒಗ್ಗೂಡಿಸಿ ಪರಸ್ಪರವಾಗಿ ಸಹಾನುಭೂತಿಯಿಂದ ಸಹಕರಿಸುತ್ತಿರುವಂತೆ ಪ್ರೇರಿಸುತ್ತಿರುವ ತತ್ವ ಅಥವಾ ಶಕ್ತಿಗೆ ಧರ್ಮವೆಂದು ಹೆಸರು ಬಂದಿದೆ ಎನ್ನಬಹುದು. ಧರ್ಮಶಬ್ದಕ್ಕೆ ಪುಣ್ಯ, ನ್ಯಾಯ, ಸ್ವಭಾವ, ಆಚಾರ, ಯಮ ಮುಂತಾದ ಅರ್ಥಗಳಿವೆ. ಈ ಪದಕ್ಕೆ ಇದಕ್ಕಿಂತಲೂ ವಿಶಾಲವಾದ ಅರ್ಥವನ್ನು ವೇದದಿಂದ ತಿಳಿಯಬಹುದು.

"ಸತ್ಯಂವದ, ಧರ್ಮಂಚರ"—ತೈತ್ತಿರೀಯ ಉಪನಿಷತ್
"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ"
"ಧರ್ಮೇಣಪಾಪಮಪನುದತಿ ಧರ್ಮೇ ಸರ್ವಂ ಪ್ರತಿಷ್ಠಿತಂ
ತಸ್ಮಾತ್ ಧರ್ಮಂ ಪರಮಂ ವದಂತಿ"
—ಮಹಾ ನಾ. ಉ.

ಎಂದರೆ, ಸತ್ಯವನ್ನು ಹೇಳು, ಧರ್ಮವನ್ನು ಆಚರಿಸು. ಧರ್ಮವು ಈ ಇಡಿಯ ಪ್ರಪಂಚವೆಲ್ಲವನ್ನೂ ಎತ್ತಿ ಹಿಡಿದು ನಿಲ್ಲಿಸಿರುತ್ತದೆ. ಅದು ಈ ಜಗತ್ತು ನಾಶವಾಗದಂತೆ ವ್ಯವಸ್ಥೆಯಿಂದ ಮುಂದುವರಿಯುತ್ತಿರಲು ಸಹಾಯಮಾಡುತ್ತಿರುತ್ತದೆ. ಈ ಲೋಕದಲ್ಲಿ ಎಲ್ಲೆಡೆಯಲ್ಲೂ ನೆಲೆಸಬೇಕಾಗಿರುವ ಸುಖಶಾಂತಿಗಳಿಗೆ ಧರ್ಮಾಚರಣೆಯೇ ಮುಖ್ಯವಾದ ಅವಲಂಬನವಾಗಿರುವುದರಿಂದ ಅದನ್ನು ಕಾಪಾಡುತ್ತಿರುತ್ತದೆ. ಧರ್ಮವು ಈ ಎಲ್ಲ ಜಗತ್ತಿಗೂ ಆಧಾರ ನೆಲೆಯಾಗಿರುತ್ತದೆ. ಇದೆಲ್ಲವೂ ಧರ್ಮದಲ್ಲಿಯೇ ಸುವ್ಯವಸ್ಥಿತವಾಗಿ ನೆಲಸಿರುತ್ತದೆ. ಗೊಂದಲ, ತಿಕ್ಕಾಟ, ಘರ್ಷಣೆಗಳಿಗೆ ಅವಕಾಶವನ್ನು ಕೊಡದೆ ಮುಂದುವರಿಯಲು ಧರ್ಮವು ಸಹಾಯವನ್ನು ನೀಡುತ್ತಿರುತ್ತದೆ. ಧರ್ಮಾಚರಣೆಯಿಂದ ಪಾಪವನ್ನು ನಿವಾರಿಸಲಾಗುತ್ತದೆ. ಆದುದರಿಂದ ಧರ್ಮವು ಉತ್ತಮ ಸಾಧನವೆಂದು ಹೇಳುತ್ತಾರೆ.

"ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ ಉಭಾಭ್ಯಾ
ಮೇವ ಮನುಷ್ಯಲೋಕಂ" (ಪ್ರಶ್ನ ಉಪ ೩.೭)
ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ॥—ಈಶ.ಉ.

ಸಂಸ್ಕಾರ, ಕರ್ಮ, ಧರ್ಮ, ಜನ್ಮಾಂತರಗಳು ಸಂಬದ್ಧವಾಗಿವೆ.

ಎಂದರೆ, ಪುಣ್ಯವನ್ನು ಧರ್ಮವನ್ನು ಆಚರಿಸುವುದರಿಂದ ಸದ್ಗತಿಯು ಉತ್ತಮ ಸ್ಥಿತಿಯು ಲಭಿಸುತ್ತದೆ. ಅಧರ್ಮವನ್ನು, ಪಾಪವನ್ನು ಆಚರಿಸುವುದರಿಂದ ದುರ್ಗತಿಯು, ಹೀನಸ್ಥಿತಿಯು ಬರುತ್ತದೆ. ಪುಣ್ಯಪಾಪಗಳ ಧರ್ಮಾಧರ್ಮಗಳ ಮಿಶ್ರಣದಿಂದ ಈ ಮನುಷ್ಯ ಲೋಕವನ್ನೂ ಮಾನವನು ಪಡೆಯುತ್ತಾನೆ.

ಈ ಲೋಕದಲ್ಲಿ ಒಂದು ನೂರು ವರ್ಷಗಳವರೆಗೂ ಎಂದರೆ, ಮಾನವನ ಪೂರ್ಣವಾದ ಆಯುಸ್ಸು ಮುಗಿಯುವವರೆಗೂ ಇರಬೇಕೆಂದು ಬಯಸುವವನು ಕರ್ಮಗಳನ್ನು—ಎಂದರೆ ಸ್ವಧರ್ಮಗಳನ್ನು—ಆಚರಿಸುತ್ತಲೇ ಇರಬೇಕು. ಅದೇ ಒಳ್ಳೆಯ ಬಾಳಿನ ರೀತಿಯಾಗಿರುತ್ತದೆ.

**ಸಾಮಾನ್ಯ ಧರ್ಮ ಅಥವಾ ವಿಶ್ವಧರ್ಮ.**

ಧರ್ಮವೆಂದರೆ ಪ್ರತಿಯೊಬ್ಬರೂ—ಗಂಡಸರು, ಹೆಂಗಸರು, ದೊಡ್ಡವರು, ಚಿಕ್ಕವರು, ಎಲ್ಲರೂ ಮಾಡಬೇಕಾದ ಕೆಲಸವೆಂದು ಅರ್ಥವಾಗುತ್ತದೆ. ಇದರಲ್ಲಿ ಸಹಕಾರ ಮನೋಭಾವವೂ ಅಡಗಿರುತ್ತದೆ. ಪಿತೃಧರ್ಮ, ಮಾತೃಧರ್ಮ, ಪುತ್ರಧರ್ಮ, ಗುರುಧರ್ಮ, ಶಿಷ್ಯಧರ್ಮ, ರಾಜಧರ್ಮ, ಪ್ರಜಾಧರ್ಮ, ಆಳಿನ ಧರ್ಮ, ದಣಿಯ ಧರ್ಮ, ಶ್ರೀಮಂತನ ಧರ್ಮ, ಬಡವನ ಧರ್ಮ, ಪತಿಯ ಧರ್ಮ, ಪತ್ನಿಯ ಧರ್ಮ—ಈ ಪದಗಳ ಅರ್ಥವನ್ನು ಪರಿಶೀಲಿಸಿದರೆ ಪ್ರತಿಯೊಬ್ಬ ವ್ಯಕ್ತಿಯೂ ಮಾಡಬೇಕಾಗಿರುವ ಕೆಲಸಕ್ಕೆ ಧರ್ಮವೆಂದು ವ್ಯವಹಾರವಿದೆ ಎಂದು ಗೊತ್ತಾಗುತ್ತದೆ. "ಧರ್ಮ ಕರ್ಮ ನಿಮ್ಮ ಮೇಲೂ ಇದೆ. ನೀವು ಹೇಗೆ ಬೇಕಾದರೂ ಮಾಡಿರಿ. ಹಾಲಿನಲ್ಲಾದರೂ ಅದ್ದಿ, ನೀರಿನಲ್ಲಾದರೂ ಅದ್ದಿ" ಎಂಬುದಾಗಿ ಹಳ್ಳಿಗಳಲ್ಲಿರುವ ಅನಕ್ಷರಸ್ಥರಾದ ಹೆಂಗಸರೂ ತಮ್ಮ ದಿನಗಟ್ಟಲೆಯ ವ್ಯವಹಾರದಲ್ಲಿ ಹೇಳುತ್ತಾರೆ. ಇದರಿಂದ ಧಾರ್ಮಿಕ ಸಂಸ್ಕೃತಿಯ ಪ್ರಚಾರವು ದೇಶದಲ್ಲಿರುವ ಎಲ್ಲ ಮೂಲೆಗಳಿಗೂ ಹರಡುವಂತೆ ನಮ್ಮ ಹಿಂದಿನವರು ಮಾಡಿದ್ದರೆಂಬುದನ್ನೂ ಗುರುತಿಸಬಹುದು. ಇದರಂತೆಯೇ "ಮಾಡಿದ್ದುಣ್ಣೋ ಮಹಾರಾಯ" "ಅವನು ಕೊಟ್ಟು ಹುಟ್ಟಿದ್ದಾನೆ, ಅನುಭವಿಸುತ್ತಿದ್ದಾನೆ" ಈ ಮುಂತಾದ ಗಾದೆಯಂತಹ ಮಾತುಗಳು ನಾಗರಿಕರಲ್ಲೂ ಗ್ರಾಮಸ್ಥರಲ್ಲೂ ಸಾರ್ವಜನೀನವಾಗಿ ಕೇಳಿಬರುತ್ತವೆ. ಇದರಿಂದ ಜನರು ತಮ್ಮ ಪರಿಸ್ಥಿತಿಗಳ ವಿಷಯದಲ್ಲಿ ಹೊಂದಿರಬೇಕಾದ ಮನಸ್ಸಮಾಧಾನವನ್ನು ಈ ಮಾತುಗಳೂ

ಸೂಚಿಸುತ್ತವೆ. ಅಲ್ಲದೆ ಐಹಿಕವಾದ ಸಂಪತ್ತಿನಲ್ಲಿ ಹೆಚ್ಚುಕಡಿಮೆ ಗಳಿಂದ ಈ ಲೋಕದಲ್ಲಿರುವ ಜನರು ಮೇಲ್ಕೆಳಗಿಗಳಿಗೆ ಗುರಿಯಾ ಗಿರುವುದೂ ಉಂಟು. ಹಣಗಾರರಾಗಿರುವವರನ್ನು ನೋಡಿ ಬಡವರು ಅಸೂಯೆಪಡದಂತೆಯೂ, ದೇಶದಲ್ಲಿ ಅಶಾಂತಿಯು ಹೆಚ್ಚದಂತೆಯೂ ಮಾಡಲು ಈ ಮನೋಧರ್ಮವು ಮುಖ್ಯ ಕಾರಣವಾಗಿರುತ್ತದೆ. ಬಹುಸಂಖ್ಯೆಯ ಜನರು ಎಲ್ಲ ಕಾಲಗಳಲ್ಲೂ, ಬಡವರಾಗಿಯೇ ಇರುತ್ತಾರೆ. ಅತ್ಯಲ್ಪ ಸಂಖ್ಯೆಯ ಜನರು ಹಣಗಾರರಾಗಿರುತ್ತಾರೆ. ಬಡವರು ತಮಗಿರುವಷ್ಟರಲ್ಲಿ ಅಥವಾ ದೊರೆಯುವಷ್ಟರಲ್ಲಿಯೇ ತೃಪ್ತಿ ಮನೋಭಾವವನ್ನು ಹೊಂದಿರುವಂತಾಗುತ್ತದೆ. ಇದರಿಂದ ದೇಶದಲ್ಲಿ ಅಶಾಂತಿ, ಅತೃಪ್ತಿ, ಅಸಮಾಧಾನಗಳು ಹೆಚ್ಚಲು ಅಡ್ಡಿಯೂ ಆಗುತ್ತದೆ. ಜನರ ನೆಮ್ಮದಿ ಸುಖಗಳಿಗೆ ಧಕ್ಕೆಯೂ ಬರದೆ ಇರುತ್ತದೆ. ನಿರಾಶಾಭಾವಕ್ಕೂ ಎಡೆ ಇರುವುದಿಲ್ಲ. ಅಲ್ಲದೆ ಈ ಬಗೆಯ ಮನೋಧರ್ಮದಿಂದ ಜನರಲ್ಲಿ ಅತ್ಯಾಶೆ ದುರಾಶೆಗಳು ಹೆಚ್ಚಲೂ ಪ್ರಬಲಿಸಲೂ ಅವಕಾಶವು ತುಂಬ ಕಡಿಮೆಯಾಗಿರುತ್ತದೆ. ಅಷ್ಟೇ ಅಲ್ಲದೆ ಕರ್ಮವಾದವು ಜನರನ್ನು ನಿರಾಶಾಭಾವಕ್ಕೆ ಎಳೆದಿದೆ ಎಂಬ ಆಕ್ಷೇಪಣೆಯಲ್ಲಿ ಹುರುಳಿಲ್ಲವೆಂಬುದೂ ಗೊತ್ತಾಗುತ್ತದೆ.

ಈ ಧಾರ್ಮಿಕ ಸಂಸ್ಕೃತಿಯ ಸ್ವರೂಪ ಶಕ್ತಿ ಫಲಗಳನ್ನು ಈ ಪದ್ಯದಲ್ಲಿ ಸಂಗ್ರಹಿಸಲಾಗಿದೆ.

"ಆರ್ಯಾಣಾಂ ಸಂಸ್ಕೃತಿಂ ತಾಂ ಋಷಿ ಕವಿಸುಮನೋ ಲಾಲಿತಾಂ ಧರ್ಮಮೂಲಾಂ
ರಕ್ಷಂತೀ ವರ್ಧಯಂತೀ ವಿಗತಮೃತಿಜರಾ ರಾಜತೇ ವೇದಭಾಷಾ ।
ಸೈಷಾ ಗೀರ್ವಾಣವಾಣೀ ಜಗದಿದಮವತಾತ್ ನಾಶನೇ ಸ್ಪರ್ಧಮಾನಂ
ದತ್ವಾ ಶಾಂತಿಂ ವಿವೇಕಂ ಸುಖಯತು ಜನತಾಂ ಆಸ್ತಿಕತ್ವಾಭಿವೃದ್ಧ್ಯಾ ॥"

ನಮ್ಮ ಜನಾಂಗದಲ್ಲಿ ಸಂಸ್ಕೃತಿಯು ಮೊದಲಿನಿಂದಲೂ ಧರ್ಮವನ್ನು ಅವಲಂಬಿಸಿ ಉಂಟಾಗಿರುವ ಮನೋವೃತ್ತಿಯಾಗಿದೆ. ಈ ಧರ್ಮವು ಸಾಮಾನ್ಯ ಧರ್ಮ ಅಥವಾ ವಿಶ್ವಧರ್ಮ ಅಥವಾ ಅಂತರ

ರಾಷ್ಟ್ರೀಯ ಧರ್ಮವೆಂದೂ, ವಿಶೇಷ ಧರ್ಮ ಅಥವಾ ವರ್ಣಾಶ್ರಮ ಧರ್ಮವೆಂದೂ ಎರಡು ಬಗೆಯಾಗಿದೆ. ಇವೆರಡರ ಪೈಕಿ ವಿಶ್ವಧರ್ಮದ ಅರಿವು ಜನರಲ್ಲಿ ಬೇರೂರಿ ಬೆಳೆಯುವಂತೆ ಮಾಡಲು ಈ ಸಂಸ್ಕೃತಿಯು ಇದುವರೆಗಿನಂತೆ ಮುಂದೆಯೂ ಸಾಧನವಾಗಿರಬಲ್ಲದ್ದಾಗಿದೆ. ಆದುದರಿಂದಲೇ ಇದು ಎಂದರೆ ಧಾರ್ಮಿಕ ಸಂಸ್ಕೃತಿಯು ಕಶ್ಯಪ, ಗೌತಮ, ಜಮದಗ್ನಿ, ವ್ಯಾಸ, ವಾಲ್ಮೀಕಿ ಮುಂತಾದ ಋಷಿಗಳಿಂದಲೂ, ಕಾಳಿದಾಸ, ಭವಭೂತಿ, ಜಗನ್ನಾಥ ಮುಂತಾದ ಕವಿಗಳಿಂದಲೂ, ವಿದ್ಯಾನಾಥ, ಮಮ್ಮಟ, ಆನಂದವರ್ಧನ ಮುಂತಾದ ಕವಿಸಹೃದಯರಾದ ವಿಮರ್ಶಕರಿಂದಲೂ, ಇಂದ್ರ, ಅಗ್ನಿ, ಸೂರ್ಯ, ವರುಣ, ವಾಯು ಮುಂತಾದ ದೇವತೆಗಳಿಂದಲೂ ಆದರದಿಂದ ಬೆಳೆಸಲ್ಪಟ್ಟಿರುತ್ತಾ ನಮ್ಮಲ್ಲೂ ಅನುವಂಶಿಕವಾಗಿ ಬಂದಿರುತ್ತದೆ. ಈ ಸಂಸ್ಕೃತಿಯು ಧಾರ್ಮಿಕವಾಗಿರುವುದರಿಂದಲೇ ಈ ಪ್ರಪಂಚದಲ್ಲಿರುವ ಇತರ ಸಂಸ್ಕೃತಿಗಳಿಗಿಂತಲೂ ಹೆಚ್ಚು ಪುರಾತನವಾದರೂ ಕಾಲಕ್ರಮದಲ್ಲಿ ಬೆಳೆಯುತ್ತ ಬಲಗೊಳ್ಳುತ್ತ ಮತ್ತು ಬಂದೊದಗಿದ ಇತರ ಸಂಸ್ಕೃತಿಗಳ ಆಘಾತಗಳನ್ನು ಎದುರಿಸಿ ನಷ್ಟವಾಗದೆ ಉಳಿದು ಊರ್ಜಿತವಾಗಿರುತ್ತದೆ. ವೇದಗಳು, ಪುರಾಣಗಳು, ಕಾವ್ಯಗಳು, ಇವುಗಳಲ್ಲಿ ರೂಪಗೊಂಡು ಪರಿಷ್ಕೃತವಾಗಿರುವ ಸಂಸ್ಕೃತ ಭಾಷೆಯು ಭಾರತಾರ್ಯರ ಸಂಸ್ಕೃತಿಯನ್ನು ಕಾಪಾಡುತ್ತಲೂ ಬೆಳೆಯಿಸುತ್ತಲೂ ಪ್ರಕಾಶಿಸುತ್ತಿದೆ. ಮುಪ್ಪು ಸಾವುಗಳಿಲ್ಲದೆ ವಿರಾಜಿಸುತ್ತಿದೆ, ಇಂತಹ ದೇವಭಾಷೆಯಾದ ಸಂಸ್ಕೃತ ವಾಣಿಯು ಜನಾಂಗಗಳಲ್ಲಿ ಒಬ್ಬರೊಡನೊಬ್ಬರು ಸಹಾನುಭೂತಿಯಿಂದ ಸಹಕರಿಸುವುದರಲ್ಲಿ ಸ್ಪರ್ಧಿಸುತ್ತಾ ಮುಂದುವರಿಯುವುದಕ್ಕಿಂತಲೂ ಹೆಚ್ಚಾಗಿ ಒಬ್ಬರನ್ನೊಬ್ಬರು ಹಾಳುಮಾಡಿ ಕೊಲ್ಲುವುದರಲ್ಲಿ ಹೋರಾಡುತ್ತಿರುವ ರಾಷ್ಟ್ರಗಳನ್ನೊಳಗೊಂಡಿರುವ ಈ ಪ್ರಪಂಚವನ್ನು ಕಾಪಾಡುತ್ತಿರಲಿ.

ಸಂಸ್ಕೃತಿಯು ಸಾಹಿತ್ಯದಲ್ಲಿ ಅಮರವಾಗಿರುತ್ತದೆ.

ಧಾರ್ಮಿಕ ಸಂಸ್ಕೃತಿಯು ಉಪದೇಶ ಉದಾಹರಣೆಗಳಿಂದ, ಬೋಧನ ಪ್ರಚಾರಗಳಿಂದ ಈ ಲೋಕವನ್ನು ರಕ್ಷಿಸಲಿ. ಜನಾಂಗಗಳಿಗೆ ವಿವೇಕವನ್ನೂ ಶಾಂತಿಯನ್ನೂ ಕೊಟ್ಟು, ಅವುಗಳಲ್ಲಿ ಸಹಾನುಭೂತಿ, ಸಹಕಾರಮನೋಭಾವ ಮತ್ತು ಆಸ್ತಿಕತೆಯನ್ನು ಬೆಳೆಯಿಸುವುದರಿಂದ ಜನರು ಸುಖವಾಗಿರುವಂತೆ ಮಾಡಲಿ.

ಧರ್ಮವೆಂದರೆ ಕೇವಲ ಮೂಢನಂಬಿಕೆಯ ಮತಾಚರಣೆಗಳಲ್ಲ. ಹಾಗೆಯೇ ಬರಿಯ ಕಾಯಕ್ಲೇಶಕರವಾದ ಕರ್ಮಕಲಾಪವೂ ಅಲ್ಲ. ನಮಗೆ ಇಹಲೋಕದಲ್ಲಿ ದೊರೆಯುವ ಸುಖಸೌಕರ್ಯಗಳ ಸಾಧನೆಗಳನ್ನು ಬಿಟ್ಟು ಖಚಿತವಾಗಿ ಗೊತ್ತಾಗದೆ ಇರುವ ಪಾರಲೌಕಿಕ ಸದ್ಗತಿಗಳಿಗಾಗಿ ಆಶೆಪಡುವಿಕೆಯೂ ದುಡಿಯುವಿಕೆಯೂ ಧರ್ಮವೆನಿಸಿಕೊಳ್ಳಲಾರದು. ಜ್ಞಾನಪ್ರಧಾನವಾದ ಈ ಮನುಷ್ಯಜನ್ಮದಲ್ಲಿರುವ ನಾವು ಪಡೆಯಬೇಕಾದ ಫಲವನ್ನು ವಿಚಾರಮಾಡಿ ತಿಳಿದು, ನಮ್ಮ ಕಾಲ ಪ್ರಯತ್ನಗಳು ವ್ಯರ್ಥವಾಗದಂತೆಯೂ ಅಪವ್ಯಯವಾಗದಂತೆಯೂ, ಆ ಫಲ ಅಥವಾ ಪುರುಷಾರ್ಥಗಳ ತಿಳಿವಳಿಕೆ, ಅವನ್ನು ಪಡೆಯಲು ಆವಶ್ಯಕವಾದ ನಡೆವಳಿಕೆ ಮತ್ತು ಮನಃಪೂರ್ವಕವಾದ ಚಟುವಟಿಕೆ, ಇದಕ್ಕೇ ಧರ್ಮವೆಂದು ಹೆಸರು. ಐಹಿಕವಾದ ಸುಖಸೌಕರ್ಯಗಳನ್ನು ನಮಗೆ ತಕ್ಕಷ್ಟು ಮಿತವಾಗಿ ಆವಶ್ಯಕವಾದಷ್ಟನ್ನು ಮಾತ್ರ ಅಪೇಕ್ಷಿಸಿ ಪಡೆಯಲು ದುಡಿದು ಪಡೆದು ಅನುಭವಿಸುವುದೂ, ನಮ್ಮಂತೆಯೇ ಇತರರೂ ಎಂದು ತಿಳಿದು ಅವರ ಸುಖಸಾಧನೆಗೂ ದುಃಖ ನಿವೃತ್ತಿಗೂ ಸಾಧ್ಯವಾದಷ್ಟು ಸಹಾನುಭೂತಿ ಸಹಕಾರಗಳನ್ನು ನೀಡುವುದೂ ಧರ್ಮದ ಸರಳವಾದ ಮೊದಲನೆಯ ಸ್ವರೂಪವಾಗಿದೆ. ಐಹಿಕ ಸುಖಸೌಕರ್ಯಗಳನ್ನು ಎಂದರೆ, ಪ್ರೇಯಸ್ಸನ್ನು ಬಿಡಬೇಕೆಂದು ಯಾವ ಧರ್ಮಶಾಸ್ತ್ರದಲ್ಲೂ ಹೇಳಿಲ್ಲ. ಆದರೆ ಶ್ರೇಯಸ್ಸಿಗೆ ಎಂದರೆ, ಪರಮಪುರುಷಾರ್ಥಕ್ಕೆ ಅವಿರೋಧವಾಗಿ ಪ್ರೇಯಸ್ಸನ್ನು

ಪಡೆಯುತ್ತಾ, ಶ್ರೇಯಸ್ಸನ್ನೂ ಅದರ ಸಾಧನಗಳನ್ನೂ ವಿಚಾರಮಾಡಿ ತಿಳಿದು, ಇವೆರಡಕ್ಕೂ ಸಮನ್ವಯವಾಗುವ, ವಿರೋಧವಿಲ್ಲದೆ ಹೊಂದಿ ಕೊಂಡು ಇರುವ ರೀತಿಯಲ್ಲಿ ನಮ್ಮ ಜೀವನವನ್ನು ಹೆಚ್ಚು ಹೆಚ್ಚಾಗಿ ಹಸನು ಮಾಡುವ ತಿಳಿವಳಿಕೆ ಮತ್ತು ನಡೆವಳಿಕೆಗಳಿಗೆ ಧರ್ಮವೆಂದು ವ್ಯವಹಾರವಿದೆ.

ಒಳ್ಳೆಯ ಬಾಳನ್ನು ಬಾಳಬೇಕೆಂಬ ಮನೋಧರ್ಮಕ್ಕೆ ಸಂಸ್ಕೃತಿ ಎಂದು ಹೇಳಿದೆ. ಭಾರತಾರ್ಯರ ಸಂಸ್ಕೃತಿಯು ಧರ್ಮಮೂಲ ವಾಗಿದೆ. ಎಂದರೆ, ಈ ದೇಶದಲ್ಲಿ ಸಂಸ್ಕೃತಿಯು ಧರ್ಮದ ತಿಳಿವಳಿಕೆ ಆಚರಣೆಗಳಿಂದ ಉಂಟಾಯಿತು ; ಮತ್ತು ಆ ಸಂಸ್ಕೃತಿಯಿಂದ ಧರ್ಮದ ಸೂಕ್ಷ್ಮರೂಪಗಳು ಗೊತ್ತಾಗುತ್ತಾ ಬಂದುದಲ್ಲದೆ ಮನೋ ವೈಶಾಲ್ಯದಿಂದ ವಿಶ್ವಧರ್ಮದ ಅರಿವೂ, ಅದರ ಆಚರಣೆಯಲ್ಲಿ ಆದರವೂ ಹೆಚ್ಚುತ್ತಾ ಬಂದಿವೆ. ಹೀಗೆ ಸಂಸ್ಕೃತಿಯೂ ಧರ್ಮವೂ ಪರಸ್ಪರವಾಗಿ ಪೋಷಕಪೂರಕ ರೀತಿಯಿಂದ ಬೆಳೆದಿರುವುದು ಗೊತ್ತಾಗುತ್ತದೆ. ಈಗಿನ ಸಂಸ್ಕೃತಿಯನ್ನು ಜನಜೀವನದಲ್ಲಿ ನಾವು ನೇರವಾಗಿ ನೋಡಬಹುದು. ಈ ಸಂಸ್ಕೃತಿಯು ಹಿಂದಿನ ಕಾಲದಲ್ಲಿ ಹೇಗಿತ್ತು ? ಮತ್ತು ಹೇಗೆ ಬೆಳೆಯಿತು ? ಎಂಬುದನ್ನು ತಿಳಿಯ ಬೇಕಾದರೆ ಸಾಹಿತ್ಯದ ನೆರವನ್ನೇ ಪಡೆಯಬೇಕಾಗಿರುತ್ತದೆ. ಸುದೈವದಿಂದ ನಮ್ಮ ದೇಶದಲ್ಲಿ ಸುಮಾರು ಐದು ಸಾವಿರ ವರ್ಷ ಗಳಿಂದಲೂ ಸಂತತವಾಗಿ ಬೆಳೆದು ಬಂದಿರುವ ಸಾಹಿತ್ಯವು ದೊರೆಯು ತ್ತದೆ. ಆದುದರಿಂದ ಸಂಸ್ಕೃತಿಯ ಹುಟ್ಟು ಬೆಳವಣಿಗೆಗಳಲ್ಲಿನ ಪ್ರತಿ ಯೊಂದು ಅಂತಸ್ತನ್ನೂ ನಾವು ಗುರುತಿಸಬಹುದಾಗಿದೆ. ಅಲ್ಲದೆ ನಮ್ಮ ಸಂಸ್ಕೃತಿಯು ಪ್ರಪಂಚದಲ್ಲಿರುವ ಇತರ ಜನಾಂಗಗಳ ಸಂಸ್ಕೃತಿಗಳಿ ಗಿಂತ ಪ್ರಾಚೀನತಮವಾಗಿರುವುದೂ ಕಂಡುಬರುತ್ತದೆ. ಹೀಗೆ ಭಾರ ತಾರ್ಯರ ಸಂಸ್ಕೃತಿಯು ಇತರ ಸಂಸ್ಕೃತಿಗಳಿಗಿಂತ ಹಿರಿಯ ಸಂಸ್ಕೃತಿಯಾಗಿದೆ. ಇದು ಹೆಚ್ಚು ಕಾಲದಿಂದಲೂ ಬಾಳಿ ಬೆಳೆಯುತ್ತಿರು ವುದಲ್ಲದೆ ಗುಣ ವಿಶೇಷಗಳಿಂದ ಮಾನ್ಯತೆಯನ್ನೂ ಪಡೆಯುತ್ತಿದೆ.

ಸಂಸ್ಕೃತಿಗಳ ತಾರತಮ್ಯ.

ವೈದಿಕಾರ್ಯರ ಈ ಧಾರ್ಮಿಕ ಸಂಸ್ಕೃತಿಯು ಇತರ ದೇಶೀಯರ ಸಂಸ್ಕೃತಿಗಳಿಗಿಂತ ಹೆಚ್ಚು ಪ್ರಾಚೀನವೂ ಪೂರ್ಣತರವೂ ಆಗಿರುವುದು ಗಮನಾರ್ಹವಾಗಿದೆ. ಈ ಜಗತ್ತಿನಲ್ಲಿರುವ ಗ್ರಂಥಗಳಲ್ಲಿ ವೇದಗಳೇ ಅತ್ಯಂತ ಪ್ರಾಚೀನವಾದುವು. ಈಜಿಪ್ಟ್, ಬ್ಯಾಬಿಲೋನಿಯ, ಅಸ್ಸಿರಿಯ, ಗ್ರೀಸ್, ರೋಮ್ ಮುಂತಾದ ರಾಷ್ಟ್ರಗಳು ಅವುಗಳ ಉಚ್ಛ್ರಾಯ ಕಾಲಗಳಲ್ಲಿ ಒಳ್ಳೆಯ ಘನತೆಯನ್ನು ಪಡೆದಿದ್ದುವು. ಅವುಗಳ ಸಂಸ್ಕೃತಿಯೂ ಮೇಲಿನ ಮಟ್ಟವನ್ನು ಏರಿದ್ದಿತು. ಆದರೂ ಆ ರಾಜ್ಯಗಳೂ ಸಂಸ್ಕೃತಿಗಳೂ ಹೇಳ ಹೆಸರಿಲ್ಲದೆ ನಷ್ಟವಾಗಿವೆ. ಇವುಗಳ ಪೈಕಿ ಗ್ರೀಸ್ ಮತ್ತು ರೋಮ್ ದೇಶಗಳ ಸಂಸ್ಕೃತಿಗಳು ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಂಸ್ಕೃತಿಯಿಂದ ಮಾರ್ಪಟ್ಟು ಗುರುತಿಸಲು ಕಷ್ಟವಾಗುವಷ್ಟು ಭಿನ್ನವಾಗಿವೆ. ಈಗ ಬ್ಯಾಬಿಲೋನಿಯ ಮುಂತಾದ ದೇಶದಲ್ಲಿ ಪೂರ್ವಕಾಲದಲ್ಲಿ ಯಾವ ಬಗೆಯ ಜೀವನಕ್ರಮವನ್ನು ಆ ಜನರು ಅನುಸರಿಸುತ್ತಿದ್ದರೆಂಬುದನ್ನು ಇತಿಹಾಸಕಾರರು ಕಲ್ಪನಾಶಕ್ತಿಯಿಂದ ಊಹಿಸಿ ಮಾಡಿರುವ ವರ್ಣನೆಗಳಿಂದ ಮಾತ್ರವೇ ಸ್ವಲ್ಪಮಟ್ಟಿಗೆ ತಿಳಿಯಬಹುದಾಗಿದೆ. ಇದಕ್ಕೆ ಎಂದರೆ, ಇಂತಹ ಅಸಹಾಯಸ್ಥಿತಿಗೆ ಆ ಸಾಹಿತ್ಯಗಳು ಈಗ ದೊರೆಯದಿರುವುದೂ ಧಾರ್ಮಿಕಮನೋಭಾವದ ಬೆಂಬಲವಿಲ್ಲದಿರುವುದೂ ಕಾರಣವಾಗಿದೆ. ಈ ನಮ್ಮ ಭಾರತ ದೇಶದಲ್ಲಿಯಾದರೋ ಆ ಪ್ರಾಚೀನ ಕಾಲದ ಸಂಸ್ಕೃತಿಯು ವೈದಿಕ ಸಾಹಿತ್ಯಗ್ರಂಥಗಳಲ್ಲಿ ವರ್ಣಿತವಾಗಿ ಕಾಪಾಡಲ್ಪಟ್ಟಿದೆ. "ಏಕಮೇವಾದ್ವಿತೀಯ" ಪರಮಾತ್ಮನ ಅನೇಕ ದಿವ್ಯರೂಪಗಳಾದ ಆದಿತ್ಯ, ಇಂದ್ರ, ವರುಣ, ಅಗ್ನಿ, ವಾಯು, ಉಷಸ್ ಮುಂತಾದ ದೇವತೆಗಳನ್ನು ಆ ವೈದಿಕ ಋಷಿಗಳೇ ಮನಗಂಡು ಪ್ರಚಾರಕ್ಕೆ ತಂದ ಮಂತ್ರಗಳಿಂದ ಸ್ತೋತ್ರಮಾಡುತ್ತಾ, ಗಂಗಾ, ಯಮುನಾ ಮುಂತಾದ ಸಪ್ತಸಿಂಧುಗಳ ತೀರಗಳಲ್ಲಿ ಮತ್ತು ಪವಿತ್ರ ಕ್ಷೇತ್ರಗಳಲ್ಲಿ, ಸಂಧ್ಯಾ

ಕಾಲಗಳಲ್ಲಿ ಅರ್ಘ್ಯಪ್ರದಾನ, ಗಾಯತ್ರೀಜಪ, ಉಪಸ್ಥಾನಗಳಿಂದ ಉಪಾಸನೆ ಮಾಡುವ ಆಶ್ರಮವಾಸಿಗಳೂ ಜಟಾಧಾರಿಗಳೂ ಬ್ರಹ್ಮ ವರ್ಚಸ್ಸಿನಿಂದ ತೇಜಸ್ವಿಗಳೂ ಆದ ಜನರೂ, ಆಗಿನಂತೆ ಈಗಲೂ, ಸ್ವಲ್ಪಮಟ್ಟಿಗಾದರೂ ದೊರೆಯುತ್ತಿದ್ದಾರೆ, ವಸಿಷ್ಠ ವಿಶ್ವಾಮಿತ್ರ ಮುಂತಾದ ಮಹರ್ಷಿಗಳು ಮನಗಂಡು ಜಪಿಸಿ ಪ್ರಚಾರ ಮಾಡಿದ ಮಂತ್ರಗಳನ್ನೇ ಈಗಲೂ ಉಪನೀತರಾದ ವಟುಗಳು ಸಂಧ್ಯಾ ಕಾಲಗಳಲ್ಲಿ ಜಪಿಸುತ್ತಿರುವರು. ಯಾವ ಉಪನಿಷತ್ತುಗಳ ವ್ಯಾಸಂಗ ದಿಂದ ಉಂಟಾಗುವ ಬ್ರಹ್ಮಜ್ಞಾನದಿಂದ ಯಾಜ್ಞವಲ್ಕ್ಯ, ವಿಶ್ವಾಮಿತ್ರ, ವಸಿಷ್ಠ ಮುಂತಾದ ಬ್ರಹ್ಮರ್ಷಿಗಳೂ, ಜನಕ, ಅಜಾತಶತ್ರು, ರಾಮ ಮುಂತಾದ ರಾಜರ್ಷಿಗಳೂ ಕೃತಾರ್ಥ ರಾದರೋ, ಅದೇ ಬ್ರಹ್ಮವಿದ್ಯೆಯನ್ನು ಪಡೆದು ಅದರ ಅಮೃತರಸವನ್ನು ಸವಿದು ಇತರರೂ ಸವಿಯುವಂತೆ ಉಪದೇಶ ಮಾಡುತ್ತಿರುವ ಸಾಧುಸಜ್ಜನರೂ ಪಂಡಿತರೂ ಸಂನ್ಯಾಸಿಗಳೂ ಈಗಲೂ ಅಲ್ಲಲ್ಲಿ ದೊರೆಯುತ್ತಿರುವರು. ಭಾರತಾರ್ಯರ ಸಂಸ್ಕೃತಿಯು ಈಗಲೂ ಜೀವಂತವಾಗಿದೆ ಎನ್ನುವುದಕ್ಕೆ ಈ ಉದಾಹರಣೆಗಳು ಸಾಕಾ ಗಿರುತ್ತವೆ. ಈ ಸಂಸ್ಕೃತಿಯು ಸರ್ವಭಕ್ಷಕನಾದ ಕಾಲನ ದವಡೆಗೆ ಸಿಕ್ಕಿ ನುಚ್ಚು ನೂರಾಗಿ ನಾಮಾವಶೇಷವಾಗದೆ ಇಷ್ಟುಮಟ್ಟಿಗಾದರೂ ಉಳಿದಿವೆ ಎನ್ನುವುದು ತುಂಬ ಸಮಾಧಾನಕರವಾದ ವಿಷಯವಾಗಿದೆ. ಈ ಆರ್ಯ ಸಂಸ್ಕೃತಿಯು ಅನೇಕ ಸಾವಿರ ವರ್ಷಗಳಿಂದಲೂ ಉಳಿದಿರು ವುದಕ್ಕೆ ಅದು ಧರ್ಮಮೂಲವಾಗಿರುವುದೇ ಕಾರಣ. ಈ ಸಂಸ್ಕೃತಿ ಯನ್ನು ಪೂರ್ವದಂತೆಯೇ ಉಜ್ವಲಸ್ಥಿತಿಗೆ ತರಬೇಕಾದುದು ಭಾರ ತೀಯರಾದ ನಮ್ಮೆಲ್ಲರ ಕರ್ತವ್ಯ, ಧರ್ಮ ಅಥವಾ ಕೆಲಸವಾಗಿದೆ. ಈ ಉದ್ದೇಶ ಸಾಧನೆಗಾಗಿಯೇ ಇಂತಹ ಗ್ರಂಥಗಳ, ಇನ್ನೂ ಉತ್ತಮ ಗ್ರಂಥಗಳ ಮುದ್ರಣ ಪ್ರಕಟನಗಳಿಗೆ ಉತ್ತೇಜನವನ್ನು ಸರ್ಕಾರದವರು ಕೊಡುತ್ತಿರುವುದು ಸ್ತೋತ್ರಾರ್ಹವಾಗಿದೆ.

ಧಾರ್ಮಿಕ ಸಂಸ್ಕೃತಿಯು ಜೀವಂತವಾಗಿರುತ್ತದೆ.

ಹೀಗಿದ್ದರೂ ಜನರು ತಮ್ಮಲ್ಲಿರುವ ಅಜ್ಞಾನ ಆಲಸ್ಯ ಅಪನಂಬಿಕೆಗಳಿಂದ "ಧರ್ಮಸ್ಯ ಫಲಮಿಚ್ಛಂತಿ ಧರ್ಮಂನೇಚ್ಛಂತಿ ಮಾನವಾಃ।" ಎಂದರೆ, ಧರ್ಮದ ಫಲವಾದ ಸುಖವನ್ನು ಬಯಸುತ್ತಾರೆ. ಆದರೂ ಆ ಸುಖಕ್ಕೆ ಕಾರಣವಾದ ಧರ್ಮಾಚರಣೆಯಲ್ಲಿ ಆದರದಿಂದ ತೊಡಗದೆ ಇರುತ್ತಾರೆ. ಹಾಗೆಯೇ "ನ ಪಾಪಫಲಮಿಚ್ಛಂತಿ ಪಾಪಂ ಕುರ್ವಂತಿ ಮಾನವಾಃ ॥" ಪಾಪದ ಫಲವಾದ ದುಃಖವನ್ನು ಬೇಡವೆನ್ನುತ್ತಾರೆ. ಆದರೂ ಆ ದುಃಖಕಾರಣವಾದ ಅಧರ್ಮವನ್ನು, ಪಾಪವನ್ನು ತಿಳಿಯದೆಯೋ, ಆವಶ್ಯಕತೆ, ಆಕರ್ಷಣೆಗಳಿಂದಲೋ ಮಾಡುತ್ತಿರುತ್ತಾರೆ. ಇದು ಆಶ್ಚರ್ಯಕರವಾದರೂ ನಿಜವಾಗಿರುತ್ತದೆ.

ಇಂತಹ ಧರ್ಮದ ಸ್ವರೂಪವನ್ನು ಗೊತ್ತುಮಾಡಿಕೊಳ್ಳುವುದಕ್ಕೆ ಮೂಲಾಧಾರಗಳನ್ನೂ ಪ್ರಮಾಣಗಳನ್ನೂ ಹೀಗೆ ಹೇಳಿದೆ :—

"ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಂ ।
ಆಚಾರಶ್ಚೈವ ಸಾಧೂನಾಂ ಆತ್ಮನಸ್ತುಷ್ಟಿರೇವಚ ॥"—ಮನುಸ್ಮೃತಿ

ನಾಲ್ಕು ವೇದಗಳೂ ಸ್ಮೃತಿಧರ್ಮಶಾಸ್ತ್ರಗಳೂ ಇವನ್ನು ತಿಳಿದಿರುವ ಶಿಷ್ಟರ ಆಚರಣೆಯೂ ಧರ್ಮದ ತಿಳಿವಳಿಕೆಗೆ ಮೂಲಾಧಾರವಾಗಿವೆ; ಮತ್ತು ಆತ್ಮತೃಪ್ತಿಯೂ ಧರ್ಮನಿರ್ಣಯಕ್ಕೆ ಪ್ರಮಾಣವಾಗಿರುತ್ತದೆ.

"ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯ ಮಾತ್ಮನಃ ।
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥"

ಎಂದರೆ, ವೇದಗಳೂ, ಸ್ಮೃತಿಧರ್ಮ ಶಾಸ್ತ್ರಗಳೂ ಸತ್ಪುರುಷರ ಆಚರಣೆಗಳೂ ಆತ್ಮತೃಪ್ತಿಯೂ ಧರ್ಮನಿರ್ಣಯಕ್ಕೆ ಪ್ರಮಾಣಗಳಾಗಿರುತ್ತವೆ. ಈ ಎರಡು ಶ್ಲೋಕಗಳಲ್ಲೂ ಆತ್ಮತೃಪ್ತಿಯನ್ನು ಧರ್ಮನಿರ್ಣಯಕ್ಕೆ ಪ್ರಮಾಣವೆಂದು ಹೇಳಿರುವುದು ಗಮನಾರ್ಹವಾದುದು. ನಮ್ಮ ಸ್ವಾತಂತ್ರ್ಯ ವಿವೇಚನೆ ಹೊಣೆಗಾರಿಕೆಗಳಿಗೂ ಪ್ರಾಮುಖ್ಯವನ್ನು ಕೊಟ್ಟಿರುವುದೂ ಇದರಿಂದಲೇ, ಎಂಬುದನ್ನು ನೆನಪಿನಲ್ಲಿಡಲು ಅರ್ಹವಾಗಿದೆ.

ಧರ್ಮದ ವಿಸ್ತಾರದ ರೀತಿನೀತಿಗಳು ಪ್ರವೃತ್ತಿಧರ್ಮ.

ಒಂದು ಮನೆಯಲ್ಲಿ ಗಂಡ ಹೆಂಡತಿ ಮಕ್ಕಳು ಇರುತ್ತಾರೆ. ಗಂಡನು ಹೊರಗೆ ದುಡಿದು ಹಣ ಪದಾರ್ಥಗಳನ್ನು ಸಂಪಾದಿಸಿ ತರುತ್ತಾನೆ. ಹೆಂಡತಿಯು ಅವನ್ನು ಒಪ್ಪಓರಣಗಳಿಂದ ಕಾಪಾಡುತ್ತಾಳೆ. ಯಥೋಚಿತವಾಗಿ ವಿನಿಯೋಗಿಸುತ್ತಾಳೆ. ಮಕ್ಕಳು ತಂದೆತಾಯಿಯರಿಂದ ಪೋಷಣೆಯನ್ನು ಪಡೆದು, ಅವರಿಗೆ ವಿಧೇಯರಾಗಿರುತ್ತಾರೆ; ತಮ್ಮ ವಯೋನುಗುಣವಾಗಿ ಶಿಕ್ಷಣವನ್ನು ಪಡೆಯುತ್ತಾ, ವಿನೀತರಾಗಿರುತ್ತಾರೆ. ಮುಂದೆ ತಾವೂ ದೊಡ್ಡವರಾದ ಮೇಲೆ ಆ ತಂದೆತಾಯಿಯರಂತೆ ಗೃಹಕೃತ್ಯ ನಿರ್ವಾಹ ಮಾಡಲೂ, ಸತ್ಪ್ರಜೆಗಳಾಗಿ ಬಾಳಲೂ ತಕ್ಕ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳುತ್ತಿರುತ್ತಾರೆ. ಹೀಗೆ ಇವರೆಲ್ಲರೂ ತಮ್ಮ ಕಾರ್ಯಗಳನ್ನು ಸಹಕಾರ ಮನೋಭಾವದಿಂದ ಮಾಡುತ್ತಿದ್ದರೆ, ತಾವು ಆಚರಿಸಬೇಕಾದ ಧರ್ಮಗಳನ್ನು ನೆರವೇರಿಸುತ್ತಿದ್ದರೆ, ಅಂತಹ ಮನೆಗಳಲ್ಲಿ ಶಾಂತಿ ಸುಖ ನೆಮ್ಮದಿಗಳು ನೆಲೆಸಿರುತ್ತವೆ. ಧರ್ಮಾಚರಣೆಯಿಂದ ಐಹಿಕ ಸುಖವು ದೊರೆಯುತ್ತದೆ. ಹಾಗಿಲ್ಲದೆ ತಂದೆಯು ದುಡಿದು ಸಂಪಾದಿಸದೆ ಹೋದರೆ, ಅಥವಾ ಸಂಪಾದಿಸಿದ್ದೆಲ್ಲವನ್ನೂ ತನ್ನೊಬ್ಬನ ಸುಖಕ್ಕಾಗಿ ವೆಚ್ಚಮಾಡಿದರೆ, ತಾಯಿಯು ದುಂದು ವೆಚ್ಚಮಾಡಿದರೆ, ಮಕ್ಕಳು ಅವಿನೀತರಾಗಿ ಪೋಲಿಗಳಾದರೆ, ಆ ಸಂಸಾರವನ್ನು ದುಃಖವೂ ಸಂಕಟವೂ, ಆವರಿಸುತ್ತವೆ. ಆದರೆ, ಇಂತಹ ಉದಾಹರಣೆಗಳು ಅಲ್ಪವಾಗಿವೆ. ಒಳ್ಳೆಯ ಉದಾಹರಣೆಗಳೇ ಹೆಚ್ಚಾಗಿರುತ್ತವೆ. ಅಲ್ಲದೆ ತಂದೆಯು ಸಂಪಾದಿಸಿದ್ದೆಲ್ಲವನ್ನೂ ತಾನೊಬ್ಬನೇ ಭೋಗಿಸುವುದಕ್ಕೆ ವಿನಿಯೋಗಿಸುವುದಿಲ್ಲ. ಏಕೆ ? ತನ್ನ ಸಂಪಾದನೆಯಲ್ಲಿ ಹೆಂಡತಿಗೂ ಮಕ್ಕಳಿಗೂ ಆಶ್ರಿತರಿಗೂ ಅತಿಥಿ ಅಭ್ಯಾಗತರಿಗೂ ಪಾಲು ಇದೆ ಎಂಬುದನ್ನು ಮನಗಂಡಿರುತ್ತಾನೆ. ಇದು ಮಾದರಿಯ ಗೃಹಸ್ಥಧರ್ಮದ ಸರಳ ಸ್ವರೂಪವಾಗಿದೆ. ಇದೇ ಸಂಸಾರವು. ಈ ಸಂಸಾರಕ್ಕೆ ಸೇರಿರುವವರೆಲ್ಲರಲ್ಲೂ ಸಹಕಾರ

ಮನೋಭಾವದಿಂದ ಕೂಡಿರುವ ಧಾರ್ಮಿಕ ಮನೋಭಾವವು ಅವರಿಗೆ ಅರಿವಾಗದಂತೆ ಅಡಗಿರುವುದರಿಂದಲೇ ಸಂಸಾರದಲ್ಲಿ ಸುಖಶಾಂತಿ ನೆಮ್ಮದಿಗಳಿರುತ್ತವೆ. ಎಂಬುದನ್ನು ಗಮನಿಸಬೇಕು. ಧರ್ಮವನ್ನು ಆಚರಿಸುತ್ತಿದೇವೆಂದಾಗಲಿ ಸಹಕಾರ ಮನೋಭಾವದಿಂದ ಕೂಡಿರುವ ಧರ್ಮವೇ ಇದೆಂದಾಗಲಿ ಆ ಸಂಸಾರದಲ್ಲಿರುವವರಿಗೆ ತಿಳಿದಿರದಿದ್ದರೂ ಅವರು ಹಾಗೇ ವರ್ತಿಸುತ್ತಿರುತ್ತಾರೆ ಎಂಬುದನ್ನು ಗಮನಿಸಬೇಕು. ಈ ಸಾಂಸಾರಿಕ ಧರ್ಮಕ್ಕೆ ಪ್ರವೃತ್ತಿಧರ್ಮವೆಂದು ಹೆಸರಿದೆ. ಇದರಲ್ಲಿ ಧರ್ಮ ಅಥವಾ ಕರ್ಮವು ಫಲಕಾಮನೆಯಿಂದ ಕೂಡಿರುತ್ತದೆ. ಸುಖವನ್ನು ಬಯಸುವುದು ಮಾನವರ ಹುಟ್ಟುಗುಣವಾಗಿದೆ. ಈ ಸಾಂಸಾರಿಕ ಜೀವನ ಕ್ರಮದಲ್ಲಿ ಐಹಿಕ ಸುಖವು ಎಲ್ಲರಿಗೂ ದೊರೆಯುತ್ತದೆ. ಧರ್ಮಾಚರಣೆಯಿಂದಲೇ ಸುಖಪ್ರಾಪ್ತಿಯಾಗುತ್ತದೆ ಎಂದು ಎಲ್ಲರೂ ಮನಗಾಣಬಹುದು. ಇದಕ್ಕಾಗಿಯೇ ಜನರೆಲ್ಲರೂ, ದುಡಿಯುತ್ತಿರುತ್ತಾರೆ. ಧರ್ಮಾಚರಣೆಯೂ ಸುಖಪ್ರಾಪ್ತಿಯೂ ಕಾರಣಕಾರ್ಯಗಳಾಗಿರುತ್ತಾ ನಿತ್ಯಸಂಬದ್ಧವಾಗಿರುತ್ತವೆ. ಆದುದರಿಂದ ಇಂತಹ ನಡೆವಳಿಕೆಯು ಕರ್ಮಸಿದ್ಧಾಂತದ ಮೂಲ ಸ್ವರೂಪವೆಂದೂ ತಿಳಿಯಬಹುದು.

ಇಹದಲ್ಲಿ ಸುಖದುಃಖಗಳು ಬೆರತೇ ಇರುತ್ತವೆ.

ಇಹಜೀವನ ಕ್ರಮದಲ್ಲಿ ಸುಖದಂತೆ ದುಃಖವೂ ಇದೆ. ಸೂಕ್ಷ್ಮವಾಗಿ ವಿಮರ್ಶಿಸಿದರೆ ಸುಖದುಃಖಗಳು ಬಿಡಿಸಲಾಗದಂತೆ ಬೆರೆತುಕೊಂಡೇ ಇರುತ್ತವೆ ಎಂಬುದೂ ಗೊತ್ತಾಗುತ್ತದೆ. ಆದ್ದರಿಂದ ಮಾನವನು ದುಃಖನಿವೃತ್ತಿಯನ್ನು ಆಶಿಸುತ್ತಾನೆ. ಸತ್ಕರ್ಮಕ್ಕೆ ಸುಖವೂ ದುಷ್ಕರ್ಮಕ್ಕೆ ದುಃಖವೂ ಫಲವೆಂಬುದನ್ನು ಭಾರತೀಯರೆಲ್ಲರೂ ನಂಬಿಕೆ ಅನುಭವಗಳಿಂದ ಮನಗಂಡಿರುತ್ತಾರೆ. "ಧರ್ಮ ಏವಹತೋಹಂತಿ ಧರ್ಮೋ ರಕ್ಷತಿ ರಕ್ಷಿತಃ" ಎಂಬಂತೆ ಧರ್ಮವನ್ನು ನಾವು ಆಚರಿಸುತ್ತಾ ಕಾಪಾಡುತ್ತಿದ್ದರೆ ಅದೂ ನಮ್ಮನ್ನು ಸುಖಶಾಂತಿಗಳಿಂದ

ಕಾಪಾಡುತ್ತಿರುತ್ತದೆ. ಹಾಗಲ್ಲದೆ ನಾವು ಧರ್ಮವನ್ನು ಆಚರಿಸದೆ ತುಳಿದು ಮೆಟ್ಟಿದರೆ ಅಥವಾ ಉದಾಸೀನತೆಯಿಂದ ಕೈಬಿಟ್ಟರೆ ಅದರಿಂದ ನಮಗೆ ಕೆಡುಕಾಗುತ್ತದೆ. ಅಲ್ಲದೆ ಧರ್ಮದ ಬಲದಿಂದಲೇ ಈ ಜಗತ್ತು ಬಾಳುತ್ತಾ ಮುಂದುವರಿಯುತ್ತಿದೆ. ಏಕೆಂದರೆ ಹಲವು ಸಂಸಾರಗಳಿಂದ ಒಂದು ಊರು, ಹಲವು ಗ್ರಾಮಗಳಿಂದ ಒಂದು ದೇಶ, ಅನೇಕ ದೇಶಗಳಿಂದ ಈ ಜಗತ್ತು ಏರ್ಪಟ್ಟಿದೆ. ಆದುದರಿಂದ ಒಂದು ಸಂಸಾರದ ಸುಖಶಾಂತಿಗಳಿಗೆ ಕಾರಣವಾದ ಧರ್ಮಾಚರಣೆಯು ಈ ಇಡಿಯ ಪ್ರಪಂಚದ ಶಾಂತಿ ನೆಮ್ಮದಿ ಸುಖಗಳಿಗೂ ಕಾರಣವಾಗುತ್ತದೆ. ಈ ಎಲ್ಲ ವಿಶ್ವಕ್ಕೂ ಅನ್ವಯಿಸಬಹುದಾದ ಧರ್ಮಕ್ಕೇ ವಿಶ್ವಧರ್ಮ ಅಥವಾ ಅಂತರ ರಾಷ್ಟ್ರೀಯ ಧರ್ಮವೆನ್ನುತ್ತಾರೆ. ನಮ್ಮ ನಾಯಕರು ಉದ್ಘೋಷಿಸುತ್ತಿರುವ ಪಂಚಶೀಲವು ಈ ವಿಶ್ವಧರ್ಮದ ಒಂದು ವಿಶೇಷ ರೂಪವಾಗಿದೆ ಎಂಬುದನ್ನೂ ಗಮನಿಸಬೇಕು. ಆದುದರಿಂದ "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" (ಮಹಾನಾರಾಯಣೋಪನಿಷತ್ ೧೭-೬) ಎಂದರೆ, ಈ ಇಡಿಯ ಜಗತ್ತಿನ ಸ್ಥಿತಿಗೆ, ಸಾಗುತ್ತಿರುವ ಈ ಪ್ರಪಂಚದ ಮುಂದುವರಿಯುವಿಕೆಗೆ, ಧರ್ಮವೇ ಅವಲಂಬನವಾಗಿದೆ ಎಂಬ ಈ ಅಭಿಪ್ರಾಯವೂ ಸರ್ವಸಮ್ಮತವಾಗುವುದರಲ್ಲಿ ಸಂಶಯವಿರಲಾರದು. ಈ ಧರ್ಮಶಬ್ದಕ್ಕೆ ಯಮ, ನಿಯಮ, ಶಿಸ್ತು, ಕ್ರಮ ಎಂಬ ಅರ್ಥವೂ ಆಗುತ್ತದೆ. ಈ ಜಗತ್ತಿನಲ್ಲಿರುವ ಕ್ರಮವನ್ನು ನಮ್ಮ ಪೂರ್ವಜರಾದ ಆರ್ಯರು ಮೊದಲು ಮನಗಂಡರು. ಋಗ್ವೇದದಲ್ಲಿ ಋತಶಬ್ದವನ್ನು ಶಿಸ್ತು, ಕ್ರಮ ಎಂಬ ಅರ್ಥದಲ್ಲಿ ಉಪಯೋಗಿಸಿರುವುದು ಅನೇಕ ಕಡೆಗಳಲ್ಲಿ ಕಂಡುಬರುತ್ತದೆ. ಅಲ್ಲದೆ ಈ ಋತಶಬ್ದದಂತೆ ಧರ್ಮಶಬ್ದವೂ ರೂಢಿಗೆ ಬಂದಿರುವುದೂ, ಮುಂದೆ ಕ್ರಮವಾಗಿ ಋತಶಬ್ದದ ಸ್ಥಾನದಲ್ಲಿ ಧರ್ಮಶಬ್ದದ ಪ್ರಯೋಗವೂ, ಕಡೆಗೆ ಧರ್ಮಶಬ್ದವೇ ರೂಢಿಗೆ ಬಂದಿರುವುದೂ, ಗಮನಿಸಬೇಕಾದ ವಿಷಯಗಳಾಗಿವೆ. ಧರ್ಮಶಬ್ದದ ಅರ್ಥದಲ್ಲಿ ಕರ್ಮಪದಾರ್ಥವೂ ಅಡಗಿದೆ ಎಂದು ಮೇಲೆ ಹೇಳಿದೆ. ಈ ಎಲ್ಲ ಅಭಿಪ್ರಾಯಗಳನ್ನೂ ಈ ಪದ್ಯದಲ್ಲಿ ಸಂಗ್ರಹಿಸಿದೆ.

ಕರ್ಮೈವೇಹ ಜನಸ್ಯ ದುಃಖಸುಖದಂ ಸತ್ಕರ್ಮ ಕುರ್ವೇ ಸದಾ
ಸಂಸಿದ್ಧಿರ್ನಿಜ ಕರ್ಮಣಾ ಜನಕವತ್ ತಸ್ಮೈ ನಮಃ ಕರ್ಮಣೇ।

ನಾಸ್ತ್ಯನ್ಯತ್ ಪರಸಾಧನಂ ನಿಜಕೃತೇಃ ಶ್ರದ್ಧಾ ಬಲಂಕರ್ಮಣಃ
ಕರ್ಮಣ್ಯೇವ ಮಮಾಸ್ತು ಧೀರ್ನತುಫಲೇ ಹೇಕರ್ಮ ಮಾಂ ತಾರಯ ॥

ಕರ್ಮದ ಸ್ವರೂಪ ಫಲಗಳು.

ಎಂದರೆ, ಜನರು ಮಾಡುತ್ತಿರುವ ಕರ್ಮಗಳೇ ಅವರಿಗೆ ದುಃಖಗಳನ್ನೂ ಸುಖಗಳನ್ನೂ ಕೊಡುತ್ತವೆ. ಆದುದರಿಂದ ನಾನು ಯಾವಾಗಲೂ ದುಃಖವನ್ನು ಕೊಡುವ ದುಷ್ಕರ್ಮಗಳನ್ನು ಬಿಟ್ಟು ಸುಖವನ್ನು ಕೊಡುವ ಒಳ್ಳೆಯ ಕರ್ಮಗಳನ್ನೇ ಮಾಡುತ್ತಿರುತ್ತೇನೆ ಎಂದು ಮಾನವನು ನಿಶ್ಚಯಿಸುತ್ತಿರುತ್ತಾನೆ. ಸ್ವಕರ್ಮಾಚರಣೆಯಿಂದಲೇ ಜನಕಾದಿಗಳಿಗೆ ಹೇಗೋ ಹಾಗೆ ನಮಗೂ ಇಷ್ಟಾರ್ಥ ಪ್ರಾಪ್ತಿಯಾಗುತ್ತದೆ. ಆದುದರಿಂದ ಕರ್ಮದ ವಿಷಯದಲ್ಲಿ ನಾವು ಆದರ ಆಸಕ್ತಿಯುಳ್ಳವರಾಗಿರಬೇಕು. ಅಲ್ಲದೆ ಇಲ್ಲಿನ ಸುಖದುಃಖರೂಪವಾದ ಫಲಗಳಿಗೆ ಹೇಗೋ ಹಾಗೆ ಪರಲೋಕದಲ್ಲಿನ ಫಲಗಳ ಪ್ರಾಪ್ತಿಗೂ ಸ್ವಧರ್ಮಾಚರಣೆಗಿಂತ ಬೇರೆಯಾದ ಸಾಧನವಿಲ್ಲವು. ಈ ಕರ್ಮಕ್ಕೆ ಶಕ್ತಿಯುಂಟಾಗಬೇಕಾದರೆ, ಅದು ಸವೀರ್ಯವಾಗಿ ಫಲಜನಕವಾಗಬೇಕಾದರೆ, ನಾವು ಶ್ರದ್ಧಾಭಕ್ತಿಗಳಿಂದ ಅದನ್ನು ಆಚರಿಸಬೇಕು. (ಇಷ್ಟು ಅಭಿಪ್ರಾಯಗಳು ವೈದಿಕ ಸಂಹಿತಾಕಾಲದಲ್ಲಿ, ಕರ್ಮಕಾಂಡದ ಪ್ರಾಮುಖ್ಯದ ಕಾಲದಲ್ಲಿ ರೂಢಿಗೆ ಬಂದಿದ್ದುವು. ನಾಲ್ಕನೆಯ ಪಾದದಲ್ಲಿನ ಅಭಿಪ್ರಾಯಗಳು ಮುಂದಿನ ಉಪನಿಷತ್ತುಗಳ ಕಾಲದಲ್ಲಿ, ವೇದಾಂತದ ತಿಳಿವಳಿಕೆಯು ಬಲಗೊಂಡ ಕಾಲದಲ್ಲಿ ರೂಢಿಗೆ ಬಂದುವು) ಆದುದರಿಂದ ನನ್ನ ಬುದ್ಧಿಯು ಕರ್ಮಾಚರಣೆಯಲ್ಲಿ ಮಾತ್ರವೇ ಆದರವುಳ್ಳದ್ದಾಗಿರಲಿ. ಅದರ ಫಲದ ವಿಷಯದಲ್ಲಿ ಆಶೆ ಇಲ್ಲದ್ದಾಗಿರಲಿ. ಹೀಗೆ ನಿಷ್ಕಾಮ ಧರ್ಮಾಚರಣೆಯಿಂದ ಕರ್ಮವು ನಮ್ಮನ್ನು ಸಂಸಾರ ಚಕ್ರದಲ್ಲಿ ಬಂಧಿಸಿಡುವುದರ ಬದಲು, ಈ ಸಂಸಾರವನ್ನು ದಾಟಲು ಸಹಾಯಮಾಡುವಂತಾಗುತ್ತದೆ. ಧರ್ಮಪದಾರ್ಥದಲ್ಲಿ ಕರ್ಮ

ಪದಾರ್ಥವೂ ಇರುವುದರಿಂದ ಹೀಗೆ ಹೇಳಬಹುದು

ಧರ್ಮಸ್ಸರ್ವಸುಖಾವಹಃ ಪರತರಂ ಧರ್ಮಂ ಬುಧಾಶ್ಚಿನ್ವತೇ
ಧರ್ಮೇಣೇಹ ನಿಜೇಷ್ಟ ಸಾಧನ ಮತೋ ಧರ್ಮಾಯ ತಸ್ಮೈ ನಮಃ ।
ಧರ್ಮಾನ್ನಾಸ್ತಿಪರಂ ಪುಮರ್ಥಕರಣಂ ಧರ್ಮಸ್ಯಮೂಲಂ ದಯಾ
ಧರ್ಮೇಬುದ್ಧಿರಿ ಹಾನ್ವಹಂ ನತು ಫಲೇ ಹೇಧರ್ಮ ಮಾಂ ತಾರಯ ॥

ಧರ್ಮದ ಸ್ವರೂಪ ಮತ್ತು ಫಲಗಳು.

ಧರ್ಮಾಚರಣೆಯೇ ಎಲ್ಲರಿಗೂ ಸುಖಪ್ರಾಪ್ತಿ ಮತ್ತು ದುಃಖ ನಿವೃತ್ತಿ ರೂಪವಾದ ಫಲವನ್ನು ಉಂಟುಮಾಡುತ್ತದೆ. ತಿಳಿವಳಿಕೆಯುಳ್ಳಪ್ರಾಜ್ಞರು ಅತ್ಯುತ್ತಮವಾದ ಧರ್ಮವನ್ನೇ ಹೆಚ್ಚುಹೆಚ್ಚಾಗಿ ಆಚರಿಸುತ್ತಿರುತ್ತಾರೆ. ಧರ್ಮದಿಂದಲೇ ಎಲ್ಲರೂ ತಮ್ಮ ತಮ್ಮ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳಬಹುದಾಗಿದೆ. ಆದುದರಿಂದಲೇ ಧರ್ಮದ ವಿಷಯದಲ್ಲಿ ನಮಗೆ ಪ್ರೀತ್ಯಾದರಗಳಿರಬೇಕು. ಅಲ್ಲದೆ ಪುರುಷಾರ್ಥಗಳನ್ನು ಎಂದರೆ, ಧರ್ಮ ಅರ್ಥ ಕಾಮ ಮೋಕ್ಷ ಎಂಬ ಪ್ರಯೋಜನಗಳನ್ನು ಸಾಧಿಸಿಕೊಳ್ಳಬೇಕಾದರೆ ಧರ್ಮಾಚರಣೆಗಿಂತ ಮೇಲಾದ ಸಾಧನವು ಮತ್ತೊಂದಿಲ್ಲವು. ಧರ್ಮವನ್ನು ದಯೆಯಿಂದ ಕೂಡಿಯೇ ಆಚರಿಸುತ್ತಿರಬೇಕು. "ದಯೆ ಇಲ್ಲದ ಧರ್ಮವಾವುದಯ್ಯ ? ದಯೆ ಇರಬೇಕು ಸಕಲಪ್ರಾಣಿಗಳಲ್ಲಿ ದಯೆಯೇ ಧರ್ಮದ ಮೂಲವಯ್ಯ." ಯಾರಾದರೂ ಕಷ್ಟಪಡುತ್ತಿರುವುದನ್ನು ನೋಡಿದರೆ ನಾವು "ಅಯ್ಯೋ ಪಾಪ! ಅವನೂ ನಮ್ಮ ಹಾಗೆಯೇ ಅಲ್ಲವೆ ? ಅವನ ಕಷ್ಟ ನಿವಾರಣೆಗೆ ನಮ್ಮ ಕೈಯಲ್ಲಾಗುವ ಸಹಾಯವೆಲ್ಲವನ್ನೂ ಮಾಡೋಣ" ಎಂದು ಹೇಳುತ್ತಾ ಅದರಂತೆ ಮಾಡುತ್ತೇವೆ. ಈ ಧಾರ್ಮಿಕ ಪ್ರವೃತ್ತಿಯು ದಯಾಗುಣದಿಂದಲೇ ಪ್ರೇರಿತವಾಗಿರಬೇಕು. ಯಶಸ್ಸು ಪ್ರತ್ಯುಪಕಾರಾಪೇಕ್ಷೆ ಇವುಗಳಿಂದ ಪ್ರೇರಿತವಾಗಿರಬಾರದು.

ದಾನ ಧರ್ಮಾದಿಗಳನ್ನು ನಿರ್ಬಂಧದಿಂದಲಾಗಲಿ ತಿರಸ್ಕಾರ ಬುದ್ಧಿಯಿಂದಲಾಗಲಿ ಮಾಡಬಾರದು. ಹಾಗೆ ಮಾಡಿದರೆ ಅಂಥಾ ಧರ್ಮವು ಯಥೋಕ್ತ ಫಲಕಾರಿಯಾಗದೆ ಹೋಗಬಹುದು. ಆದುದರಿಂದಲೇ ತೈತ್ತಿರೀಯೋಪನಿಷತ್ತಿನಲ್ಲಿ

ಧರ್ಮವೂ ದಾನವೂ ಲೋಕಾಂತರ ಕಲ್ಪನೆಯೂ.

"ಶ್ರದ್ಧಯಾ ದೇಯಂ, ಅಶ್ರದ್ಧಯಾಽದೇಯಂ, ಶ್ರಿಯಾ ದೇಯಂ, ಹ್ರಿಯಾ ದೇಯಂ, ಭಿಯಾ ದೇಯಂ, ಸಂವಿದಾ ದೇಯಂ" ಎಂದು ವಿಧಾನ ಮಾಡಿದೆ. ಆದುದರಿಂದ ಇಂತಹ ಧರ್ಮದ ಆಚರಣೆಯಲ್ಲಿಯೇ ನಮ್ಮ ಮನಸ್ಸು ಆಸಕ್ತಿಯುಳ್ಳದ್ದಾಗಿರಲಿ. ಅದರಿಂದ ಆಗುವ ಫಲ ಪ್ರಯೋಜನಗಳ ವಿಷಯದಲ್ಲಿ ಆಶೆ ಇಲ್ಲದೆ ಇರಲಿ. ದಾನವನ್ನು ಆದರ ಪ್ರೀತಿಪೂರ್ವಕವಾಗಿ ಮಾಡಬೇಕು. ಅನಾದರ ತಿರಸ್ಕಾರಗಳಿಂದ ಮಾಡಬಾರದು. ತನ್ನ ಸಂಪತ್ತಿಗೆ ಅನುಗುಣವಾಗಿ ಲೋಭವಿಲ್ಲದೆ ಔದಾರ್ಯದಿಂದ ದಾನವನ್ನು ಮಾಡಬೇಕು. ನಾಚಿಕೆಯಿಂದ ಕೊಡಬೇಕು. ಇನ್ನೂ ಹೆಚ್ಚಿನ ದಾನವನ್ನು ಮಾಡಲಾಗದೆ ಇದೆಯಲ್ಲಾ ಎಂದು ಸಂಕೋಚದ ಬುದ್ಧಿಯಿಂದ ಮಾಡಬೇಕು. ನನ್ನ ಹಾಗೆ ದಾನವನ್ನು ಯಾರು ಮಾಡಬಲ್ಲರು ? ನಾನೇ ಮೇಲಾದವನೆಂಬ ಅಹಂಕಾರಭಾವದಿಂದ ದಾನದಲ್ಲಿ ತೊಡಗಬಾರದು. ಹೆದರಿಕೆಯಿಂದ ಕೊಡಬೇಕು. ಏಕೆಂದರೆ, "ಅದಾನ ದೋಷೇಣ ಭವೇದ್ದರಿದ್ರಃ ದಾರಿದ್ರ್ಯದೋಷೇಣ ಕರೋತಿ ಪಾಪಂ । ಪಾಪಸ್ಯ ಹೇತೋರ್ನರಕಂ ಪ್ರಯಾತಿ ಪುನರ್ದರಿದ್ರಃ ಪುನರೇವ ಪಾಪೀ ॥" ಎಂದರೆ, ಹಿಂದೆ ದಾನ ಮಾಡದೆ ಇದ್ದ ದೋಷದಿಂದ ಈಗ ಬಡವನಾಗಿರುತ್ತಾನೆ. ಬಡತನದ ದೋಷದಿಂದ ಪಾಪವನ್ನೂ ಮಾಡಬೇಕಾಗಿ ಬರುತ್ತದೆ. ಪಾಪಾಚರಣೆಯು ಕಾರಣದಿಂದ ನರಕಕ್ಕೆ ಹೋಗಿ ದುಃಖವನ್ನು ಅನುಭವಿಸುತ್ತಾನೆ. ಅದರಿಂದ ಪುನಃ ಪುನಃ ಬಡವನಾಗಿಯೂ, ಪಾಪಿಯಾಗಿಯೂ ಜನ್ಮವನ್ನು ಪಡೆಯುತ್ತಿರುತ್ತಾನೆ. ಆದುದರಿಂದ ದಾನವು ಒಂದು ಮಹತ್ತ್ವವುಳ್ಳ ಧರ್ಮ

ವಾಗಿದೆ. ಸಂವಿದಾ ಎಂದರೆ, ತಿಳಿವಳಿಕೆ ಸಹಾನುಭೂತಿ ಪ್ರೀತಿಗಳಿಂದ ಕೂಡಿ ದಾನವನ್ನು ಮಾಡಬೇಕು. ಅಲ್ಲದೆ ತಿಳಿವಳಿಕೆಯಿಂದ ಎಂದರೆ, ದಾನವು ಎಷ್ಟು ಮಹತ್ತ್ವವುಳ್ಳ ಪ್ರಭಾವಶಾಲಿಯಾದ ಆದ್ಯಂತಗಳಲ್ಲೂ ಪರಿಣಾಮಕಾರಿಯಾದ ಧರ್ಮ ಎಂಬ ತಿಳಿವಳಿಕೆಯಿಂದ ಕೂಡಿ ದಾನವನ್ನು ಮಾಡಬೇಕು. ಇದು ಧಾರ್ಮಿಕ ಸಂಸ್ಕೃತಿಯ ಕುರುಹಾಗಿದೆ ಎಂಬುದು ಸ್ಪಷ್ಟವಾಗಿದೆ.

ದೇವತೆಗಳು ನೀತಿ ಧರ್ಮಪರರು, ಧಾರ್ಮಿಕರನ್ನು ರಕ್ಷಿಸುತ್ತಾರೆ.

ದೇವತೆಗಳನ್ನು "ಋತಸ್ಯಗೋಪ್ತಾ" "ಋತಾವಾನ್" ಎಂದರೆ, ನೀತಿಕ್ರಮದ ರಕ್ಷಕರೆಂದೂ ನೀತಿಕ್ರಮವನ್ನು ಅನುಸರಿಸುವವರೆಂದೂ ವರ್ಣಿಸಿದೆ. ಮಂತ್ರ ಸಂಹಿತೆಯಲ್ಲಿ ಅನೇಕ ಕಡೆಗಳಲ್ಲಿ ಕಾಣಬರುವ ಈ ವರ್ಣನೆಯನ್ನು ಅನುಸರಿಸಿ ಉಪನಿಷತ್ತುಗಳಲ್ಲೂ " ಸತ್ಯಂವದ, ಧರ್ಮಂಚರ " ಎಂದರೆ, ಸತ್ಯವಾದುದನ್ನು ಹೇಳು, ಧರ್ಮವನ್ನು ಆಚರಿಸು. ಎಂದು ತೈತ್ತಿರೀಯೋಪನಿಷತ್ತಿನಲ್ಲೂ, " ಧರ್ಮಂ ವಾ ವದಂತಂ ಸತ್ಯಂವದತೀತಿ " ಎಂದರೆ, ಧರ್ಮವನ್ನು ತಿಳಿಯಹೇಳುವವನನ್ನು ಸತ್ಯವನ್ನು ಹೇಳುತ್ತಾನೆನ್ನುತ್ತಾರೆ ಎಂದು ಬೃಹದಾರಣ್ಯಕ ಉಪನಿಷತ್ತಿನಲ್ಲೂ, " ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ"ಎಂದರೆ, ಧರ್ಮವೇ ಈ ಇಡಿಯ ಜಗತ್ತಿಗೆ ಅವಲಂಬನವಾಗಿರುತ್ತದೆ ಎಂದು ಮಹಾ ನಾರಾಯಣ ಉಪನಿಷತ್ತಿನಲ್ಲೂ ಹೇಳಿ, ಧರ್ಮತತ್ವದ ಬೆಲೆಯನ್ನು ನಿರೂಪಿಸಿರುತ್ತದೆ. ಹಾಗೆಯೇ " ಧರ್ಮೇಣ ಪಾಪಮಪನುದತಿ, ಧರ್ಮೇ ಸರ್ವಂ ಪ್ರತಿಷ್ಠಿತಂ, ತಸ್ಮಾದ್ಧರ್ಮಂ ಪರಮಂವದಂತಿ" ಎಂದರೆ, ಧರ್ಮಾಚರಣೆಯಿಂದ ತನ್ನಲ್ಲಿರಬಹುದಾದ ಪಾಪವನ್ನು ಕಳೆದುಕೊಂಡು ಶುದ್ಧನಾಗುತ್ತಾನೆ. ಧರ್ಮದಲ್ಲಿಯೇ ಈ ಪ್ರಪಂಚವೂ ಸಾಂಸಾರಿಕ ವ್ಯವಹಾರವೆಲ್ಲವೂ ಆಶ್ರಯವನ್ನು ಪಡೆದು ನಿಂತಿರುತ್ತದೆ. ಆದುದರಿಂದ ಧರ್ಮತತ್ವವನ್ನು ಎಲ್ಲಕ್ಕಿಂತಲೂ ಶ್ರೇಷ್ಠವಾದುದೆಂದು ಭಾವಿಸುತ್ತಾರೆ. ಚತುರ್ವರ್ಣದವರೂ ಚತುರಾಶ್ರಮಿಗಳೂ ಎಲ್ಲರೂ ಸುಸೂತ್ರವಾಗಿ ಎಲ್ಲ ವ್ಯವಹಾರಗಳನ್ನು ನೆರವೇರಿ

ಸಲೂ ಕಡೆಗೆ ಶ್ರೇಯಸ್ಸನ್ನು ಪಡೆಯಲೂ ಧರ್ಮಾಚರಣೆ ಒಂದೇ ಸರಿಯಾದ ಸಾಧನವೆಂದು ಉಪದೇಶಿಸಿ ಎಲ್ಲರನ್ನೂ ಧರ್ಮದಿಂದ ಬಂಧಿಸಿದೆ. ಆದುದರಿಂದ ಧರ್ಮವು ಎಲ್ಲರನ್ನೂ ಆಳುತ್ತದೆ. ಎಲ್ಲರೂ ಕ್ರಮವಾಗಿ ವ್ಯವಸ್ಥೆಯಿಂದ ಶ್ರೇಯಸ್ಸನ್ನು ಪಡೆಯುವಂತಾಗಿರುವುದು ಧರ್ಮಾಚರಣೆಯಿಂದಲೇ ಆಗಿದೆ. ಆದುದರಿಂದಲೇ ಮಾನವರೆಲ್ಲರಲ್ಲೂ ಧರ್ಮವನ್ನು ಆಚರಿಸಬೇಕು ಎಂಬ ಧೈರ್ಯ ಸಂತೋಷಗಳಿಂದಕೂಡಿದ ಪ್ರವೃತ್ತಿಯೂ, ಅಧರ್ಮವನ್ನು ಮಾಡಬಾರದೆಂಬ ಅಳುಕುವ ಅಂಜುವ ಮನೋವೃತ್ತಿಯೂ ಸ್ವಾಭಾವಿಕವಾಗಿರುತ್ತದೆ. ಇದು ಅಂತಃಪ್ರೇರಣೆ (inner urge) ಎಂದೂ ಮ. ಉ.ನಲ್ಲೂ, "ಧರ್ಮಂ ಚಾ ಧರ್ಮಂಚ ಸತ್ಯಚಾನೃತಂಚ" ಎಂದು ಛಾಂದೋಗ್ಯೋಪನಿಷತ್ತಿನಲ್ಲೂ ವಿವರಿಸಿದೆ. ಅಲ್ಲದೆ ಪಾಶ್ಚಾತ್ಯರ ಸಂಸ್ಕೃತಿಯು ಅವರನ್ನು ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಿ ಪಡೆಯಲು ಹೆಚ್ಚಾಗಿ ಪ್ರೇರಿಸುತ್ತದೆ. ಭಾರತೀಯ ಸಂಸ್ಕೃತಿಯು ನಮ್ಮ ನಮ್ಮ ಧರ್ಮ ಜವಾಬುದಾರಿ ಹೊಣೆಗಾರಿಕೆಗಳನ್ನು ತಿಳಿಸುತ್ತಾ ಕೃತಜ್ಞತೆ ಸಹಕಾರ ಪ್ರತ್ಯುಪಕಾರಗಳಲ್ಲಿ ಹೆಚ್ಚಾಗಿ ಆಸಕ್ತರಾಗಿರುವಂತೆ ಮಾಡುತ್ತಿರುತ್ತದೆ ಎಂಬುದು ಒಂದು ವಿಶೇಷ ಗುಣವಾಗಿದೆ. ಅಲ್ಲದೆ ಧರ್ಮಾಚರಣೆಯ ಸತ್ಫಲಗಳನ್ನೂ ಪರಿಣಾಮಗಳನ್ನೂ ಈ ಪದ್ಯದಲ್ಲಿ ಸಂಗ್ರಹಿಸಿದೆ.

"ಲೋಕಾನಾಂಧಾರಕೋಽಯಂ, ಜಗತಿ ಜನಿಮತಾಂ
ಐಹಿಕಾಮುಷ್ಮಿಕಾಣಾಂ
ಸೌಖ್ಯಾನಾಂ ಸಾಧಕೋಽಯಂ,ಮನಸಿವಿಕಲುಷೇ ವೀತರಾಗೇ ಘರೇಷು!
ಚಿತ್ ಜ್ಯೋತಿಸ್ಪ್ರೇರಕೋಽಯಂ, ಶ್ರುತಿಶಿಖರಗಿರಾ ಮೋಕ್ಷ
ಸಂಪಾದಕೋಽಯಂ,
ಧರ್ಮಾಖ್ಯೋಪಾಯಕೋಽಯಂ, ಬಹುವಿಧಫಲದಃ
ಕಾಮಿನಿಷ್ಕಾಮಯೋಗಾತ್ ॥"

ಈ ಲೋಕದಲ್ಲಿರುವ ಜನರೆಲ್ಲರೂ ಸುಖವು ಬೇಕೆಂದೂ, ದುಃಖವು ಬೇಡವೆಂದೂ ಬಯಸುತ್ತಿರುತ್ತಾರೆ. ನಮ್ಮ ನಮ್ಮ ಕರ್ಮಗಳಿಂದಲೇ

ನಾವು ಸುಖವನ್ನಾಗಲೀ, ದುಃಖವನ್ನಾಗಲೀ ಪಡೆಯುತ್ತಿರುತ್ತೇವೆಂಬ ಅಂಶವನ್ನು ಮೇಲೆ ಪು. 25ರಲ್ಲಿ ವಿವರಿಸಿದೆ. ಆದುದರಿಂದ ವಿವೇಕಿಗಳಾಗಿರುವವರು ದುಃಖಜನಕವಾದ ದುಷ್ಕರ್ಮಗಳನ್ನು ಬಿಟ್ಟು ಸುಖಕ್ಕೆ ಕಾರಣವಾದ ಸತ್ಕರ್ಮಗಳನ್ನೇ ಆಚರಿಸುತ್ತಿರುತ್ತಾರೆ. ಇಂತಹ ಸತ್ಕರ್ಮಕ್ಕೇ ಧರ್ಮವೆಂದು ಹೆಸರು. ಈ ಕರ್ಮ ಲಭ್ಯವಾದ ಸುಖವು ಐಹಿಕವೆಂದೂ ಆಮುಷ್ಮಿಕವೆಂದೂ ಎರಡು ಬಗೆಯಾಗಿದೆ. ಆದುದರಿಂದ ವಿವೇಕಿಗಳು ಎಲ್ಲರೂ ಧರ್ಮಾಚರಣೆಯಲ್ಲಿ ಆದರವುಳ್ಳವರಾಗಿರಬೇಕು. ಇಂತಹ ತಿಳಿವಳಿಕೆ ಇಲ್ಲದವರಿಗೂ ಈ ಧರ್ಮಾಚರಣೆಯಲ್ಲಿ ಆದರವನ್ನು ಉಂಟುಮಾಡುವುದಕ್ಕಾಗಿಯೇ, ಈ ತಿಳಿವಳಿಕೆಯನ್ನು ಹರಡುವುದಕ್ಕಾಗಿಯೇ ವೇದಶಾಸ್ತ್ರ ಪುರಾಣ ಕಾವ್ಯಗಳನ್ನು ರಚಿಸಿ ಪ್ರಚಾರಮಾಡಲಾಗುತ್ತಿದೆ. ಈ ಮೇಲಿನ ಪದ್ಯದ ಅರ್ಥವು ಹೀಗಿದೆ—

ಧರ್ಮವು ಪುರುಷಾರ್ಥ ಸಾಧನವು.

ಈ ಲೋಕದಲ್ಲಿ ಜನ್ಮವನ್ನು ಪಡೆದಿರುವವರೆಲ್ಲರಿಗೂ ಅವರವರ ಇಚ್ಛಾನುಸಾರವಾಗಿ ಐಹಿಕವಾದ ಅಭ್ಯುದಯಗಳು ಆಮುಷ್ಮಿಕವಾದ ಸದ್ಗತಿಗಳು ಇವುಗಳನ್ನು ಪಡೆದು ಸುಖವಾಗಿರುವಂತೆ ಮಾಡುವ ಸಾಧನವು ಧರ್ಮವೇ ಆಗಿದೆ. ಆದುದರಿಂದ ಈ ಧರ್ಮವು ಎಲ್ಲ ಲೋಕಗಳನ್ನೂ ಎತ್ತಿಹಿಡಿದು ನಡೆಸುತ್ತಾ ಕಾಪಾಡುತ್ತಿರುತ್ತದೆ. "ಧರ್ಮೋವಿಶ್ವಸ್ಯಜಗತಃ ಪ್ರತಿಷ್ಠಾ" ಧರ್ಮ ತತ್ತ್ವವನ್ನವಲಂಬಿಸಿಯೇ ಇಡಿಯ ಪ್ರಪಂಚವು ನಿಂತಿದೆ.(ಜನರಲ್ಲೂ ಮುಖಂಡರಲ್ಲೂ ಧರ್ಮಾದರವು ಕಡಿಮೆಯಾಗಿ, ಇತರರೊಡನೆ ಅಧಾರ್ಮಿಕವಾದ ಸ್ಪರ್ಧೆಯೂ ಸ್ವಾರ್ಥದ ದುರಾಸೆಯೂ ಮುಂದಾದಾಗ ಯುದ್ಧಗಳು ಸಂಭವಿಸುತ್ತಿರುತ್ತವೆ. ಯುದ್ಧದಿಂದ ಶಾಂತಿ ಸುಖಗಳನ್ನು ಸ್ಥಾಪಿಸಲಾಗುವುದಿಲ್ಲ. ಧರ್ಮದ ತಿಳಿವಳಿಕೆ ಆಚರಣೆಗಳಿಂದಲೇ ಜಗತ್ಕಲ್ಯಾಣ ಸಾಧನೆಯು ನೆರವೇರಬೇಕಾಗಿರುತ್ತದೆ. ಈ ಅಂಶವನ್ನು "ಧರ್ಮೋವಿಶ್ವಸ್ಯಜಗತಃ ಪ್ರತಿಷ್ಠಾ" ಎಂದು ಮುಂತಾದ ಶ್ರುತಿವಾಕ್ಯಗಳು ಸಾರಿ ಹೇಳುತ್ತಿವೆ ಎಂದು ಮೇಲೆ ಹೇಳಿದೆ.) ಧರ್ಮವನ್ನು ಆಚರಿಸುವುದು, ಅದಕ್ಕೆ ತಕ್ಕಷ್ಟು

ಸುಖವನ್ನು ಇಹದಲ್ಲಾಗಲಿ ಪರದಲ್ಲಾಗಲಿ ಅನುಭವಿಸುವುದು, ಆ ಪುಣ್ಯವು ಮುಗಿದಮೇಲೆ ಪುನಃ ಇಲ್ಲಿಗೆ ಬಂದು ಧರ್ಮವನ್ನು ಆಚರಿಸಿ ಪುಣ್ಯವನ್ನು ಗಳಿಸುವುದು, ಪುನಃ ಅದಕ್ಕೆ ತಕ್ಕಷ್ಟು ಸುಖವನ್ನು ಅನುಭವಿಸುವುದು, ಅದು ಮುಗಿದಮೇಲೆ ಪುನಃ ಇಲ್ಲಿಗೆ ಬಂದು ಧರ್ಮವನ್ನು ಆಚರಿಸುವುದು, ಹೀಗೆ ಜನ್ಯವೂ, ಅನಿತ್ಯವೂ, ಸಾತಿಶಯವೂ ಅಸೂಯಾದಿಜನಕವೂ, ಪಾಪದುಃಖಮಿಶ್ರವೂ ಆಗಿರುವುದರಿಂದ ಈ ಸುಖಾಭಾಸಗಳನ್ನೇ ಅನುಭವಿಸುತ್ತಿರುವುದರಲ್ಲಿ, ಈ ಯಾತಾಯಾತದಲ್ಲಿ ವಿವೇಕಿಗಳಿಗೆ ಕೆಲವು ಕಾಲದಮೇಲಾದರೂ ಬೇಸರವಾಗುತ್ತದೆ. ಆಗ ವಿಮರ್ಶೆಯಿಂದ ಪ್ರವೃತ್ತಿ ಧರ್ಮವೇ ಸಕಾಮಕರ್ಮಾಚರಣೆಯೇ ಈ ಸ್ಥಿತಿಗೆ ಕಾರಣವೆಂಬುದು ಗೊತ್ತಾಗುತ್ತದೆ. ಅನಂತರದಲ್ಲಿ ನಿವೃತ್ತಿ ಧರ್ಮವನ್ನು ಬೋಧಿಸುವ ಶಾಸ್ತ್ರೋಪದೇಶಗಳಲ್ಲಿ ಆದರ ಉಂಟಾಗುತ್ತದೆ. ನಿಷ್ಕಾಮ ಕರ್ಮಾಚರಣೆಯಿಂದ ಚಿತ್ತವು ಶುದ್ಧವಾಗುತ್ತದೆ ಎಂದರೆ, ಅದರಲ್ಲಿರುವ ಮಲಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು ನಷ್ಟವಾಗುತ್ತವೆ. ಹೊಸ ಕಾಮಗಳು ಉಂಟಾಗುವುದಿಲ್ಲ. ಇದ್ದ ಕಾಮಗಳು ಫಲಾನುಭವದಿಂದಲೂ, ಜ್ಞಾನದಿಂದಲೂ ನಷ್ಟವಾಗುತ್ತವೆ. ಹೀಗೆ ಚಿತ್ತವು ಶುದ್ಧವಾಗಲು ಆಗ ನಮ್ಮ ಮನಸ್ಸು ಶುದ್ಧವಾಗುತ್ತದೆ. ಹೀಗೆ ನಿರ್ಮಲವಾದ ಅಂತಃಕರಣದಲ್ಲಿ ನಮ್ಮ ಆತ್ಮಸ್ವರೂಪವು ಅದರ ಸಚ್ಚಿದಾನಂದ ಸ್ವಭಾವವು ಸ್ಫುರಿಸುವಂತಾಗುತ್ತದೆ. ಆಗ ಆ ಧರ್ಮನಿಷ್ಠರಿಗೆ ಅಂತಹ ಆತ್ಮಜ್ಯೋತಿಯ ಸಾಕ್ಷಾತ್ಕಾರವು ಎಂದರೆ, ಅಪರೋಕ್ಷಾನುಭವವಾಗುತ್ತದೆ. ಇದೇ ನಿತ್ಯಾನಂದರೂಪವಾದ ಮೋಕ್ಷಸ್ಥಿತಿಯು. ಈ ಅನುಭವದಿಂದ ಮೊದಲು ಅಜ್ಞಾನದಿಂದ ಉಂಟಾಗಿದ್ದ, ನಾನು ಸುಖೀ ದುಃಖೀ ಕರ್ತಾ ಭೋಕ್ತಾ ಜನನವಾನ್ ಮತ್ತು ಮರಣವಾನ್ ಎಂದರೆ, ಹುಟ್ಟು ಸಾವುಗಳುಳ್ಳವನು, ಎಂದು ಮುಂತಾದ ಅಭಿಮಾನಗಳು ನಷ್ಟವಾಗುತ್ತವೆ. ಈ ಜನನ, ಮರಣ ಪ್ರವಾಹವೆಂಬ ಅನಾದಿ ಸಂಸಾರ

ಚಕ್ರದಲ್ಲಿ ಬಳಸುತ್ತಾ ಬಳಲುತ್ತಿರುವುದು, ಈ ಸುಖಾಭಾಸಗಳ ಮತ್ತು ದುಃಖಗಳ ಅನುಭವದ ನಿರ್ಬಂಧದ ದುಃಖವು ತಪ್ಪುತ್ತದೆ.

ಧರ್ಮದಿಂದ ಪ್ರೇಯಸ್ಸು ಮತ್ತು ಶ್ರೇಯಸ್ಸು.

ಹೀಗೆ ಧರ್ಮಾಚರಣೆ ಎಂಬ ಸಾಧನವು ಫಲ ವಿಷಯದಲ್ಲಿ ಕಾಮನೆಯುಳ್ಳವರಿಗೆ ಪ್ರೇಯಸ್ಸು (ತಾತ್ಕಾಲಿಕ ಅನಿತ್ಯ ಸುಖ)ಗಳನ್ನೂ, ಫಲವಿಷಯದಲ್ಲಿ ಕಾಮನೆಯಿಲ್ಲದ ಜ್ಞಾನಿಗಳಿಗೆ ಶ್ರೇಯಸ್ಸು ಎಂದರೆ, ನಿತ್ಯ ಸುಖರೂಪವಾದ ಮೋಕ್ಷ ರೂಪ ಪರಮ ಪುರುಷಾರ್ಥವನ್ನೂ ಉಂಟುಮಾಡುತ್ತದೆ. ಕಂಠ ಚಾಮೀಕರ ನ್ಯಾಯದಿಂದ ಆತ್ಮಾನಂದದ ಲಾಭವನ್ನೂ ಉಂಟು ಮಾಡುತ್ತದೆ. ಹೀಗೆ ಧರ್ಮಾಚರಣೆಯು ಬಹುವಿಧವಾದ ಫಲಗಳನ್ನು ಆಯಾ ಅಧಿಕಾರಿಗಳಿಗೆ ಅವರವರ ಸಂಸ್ಕೃತಿಯ ಮಟ್ಟಕ್ಕೆ ಅನುಸಾರವಾಗಿ ಯೋಗ್ಯತಾನುಗುಣವಾಗಿ ಉಂಟುಮಾಡುತ್ತದೆ. ಇದು ಧಾರ್ಮಿಕ ಸಂಸ್ಕೃತಿಯ ಪರಮ ಫಲವಾಗಿದೆ. ನಮ್ಮಲ್ಲಿ ಈ ಸಂಸ್ಕೃತಿಯು ಅನುವಂಶಿಕವಾಗಿ ಬಂದು ನಮ್ಮ ದಿನಗಟ್ಟಲೆಯ ಜೀವನ ಕ್ರಮದಲ್ಲೂ ಕಾಣಬರುತ್ತಿದೆ. ಇದು ನಮ್ಮ ಭಾರತ ವರ್ಷದಲ್ಲಿ ಕನಿಷ್ಠಪಕ್ಷದಲ್ಲಿಯೂ ಸುಮಾರು ಐದು ಸಾವಿರ ವರ್ಷಗಳಿಂದ ಬೆಳೆದು ಬಂದಿರುವ ಸಾಹಿತ್ಯ ಗ್ರಂಥಗಳಲ್ಲಿ ವರ್ಣಿಸಿ ವಿವರಿಸಿ ಕಾಪಾಡಲ್ಪಟ್ಟಿರುತ್ತದೆ. ಈ ಪ್ರಪಂಚದಲ್ಲಿರುವ ಇತರ ಆರ್ಯ ಮತ್ತು ಆರ್ಯೇತರ ಜನಾಂಗಗಳಲ್ಲಿ ರಕ್ಷಿತವಾಗಿರುವ ಸಾಹಿತ್ಯಗಳಲ್ಲೆಲ್ಲ ಈ ನಮ್ಮ ವೈದಿಕ ಸಾಹಿತ್ಯವೇ ಅತ್ಯಂತ ಪ್ರಾಚೀನತಮವಾದುದೆಂದು ಎಲ್ಲ ವಿಮರ್ಶಕರೂ ಪಾಶ್ಚಾತ್ಯ ವಿದ್ವಾಂಸರೂ ಭಾರತಾರ್ಯ ಪಂಡಿತರೂ ಎಲ್ಲರೂ ಐಕಮತ್ಯದಿಂದ ಒಪ್ಪಿ ಸಾರಿರುತ್ತಾರೆ. ವೈದಿಕ ಸಾಹಿತ್ಯದಲ್ಲಿ ವೇದ ಮಂತ್ರಗಳ ಸಂಹಿತೆಗಳೂ, ಬ್ರಾಹ್ಮಣಗಳೂ, ಉಪನಿಷತ್ತುಗಳೂ ಸೇರಿರುತ್ತವೆ. ಸೂತ್ರಗಳನ್ನೂ ಎಂದರೆ ಕಲ್ಪಸೂತ್ರ, ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ, ಪರಿಭಾಷಾಸೂತ್ರ, ಕಪಿಲನ ಸಾಂಖ್ಯ ಸೂತ್ರ, ಪತಂಜಲಿಯ ಯೋಗಸೂತ್ರ, ಜೈಮಿನಿಯ ಮೀಮಾಂಸಾ

ಸೂತ್ರ, ವ್ಯಾಸರ ವೇದಾಂತಬ್ರಹ್ಮಸೂತ್ರ, ಗೌತಮನ ನ್ಯಾಯಸೂತ್ರ, ಪಾಣಿನಿಯ ವ್ಯಾಕರಣಸೂತ್ರ, ವಾತ್ಸ್ಯಾಯನನ ಕಾಮಸೂತ್ರ ಮುಂತಾದ ಸೂತ್ರ ಗ್ರಂಥಗಳನ್ನೂ ಕೆಲವರು ಈ ವೈದಿಕ ಸಾಹಿತ್ಯಕ್ಕೆ ಸೇರಿದುವು ಎನ್ನುತ್ತಾರೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂದು ನಾಲ್ಕು ವೇದಗಳೂ, ಇವುಗಳಲ್ಲಿ ಪ್ರತಿಯೊಂದು ವೇದಕ್ಕೂ ಸೇರಿದ ಪ್ರತ್ಯೇಕವಾಗಿರುವ ಬ್ರಾಹ್ಮಣಗಳೂ, ಹಾಗೆಯೇ ನಾಲ್ಕು ವೇದಗಳಿಗೂ ಸಂಬಂಧಿಸಿರುವ ಉಪನಿಷತ್ತುಗಳೂ ಇವೆ. ಇವುಗಳಲ್ಲೆಲ್ಲ ಋಗ್ವೇದವೇ ಎಲ್ಲಕ್ಕಿಂತ ಪ್ರಾಚೀನತಮವಾದ ಗ್ರಂಥ ವಾಗಿದೆ. ಇದರಲ್ಲಿ ೧೦೧೭ ಸೂಕ್ತಗಳೂ, ೧೧ ಖಿಲಸೂಕ್ತಗಳೂ ಸೇರಿ ಒಟ್ಟು ೧೦೨೮ ಸೂಕ್ತಗಳಿವೆ. ಮಂತ್ರಗಳ ಸಣ್ಣಸಣ್ಣ ಗುಂಪು ಗಳಿಗೆ ಸೂಕ್ತಗಳೆಂದು ಹೆಸರಿದೆ. ಋಗ್ವೇದದಲ್ಲಿ ಒಟ್ಟು ಸುಮಾರು ೧೦೬೦೦ ಮಂತ್ರಗಳಿವೆ. ಒಂದು ಸೂಕ್ತಕ್ಕೆ ಸರಾಸರಿಯಾಗಿ ಸುಮಾರು ಹತ್ತು ಮಂತ್ರಗಳಿವೆ ಎನ್ನಬಹುದು. ಕೆಲವು ಸೂಕ್ತಗಳಲ್ಲಿ ಮಂತ್ರಗಳು ಹೆಚ್ಚಾಗಿಯೂ ಮತ್ತೆ ಕೆಲವು ಸೂಕ್ತಗಳಲ್ಲಿ ಮಂತ್ರಗಳ ಸಂಖ್ಯೆಯು ಕಡಿಮೆಯಾಗಿಯೂ ಇವೆ.

ಋಷಿಗಳು ಮಂತ್ರ ದ್ರಷ್ಟೃಗಳು.

ಈ ವೈದಿಕ ಸಾಹಿತ್ಯದಲ್ಲಿ ನಮ್ಮ ಧಾರ್ಮಿಕ ಸಂಸ್ಕೃತಿಯ ಪ್ರಾರಂಭಕಾಲದ ಸ್ವರೂಪವನ್ನು ಕಾಣಬಹು ದಾಗಿದೆ. ಈ ಮಂತ್ರಗಳನ್ನು ರಚಿಸಿದವರಿಗೆ ಮಂತ್ರಾರ್ಥವನ್ನು ಮೊದಲು ಮನಗಂಡು ಪ್ರಕ ಟಿಸಿದವರಿಗೆ,ಋಷಿಗಳೆಂದು ಹೆಸರಿದೆ. "ಮಂತ್ರದ್ರಷ್ಟಾರಃ ಋಷಯಃ" ಎಂದು ಹೇಳಿದೆ. ಮಾನವರು ಪ್ರತಿನಿತ್ಯದಲ್ಲೂ ಬೆಳಿಗ್ಗೆ ನಿದ್ರೆಯಿಂದ ಎದ್ದಮೇಲಿನಿಂದ ಪ್ರಾರಂಭಿಸಿ ಪುನಃ ರಾತ್ರಿ ನಿದ್ರೆಗಾಗಿ ಮಲಗಿ ಕೊಳ್ಳುವವರೆಗೂ ಮಾಡುತ್ತಿರುವ ಕೆಲಸಗಳು, ಆಡುತ್ತಿರುವ ಮಾತು ಗಳು, ಯೋಚಿಸುತ್ತಿರುವ ಭಾವಗಳು—ಈ ಮೂರೂ ಅವರ ಸಂಸ್ಕೃ ತಿಯ ಸ್ವರೂಪವನ್ನೂ ಅಂತಸ್ತನ್ನೂ ತಿಳಿಸುತ್ತವೆ. ವೈದಿಕ ಸಾಹಿತ್ಯ ದಲ್ಲಿಯೂ ಆಗಿನಕಾಲದ ಆರ್ಯರು ಯೋಚಿಸುತ್ತಿದ್ದ ಭಾವಗಳನ್ನೂ,

ಆಡುತ್ತಿದ್ದ ಮಾತುಗಳನ್ನೂ, ಮಾಡುತ್ತಿದ್ದ ಕೆಲಸಗಳನ್ನೂ ಎಲ್ಲವನ್ನೂ ಸಂಪೂರ್ಣವಾಗಿ ಹೇಳಿರದೆ ಇದ್ದರೂ ಮುಖ್ಯವಾದ ಕೆಲವನ್ನಾದರೂ ಹೇಳಿರುತ್ತದೆ. ಜನರು ಸಾಮಾನ್ಯವಾಗಿ ನಾಲ್ಕು ವಿಷಯಗಳನ್ನು ಕುರಿತು ಆಲೋಚಿಸುತ್ತಾರೆ. ನಾವು ನೋಡುತ್ತಿರುವ ವ್ಯವಹರಿಸುತ್ತಿರುವ ಈ ಪ್ರಪಂಚದ ಸ್ವರೂಪವೇನು ? ಈ ಪ್ರಾಪಂಚಿಕ ವ್ಯವಹಾರದಲ್ಲಿ ತೊಡಗಿರುವ ನಮ್ಮ ಸ್ವರೂಪವೇನು ? ನಾವು ತಿಳಿದೋ ತಿಳಿಯದೆಯೋ ದೇವರ ಹೆಸರನ್ನು ಬಳಸುತ್ತಿರುತ್ತೇವೆ. ಈ ದೇವರ ಸ್ವರೂಪವೇನು ? ಕಡೆಯದಾದರೂ ಅತಿಮುಖ್ಯವಾಗಿರುವ ಅಂಶವೆಂದರೆ, ಈ ಮೂರಕ್ಕೂ ಇರುವ ಸಂಬಂಧ ಅಥವಾ ಧರ್ಮದ ಸ್ವರೂಪವೇನು ? ಎಂದು ವಿಚಾರಶೀಲರಾದ ಜನರು ಆಲೋಚಿಸುತ್ತಾರೆ. ಹೀಗೆ ಈ ಜಗತ್ತು, ಜೀವರು, ದೇವರು, ಧರ್ಮ—ಈ ನಾಲ್ಕು ಅಂಶಗಳೇ ಜನರ ಸಂಸ್ಕೃತಿಯಲ್ಲಿನ ಮುಖ್ಯ ವಿಷಯಗಳಾಗಿರುತ್ತವೆ.

ಮಾನವನ ಮನಸ್ಸಿನ ಮೇಲೆ ಪ್ರಕೃತಿಯ ಪ್ರಭಾವ.

ವೈದಿಕ ಮಂತ್ರಗಳಲ್ಲಿ, ನೂರಕ್ಕೆ ಎಂಬತ್ತಕ್ಕಿಂತಲೂ ಹೆಚ್ಚಾದ ಮಂತ್ರಗಳು ದೇವತೆಗಳನ್ನು ಸ್ತೋತ್ರ ಮಾಡುವ ಮಂತ್ರಗಳಾಗಿವೆ. ಇವು ಇಂದ್ರ, ಅಗ್ನಿ, ಸೋಮ, ಸೂರ್ಯ, ವಾಯು, ವರುಣ, ಪರ್ಜನ್ಯ, ಉಷಸ್ ಮುಂತಾದ ಪ್ರಕೃತಿ ದೃಶ್ಯಗಳನ್ನು ಅವುಗಳಲ್ಲಿ ಅಂತರ್ಯಾಮಿಯಾಗಿರುವ ಅಭಿಮಾನಿದೇವತೆಗಳು ಅಥವಾ ಶಕ್ತಿಗಳನ್ನು ಸ್ತುತಿಸುವ ಮಂತ್ರಗಳಾಗಿವೆ. ಭಾರತ ದೇಶದಲ್ಲಿ ಪ್ರಕೃತಿ ದೃಶ್ಯಗಳು ಅನ್ಯಾದೃಶಗಳಾಗಿವೆ. ಇವು ಆರ್ಯರ ಮನಸ್ಸನ್ನು ಮೊದಲು ಆಕರ್ಷಿಸಿದುವು. ವಿಚಿತ್ರವೂ ವಿವಿಧವೂ ಅದ್ಭುತವೂ ಆಗಿರುವ ಈ ಪ್ರಕೃತಿ ದೃಶ್ಯಗಳು ಆ ಆರ್ಯರ ಮನಸ್ಸಿನಲ್ಲಿ ವಿವಿಧ ಭಾವಗಳನ್ನು ಮೂಡಿಸಿದುವು. ಅದ್ಭುತ ದೃಶ್ಯಗಳಾದ ಉಷಸ್, ಸಂಧ್ಯಾರಾಗ, ಕಾಮನಬಿಲ್ಲು, ಬೆಳದಿಂಗಳು—ಇವುಗಳಿಂದ ಆಶ್ಚರ್ಯ, ಸೌಂದರ್ಯ, ಆನಂದಗಳನ್ನು ಅನುಭವಿಸಿದರು. ಮಳೆ, ಬೆಳೆ, ಗೆಡ್ಡೆ, ಗೆಣಸು, ಹೂವು, ಹಣ್ಣು_ಇವೇ ಮುಂತಾದವುಗಳಿಂದ ಉಪಕಾರ ಸಹಾನು

ಭೂತಿ ಕೃತಜ್ಞತೆ ಸಹಕಾರ ಪ್ರೀತಿ ಮುಂತಾದ ಭಾವಗಳನ್ನು ಮನ ಗಂಡರು. ಆಕಸ್ಮಿಕವೂ ಅಪಾಯಕರವೂ ಆಗಿದ್ದರೂ ಪ್ರಯೋಜನಕಾರಿಯಾಗಿರುವ ಮಳೆ, ಮಿಂಚು, ಗುಡುಗು, ಸಿಡಿಲು ಮುಂತಾದುವುಗಳಿಂದ ಭಯವನ್ನೂ ಇವೆಲ್ಲವುಗಳಲ್ಲೂ ಎದ್ದುಕಾಣುವ ಶಿಸ್ತು, ಕ್ರಮ ಇವುಗಳಿಂದ ವಿಧೇಯತೆ ಭಕ್ತಿಗಳನ್ನೂ ಗಮನಿಸಿ, ಊಹಿಸಿದಂತೆ ಕಾಣುತ್ತದೆ. ಪ್ರಾಣಿಗಳ ವಾಸಕ್ಕೂ ಬೆಳೆಗೂ ನೀರಿಗೂ ಆಧಾರವಾಗಿರುವ, ದವಸ, ಹಣ್ಣು, ಗೆಡ್ಡೆ, ಬೆಳ್ಳಿ, ಚಿನ್ನ, ರತ್ನ, ಲೋಹ ಇವುಗಳನ್ನು ಕೊಡುವ ಭೂಮಿಯನ್ನು 'ಅವನಿಃ', (ಕಾಪಾಡುವವಳು), 'ವಸುಮತೀ' (ಸಂಪತ್ತುಳ್ಳವಳು), 'ಸರ್ವಂ ಸಹಾ' (ಎಲ್ಲವನ್ನು ತಾಳ್ಮೆಯಿಂದ ಸಹಿಸುವವಳು) ಎಂದು ಮುಂತಾಗಿ ಸ್ತುತಿಸುತ್ತಾ ವರ್ಣಿಸಿರುವುದು ಕಾಣಬರುತ್ತದೆ. ಹೀಗೆಯೇ ನೀರಿನ ವಿಷಯದಲ್ಲೂ ಉತ್ತಮ ಭಾವಗಳು ಆ ಆರ್ಯರ ಮನಸ್ಸಿನಲ್ಲಿ ಮಿಂಚಿದುವು. ನೀರು ಔಷಧಿ "ಅಪೋ ಯಾಚಾಮಿ ಭೇಷಜಂ" ಎಂದೂ, ಹೊರಗಿನ ಕೊಳಕನ್ನು ತೊಳೆದು ಬೆಳಗಿಸುವಂತೆ ಅಂತರವಾದ ಮಲವನ್ನೂ ಕಳೆದು ನೈರ್ಮಲ್ಯವನ್ನು ಕೊಡಬಲ್ಲದ್ದೆಂದೂ,

ಯಾಸಾಂ (ಅಪಾಂ) ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ
ಅವಪಶ್ಯನ್ ಜನಾನಾಂ ।
ಮಧುಶ್ಚುತ ಶ್ಶುಚಯೋ ಯಾಃ ಪಾವಕಾಸ್ತಾನ ಅಪಶ್ಯಂ
ಸ್ಯೋನಾಭವಂತು॥ ಋ.ವೇ. ೫.೪.೭೬

ಏಕೋ ದೇವ ಸ್ಸರ್ವಭೂತೇಷು ಗೂಢಃ ಸರ್ವವ್ಯಾಪೀ
ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಸ್ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ।
—ಶ್ವೇ.ಉ. ೬.೧೧

ಹೇಗೆ ತಾಯಿಯು ಮಕ್ಕಳಿಗೆ ಹಾಲನ್ನು ಕುಡಿಸಿ ಕಾಪಾಡುತ್ತಾಳೋ ಹಾಗೆ ನೀರೂ ಕೂಡ "ಉಶತೀರಿವಮಾತರಃ" ಕಾಪಾಡುತ್ತದೆ. ಆದುದರಿಂದ ನೀರು ಜೀವನವನ್ನು ಕೊಡುವ ತಾಯಿಯು ಎಂದೂ ವರ್ಣಿಸಿದೆ. ಶೈತ್ಯಜಾಡ್ಯಗಳನ್ನು ನಿವಾರಿಸಲೂ, ಚಟುವಟಿಕೆ

ಯನ್ನುಂಟುಮಾಡಲೂ, ಶಾಖವನ್ನು ಕೊಡುವ, ಪದಾರ್ಥಗಳನ್ನು ನೋಡಿ ತಿಳಿದು ವ್ಯವಹರಿಸಲು ಬೆಳಕನ್ನು ಕೊಟ್ಟು ಸಹಾಯಮಾಡಿ ತಿಳಿವಳಿಕೆಯನ್ನು ಪಡೆಯಲು ಸಹಕರಿಸುವ ಸೂರ್ಯ, ಅಗ್ನಿ, ಚಂದ್ರ ಮುಂತಾದುವನ್ನು, ಮಿತ್ರ, ಪುರೋಹಿತ ಎಂದು ಮುಂತಾಗಿ ಹೊಗಳಿದೆ. ವಾಯುವು ಪ್ರಾಣಶಕ್ತಿಯನ್ನು ಕೊಟ್ಟು ಬದುಕಿರಲು ಸಹಾಯಮಾಡುತ್ತಿರುವ, "ವಾಯುರ್ವೈ ಕ್ಷೇಪಿಷ್ಠಾದೇವತಾ" "ವಾಯವಾಯಾಹಿ ದರ್ಶತ" ಕ್ಷಿಪ್ರಪ್ರಸಾದಕಾರಿಯಾದ, ದರ್ಶನೀಯವಾದ ದೇವತೆ ಎಂದು ಮುಂತಾಗಿ ಸ್ತುತಿಸಲಾಗಿದೆ. ಆಕಾಶವು ಎಲ್ಲಕ್ಕೂ ಆಶ್ರಯವನ್ನು ಕೊಡುವ ಎಲ್ಲವನ್ನೂ ಒಳಗೊಳ್ಳಬಲ್ಲ ಉದಾರ ಹೃದಯದ, ನಿರಭಿಮಾನಿಯಾದ, ನಿರ್ಲಿಪ್ತ ಸ್ವಭಾವವುಳ್ಳ ಪರಬ್ರಹ್ಮವೆಂಬ ದೊಡ್ಡತತ್ತ್ವಕ್ಕೆ ಸದೃಶವೆಂದೂ ವರ್ಣಿಸಿದೆ.

**ಪ್ರಕೃತಿಯು ಮಾನವ ನೊಡನೆ ಸಹಕರಿಸುವ ತಾಯಿ.**

ಹೀಗೆ ಪ್ರಕೃತಿ ದೃಶ್ಯಗಳನ್ನು ನೋಡಿ ಭಾವಪರವಶರಾದ ಆರ್ಯರ ಹೃದಯದಲ್ಲಿ ಉದಾರವಾದ ಒಳ್ಳೆಯ ಭಾವಗಳು ಮೂಡಿ, ಬೆಳೆದು ಸ್ತೋತ್ರ ಮಂತ್ರಗಳಲ್ಲಿ ಹೊರಹೊಮ್ಮಿರುವುದು ಕಂಡುಬರುತ್ತದೆ. ಪ್ರಕೃತಿ ಶಕ್ತಿಯು ಮಾನವನೊಡನೆ ಸ್ಪರ್ಧಿಸುವ ಎದುರಾಳಿ ಎಂದೂ, ಅದನ್ನು ಜಯಿಸಿ, ಮಾನವನು ಅದನ್ನು ತನ್ನ ಅಡಿಯಾಳನ್ನಾಗಿ ಮಾಡಿಕೊಂಡು ತನ್ನ ಅಂಕೆಯಲ್ಲಿಟ್ಟುಕೊಳ್ಳಬೇಕೆಂಬ ಮನೋಭಾವನೆ ಪ್ರಯತ್ನಗಳಿಗೆ ಬದಲಾಗಿ, ಪ್ರಕೃತಿಯು ಮಾನವನ ಒಡನಾಡಿ, ಸಹಾನುಭೂತಿಯಿಂದ ಸಹಕರಿಸುವ ತಾಯಿ ಎಂದು ಭಾರತಾರ್ಯರ ಹೃದಯದಲ್ಲಿ ಉದಾತ್ತ ಭಾವನೆಯು ಮೂಡಿ ಬೆಳೆದಿರುವುದು ಕಂಡುಬರುತ್ತದೆ. ಇದು ಧಾರ್ಮಿಕ ಸಂಸ್ಕೃತಿಯ ಸೌಭಾಗ್ಯವಿಶೇಷವಾಗಿದೆ. ಇಷ್ಟೇ ಅಲ್ಲದೆ, ಈ ಜಗತ್ತೆಲ್ಲವೂ ಪರಸ್ಪರವಾಗಿ ಉಪಕಾರ್ಯೋಪಕಾರಕವಾಗಿರುವುದರಿಂದ, ಬ್ರಹ್ಮಾತ್ಮನೆಂಬ ಒಂದೇ ಕಾರಣದಿಂದ ಈ ಪ್ರಪಂಚವೆಲ್ಲವೂ ಉಂಟಾಗಿರುವುದರಿಂದ, ಈ ಜಗತ್ತು ಬ್ರಹ್ಮಕ್ಕಿಂತ ಅವ್ಯತಿರಿಕ್ತವಾಗಿರುತ್ತದೆ ಎಂದು ಬೃ.ಉ.

೨, ೫ರಲ್ಲಿ ವಿವರವಾಗಿ ತಿಳಿಸಿದೆ. ಅಧಿದೈವಿಕವಾಗಿ ಪೃಥಿವೀ ಮುಂತಾದ ಭೂತಗಳಲ್ಲೂ ಅಧ್ಯಾತ್ಮಿಕವಾಗಿ ಶರೀರದೊಳಗೂ ಇರುವ ತೇಜೋಮಯನೂ ಅಮೃತಮಯನೂ ಆಗಿರುವ ಲಿಂಗಾತ್ಮನು ಎಲ್ಲ ಭೂತಗಳ ಕಾರ್ಯವು "ಇದೆಲ್ಲವೂ ಈ ಆತ್ಮನೇ" ಎಂದು ಹೇಳಿದೆ. ಇದರ ಜ್ಞಾನವೇ ಅಮೃತತ್ವ ಸಾಧನವು ಎಂದು ಯಾಜ್ಞವಲ್ಕ್ಯನು ಮೈತ್ರೇಯಿಗೂ, ಬಾಲಾಕಿಯು ಅಜಾತಶತ್ರುವಿಗೂ ಹೇಳಿರುತ್ತಾರೆ. ಹೀಗೆ ಬಾಹ್ಯ ಪ್ರಕೃತಿಯಲ್ಲೂ ಅಂತರ ಪ್ರಕೃತಿಯಲ್ಲೂ ಚೈತನ್ಯವು ಸಹಕರಿಸುತ್ತದೆಂದು ಸಹಕಾರ ಮನೋಭಾವವನ್ನು ಆರ್ಯರು ಮನಗಂಡರು.

ಇದೆಲ್ಲಕ್ಕಿಂತ ಮೇಲಾಗಿ ಈ ಪ್ರಕೃತಿ ದೃಶ್ಯಗಳ ಹಿಂದೆ ಶಿಸ್ತುಕ್ರಮಗಳನ್ನು ರೂಢಿಸುತ್ತಿರುವ ಶಕ್ತಿವಿಶೇಷಗಳಿರಬೇಕೆಂದೂ, ಅವು ಅಭಿಮಾನಿದೇವತೆಗಳಾಗಿರಬೇಕೆಂದೂ ಆ ಋಷಿಗಳು ಧ್ಯಾನಯೋಗದಿಂದ ಮನಗಂಡರು. ಆ ದೇವತೆಗಳ ಚೈತನ್ಯಶಕ್ತಿಯಿಂದಲೇ, ಮನೋಹರವಾದ ನಿಯಮದಿಂದ ಕೂಡಿರುವ, ಭಯಂಕರವಾದರೂ ಪ್ರಯೋಜನಕಾರಿಯಾಗಿರುವ, ಅಚಿಂತ್ಯವೂ ಅದ್ಭುತವೂ ಆದ ಚೈತನ್ಯಶಕ್ತಿಯಿಂದಲೇ ಅನಾದಿಯಾಗಿರುವ ಈ ಪ್ರಪಂಚವು ಅನಂತವಾಗಿ ಸಾಗುತ್ತಿರುತ್ತದೆ. ಆ ದೇವತೆಗಳು ಶಿಸ್ತುಕ್ರಮವನ್ನು ಪಾಲಿಸುವವರಾಗಿರುವುದರಿಂದ ಅವರನ್ನು ನೀತಿ ನಿಯಮಗಳಿಂದ ಕೂಡಿದ ಜೀವನ ಕ್ರಮದಿಂದ, ಸ್ತೋತ್ರಪೂಜೆಗಳಿಂದ, ಆರಾಧಿಸಲೂ ಅವರನ್ನು ಒಲಿಸಿಕೊಳ್ಳಲೂ, ಅವರಿಂದ ತಮ್ಮ ಇಷ್ಟಾರ್ಥಗಳನ್ನು ಪಡೆದುಕೊಳ್ಳಲೂ ಸಾಧ್ಯವೆಂದು ಆರ್ಯರು ಮನಗಂಡರು. ಈ ದೇವತೆಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿಕೊಂಡಿರುವುದೂ ಕಂಡು ಬರುತ್ತದೆ. "ಸೂರ್ಯೋ ನೋ ದಿವಸ್ಪಾತು ವಾತೋ ಅಂತರಿಕ್ಷಾತ್। ಅಗ್ನಿರ್ನಃ ಪಾರ್ಥಿವೇಭ್ಯಃ॥" ಋ.ವೇ. ೮.೮.೧೬. ಎಂದರೆ, ಸೂರ್ಯನು ಸ್ವರ್ಗಲೋಕದಿಂದಲೂ, ವಾಯುವು ಆಕಾಶದಿಂದಲೂ, ಅಗ್ನಿಯು ಭೂಲೋಕದ ಭೌತ ವಸ್ತುಗಳಿಂದಲೂ ನಮಗೆ ಬೇಕಾಗುವ ಸುಖ

ಸಾಧನಗಳನ್ನು ಕೊಡುತ್ತಲೂ ದುಃಖಸಾಧನಗಳನ್ನು ತಪ್ಪಿಸುತ್ತಲೂ ನಮ್ಮನ್ನು ಕಾಪಾಡುತ್ತಿರಲಿ,ಎಂದು ಋಷಿಗಳೂ ಮುನಿಗಳೂ ಪ್ರಾರ್ಥಿಸಿರುವುದೂ ಕಂಡುಬರುತ್ತದೆ. ಇದು ಧ್ಯಾನಯೋಗ (Intuition) ದ ಫಲವು.

ದೇವತೆಗಳು ನೀತಿ ಧರ್ಮಾಸಕ್ತರು.

ದೇವತೆಗಳು ನೀತಿಧರ್ಮಗಳಲ್ಲಿ ಆದರವುಳ್ಳವರಾಗಿರುವುದರಿಂದಲೇ ಅವರಿಂದ ಪಾಲಿತವಾಗಿರುವ ಈ ಪ್ರಪಂಚದಲ್ಲೂ ಶಿಸ್ತು ಕ್ರಮ ಪ್ರಯೋಜನಗಳು ಕಾಣಬರುತ್ತಿವೆ. ಆ ದೇವತೆಗಳನ್ನು ನಾವು ನೀತಿ ಧರ್ಮದಿಂದ ಕೂಡಿದ ನಮ್ಮ ಜೀವನಕ್ರಮದಿಂದಲೂ ಪೂಜಾ ಧ್ಯಾನಗಳಿಂದಲೂ ಆರಾಧಿಸುವುದು ಸಾಧ್ಯವೆಂದೂ ಮನಗಂಡುದು ಸ್ವಾಭಾವಿಕವಾಗಿರುತ್ತದೆ. ಅವರ ಅನುಗ್ರಹದಿಂದ ತಮಗೂ ತಮ್ಮವರಿಗೂ ತಮ್ಮ ಪಶುಗಳಿಗೂ ಜೀವನವು ಸುಕರವೂ ಸುಖಕರವೂ ಆಗುತ್ತದೆಂದೂ ಮಳೆಬೆಳೆಗಳ ಲಾಭ, ರೋಗರುಜಿನಗಳ ಪರಿಹಾರವೂ, ಜಯವೂ, ಶತ್ರುನಾಶವೂ ಆಗುತ್ತದೆಂದೂ ನಂಬಿದ್ದರು. ಆ ದೇವತೆಗಳಲ್ಲಿ ತಮತಮಗೆ ಒಪ್ಪಿಬಂದ, ದೇಶ ಕಾಲ ಸನ್ನಿವೇಶಗಳಿಗೆ ಹೊಂದಿಕೊಳ್ಳುವ ದೇವತೆಗಳನ್ನು ಸ್ತುತಿಸುತ್ತಾ, ಆ ದೇವತೆಗಳಿಗೆ ಯಾಗಗಳಲ್ಲಿ ಹವಿಸ್ಸನ್ನು ಸಮರ್ಪಣೆ ಮಾಡುತ್ತಿದ್ದರು. ಅವರು ಆಗಾಗ್ಗೆ ಒಟ್ಟಾಗಿ ಅಥವಾ ಕೆಲವರು ಸೇರಿದಾಗ ಪೂಜೆಯು ಯಾರಿಗೆ ಸಲ್ಲುತ್ತದೆ, ಯಾರಿಗೆ ಸಲ್ಲಬೇಕು, ಅವರಲ್ಲಿ ಯಾರು ಶ್ರೇಷ್ಠರು ಎಂದು ಮುಂತಾದ ವಿಚಾರಗಳನ್ನೂ ಮಾಡುತ್ತಿದ್ದರು. ಯಾವ ಕಾಲ ದೇಶ ಸನ್ನಿವೇಶಗಳಲ್ಲಿ ಯಾರ ಪೂಜೆ ಯಾಗಗಳನ್ನು ಮಾಡುತ್ತಿದ್ದರೊ ಅವರೇ ತಾತ್ಕಾಲಿಕವಾಗಿ ಶ್ರೇಷ್ಠ ದೇವರೆಂದೂ ಭಾವಿಸುತ್ತಿದ್ದರು. ಆದರೂ ಕಡೆಗೆ ಈ ದೇವತೆಗಳೆಲ್ಲರೂ ಒಂದೇ ದೊಡ್ಡ ಚೈತನ್ಯದ ರೂಪ ಭೇದಗಳಾಗಿರಬೇಕೆಂದೂ ನಾಮರೂಪ ವಿಶೇಷಗಳಾಗಿರಬೇಕೆಂದೂ ಮನಗಂಡು ಆ ಎಲ್ಲರ ಮತಧರ್ಮಗಳಲ್ಲಿ ಸಹನೆಯನ್ನೂ ಸಮತಾ ಭಾವನೆಯನ್ನೂ ಬೆಳೆಸಿಕೊಂಡು ಉದಾರ ಹೃದಯರಾಗಿ ಬಾಳುತ್ತಿದ್ದರು. ನನ್ನ ಮತಧರ್ಮಗಳೇ ಶ್ರೇಷ್ಠವಾದುವು. ಇತರರ ಮತಧರ್ಮ

ಆಚಾರಗಳು ಶ್ರೇಷ್ಠವಲ್ಲವು, ಎಂದು ಮುಂತಾದ ಸಂಕುಚಿತ ಭಾವನೆಗಳಿಂದ ಜಗಳವಾಡಿದ ವರ್ಣನೆಗಳು ಇಲ್ಲವೆನ್ನಬಹುದು.

ಈ ಮೇಲೆ ಹೇಳಿರುವ ಅಂಶಗಳಿಗೆ ಸೂಚಕಗಳಾದ ಋತ, ಸತ್ಯ, ಧರ್ಮ, ಮಿತ್ರ, ಪುರೋಹಿತ, ವಿಶ್ವಕರ್ಮ, ದಿವಸ್ಪತಿ, ವಿಶ್ವೇದೇವ, ಪ್ರಜಾಪತಿ—ಎಂದು ಮುಂತಾದ ಪದಗಳ ಪ್ರಯೋಗವನ್ನು ಪರಿಶೀಲಿಸಬಹುದು. "ಉಶತೀರಿವಮಾತರಃ" "ಕಸ್ಮೈ ದೇವಾಯ ಹವಿಷಾವಿಧೇಮ" "ಸತ್ಯಂತ್ವರ್ತೇನ ಪರಿಷಿಂಚಾಮಿ, ಋತಂತ್ವಾ ಸತ್ಯೇನ ಪರಿಷಿಂಚಾಮಿ" "ಉದ್ಯನ್ನದ್ಯಮಿತ್ರಮಹ ಆರೋಹನ್ನುತ್ತರಾಂ ದಿವಂ।

"ಹೃದ್ರೋಗಂ ಮಮ ಸೂರ್ಯ ಹರಿಮಾಣಂಚ ನಾಶಯ ॥
—ಋ.ವೇ. ೧.೪.೮.
ಉದಗಾದಯ ಮಾದಿತ್ಯೋ ವಿಶ್ವೇನ ಸಹಸಾ ಸಹ ।
ದ್ವಿಷಂತಂ ಮಹ್ಯಂ ರಂಧಯ ನ್ಮೋ ಅಹಂ ದ್ವಿಷತೇರಧಂ ॥"

"ಇಂದ್ರಂ ಮಿತ್ರಂವರುಣಮಗ್ನಿ ಮಾಹುಃ ಅಥೋ ದಿವ್ಯಸ್ಸ ಸುಪರ್ಣೋ ಗರುತ್ಮಾನ್ ।
ಏಕಂ ಸದ್ವಿಪ್ರಾ ಬಹುಧಾ ವದಂತಿ ಅಗ್ನಿಂ ಯಮಂ
ಮಾತರಿಶ್ವಾನಮಾಹುಃ ॥"ಋ.ವೇ. ೨.೩.೨೨.

"ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ
ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ ತದ್ವಿಜಿ
ಜ್ಞಾಸಸ್ವ ತದ್ಬ್ರಹ್ಮೇತಿ ॥" ತೈ.ಉ. ೩.೧.

"ನಾಸದಾಸೀನ್ನೋಸದಾಸೀತ್
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನಪರಃ
ಕಿಂಚನಾಸ ।"

ಇವೇ ಮುಂತಾದ ಮಂತ್ರಗಳನ್ನೂ ಪರಿಶೀಲಿಸಬಹುದು. ಆಗಿನ ಕಾಲದ ಆರ್ಯರಲ್ಲಿ ಸಾಮಾನ್ಯ ಬುದ್ಧಿಯು (Common sense) ತುಂಬ ಇತ್ತು. ನನ್ನದು ಹೆಚ್ಚು ತನ್ನದೇ ಹೆಚ್ಚು ಎಂದು ಹೋರಾಡಿ ಜಗಳವಾಡದೆ, ಪರಮತ ಸಹನೆ, ಸಹಾನುಭೂತಿ, ತಮ್ಮಂತೆಯೇ ಇತರರೂ ಎಂಬ ಸಮತಾ ಭಾವನೆ ಮತ್ತು ಸಹಕಾರಗಳು ಅವರ

ಹೃದಯದಲ್ಲಿ ಮೇಲಾಗಿದ್ದುವು. ಇದೂ ಧಾರ್ಮಿಕ ಸಂಸ್ಕೃತಿಯ ಉತ್ತಮ ಫಲವು.

ಈ ವಿಮರ್ಶೆಯಲ್ಲಿ ನಮ್ಮ ಈಗಿನ ಅಭಿಪ್ರಾಯಗಳನ್ನು ಮಂತ್ರಗಳಲ್ಲಿ ಸೇರಿಸಲಾಗುತ್ತಿದೆ ಎಂದೂ ಆದುದರಿಂದ ಈ ಮಂತ್ರಗಳ ಅರ್ಥವು ಹೀಗೆಯೇ ಸರಿ ಎಂದು ಒಪ್ಪಲಾಗುವುದಿಲ್ಲವೆಂದೂ ವಾದಿಸುವವರೂ ಇದಾರೆ. ಆದರೂ ಇವುಗಳಲ್ಲಿ ಎಲ್ಲವೂ ಅಸಂಭಾವ್ಯವೆಂದು ತೋರಿಸಲಾಗುವುದಿಲ್ಲವು. ಹೇಗೂ ಈ ವಿಮರ್ಶೆಯು ಕ್ರಮದಿಂದ ನಮ್ಮಲ್ಲೂ ವಿಚಾರಪರತೆಯು ಉದ್ಬುದ್ಧವಾಗಿ ತಿಳಿವಳಿಕೆಯು ಮುಂದುವರಿಯುವುದರಲ್ಲಿ ಸಂದೇಹವಿಲ್ಲವೆನ್ನಬಹುದು.

ಪ್ರಕೃತಿಯಲ್ಲಿರುವ ಕ್ರಮನಿಯಮಗಳು.

ದೇವರ ವಿಷಯದಲ್ಲಿ ಭಾರತಾರ್ಯರ ಭಾವವು ಅಂತರವಾದ ಧ್ಯಾನ ಜ್ಞಾನ (Intuition)ಗಳಿಂದ ಉಂಟಾಯಿತೆನ್ನಬಹುದಾದರೂ, ಅದು ಯುಕ್ತಿ ವಿಮರ್ಶೆ ಊಹೆಗಳಿಂದಲೂ ಉಂಟಾಗಿರಬೇಕೆನ್ನುವುದಕ್ಕೂ ಅವಕಾಶವಿದೆ. ಹೇಗೆಂದರೆ—ಒಂದು ಗಡಿಯಾರವನ್ನು ನೋಡಿದಾಗ ನಾವು ಅದನ್ನು ಮಾಡಿದವನೊಬ್ಬನಿರಬೇಕೆಂದೂ, ಅವನು ತಿಳಿವಳಿಕೆಯಲ್ಲಿ ಮೇಲಾದವನಾಗಿರಬೇಕೆಂದೂ, ಅವನಿಂದ ಆಗಿರುವ ಈ ಉಪಕಾರಕ್ಕಾಗಿ ಕೃತಜ್ಞತೆಗೆ ಅರ್ಹನಾಗಿರುವುದರಿಂದ ಅವನಿಗೆ ಮರ್ಯಾದೆ ಗೌರವಗಳು ಸಲ್ಲಬೇಕೆಂದೂ ನಾವು ಭಾವಿಸುವುದು ಸಹಜವಾಗಿರುತ್ತದೆ. ಇದಕ್ಕೆ ಕಾರಣವೇನೆಂದರೆ ಆ ಗಡಿಯಾರದಲ್ಲಿರುವ ಮೂರು ಅಂಶಗಳು—ಸೌಂದರ್ಯ, ಪ್ರಯೋಜನ, ಕ್ರಮ ಇವುಗಳು ನಮ್ಮ ಗಮನಕ್ಕೆ ಬರುತ್ತವೆ. ಅದನ್ನು ನೋಡಿದ ಕೂಡಲೆ ಅದರ ಅಂದ ಚಂದ ಆಕಾರಗಳು ನಮ್ಮ ಮನಸ್ಸನ್ನು ಆಕರ್ಷಿಸುತ್ತವೆ. ಯಾವಾಗ ಬೇಕಾದರೂ ಕಾಲವನ್ನು ತಿಳಿಯಬೇಕೆಂಬ ಉದ್ದೇಶ ಅಥವಾ ಪ್ರಯೋಜನವು ಅದರಿಂದ ಲಭಿಸುತ್ತಿರುತ್ತದೆ. ಎಲ್ಲಕ್ಕಿಂತಲೂ ಮೇಲಾಗಿ ಅರವತ್ತು ಸೆಕೆಂಡುಗಳಾದರೆ ಒಂದು ನಿಮಿಷವೂ, ಅರವತ್ತು ನಿಮಿಷಗಳಾದರೆ ಒಂದು ಗಂಟೆಯೂ, ಹನ್ನೆರಡು ಗಂಟೆ

ಳಾದರೆ ಒಂದು ಸುತ್ತು ಬಳಸುವಿಕೆಯೂ, ತಪ್ಪದೆ ಹೆಚ್ಚುಕಡಿಮೆ ಇಲ್ಲದೆ ಆಗುತ್ತಿರುತ್ತವೆ. ಇಂತಹ ಸೌಂದರ್ಯ, ಉದ್ದೇಶ, ಕ್ರಮ ಎಂಬ ಗುಣಗಳನ್ನು ನಾವು ಈ ಪ್ರಪಂಚದಲ್ಲೂ ಕಾಣಬಹುದು. ಒಳ್ಳೆಯ ಕಪ್ಪು ನೆಲದಲ್ಲಿ ಕಡಲೆ, ಗೋಧಿ, ಹತ್ತಿ ಮುಂತಾದ ಬೆಳೆಗಳೇ ಚೆನ್ನಾಗಿ ಆಗುತ್ತವೆ. ಈ ಬೆಳೆಗಳು ಕೆಂಪು ನೆಲದಲ್ಲಿ ಆಗುವುದಿಲ್ಲ. ಕೆಂಪು ನೆಲದಲ್ಲಿ ತೊಗರಿ, ಹೆಸರು, ಅಲಸಂದೆ ಬೆಳೆಗಳು ಚೆನ್ನಾಗಿ ಬೆಳೆಯುತ್ತವೆ. ಕರಿಯ ನೆಲದಲ್ಲಿ ಕಡಿಮೆ. ಹೀಗೆ ಭೂಗುಣದಲ್ಲಿ ಕೆಲವು ನಿಯಮಗಳಿವೆ. ಮಳೆಗಾಲದಲ್ಲಿ ಎಲ್ಲ ಬೆಳೆಗಳೂ ಬೆಳೆಯುತ್ತವೆ. ಆದರೆ ಹತ್ತಿಯೂ ಗೋಧಿಯೂ ತಲೆ ಎತ್ತುವುದಿಲ್ಲ. ಹುಣಸೆಯ ಫಲವು ಬೇಸಗೆಗೆ ಮೊದಲೇ ಹಣ್ಣಾಗಿ ಉದುರುವುದು. ಮಾವು ಹಲಸುಗಳು ನಿಯಮದಿಂದ ಬೇಸಗೆಯಲ್ಲೇ ಹಣ್ಣಾಗುವುವೇ ಹೊರತು ಬೇರೆ ಕಾಲದಲ್ಲಿ ಆಗುವುದಿಲ್ಲ. ವಸಂತಾದಿ ಋತುಗಳು ಕ್ರಮವಾಗಿ ಬರುತ್ತಿರುವುವು. ಹೀಗೆ ಕಾಲದಲ್ಲೂ ನಿಯಮವಿರುತ್ತದೆ. ಬೆಂಕಿ ಬಿಸಿಯಾಗಿಯೇ ಇರುತ್ತದೆ. ಉರಿ ಮೇಲಕ್ಕೇ ಹೋಗುತ್ತದೆ. ನೀರು ತಣ್ಣಗಿರುವುದೇ ಸ್ವಭಾವವು. ಅದು ತಗ್ಗಿಗೇ ಹರಿಯುತ್ತದೆ. ಶೈತ್ಯ ಹೆಚ್ಚಾದರೆ ನೀರು ಗಡ್ಡೆಗಟ್ಟುತ್ತದೆ. ಶಾಖ ಹೆಚ್ಚಾದರೆ ಆ ನೀರೇ ಆವಿಯಾಗುತ್ತದೆ. ಈ ರೀತಿಯಲ್ಲಿ ದೇಶ ಕಾಲ ವಸ್ತುಗಳಲ್ಲಿ ಒಂದೊಂದು ಬಗೆಯ ನಿಯಮವಿರುತ್ತದೆ. ಇದು ನಿಯಾಮಕನನ್ನು ಸೂಚಿಸುತ್ತದೆ. ಇಪ್ಪತ್ತುನಾಲ್ಕು ಗಂಟೆಗಳಿಗೆ ಒಂದಾವೃತ್ತಿ ಸೂರ್ಯೋದಯವೂ ಹಗಲು ರಾತ್ರಿಗಳಿಂದ ಒಂದು ದಿನವೂ, ಮುನ್ನೂರ ಅರವತ್ತೈದು ದಿನಗಳೂ ಆರು ಗಂಟೆಗಳಿಗೆ ಒಂದು ವರ್ಷವೂ ಎಂದರೆ, ಸೂರ್ಯನ ಸುತ್ತಲೂ ಭೂಮಿಯ ಒಂದು ಪ್ರದಕ್ಷಿಣೆಯೂ, ತಪ್ಪದೆ ಹೆಚ್ಚುಕಡಿಮೆ ಇಲ್ಲದೆ ಆಗುತ್ತಿರುತ್ತದೆ. ಇದರಂತೆಯೇ ಈ ಸೂರ್ಯ ಸಂಸ್ಥಾನದಲ್ಲಿರುವ ಚಂದ್ರ ಮೊದಲಾದ ಉಪಗ್ರಹಗಳೂ, ಬುಧ ಮುಂತಾದ ಗ್ರಹಗಳೂ ಕ್ಲುಪ್ತಕಾಲದ ಗತಿಯುಳ್ಳವಾಗಿವೆ. ಇದೇ ರೀತಿಯಲ್ಲಿ ಮಾವಿನ

ಬೀಜದಿಂದ ಮಾವಿನ ಹಣ್ಣುಗಳೂ ಬೇವಿನ ಬೀಜದಿಂದ ಬೇವಿನ ಹಣ್ಣುಗಳೂ ದೊರೆಯುತ್ತವೆಯೇ ಹೊರತು ಒಂದರಿಂದ ಇನ್ನೊಂದು ದೊರೆಯುವುದಿಲ್ಲ. ಇದೇ ಪ್ರಕಾರದಲ್ಲಿ ಶಿಶಿರ ವಸಂತ ಋತುಗಳಲ್ಲಿ ಮಲ್ಲಿಗೆಯ ಹೂವೂ, ಗ್ರೀಷ್ಮ ವರ್ಷ ಋತುಗಳಲ್ಲಿ ಜಾಜಿಯ ಹೂವೂ ದೊರೆಯುತ್ತದೆಯೇ ಹೊರತು ಇತರ ಕಾಲಗಳಲ್ಲಿ ದೊರೆಯುವುದಿಲ್ಲ. ಈ ಬಗೆಯ ಶಿಸ್ತಿಗೇ ಕ್ರಮವೆಂದು ಹೆಸರು. ಇದರಿಂದಲೇ ಜ್ಯೋತಿಶ್ಶಾಸ್ತ್ರಜ್ಞರು ಗ್ರಹಣಗಳ ಕಾಲವನ್ನು ಮುಂಚಿತವಾಗಿಯೇ ಕ್ಲುಪ್ತವಾಗಿ ಗೊತ್ತುಮಾಡಿ ಹೇಳುವುದೂ ಸಾಧ್ಯವಾಗಿದೆ. ಆದರೆ ಭೂಕಂಪ, ಕ್ಷಾಮ, ಪ್ಲೇಗು, ಯುದ್ಧ, ಸಂಘಾತ ಮರಣಗಳು— ಇವುಗಳಲ್ಲಿ ಕ್ರಮವೆಲ್ಲಿದೆ? ಎಂದು ಸಂಶಯವು ಬರಬಹುದು. ವೈಜ್ಞಾನಿಕರು ಇದುವರೆಗೆ ಕಂಡುಹಿಡಿದಿರುವ ತತ್ವಗಳು ಪ್ರಕೃತಿಯ ನಿಯಮ ರಹಸ್ಯಗಳಲ್ಲಿ ಕೆಲವು ಮಾತ್ರವಾಗಿವೆ ಎಂದೂ, ಇನ್ನೂ ಗೊತ್ತಾಗದೇ ಇರುವ ತಿಳಿಯಬೇಕಾಗಿರುವ ಪ್ರಕೃತಿಯ ರೀತಿ ನೀತಿಗಳು ಅಪಾರವಾಗಿವೆ ಎಂದೂ ವೈಜ್ಞಾನಿಕರೇ ಸಾರಿ ಹೇಳುತ್ತಿದ್ದಾರೆ. ವಿಮರ್ಶೆಯೂ ಶೋಧನೆ ಪ್ರಯೋಗಗಳೂ ಮುಂದುವರಿದ ಹಾಗೆಲ್ಲ ಇನ್ನೂ ಹೆಚ್ಚಿನ ತತ್ವಗಳೂ ಗೊತ್ತಾಗುವುದರಲ್ಲಿ ಸಂದೇಹವಿಲ್ಲವೆಂಬುದನ್ನೂ ಮರೆಯಬಾರದು.

ಇದರಂತೆಯೇ ಈ ಜಗತ್ತಿನಲ್ಲಿ ಸೌಂದರ್ಯವನ್ನೂ ಎಂದರೆ, ಹೃದಯವನ್ನು ದ್ರವಿಸುವಂತೆ ಮಾಡಬಲ್ಲ ಗುಣವನ್ನೂ ಕಾಣಬಹುದು. ಗಿಡಮರ ಬಳ್ಳಿಗಳೂ, ಹೂವು ಹಣ್ಣುಗಳೂ, ಸಂಧ್ಯಾರಾಗ, ಕಾಮನ ಬಿಲ್ಲು, ಬೆಳದಿಂಗಳು ಇವೆಲ್ಲವೂ ಸೌಂದರ್ಯವನ್ನು ಬೀರುತ್ತಿರುತ್ತವೆ. ಈ ಕ್ರಮ, ಸೌಂದರ್ಯಗಳಂತೆ ಉದ್ದೇಶ ವಿಶೇಷಗಳನ್ನೂ ಈ ಜಗತ್ತಿನಲ್ಲಿ ಮನಗಾಣಬಹುದು. ಜೀವರ ಮತ್ತು ಪ್ರಾಣಿಗಳ ಹಸಿವಿನ ನಿವಾರಣೆಗೆ ಆಹಾರವೂ, ಬಾಯಾರಿಕೆಯ ನಿವಾರಣೆಗೆ ನೀರೂ, ಶೈತ್ಯಜಾಡ್ಯ ನಿವಾರಣೆಗೆ ಚಟುವಟಿಕೆ ಕಾರ್ಯಗಳಿಗೆ ತಕ್ಕಂತೆ ಸೂರ್ಯನಿಂದ ಶಾಖವೂ, ಉಸಿರಾಡಿ ಬದುಕಲು ಗಾಳಿಯೂ,

ಇರಲೂ ಓಡಿಯಾಡಲೂ ಅವಕಾಶವು ಆಕಾಶದಿಂದಲೂ ಹೀಗೆ ಈ ಪ್ರಪಂಚದಿಂದಲೇ ಇವೆಲ್ಲ ಸಹಾಯಗಳೂ ದೊರೆಯುತ್ತವೆ. ಪ್ರಾಣಿಗಳೂ ಜೀವರೂ ಕ್ರಮವಾಗಿ ಅನುಭವ, ಸಹವಾಸ, ಉಪದೇಶ, ಧರ್ಮಾಚರಣೆಗಳಿಂದ ಸಂಸ್ಕೃತಿಯ ಮಟ್ಟದಲ್ಲಿ ಮೇಲಿನ ಅಂತಸ್ತುಗಳನ್ನು ಪಡೆಯಲೂ, ಕಡೆಗೆ ಶ್ರೇಷ್ಠ ಪುರುಷಾರ್ಥವಾದ ಮುಕ್ತಿಯನ್ನು ಪಡೆಯಲೂ, ತಕ್ಕ ಉಪಾಧಿಗಳನ್ನು ಎಂದರೆ ಶರೀರಗಳನ್ನು ಈ ಜಗತ್ತಿನಲ್ಲೇ ಈ ಪಂಚಭೂತಗಳಿಂದಲೇ ಪಡೆದು ಮುಂದುವರಿಯಬೇಕಾಗಿದೆ. ಇದು ಈ ಜಗತ್ತಿನಿಂದ ನೆರವೇರುವ ಉದ್ದೇಶವಾಗಿದೆ.

ಈ ಬಾಹ್ಯ ಪ್ರಪಂಚವನ್ನು ವೈಜ್ಞಾನಿಕರಂತೆ ಪರಿಶೀಲಿಸುತ್ತಿದ್ದ ವೈದಿಕಾರ್ಯರ ಮನಸ್ಸಿನಲ್ಲಿ ಈ ಎಲ್ಲಕ್ಕೂ ನಿಯಾಮಕವಾದ ವ್ಯವಸ್ಥಾಪಕವಾದ ದೇವತತ್ತ್ವವು, ಧರ್ಮತತ್ತ್ವವು, ವಿವೇಕಿಯಾದ ಚೈತನ್ಯಶಕ್ತಿಯ ತತ್ತ್ವವು ಹೇಗೆ ಹೊಳೆಯಿತು, ಬೆಳೆಯಿತು, ಬೇರೂರಿ ಬಲಗೊಂಡು ನಿಂತಿತೆಂಬ ವಿಷಯವನ್ನು ಈ ಪದ್ಯದಲ್ಲಿ ಸಂಗ್ರಹವಾಗಿ ನಿರೂಪಣೆಮಾಡಲು ಪ್ರಯತ್ನಿಸಲಾಗಿದೆ.

> "ಸೌಂದರ್ಯೋದ್ದೇಶ ಧರ್ಮಕ್ರಮ ಇತಿಗಮಕೈಃ ಜ್ಞಾಪ್ಯತೇಽತ್ರಪ್ರಪಂಚೇ
> ಸರ್ವಜ್ಞಃ ಸರ್ವಶಕ್ತಃ ನರಕೃತಿಫಲದಃ ಸೃಷ್ಟಿರಕ್ಷಾಂತಕರ್ತಾ ।
> ಮೃತ್ಸ್ನಸ್ಯ ಪ್ರಾಣಿಪುಂಸ್ಸು ಪ್ರಕಟವಿಕಸನಃ ಸರ್ವಭೂತಾತ್ಮಭೂತಃ
> ಸರ್ವಾಂತರ್ಯಾಮಿರೂಪಃ ಸಹಕೃತಿ ಸಮತಾಪ್ರೀತಿ ಧರ್ಮಸ್ವರೂಪಃ॥"

ದೇವರು ಜಗತ್ತಿನ ಸೃಷ್ಟಿ ಸ್ಥಿತಿ ಲಯಕಾರಣನು.

ಒಂದು ಗಡಿಯಾರವನ್ನು ನೋಡಿದ ಕೂಡಲೆ ನಾವು ಅದರ ವಿವಿಧವಾದ ಅಡಕವಾದ ಆಕಾರ, ಮೋಹಕವಾದ ಅಂದ ಚೆಂದ ಬಣ್ಣಗಳು, ಕಾಲವನ್ನು ಗೊತ್ತುಮಾಡಿಕೊಳ್ಳುವ ಉದ್ದೇಶದ ನೆರವೇರುವಿಕೆ, ಕ್ಲುಪ್ತವಾಗಿರುವ ಚಲನವಲನ ರೀತಿ ನೀತಿಗಳಲ್ಲಿರುವ ಕ್ರಮ ಇವುಗಳನ್ನು ಕಂಡು ಅಭಿನಂದಿಸುತ್ತೇವೆ. ಅಲ್ಲದೆ ಅಂತಹ ಉಪಯೋಗಕರವಾದ ವಸ್ತುವನ್ನು ರಚಿಸಿದವನ ಜಾಣತನ, ಬುದ್ಧಿಶಕ್ತಿ

ಗಳನ್ನು ಊಹಿಸಿ ಗೌರವಿಸುತ್ತೇವೆ ಇದರಂತೆಯೇ ಈ ಪ್ರಪಂಚ ದಲ್ಲೂ ಗಿಡಮರಬಳ್ಳಿಗಳೂ, ಗಿರಿ, ನದೀ ಕಾಡುಗಳೂ, ಎಲೆ ಹೂವು ಹಣ್ಣುಗಳೂ, ಬೆಳ್ಳಿ ಚಿನ್ನ ರತ್ನ ಮುತ್ತುಗಳೂ, ಕಾಮನಬಿಲ್ಲು, ಸಂಧ್ಯಾ ರಾಗ, ಬೆಳದಿಂಗಳು—ಇವೇ ಮುಂತಾದುವು ಸೌಂದರ್ಯವನ್ನು ಬೀರುತ್ತಾ ಸಂತೋಷವನ್ನೂ ಫಲವನ್ನೂ ಕೊಡುತ್ತವೆ. ಪ್ರಾಣಿಗಳ ದಿನಗಟ್ಟಲೆಯ ಜೀವನವೂ ಆಹಾರ ನೀರು ಬಟ್ಟೆ ಮನೆಗಳಿಂದ ಸಾಗು ತ್ತಿರುತ್ತದೆ. ಬಾಹ್ಯಪ್ರಕೃತಿಯೊಡನೆ ಪ್ರಾಣಿಗಳೂ ಜೀವರೂ ಸಹಕರಿ ಸುವ ರೀತಿಗಳೂ ಕಾಣಬರುತ್ತವೆ. ಈ ಜಗತ್ತಿನಲ್ಲಿರುವ ಪದಾರ್ಥ ಗಳು ನಾಲ್ಕು ವರ್ಗಗಳಿಗೆ ಸೇರುತ್ತವೆ. ಅವು ಯಾವುವೆಂದರೆ : ಜಡವಾದ ಮೃತ್ಪಾಷಾಣವರ್ಗ, ಬೆಳೆಯಬಲ್ಲವಾದರೂ ಸ್ಥಾವರವಾದ ಸಸ್ಯವರ್ಗ, ಹಿತಾಹಿತಪ್ರಾಪ್ತಿ ಪರಿಹಾರಗಳಿಗಾಗಿ ಚಲಿಸಬಲ್ಲ ಉಸಿ ರಾಡುವ ಪ್ರಾಣಿವರ್ಗ, ಮಾತನಾಡಬಲ್ಲ ತಿಳಿದು ವಿವೇಚಿಸಿ ಊಹಿಸ ಬಲ್ಲ ಮಾನವವರ್ಗ ಎಂದು ನಾಲ್ಕು ಬಗೆಯಾಗಿರುತ್ತವೆ. ಈ ನಾಲ್ಕು ಪಂಗಡಗಳಿಗೆ ಸೇರಿರುವ ದೇಹಗಳಲ್ಲಿ ಜೀವಾತ್ಮನ ಗುಣಶಕ್ತಿಗಳು ಕ್ರಮವಾಗಿ ಹೆಚ್ಚುಹೆಚ್ಚಾಗಿ ವಿಕಾಸವನ್ನು ಪಡೆಯುತ್ತಾ ಹೊರ ಹೊಮ್ಮುತ್ತಿರುತ್ತವೆ. ಈ ಗಮಕಗಳಿಂದ ಎಂದರೆ ಗುರುತು ಅಥವಾ ಚಿಹ್ನೆಗಳಿಂದ ಈ ಪ್ರಪಂಚವನ್ನು ನಿರ್ಮಿಸಿ ವ್ಯವಸ್ಥೆಯಿಂದ ಕ್ರಮವಾಗಿ ಸಾಗುತ್ತಿರುವಂತೆ, ಮುಂದುವರಿಯುತ್ತಿರುವಂತೆ ಮಾಡಿ ಕಾಪಾಡು ತ್ತಿರುವ ಚೈತನ್ಯಶಕ್ತಿಯೊಂದು ಇರಬೇಕೆಂದೂ, ಆ ಶಕ್ತಿಯೇ ದೇವ ರೆಂದೂ ಭಾರತಾರ್ಯರು ಮೊದಲು ಮನಗಂಡರು. ಈ ಅಂಶವನ್ನು “ ಯತೋವಾ....” ಎಂಬ ತೈತ್ತಿ. ಉ. ಶ್ರುತಿಯಲ್ಲಿ ಹೇಳಿದೆ. ಈ ಅಂಶ ವನ್ನು ವ್ಯಾಸರು “ ಜನ್ಮಾದ್ಯಸ್ಯಯತಃ ” ಎಂಬ ವೇದಾಂತ ಸೂತ್ರ ದಲ್ಲೂ, ಶಂಕರಾಚಾರ್ಯರು ಇದರ ವ್ಯಾಖ್ಯಾನ ಮಾಡುವಾಗ “ ಪ್ರತಿನಿಯತ ದೇಶ ಕಾಲನಿಮಿತ್ತ ಕ್ರಿಯಾಫಲಾಶ್ರಯಸ್ಯಜಗತಃ ” ಎಂದು ವಿವರಿಸಿರುತ್ತಾರೆ. ಆ ಶ್ರುತಿವಾಕ್ಯಗಳು ಹೀಗಿವೆ :—

ಯಸ್ಸರ್ವಜ್ಞಸ್ಸರ್ವವಿತ್ ಯಸ್ಯೈಷ ಮಹಿಮಾ ಭುವಿ ।
ದಿವ್ಯೇಬ್ರಹ್ಮಪುರೇಹ್ಯೇಷಃ ವ್ಯೋಮ್ನ್ಯಾತ್ಮಾ ಪ್ರತಿಷ್ಠಿತಃ॥ ಮು.ಉ.೧.೧.೯

ಯಸ್ಸರ್ವಜ್ಞಸ್ಸರ್ವವಿತ್ ಯಸ್ಯ ಜ್ಞಾನಮಯಂ ತಪಃ ।
ತಸ್ಮಾದೇತತ್ ಬ್ರಹ್ಮನಾಮರೂಪಮನ್ನಂ ಚ ಜಾಯತೇ ॥
—ಮುಂ ಉ. ೨. ೨. ೭.

ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ।
ಪುಟ ೮೭–೮೯.

ಪುರುಷಏವೇದಂ ಸರ್ವಂ ಯದ್ಭೂತಂ ಯಚ್ಚಭವ್ಯಂ । ಪು. ಸೂ. ೧. ೨
ಏತಾವಾನಸ್ಯಮಹಿಮಾ ತತೋಜ್ಯಾಯಾಂಶ್ಚಪೂರುಷಃ ಪು. ಸೂ. ೧. ೩.

ಅಲ್ಲದೆ ''ತಸ್ಯ ಯ ಆತ್ಮಾನ ಮಾವಿಸ್ತಾರಂ ವೇದ..'' ಪುಟ ೭೭ ನೋಡಿ.

ದೇವರು ಸರ್ವಶಕ್ತನೂ ಸರ್ವಜ್ಞನೂ.

ಆ ದೇವರು ಈ ಜಗತ್ಕಾರ್ಯಗಳೆಲ್ಲವನ್ನೂ ನೆರವೇರಿಸಬೇಕಾದರೆ ತಕ್ಕ ತಿಳಿವಳಿಕೆಯುಳ್ಳವನಾಗಿರಬೇಕಾದುದೂ ಆವಶ್ಯಕವಾಗಿದೆ. ಹಾಗೆಯೇ ಈ ಮಹಾ ಕಾರ್ಯವನ್ನು ನಿರ್ವಹಿಸಬೇಕಾದರೆ ಸರ್ವಶಕ್ತನೂ ಆಗಿರಬೇಕಾಗುತ್ತದೆ. ಆದುದರಿಂದ ದೇವರನ್ನು ಸರ್ವಜ್ಞನೆಂದೂ ಸರ್ವಶಕ್ತನೆಂದೂ ಕೊಂಡಾಡಿದರು. ಈ ದೇವರು ಮನುಷ್ಯರು ಮಾಡುವ ಕರ್ಮಗಳಿಗೆ, ಸತ್ಕರ್ಮ ದುಷ್ಕರ್ಮಗಳೆರಡಕ್ಕೂ ಫಲಗಳನ್ನು ಆಯಾ ಕಾಲ ದೇಶ ಸನ್ನಿವೇಶಗಳಲ್ಲಿ ಕೊಡಬಲ್ಲವನಾಗಿದ್ದಾನೆ. ಆ ದೇವರು ಹೀಗೆ ಎಲ್ಲಕ್ಕೂ ಪ್ರಭುವಾಗಿ ಆಳುತ್ತಿದ್ದಾನೆ. (ಈ ಸಂದರ್ಭದಲ್ಲಿ ಒಂದು ಸಂಶಯವು ತಲೆದೋರಬಹುದು. ಏನೆಂದರೆ ಕರ್ಮವು ತನ್ನ ಫಲವನ್ನು ತಾನೇ ಕೊಡುತ್ತದೆ. ಇದಕ್ಕೆ ದೇವರನ್ನೇಕೆ ಒಪ್ಪಬೇಕು ? ಎಂದು. ಇದು ಸ್ವಾಭಾವಿಕವಾಗಿ, ತನ್ನಷ್ಟಕ್ಕೆ ತಾನೇ, ವಿವೇಕಿಯಾದ ಚೈತನ್ಯಶಕ್ತಿಯ ಬೆಂಬಲವಿಲ್ಲದೆ, ಆಗಲಾರದು. ಏಕೆಂದರೆ—ಕರ್ಮವನ್ನು ಮಾಡುವ ಜೀವರು ನಾನಾ ಬಗೆಯ ರುಚಿ ಸಂಸ್ಕೃತಿಗಳ ಅಂತಸ್ತುಗಳಲ್ಲಿರುತ್ತಾರೆಂಬುದು ಕಾಣಬರುತ್ತದೆ. ಅವರೆಲ್ಲರೂ ತಮ್ಮ ಕರ್ಮಫಲಗಳನ್ನು ಪಡೆಯಲು ಪ್ರಯತ್ನಿಸಿ ಮುಂದುವರಿದರೆ ಪರಸ್ಪರವಾಗಿ ಘರ್ಷಣೆಯು ಆಗುತ್ತದೆ. ಕರ್ಮಗಳು ಯಾಂತ್ರಿಕ ರೀತಿಯಲ್ಲಿ ಫಲಗಳನ್ನು ಕೊಡಲು ಮುನ್ನುಗ್ಗಿದರೆ ಈ ಅಚೇತನವಾದ ಕರ್ಮಗಳಿಗೆ ಪರಸ್ಪರವಾಗಿ ತಿಕ್ಕಾಟವಾಗಿ

ಗೊಂದಲವಾಗುತ್ತದೆ. ಆದುದರಿಂದ ಯಾವ ಕರ್ಮವು ಯಾವಾಗ ಎಲ್ಲಿ ಯಾರಿಗೆ ಹೇಗೆ ಫಲವನ್ನು ಕೊಡಬೇಕೆಂಬುದನ್ನು ವ್ಯವಸ್ಥೆಗೊಳಿಸ ಬೇಕು. ರೈಲ್ವೆ ಟಿಕೆಟ್‌ಗಳನ್ನು ಸಿನೀಮಾ ಟಿಕೆಟ್‌ಗಳನ್ನು ಪಡೆಯುಲು ಮುನ್ನುಗ್ಗುವ ಜನರಿಗೆ ಘರ್ಷಣೆ ಆಗದಂತೆ "ಕ್ಯೂ" ಕ್ರಮವು ಹೇಗೆ ಆವಶ್ಯಕವಾಗಿದೆಯೋ ಹಾಗೆಯೇ ವ್ಯವಸ್ಥಾಪಕ ಚೇತನಶಕ್ತಿಯೊಂದರ ಅವಶ್ಯಕತೆ ಇರುತ್ತದೆ.) ಆ ವ್ಯವಸ್ಥಾಪಕ ಚೈತನ್ಯವೇ ದೇವರು ಎಂದು ತಿಳಿದು ಹೇಳಿದಾರೆ. "ಪುಣ್ಯೇನ ಪುಣ್ಯಂ ಲೋಕಂ ನಯತಿ, ಪಾಪೇನ ಪಾಪಂ ಉಭಾಭ್ಯಾಮೇವ ಮನುಷ್ಯಲೋಕಂ" ಪ್ರ.ಉ. ೩.೭. ಈ ಅರ್ಥವನ್ನು ಸಾರಿ ಹೇಳುತ್ತದೆ. ಈ ದೇವರು ಈ ಪ್ರಪಂಚದಲ್ಲಿ ತಮ್ಮ ತಮ್ಮ ಸತ್ಕರ್ಮ ದುಷ್ಕರ್ಮಗಳಿಗೆ ತಕ್ಕಂತಹ ಜನ್ಮಗಳನ್ನು ಪಡೆಯುತ್ತಿರುವ ಜೀವರಿಗೆ ಅವರ ಜೀವಿತ ಕಾಲದಲ್ಲಿ ಅವರ ಕರ್ಮಫಲಗಳಾದ ಸುಖ ಮತ್ತು ದುಃಖಗಳನ್ನೂ ಜನನಮರಣಗಳನ್ನೂ ಕೊಡುತ್ತಿರುತ್ತಾನೆಂದು ಒಪ್ಪಬೇಕಾಗುತ್ತದೆ. ಇದರಿಂದ ದೇವರಿಗೆ ವೈಷಮ್ಯ, ಪಕ್ಷಪಾತ, ನೈರ್ಘೃಣ್ಯ, ನಿರ್ದಯ, ಕಠೋರಚಿತ್ತತೆ ಮುಂತಾದ ದೋಷಗಳು ತಗಲುವುದಿಲ್ಲವು. ಹಾಗೆಯೇ ಜೀವರಿಗೂ ತಮ್ಮ ತಮ್ಮ ಸುಖ ದುಃಖಗಳ ಅನುಭವದಲ್ಲಿ ಅವರ ಕರ್ಮವು ಕಾರಣವಾಗಿರುವುದರಿಂದ ಕೃತಹಾನಿ ಅಕೃತಾಭ್ಯಾಗಮ ಮುಂತಾದ ದೋಷಗಳೂ ಸಂಭವಿಸುವ ಹಾಗಿಲ್ಲವು. ಅಷ್ಟೇ ಅಲ್ಲದೆ ಜೀವರು ತಮ್ಮ ಮೇಲ್ಮೆಕೀಳ್ಮೆಗಳಿಗೆ, ತಮ್ಮ ಆಗುಹೋಗುಗಳಿಗೆ ತಾವು ಹೊಣೆಗಾರರಾಗಿರುತ್ತಾರೆ. ಆದುದರಿಂದ ಯಾವಾಗಲೂ ಯಾರಿಗೂ ನಿರಾಶಾಭಾವ (pessimism)ಕ್ಕೆ ಎಡೆ ಇಲ್ಲದಂತಾಗಿ ಸ್ವಾತಂತ್ರ್ಯವೂ ಇರುತ್ತದೆ.

ದೇವರು ಎಲ್ಲಕ್ಕು ವ್ಯವಸ್ಥಾಪಕನು.

ಹೀಗೆ ದೇವರು ಈ ಜಗತ್ತಿನ ಸೃಷ್ಟಿ, ರಕ್ಷಣೆ ಎಂದರೆ ಕಾಪಾಡುವಿಕೆ, ಬೆಳೆದು ಮುಂದುವರಿಯುವಿಕೆ, ತಕ್ಕ ರೀತಿಯಲ್ಲಿ ಬಾಳುತ್ತಿರುವಿಕೆ ಮತ್ತು ಅದರ ಕಾರ್ಯವಾದ ಮೇಲೆ ಅದರ ಉಪಸಂಹಾರ—ಎಂಬ ಮೂರು ದೊಡ್ಡ ಮಹಾಕಾರ್ಯಗಳನ್ನು ನೆರವೇರಿಸುತ್ತಿರುತ್ತಾನೆ.

ಜೀವರು ತಮ್ಮ ಕರ್ಮಫಲಗಳನ್ನು ಅನುಭವಿಸಲು ಪದಾರ್ಥಗಳನ್ನೂ ಜನರನ್ನೂ ಸನ್ನಿವೇಶಗಳನ್ನೂ ಅವುಗಳ ಸಮಾಗಮ ವಿಯೋಗಗಳನ್ನೂ ದೇವರು ಅವರಿಗೆ ಒದಗಿಸುತ್ತಾ ಏರ್ಪಡಿಸುತ್ತಿರುತ್ತಾನೆ. ಈ ರೀತಿಯಲ್ಲಿ ಜೀವರೂ ತಮ್ಮ ತಮ್ಮ ಪ್ರಗತಿಯನ್ನು ಸಾಧಿಸಿಕೊಳ್ಳುತ್ತಾ ಮುಂದುವರಿಯುತ್ತಿರಲು ಆನುಕೂಲ್ಯವೂ ಅವಕಾಶವೂ ದೊರೆಯುತ್ತಿರುತ್ತದೆ. ಹೀಗೆ ಕ್ರಮ, ಸೌಂದರ್ಯ, ಉದ್ದೇಶಗಳನ್ನು ಒಳಗೊಂಡಿರುವ ಈ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದ ಚೈತನ್ಯವೇ ಸರ್ವಜ್ಞನೂ ಸರ್ವಶಕ್ತನೂ ಆಗಿರಬೇಕಾದ ಈಶ್ವರನೆಂದೂ ಬ್ರಹ್ಮವೆಂದೂ ವೈದಿಕ ಋಷಿಗಳು "ತೇಧ್ಯಾನ ಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ"। (ಶ್ವೇತಾಶ್ವತರ ಉಪ.) ಎಂದರೆ, ಆ ಉಪಾಸಕರಾದ ಋಷಿಗಳು ಮನಸ್ಸನ್ನು ಧ್ಯಾನಯೋಗದಲ್ಲಿ ನೆಲೆಗೊಳಿಸುವುದರಲ್ಲಿ ನಿರತರಾಗಿರುತ್ತಾ ಸ್ವಪ್ರಕಾಶರೂಪನಾದ ಆತ್ಮ ಚೈತನ್ಯದ ಶಕ್ತಿಯನ್ನು ತನ್ನ ಗುಣಗಳಾಗಿರುವ ಸತ್ವ ರಜಸ್ ತಮಸ್ ಎಂಬ ವಿಶೇಷ ರೂಪಗಳಿಂದ ವ್ಯಕ್ತವಾಗಿ ಗುರುತಿಸಲಾಗದೆ ಇರುವ ಮಾಯಾ ಸ್ವರೂಪವನ್ನು ಮನಗಂಡು, ಆ ಧ್ಯಾನಯೋಗ (intuition) ದಿಂದ ತಿಳಿದು ಹೇಳಿದ್ದಾರೆ. "ಯತೋವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತ್ಯಭಿಸಂವಿಶಂತಿ, ತತ್‌ಬ್ರಹ್ಮ ಇತಿ" ತೈ. ಉ. ಭೃಗುವಲ್ಲೀ. ೧. ಯಲ್ಲಿ ಹೇಳಿದೆ.

ದೇವತತ್ತ್ವವು ಒಂದೇ.

ಈ ತತ್ತ್ವವನ್ನೇ "ಏಕಂ ಸತ್" ಎಂದು "ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ ಅಥೋದಿವ್ಯಸ್ಸಸುಪರ್ಣೋಗರುತ್ಮಾನ್ । ಏಕಂ ಸತ್ ವಿಪ್ರಾ ಬಹುಧಾ ವದಂತಿ ಅಗ್ನಿಂ ಯಮಂ ಮಾತರಿಶ್ವಾನಮಾಹುಃ॥ ಎಂದರೆ, ಈ ಪ್ರಪಂಚದ ಆವಿರ್ಭಾವ, ಕ್ರಮವಾಗಿ ಮುಂದುವರಿಯುತ್ತಿರುವಿಕೆ, ಇವುಗಳಿಗೆ ಕಾರಣವಾಗಿರುವ ತತ್ವವು ಒಂದೇ ಆಗಿದೆ. ಆ ತತ್ತ್ವವನ್ನು ವಿಪ್ರರು, ತಿಳಿವಳಿಕೆಯುಳ್ಳ ಆಚಾರಶೀಲರಾದ ಧಾರ್ಮಿಕ

ರಾದ ಜನರು, ಬಹುಧಾ ನಾನಾ ಬಗೆಯ ನಾಮರೂಪಗಳಿಂದ, ಇಂದ್ರ, ಮಿತ್ರ, ವರುಣ, ಅಗ್ನಿ, ಯಮ, ವಾಯು ಮುಂತಾದ ಹೆಸರು ಮತ್ತು ಗುಣಶಕ್ತಿಗಳಿಂದ ಕೂಡಿರುವ ದೇವರೆಂದು ವ್ಯವಹರಿಸುತ್ತಾ ಆರಾಧಿಸುತ್ತಾ ಇಷ್ಟಾರ್ಥಗಳನ್ನು ಪಡೆಯುತ್ತಿರುತ್ತಾರೆ ಎಂದು ಹೇಳಿದ್ದಾರೆ. ಈ ಏಕತತ್ವದ ಶಕ್ತಿಗೆ ವೇದಾಂತದಲ್ಲಿ ಮಾಯೆ ಎಂದೂ, ಈ ತತ್ವಕ್ಕೆ ಸಗುಣಬ್ರಹ್ಮ, ಅಪರಬ್ರಹ್ಮ, ಹಿರಣ್ಯಗರ್ಭ ಎಂದು ಮುಂತಾಗಿಯೂ, ಸಾಂಖ್ಯದರ್ಶನದಲ್ಲಿ ಪ್ರಕೃತಿ ಅಥವಾ ಪ್ರಧಾನ ಎಂದೂ, ಶಾಕ್ತ ತಂತ್ರಗಳಲ್ಲಿ ಪರಾಶಕ್ತಿ, ಪರಮೇಶ್ವರೀ, ಪರಾಸಂವಿತ್, ಭುವನೇಶ್ವರೀ, ತ್ರಿಪುರಸುಂದರೀ ಎಂದೂ ಇತಿಹಾಸ ಪುರಾಣಗಳಲ್ಲಿ ದೇವೀ, ಜಗಜ್ಜನನೀ, ಮಾತಾ ಎಂದರೆ, ತಾಯಿ ಎಂದೂ ವ್ಯವಹಾರವಿದೆ. ಈ ತತ್ವವನ್ನೇ ಸಗುಣಸಾಕಾರ ಲಿಂಗವಿಶಿಷ್ಟ ರೂಪದಲ್ಲಿ ಶೈವರು ಪಾರ್ವತೀ ಪರಮೇಶ್ವರ, ಉಮಾಮಹೇಶ್ವರ ಎಂದು ಪೂಜಿಸುತ್ತಾರೆ. ಹಾಗೆಯೇ ವೈಷ್ಣವರು ಲಕ್ಷ್ಮೀನಾರಾಯಣನೆಂದು ಆರಾಧಿಸುತ್ತಾರೆ. ಅಲ್ಲದೆ ಪುರುಷರೂಪದಲ್ಲಿ ತಂದೆ ಎಂದೂ ಸ್ತ್ರೀ ರೂಪದಲ್ಲಿ ತಾಯಿಯೆಂದೂ ಈ ತತ್ವವನ್ನೇ ಭಾವಿಸುತ್ತಾರೆ. ಈ ತತ್ವವನ್ನೇ ಎಂದರೆ ನಿರಾಕಾರವಾಗಿಯಾದರೂ ಸಗುಣವಾಗಿರುವ ತತ್ವವನ್ನೇ "ಗಾಡ್" ಎಂದು ಕ್ರಿಶ್ಚಿಯನ್ ಜನರು ಆರಾಧಿಸುತ್ತಾರೆ. ಮುಸಲ್ಮಾನರು ಈ ತತ್ವವನ್ನೇ ಅಲ್ಲಾ, ಖುದಾ ಎಂದು ಧ್ಯಾನಿಸುತ್ತಾರೆ. ಪಾರ್ಸಿ ಜನರು ಮಜ್ದಾ ಎಂದೂ, ಬೌದ್ಧರು ಧರ್ಮ, ಬುದ್ಧನೆಂದೂ ಜೈನರು ಜಿನ, ಅರ್ಹನ್ ಎಂದೂ ಪೂಜಿಸುತ್ತಾರೆ ಎಂಬುದನ್ನು ಗಮನಿಸಬಹುದು. ಇಲ್ಲಿ ಗಮನಿಸಬೇಕಾದ ವಿಶೇಷವೇನೆಂದರೆ ಕ್ರಿಶ್ಚಿಯನ್ನರೂ, ಮುಸ್ಲೀಮರೂ ಏಕಜನ್ಮವಾದಿಗಳು. ಈ ವಿಷಯವನ್ನು ಸ್ವಲ್ಪ ವಿವರವಾಗಿ ಮುಂದೆ ನಿರೂಪಿಸಲಾಗುತ್ತದೆ. ಹಿಂದೆಯೂ ಕೆಲವಂಶಗಳನ್ನು ಪುಟ ೫ರಲ್ಲಿ ಸೂಚಿಸಲಾಗಿದೆ.

ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ॥
—ಭ.ಗೀ. ೪. ೩೮.

ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಅರ್ಜುನನನ್ನು ಕುರಿತು ಪ್ರಸಂಗವಶದಿಂದ ಹೀಗೆ ಹೇಳಿದಾನೆ.ಎಂದರೆ,

ಜ್ಞಾನದ ಉತ್ಕರ್ಷ. ತಿಳಿವಳಿಕೆಗೆ ಸಮಾನವಾದ ಪಾವನವಾದ ಪದಾರ್ಥವು ಈ ಜಗತ್ತಿನಲ್ಲಿ ಮತ್ತೊಂದಿಲ್ಲವು.

ಜ್ಞಾನದಿಂದ ಸುಖ ಶಕ್ತಿಗಳುಂಟು. ಈ ಪ್ರಪಂಚದಲ್ಲಿರುವ ಎಲ್ಲ ಜನರೂ ತಿಳಿವಳಿಕೆಯನ್ನು ಪಡೆಯಲು ಬಯಸುತ್ತಿರುತ್ತಾರೆ. ಇದು, ಈ ಜ್ಞಾನೇಚ್ಛೆಯು ಜಿಜ್ಞಾಸೆಯು ಮಾನವನ ಹುಟ್ಟುಗುಣ ವಾಗಿದೆ. ಸ್ವಾಭಾವಿಕವೂ, ಅನಿವಾರ್ಯವೂ ಆಗಿರುತ್ತದೆ ಎನ್ನ ಬೇಕಾಗಿದೆ. ಏಕೆಂದರೆ, ಹುಟ್ಟುತ್ತಿರುವಾಗಿನಿಂದಲೂ ಮಾನವರಲ್ಲಿ ಉಂಟಾಗಿರುವ ಗುಣವನ್ನು ಹುಟ್ಟುಗುಣವೆನ್ನಬೇಕು. ಈ ಗುಣವು ಈ ಕುತೂಹಲವು ಮಕ್ಕಳಲ್ಲೂ ಕಾಣಬರುತ್ತದೆ. ಮಕ್ಕಳಿಗೆ ಮಾತು ಬಂದ ಕೂಡಲೆ ಅವು ಈ ಸ್ವಭಾವವನ್ನು ಪ್ರಕಟಿಸುತ್ತವೆ. ಮಕ್ಕಳು ತಮ್ಮ ಸಮೀಪದಲ್ಲಿರುವ ಹಿರಿಯರನ್ನಾಗಲೀ ಸಂಗಡಿಗರನ್ನಾಗಲೀ ಕುರಿತು “ಇದು ಏನು ? ಇದು ಏಕೆ ? ಇದು ಹೇಗೆ ?” ಎಂದು ಮುಂತಾಗಿ ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತವೆ. ಹೊಸ ಹೊಸ ವಿಷಯಗಳನ್ನು ಕೇಳಿ ತಿಳಿದುಕೊಳ್ಳುತ್ತಿರಬೇಕೆಂದು ಯಾರೂ ಆ ಮಕ್ಕಳಿಗೆ ಹೇಳಿಕೊಟ್ಟಿರುವುದಿಲ್ಲ. ಸಾರ್ವತ್ರಿಕವಾದ ಅನಿವಾರ್ಯವಾದ ಈ ಜಿಜ್ಞಾಸೆಯನ್ನೇ “Inner Urge” ಎಂದು ವೈಜ್ಞಾನಿಕರೂ ದಾರ್ಶನಿಕರೂ ಹೇಳುತ್ತಿದಾರೆ. ಬೆದರಿಸದೆ ಬೇಸರಗೊಳ್ಳದೆ ಈ ಪ್ರಶ್ನೆಗಳಿಗೆ ಉತ್ತರಗಳನ್ನು ತಮಗೆ ಒಪ್ಪುವಂತೆ ತಿಳಿಯುವಂತೆ ಹೇಳುವವರನ್ನು ಪಡೆದರಂತು ಆ ಮಕ್ಕಳ ಪ್ರಶ್ನೆಗಳಿಗೂ ಸಂತೋಷಕ್ಕೂ ಪಾರವೇ ಇರುವುದಿಲ್ಲ. ಇದರಂತೆಯೇ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳುವುದರಲ್ಲೂ ಆ ತಿಳಿವಳಿಕೆಯನ್ನು ಇತರರಿಗೂ ಹರಡುವುದರಲ್ಲಿಯೂ ಮಾನವರಿಗೆ ಆದರವು ಸಹಜವಾಗಿದೆ. ಈ ಗುಣವನ್ನೂ ನಾವು

ಮಕ್ಕಳಲ್ಲೂ ಕಾಣುತ್ತೇವೆ. ಅವು ತಾವು ಪಡೆದಷ್ಟು ತಿಳಿವಳಿಕೆಯಲ್ಲಿ ತೃಪ್ತರಾಗಿ ಸುಮ್ಮನಿರದೆ ಬೇರೆ ಬೇರೆಯ ವಿಷಯಗಳಲ್ಲಿ ಪ್ರಶ್ನೆಗಳನ್ನು ಮುಂದುವರಿಯಿಸುತ್ತಲೇ ಇರುತ್ತವೆ. ಅಲ್ಲದೆ, ಆ ಮಕ್ಕಳು ತಮಗೆ ತಿಳಿದುದನ್ನು ತಮ್ಮ ಜತೆಗಾರರಿಗೆ ತಿಳಿಸಿಬಿಡುತ್ತವೆ. ಹೆಮ್ಮೆಯಿಂದಲೂ ಸಂತೋಷದಿಂದಲೂ ಅವು ಹಾಗೆ ಮಾಡುತ್ತವೆ. ಒಂದೊಂದು ವೇಳೆ ಹಿರಿಯರು ಯಾರಿಗೂ ಹೇಳಬೇಡವೆಂದು ನಿಷೇಧಿಸಿದ್ದರೂ, ಆ ನಿಷೇಧವನ್ನು ಲೆಕ್ಕಿಸದೆಯೇ ಇತರರಿಗೆ ತಿಳಿಸಿಬಿಡುತ್ತವೆ. ಇದರಲ್ಲಿ ಅವಿಧೇಯತೆಯು ಇಲ್ಲವು. ಜ್ಞಾನಪ್ರಸಾರಣವು ಮಾನವನಿಗೆ ಸ್ವಾಭಾವಿಕವಾದುದು, ಅನಿವಾರ್ಯವಾದ ಸಂತೋಷಕರವಾದ ಕಾರ್ಯವಾಗಿದೆ—ಎಂಬುದನ್ನು ನಾವು ಗಮನಿಸಬೇಕು. ಈ ಕಾರಣದಿಂದಲೇ ತಿಳಿವಳಿಕೆಯು ತುಂಬಿರುವ ಗುರುವು, ಸ್ತನ್ಯವು ತುಂಬಿರುವ ತಾಯಿಯಂತೆ, ಮಗುವಿಗೆ ಹಾಲನ್ನು ಉಣ್ಣಿಸಿ, ಹಗುರ, ಸಂತೋಷ, ಧನ್ಯತೆಗಳನ್ನು ಪಡೆಯುತ್ತಾ ಆನಂದಿಸುವಂತೆ, ಗುರುವು ಶಿಷ್ಯನಿಗೆ ಉಪದೇಶವನ್ನು ಮಾಡಿ, ಅಥವಾ ಗ್ರಂಥಗಳನ್ನು ಬರೆದು ಪ್ರಚಾರಮಾಡಿ, ಕೃತ ಕೃತ್ಯನಾದಂತೆ, ತನ್ನ ಕರ್ತವ್ಯ ಧರ್ಮವನ್ನು ತಾನು ನೆರವೇರಿಸಿದಂತೆ ಆನಂದಿಸುತ್ತಾನೆ. ಈ ತತ್ತ್ವ ಜಿಜ್ಞಾಸೆಯು, ಜ್ಞಾನ ಪ್ರಚಾರದ ಕಾರ್ಯದಲ್ಲಿ ಆದರದ ಫಲವಾಗಿ ಗುರುಶಿಷ್ಯರಲ್ಲಿ ಪಾಠ ಪ್ರವಚನಗಳೂ, ಗ್ರಂಥರಚನೆಯೂ, ಪುರಾಣಗಳ ಪಠನ ವ್ಯಾಖ್ಯಾನಗಳೂ, ಉಪನ್ಯಾಸಗಳೂ ರೂಢಿಗೆ ಬಂದಿವೆ. ಇದರಿಂದಲೇ ಸರ್ಕಾರದವರೂ ಸಂಸ್ಕೃತಿ ಮತ್ತು ಸಾಹಿತ್ಯಗಳ ಅಭಿವೃದ್ಧಿಗೆ ಪ್ರತ್ಯೇಕವಾಗಿ ಒಂದು ಇಲಾಖೆಯನ್ನೇ ಪ್ರಾರಂಭಿಸಿ ಉಪನ್ಯಾಸ, ಗಮಕಕಲೆಯಿಂದ ಕೂಡಿ ಹೆಚ್ಚು ಹಿತವಾಗಿರುವ ಪುರಾಣ ಮುಂತಾದ ಸಾಹಿತ್ಯ ಪಠನ, ಪ್ರವಚನ, ಲಾವಣಿಗಳ ಗಾನ ಮುಂತಾದ ರೀತಿಯಲ್ಲಿ ಜನ ಜೀವನದ ಮತ್ತು ಪುರುಷಾರ್ಥ ಸಾಧನವಾಗಿರುವ ತಿಳಿವಳಿಕೆಯ ಮಟ್ಟವನ್ನು ಮೇಲ್ಪಡಿಸಲು ಮುಂದುವರಿಯುತ್ತಾ ಈ ಅಂಶದಲ್ಲೂ ಇತರ ಸರ್ಕಾರಗಳಿಗೂ ಜನರಿಗೂ ಉತ್ತಮ ಉದಾಹರಣೆಯನ್ನು

ತೋರಿಸುತ್ತಿದ್ದಾರೆಂದರೆ ತಪ್ಪಾಗಲಾರದು, ಅತಿಶಯೋಕ್ತಿಯೂ ಇಲ್ಲವು.

ಜ್ಞಾನಾರ್ಜನೆ ಮಾನವ ಸ್ವಭಾವ.

ಈ ಜ್ಞಾನ ಪಿಪಾಸೆಯು ಮಾನವನ ಸಾಮಾನ್ಯವಾದ ಅನಿವಾರ್ಯವಾದ ಗುಣವಾದುದರಿಂದಲೇ ವೈದಿಕ ಋಷಿಗಳೂ ಹೀಗೆ ಆಶಿಸಿರುತ್ತಾರೆ. "ತಮಸೋ ಮಾಜ್ಯೋತಿರ್ಗಮಯ, ಮೃತ್ಯೋರ್ಮಾಽಮೃತಂ ಗಮಯ, ಅಸತೋ ಮಾ ಸದ್ಗಮಯ" ಬೃ.ಉ. ೧-೩-೨೮ ಎಂದು ಜೀವಾತ್ಮನು ತನ್ನ ಅಂತರಾತ್ಮನಲ್ಲಿ ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತಿರುವುದು ಕಂಡುಬರುತ್ತದೆ. ಇದರಿಂದಲೇ ನಮ್ಮ ಭಾರತ ವರ್ಷದಲ್ಲಿ ಸಾಹಿತ್ಯವು ಕನಿಷ್ಠಪಕ್ಷದಲ್ಲೂ ಸುಮಾರು ಐದು ಸಾವಿರ ವರ್ಷಗಳಿಂದ ಬೆಳೆದು ಬಂದಿದೆ ಈ ಒಳ್ಳೆಯ ಗುಣದಿಂದ ಅವರು ಸಂತೋಷಪಟ್ಟುದರಿಂದಲೇ ವೈದಿಕಾರ್ಯರಿಂದ ಮೊದಲಾದ ಈ ಸಾಹಿತ್ಯದ ರಚನೆ ರಕ್ಷಣೆಗಳು ಇದುವರೆಗೂ ಅನುಸ್ಯೂತವಾಗಿ ಅವಿಚ್ಛಿನ್ನವಾಗಿ ನಡೆದುಬಂದು ಮುಂದುವರಿಯುತ್ತಿವೆ. ಸಂಸ್ಕೃತಿಯ ಸ್ವರೂಪವು ಸಾಹಿತ್ಯದಲ್ಲಿ ಉಲ್ಲೇಖವನ್ನು ಪಡೆಯುತ್ತದೆ, ಕಾಲ ಕ್ರಮದಲ್ಲಿ ಸಂಸ್ಕೃತಿಯನ್ನು ಸಾಹಿತ್ಯವೂ, ಸಾಹಿತ್ಯವನ್ನು ಸಂಸ್ಕೃತಿಯೂ ಪರಸ್ಪರವಾಗಿ ಮೇಲ್ಪಡಿಸುತ್ತಿರುತ್ತವೆ. ಆದುದರಿಂದಲೇ ಸಾಹಿತ್ಯವನ್ನು ಜನಜೀವನದ, ಪ್ರಕೃತಿಸೌಂದರ್ಯದ, ಪ್ರತಿಬಿಂಬವೆಂದು ವಿಮರ್ಶಕರೆಲ್ಲರೂ ಸಾರಿರುತ್ತಾರೆ. (Poetry holds mirror up to life.) "A poet is made by the age in which he lives and at the same time he makes the age also" ಎಂದೂ ಹೇಳುತ್ತಾರೆ. ಎಂದರೆ, ಕವಿಯು ತಾನಿರುವ ಕಾಲದಲ್ಲಿ ದೊರೆಯುವ ತಿಳಿವಳಿಕೆ ಸಂಸ್ಕೃತಿಗಳನ್ನು ತಾನು ಅನುಭವಿಸಿ ತನ್ನ ಗ್ರಂಥಗಳಲ್ಲಿ ವರ್ಣಿಸಿರುತ್ತಾನೆ. ಕವಿಗಳ ಗ್ರಂಥಗಳನ್ನು ಜನರು ಸಹೃದಯರಾದವರು ಓದುತ್ತಾ ಆ ಅಭಿಪ್ರಾಯಗಳನ್ನು ತಮ್ಮ ದಿನಗಟ್ಟಲೆಯ ಜೀವನ ಕ್ರಮದಲ್ಲೂ

ಅಳವಡಿಸಿಕೊಳ್ಳುತ್ತಾ ಮುಂದುವರಿಯುತ್ತಿರುತ್ತಾರೆ ಎಂದು ತಾತ್ಪರ್ಯವು. ಸಾಹಿತ್ಯ ಸಂಸ್ಕೃತಿಗಳು ಪರಸ್ಪರ ಪೋಷಕಗಳು.

ಕಲಾವತಃ ಸ್ಯೈವ ಕಲಾ ಯಯ್ಯಾಧಃ ಕ್ರಿಯತೇ ಭವಃ |
ಅನ್ಯಾಭಿಶ್ಚ ಕಲಾಭಿಃ ಕಿಂ ಯಾಭಿರಂಕಃ ಪ್ರದರ್ಶ್ಯತೇ ||

ಸಂಸ್ಕೃತಿಯೂ ಕಲೆಗಳೂ.

ಹದಿನಾರು ಕಲೆಗಳುಳ್ಳ ಚಂದ್ರನ ಕಿರಣಗಳಲ್ಲಿ ಆ ಬಿದಿಗೆ ಚಂದ್ರನ ಕಲೆಯೇ ಶ್ರೇಷ್ಠವಾದುದು. ಏಕೆಂದರೆ, ಇತರ ಕಲೆಗಳು ಅಷ್ಟು ಶ್ಲಾಘ್ಯಗಳೆನಿಸಿಕೊಳ್ಳಲಾರವು. ಹೇಗೆಂದರೆ, ಆ ಕಲೆಯನ್ನು ಭವನು, ಶಿವನು, ಅಭಿನಂದಿಸುವಂತೆ ಶಿರಸ್ಸಿನಲ್ಲಿ ಧರಿಸಿ ಮನ್ನಿಸಿದ್ದಾನೆ. ಇತರ ಕಲೆಗಳಲ್ಲಿ ಈ ಗುಣ ವಿಶೇಷವಿಲ್ಲದಿರುವುದು ಮಾತ್ರವಲ್ಲದೆ ದೋಷವೂ ಇದೆ. ಹೇಗೆಂದರೆ ಇತರ ಕಲೆಗಳು ಸೇರಿದರೆ ಅದರಿಂದ ಚಂದ್ರನಲ್ಲಿ ಕಳಂಕವು ಕಾಣುವಂತಾಗುತ್ತದೆ. ಅಲ್ಲದೆ ಕಲಾಭಿನಂದನದ ಆನಂದದಲ್ಲಿ ಈ ನಮ್ಮ ಸಾಂಸಾರಿಕವಾದ ಸುಖ ದುಃಖಗಳ ಹೊಡೆತಗಳು ತಪ್ಪಿ ವಿದ್ಯಾನಂದದಲ್ಲಿರುತ್ತೇವೆ. "ಕಲಾರತ್ನಂ ಗೀತಂ" ಎಂದರೆ, ಕುಶಲ ಕಲೆಗಳಲ್ಲಿ ಶ್ರೇಷ್ಠವಾದುದು ಗಾನಕಲೆ. ಏಕೆಂದರೆ ಅದು ಎಲ್ಲರಿಗೂ ಸಂತೋಷಕರವಾಗಿರುತ್ತದೆ—ಎಂದು ಒಬ್ಬ ಕವಿಯು ಹೇಳಿದರೆ, ಇನ್ನೊಬ್ಬ ಕವಿ ಶ್ರೇಷ್ಠನು "ಕಲಾಸೀಮಾ ಕಾವ್ಯಂ" ಎಂದು ವರ್ಣಿಸಿದ್ದಾನೆ. ಎಂದರೆ, ಲಲಿತ ಕಲೆಗಳಲ್ಲಿ ಕಾವ್ಯವೇ ಉತ್ತಮೋತ್ತಮವಾಗಿರುವ ಕಲೆಯಾಗಿದೆ. ಏಕೆಂದರೆ,

"ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಃ (ಭುಜ)ಸ್ತನದ್ವಯಂ |
ಏಕಮಾಪಾತ ಮಧುರಂ ಅನ್ಯದಾ ಲೋಚನಾವಧಿ ||"

ಎಂದರೆ, ಸಂಗೀತವೂ ಸಾಹಿತ್ಯವೂ ಕಲಾಭಿಮಾನಿ ದೇವತೆಯಾದ ಸರಸ್ವತೀ ದೇವಿಗೆ ಎರಡು ಸ್ತನ (ಭುಜ)ಗಳಂತಿವೆ. ಅವುಗಳಲ್ಲಿ ಒಂದಾದ ಗಾನ ಕಲೆಯು ಕಿವಿಗೆ ಕೇಳಿಸುತ್ತಿರುವವರೆಗೆ ಮಾತ್ರ ಮಧುರವಾಗಿ ಸುಖಕರವಾಗಿರುತ್ತದೆ. ಇನ್ನೊಂದಾದ ಕಾವ್ಯ

ಕಲೆಯು, ಧ್ವನಿಕಾವ್ಯವು, ವಿಮರ್ಶಕನ ಬುದ್ಧಿ ಸಾಮರ್ಥ್ಯಕ್ಕೆ ಅನು ಸಾರವಾಗಿ ಅನಂತವಾಗಿ ಸಂತೋಷಕರವಾಗಿರುತ್ತದೆ. ವಿದ್ಯಾ ನಂದದ ಪರಾಕಾಷ್ಠೆಗೆ ನಮ್ಮನ್ನು ತಲಪಿಸುತ್ತದೆ. ಉತ್ತಮವಾದ ಸಂಸ್ಕೃತಿಯಿಂದ ಶ್ಲಾಘ್ಯವಾದ ಕಲಾಕೃತಿಗಳು ಹೊರಹೊಮ್ಮುತ್ತವೆ. ಕಲಾಕೃತಿಗಳು ಸಂಸ್ಕೃತಿಯ ಕೆನೆಯಂತೆ ಉದ್ಭವಿಸುತ್ತವೆ. ಕಾವ್ಯ ರಚನೆ, ಸಂಗೀತ, ಚಿತ್ರಲೇಖನ, ಪ್ರತಿಮಾ ರಚನೆ, ವಾಸ್ತುಶಿಲ್ಪ-ಇವು ಗಳನ್ನು ಕುಶಲಕಲೆಗಳೆಂದು ಹೇಳುತ್ತಾರೆ. ಕಲೆಯ ಆದರ್ಶವು ತನ್ನಿಂದ ಜನದ ಹೃದಯದಲ್ಲಿ ಮಿನುಗುವ ಹೊಂಬೆಳಕಿನಿಂದ ಸಾರ್ವ ಜನಿಕ ಜೀವನವು ಪುರುಷಾರ್ಥಗಳ ಸಾಧನೆಯ ಕಡೆಗೆ ತಿರುಗುವಂತೆ ಮಾಡುವುದೇ ಆಗಿರುತ್ತದೆ. ಸಾಂಸಾರಿಕವಾದ ದುಃಖವೂ ಮರೆ ಯಾಗುತ್ತದೆ.

ಸಾಹಿತ್ಯ ಸಂಸ್ಕೃತಿಗಳ ಸಂಬಂಧ ಫಲಗಳನ್ನು ಈ ಪದ್ಯದಲ್ಲಿ ನಿರೂಪಿಸಲಾಗಿದೆ.—

"ಸಾಹಿತ್ಯಂ ಜನಜೀವನಸ್ಯ ಮುಕುರಾದರ್ಶಃ ಸದಾ ನಿರ್ಮಲಃ
ಬಿಂಬಾನೀಹ ಯತೋ ವ್ಯತೀತ ಸಮಯೋ ದೇಶೇಷ್ವಪಿ ಯೋ ದರ್ಶಯೇತ್।
ಆಶಾಭಂಗವಿಯೋಗ ವಿಹ್ವಲಜನಂ ಚಾ ಶ್ವಾಸ್ಯ ಯಸ್ತೋಷಯೇತ್
ಮೋಹೋನ್ಮೂಲನ ಶಾಂತಿ ಸೌಖ್ಯಕಲನೇ ಯೋ ರತ್ನದೀಪಾಯತೇ ॥"

ಉತ್ತಮ ಗ್ರಂಥಗಳ ಸಮುದಾಯಕ್ಕೆ ಸಾಹಿತ್ಯವೆಂದು ಹೆಸರಿದೆ. ಗ್ರಂಥಗಳಲ್ಲಿನ ಉತ್ತಮತ್ವವು ಅವುಗಳಲ್ಲಿರುವ ಗುಣಗಳನ್ನು ಅವ ಲಂಬಿಸಿರುತ್ತದೆ. ಕಾಲಕ್ರಮದಲ್ಲಿ ಮುಂದುಮುಂದಿನ ತಲೆಮಾರಿನ ಜನರನ್ನು ಆ ಗುಣಗಳು ಒಲಿಸಿಕೊಂಡರೆ, ಆ ಗುಣಗಳು ಮುಂದಿನ ಜನರಿಗೂ ಒಲಿದುಬರುವಂತಹವಾಗಿದ್ದರೆ, ಅವರೂ ಆ ಗ್ರಂಥಗಳನ್ನು ಓದುತ್ತಲೂ ಅಭಿನಂದಿಸುತ್ತಲೂ ಕಾಪಾಡಿಕೊಂಡು ಬರುತ್ತಾರೆ. ಅಂತಹ ಗುಣವಿಲ್ಲದ ಗ್ರಂಥಗಳು ಜನರಿಂದ ರಕ್ಷಣೆಯನ್ನು ಪಡೆಯ ಲಾರದೆ ನಷ್ಟವಾಗುತ್ತವೆ. ಇದು ಎಲ್ಲ ದೇಶಗಳ ಸಾಹಿತ್ಯದಲ್ಲೂ ಕಾಣಬರುವ ಸಾಮಾನ್ಯ ನಿಯಮವಾಗಿರುತ್ತದೆ. ಸಾಹಿತ್ಯದಲ್ಲಿ

ಆಯಾ ಕಾಲದ ಜನಜೀವನದ ರೀತಿ ನೀತಿಗಳೂ, ಆಶೆ ಆಕಾಂಕ್ಷೆಗಳೂ ನಂಬಿಕೆ ನಿರೀಕ್ಷಣೆಗಳೂ, ನಡೆನುಡಿ ಭಾವಗಳೂ, ಸಂಸ್ಕೃತಿಯೂ ಉಲ್ಲೇಖನವನ್ನು ಪಡೆದಿರುತ್ತವೆ ಆದುದರಿಂದಲೇ ಸಾಹಿತ್ಯವನ್ನು ಜನಜೀವನದ ಪ್ರತಿಬಿಂಬವೆನ್ನುತ್ತಾರೆ. ಈ ಸಾಹಿತ್ಯವೆಂಬ ಕನ್ನಡಿಯು ಆಯಾ ಕಾಲದಲ್ಲಿನ ಜನಜೀವನವನ್ನು ಪ್ರತಿಬಿಂಬಿಸುವ ಕನ್ನಡಿಯಾಗಿರುತ್ತದೆ. ಅಷ್ಟೇ ಅಲ್ಲದೆ ಈ ಸಾಹಿತ್ಯವೆಂಬ ಕನ್ನಡಿಯು ಗುಣವಿಶೇಷವುಳ್ಳ ಮಾದರಿಯದಾಗಿರುತ್ತದೆ. ಹೇಗೆಂದರೆ ಕನ್ನಡಿಯ ಮೇಲೆ ಧೂಳು ಕವಿಯುತ್ತದೆ. ಆಗ ಅದು ಪ್ರತಿಬಿಂಬವನ್ನು ಚೆನ್ನಾಗಿ ಗ್ರಹಿಸಿ ತೋರಿಸಲಾರದಾಗುತ್ತದೆ. ಸಾಹಿತ್ಯವೆಂಬ ಕನ್ನಡಿಯಾದರೊ ಯಾವಾಗಲೂ ನಿರ್ಮಲವಾಗಿರುತ್ತದೆ. ಕಾಲ, ದೇಶ, ವ್ಯಕ್ತಿಗಳು ಬದಲಾಯಿಸಿದರೂ, ಕಾಲವು ಕಳೆದರೂ, ಮುಂಚಿನಂತೆಯೇ ಜನಜೀವನವನ್ನೂ ಪ್ರಕೃತಿ ಸೌಂದರ್ಯವನ್ನೂ ಚೆನ್ನಾಗಿ ಪ್ರತಿಬಿಂಬಿಸುತ್ತಲೇ ಇರುತ್ತದೆ. ಆದುದರಿಂದ ಸಾಹಿತ್ಯವನ್ನು ಮಾದರಿಯ, ವಿಶೇಷ ತೆರನಾದ ಕನ್ನಡಿ ಎನ್ನುವುದು ಉಚಿತವಾಗಿರುತ್ತದೆ. ಹಾಗೆಯೇ ಮಾನವರಿಗೆ ಇಹಜೀವನದಲ್ಲಿ ಸುಖದಂತೆ, ದುಃಖವೂ ಸಂಭವಿಸುತ್ತದೆ. ಆಶಾಭಂಗವಾಗುವುದುಂಟು. ಇಷ್ಟವಾದ ಜನರ ಮತ್ತು ಪದಾರ್ಥಗಳ ವಿಯೋಗವೂ ಸಂಭವಿಸುವುದೂ ಉಂಟು. ಇದರಿಂದ ಆ ಜನರು ವ್ಯಾಕುಲತೆಯನ್ನು ಪಡೆಯುತ್ತಾರೆ. ಇಂತಹ ಜನರಿಗೂ ಈ ಉತ್ತಮ ಗ್ರಂಥಗಳ ಪಠನದಿಂದಲೂ, ವ್ಯಾಖ್ಯಾನ ಶ್ರವಣದಿಂದಲೂ, ಪುರಾಣ ಪ್ರವಚನ ಕಥನ ಶ್ರವಣಗಳಿಂದಲೂ ಮನಸ್ಸಿಗೆ ಸಮಾಧಾನವಾಗುತ್ತದೆ. ನಮ್ಮ ಕಣ್ಣೆದುರಿನ ಪ್ರಪಂಚದಲ್ಲಿನ ಕ್ರೌರ್ಯ, ಮೋಸ, ಅಸೂಯೆ, ದ್ವೇಷಗಳು ನಮ್ಮ ಮನಸ್ಸನ್ನು ಚುಚ್ಚಿ ಅಸಮಾಧಾನವಾದಾಗ ಸಾಹಿತ್ಯವು ನಮ್ಮ ಸಹಾಯಕ್ಕೆ ಬಂದು ನಮ್ಮನ್ನು ಈ ವಾಸ್ತವ ಪ್ರಪಂಚದಿಂದ ಬೇರೊಂದು ಪ್ರಪಂಚಕ್ಕೆ, ಕರೆದೊಯ್ದು, ನೋವನ್ನು ಮರೆಸಿ, ಧೈರ್ಯವನ್ನೂ ಸಂತೋಷವನ್ನೂ ಉಂಟುಮಾಡುತ್ತದೆ. ಸಾಹಿತ್ಯವು, ಕಾವ್ಯ ಸಾಹಿತ್ಯವು, ಉಪದೇಶ

ಗಳನ್ನು ಮಾಡುವ ಗ್ರಂಥಗಳಲ್ಲವೆಂಬ ಅಭಿಪ್ರಾಯವೂ ಇದೆ. ಅದು ಉಪದೇಶಿಸುವ ರೀತಿ ನೀತಿಗಳು ಮಾತ್ರ ಬೇರೆ ಬೇರೆಯಾಗಿರುತ್ತವೆಂಬುದು ನಿಜವಾದುದು. ಆದುದರಿಂದಲೇ ಭಾರತಾಲಂಕಾರಿಕರು–

ಕಾವ್ಯಂಯಶಸೇಽರ್ಥ ಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃಪರ ನಿರ್ವೃತಯೇ ಕಾಂತಾ ಸಂಮಿತತಯೋಪದೇಶಯುಜೇ ॥

ಎಂದು ಹೇಳಿರುತ್ತಾರೆ. ಎಂದರೆ, ಕಾವ್ಯರಚನೆಯು ಕರ್ತೃವಿಗೆ ಕೀರ್ತಿಯನ್ನೂ, ರಾಜನೇ ಮುಂತಾದವರಿಂದ ಪ್ರೋತ್ಸಾಹಕ ದ್ರವ್ಯ ಲಾಭವನ್ನೂ ದೊರೆಯುವಂತೆ ಮಾಡುತ್ತದೆ. ಕಾವ್ಯ ವ್ಯಾಸಂಗದಿಂದ ಜನರಿಗೆ ಲೋಕವ್ಯವಹಾರದ ತಿಳಿವಳಿಕೆಯು ಉಂಟಾಗುತ್ತದೆ. ಉದಾತ್ತನಾಯಕನ ವರ್ಣನೆಯನ್ನು ಕಾವ್ಯರೂಪದಲ್ಲಿ ಮಾಡಿರುವುದರಿಂದ ಕರ್ತೃವಿಗೂ ಓದುಗರಿಗೂ ಪುಣ್ಯಲಾಭವಾಗುವುದರಿಂದ ಅವರಲ್ಲಿರಬಹುದಾದ ಪಾಪದ ಫಲವಾದ ಅಮಂಗಳದ ಪರಿಹಾರವೂ ಆಗುತ್ತದೆ. ಈ ಎಲ್ಲ ಫಲಕ್ಕಿಂತ ಮೇಲಾಗಿ ಕಾವ್ಯಗುಣಾಭಿನಂದನದಿಂದ ಸಹೃದಯರಿಗೆ ಉತ್ತಮವಾದ ವಿದ್ಯಾನಂದದ ಲಾಭವು ರಸಾಸ್ವಾದದಿಂದ ದೊರೆಯುತ್ತದೆ. ಕಡೆಯದಾದರೂ ಮುಖ್ಯತನುವಾದ ಫಲವು ಎಂದರೆ, ನೀತಿ ಧರ್ಮೋಪದೇಶದ ಲಾಭವು. ಇದು ಕಾಂತಾ ಸಮ್ಮಿತ ರೀತಿಯಿಂದ ಹೃದಯಂಗಮವಾಗಿ ಉಂಟಾಗುತ್ತದೆ. ಹಿಂದಿನ ಜನರೂ ಇಂತಹ ಅಥವಾ ಇನ್ನೂ ಹೆಚ್ಚಾದ ಕಷ್ಟಗಳು ಬಂದಾಗ ಹೇಗೆ ಕುಗ್ಗಿ ಕೊರಗಿ ಸೊರಗದೆ ಧೈರ್ಯದಿಂದ ನಡೆದು, ತಮಗೆ ಸಂಭವಿಸಿದ ಕಷ್ಟಗಳಿಂದ ಪಾರಾದರೆಂಬುದನ್ನು ಗ್ರಂಥಗಳಲ್ಲಿ ವರ್ಣಿಸಿರುವುದನ್ನು ಕೇಳಿದರೆ ನಮಗೂ ಧೈರ್ಯ ಬಂದು ನಮ್ಮ ಕಷ್ಟಗಳಿಂದ ಪಾರಾಗಲೂ ಸಹಾಯವಾಗಿ ಸಾಧ್ಯವಾಗುತ್ತದೆ. ಮನಶ್ಶಾಂತಿಯನ್ನುಂಟು ಮಾಡುವುದಷ್ಟೇ ಅಲ್ಲದೆ ಸಂತೋಷವನ್ನೂ ಈ ಗ್ರಂಥಗಳು ಒದಗಿಸುತ್ತವೆ. ಈ ಸುಖವನ್ನೇ ವಿದ್ಯಾನಂದವೆನ್ನುತ್ತಾರೆ. ಎಲ್ಲಕ್ಕಿಂತಲೂ ಮೇಲಾಗಿ ನಮ್ಮಲ್ಲಿರಬಹುದಾದ ಮೋಹವನ್ನು ಅಜ್ಞಾನವನ್ನು ನಿರ್ಮೂಲವಾಗಿ ನಾಶಮಾಡಿ ಶಾಂತಿ ಸುಖವನ್ನೂ ಕೊಡುವುದರಲ್ಲಿ

ಈ ಗ್ರಂಥಗಳು ರತ್ನದೀಪಗಳಂತೆ ತನಿಬೆಳಕನ್ನು ಕೊಡುತ್ತಾ, ಸೆಕೆಯನ್ನು ಉಂಟುಮಾಡದೆ ತಿಳಿವಳಿಕೆಯ ತನಿಬೆಳಕನ್ನುಂಟುಮಾಡಿ ಸಂತೋಷಪಡಿಸುತ್ತವೆ. ಇದು ಉತ್ತಮ ಸಂಸ್ಕೃತಿಯ ಶ್ಲಾಘ್ಯವಾದ ಪ್ರಯೋಜನವಾಗಿದೆ. ಸಂಸ್ಕೃತಿಯು ಬೆಳೆದು ಪೂರ್ಣವಾಗುತ್ತಿರುವಾಗ ಕಾವ್ಯರಚನೆಯೂ ಸಹಜವಾಗಿ ಎಂದರೆ, ಮನಸ್ಸು ಭಾವಪೂರ್ಣವಾಗಿರಲು ಆ ಭಾವವು ಶಬ್ದರೂಪದಿಂದ ಹೊರಹೊಮ್ಮುತ್ತಿರುತ್ತದೆ. ಸಾಹಿತ್ಯ ವ್ಯಾಸಂಗದಿಂದ ಶೀಲವು (Character) ಏರ್ಪಡುತ್ತದೆ.

ಸಾಹಿತ್ಯವೂ ಜನಜೀವನವೂ.

ವೈದಿಕ ಕಾಲದಲ್ಲಿದ್ದ ಭಾರತಾರ್ಯರ ಸಂಸ್ಕೃತಿಯ ಸ್ವರೂಪವನ್ನು ವೈದಿಕ ಸಾಹಿತ್ಯದ ಎಂದರೆ, ವೇದ ಮಂತ್ರ ಸಂಹಿತೆಗಳು ಬ್ರಾಹ್ಮಣಗಳು ಮತ್ತು ಉಪನಿಷತ್ತುಗಳು ಇವುಗಳನ್ನು ಪರಿಶೀಲಿಸುವುದರಿಂದ ಈ ಅಂಶಗಳು ಗೊತ್ತಾಗುತ್ತವೆ. ಪ್ರಪಂಚದ ಸ್ವರೂಪ, ದೇವರ ಸ್ವರೂಪ, ಜೀವರ ಸ್ವರೂಪ, ಈ ಮೂರಕ್ಕೂ ಇರುವ ಸಂಬಂಧದ ಅಥವಾ ಧರ್ಮದ ಸ್ವರೂಪ, ಇಷ್ಟು ಅಂಶಗಳನ್ನು ಸ್ವಲ್ಪಮಟ್ಟಿಗೆ ತಿಳಿದಂತಾಗಿದೆ. ಈ ಪ್ರಪಂಚವು ಬದಲಾಯಿಸುತ್ತಿರುವ ಸ್ವಭಾವವುಳ್ಳದ್ದಾಗಿದೆ. ಆದರೂ ಇದರಲ್ಲಿ ಸೌಂದರ್ಯ ಉದ್ದೇಶ ಕ್ರಮಗಳು ಕಾಣಬರುತ್ತಿರುವುದರಿಂದ ಇದನ್ನು ಸರ್ವಜ್ಞನೂ ಸರ್ವಶಕ್ತನೂ ಆಗಿರುವ ದೇವರು ಸೃಜಿಸಿ ಕಾಪಾಡುತ್ತಿದ್ದಾನೆ. ಜೀವರು ಇಲ್ಲಿ ತಮ್ಮ ಕರ್ಮಗಳ ಫಲವಾದ ಸುಖದುಃಖಗಳನ್ನು ಅನುಭವಿಸುತ್ತಿರುತ್ತಾರೆ. ವಿವೇಕಿಗಳಾದ ಜೀವರು ದುಃಖವನ್ನುಂಟುಮಾಡುವ ದುಷ್ಕರ್ಮಗಳನ್ನು ಬಿಟ್ಟು ಸುಖವನ್ನುಂಟುಮಾಡುವ ಸತ್ಕರ್ಮಗಳನ್ನೇ ಆರಿಸಿಕೊಂಡು ಮಾಡುತ್ತಾರೆ. ಇದರಲ್ಲಿ ಅವರಿಗೆ ಸ್ವಾತಂತ್ರ್ಯವಿದೆ. ಕರ್ಮವಾದದಿಂದ ಜನರಲ್ಲಿ ನಿರಾಶಾಭಾವವು ಪ್ರಬಲವಾಗುತ್ತದೆಂಬ ಆಕ್ಷೇಪಣೆಯಲ್ಲಿ ಹುರುಳಿಲ್ಲವು. ದೇವರು ಜೀವರಿಗೆ ಸುಖ ದುಃಖಗಳನ್ನು ಅವರವರ ಕರ್ಮಾನುಸಾರ

ವಾಗಿ ಕೊಡುತ್ತಿರುತ್ತಾನೆ. ಧರ್ಮಾಚರಣೆಯಿಂದ ನಮ್ಮ ನಮ್ಮ ಕರ್ತವ್ಯ ಕರ್ಮಗಳನ್ನು ನಾವು ಮಾಡುತ್ತಿರುವುದರಿಂದ ಯಾಗ ಗಳಿಂದ ದೇವರುಗಳನ್ನು ಮೆಚ್ಚಿಸಿ ನಮ್ಮ ಇಷ್ಟಾರ್ಥಗಳನ್ನು ನಾವು ಪಡೆಯಲು ಯಾವಾಗಲೂ ಅವಕಾಶವೂ ಸ್ವಾತಂತ್ರ್ಯವೂ ಇದೆ. ಆದುದರಿಂದ ನಾವು ಧರ್ಮಾಚರಣೆಯಿಂದ ಪಾಪಗಳನ್ನು ಕಳೆದುಕೊಳ್ಳು ವುದಲ್ಲದೆ ಉತ್ತಮ ಸ್ಥಿತಿಯನ್ನೂ ಪಡೆಯಬಹುದಾಗಿದೆ. ಆದುದರಿಂದ ಎಲ್ಲರೂ ಧಾರ್ಮಿಕರಾಗಿರಬೇಕು. ಇದೇ ವೈದಿಕಾರ್ಯರ ಧಾರ್ಮಿಕ ಸಂಸ್ಕೃತಿಯು ಎಂದರೆ, ಒಳ್ಳೆಯ ನಡೆನುಡಿ ಭಾವಗಳ ಸ್ವರೂಪವಾಗಿದೆ.

ವೈದಿಕ ಸಾಹಿತ್ಯದಲ್ಲಿ ತತ್ವಜ್ಞಾನ.

ವೈದಿಕಾರ್ಯರ ಸಂಸ್ಕೃತಿಯಲ್ಲಿ ವೇದಾಂತ ಜ್ಞಾನದ ವಿಮರ್ಶೆಯು ಪ್ರಾರಂಭವನ್ನೂ ನಾವು ಕಾಣಬಹುದು. ವೈದಿಕ ಸಾಹಿತ್ಯದಲ್ಲಿ ಅತಿ ಪ್ರಸಿದ್ಧವೂ ಮುಖ್ಯವೂ ಆದ ನಾಸಿದೀಯ ಸೂಕ್ತದ ಮಂತ್ರಗಳನ್ನು ಋಗ್ವೇದ ಅ. ೮ ಅ ೭. ಮಂ. ೧೭. ಇಲ್ಲಿ ಉದಾ ಹರಿಸಬಹುದು.

ನಾಸದಾಸೀನ್ನೋ ಸದಾಸೀತ್ ತದಾನೀಂ ನಾಸೀದ್ರಜೋ ನೋ
ವ್ಯೋಮಾ ಪರೋ ಯತ್ ।
ಕಿಮಾವರೀವಃ ಕುಹಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಂ ॥

ತದಾನೀಂ ಆಗ ಎಂದರೆ, ಸೃಷ್ಟಿಯ ಆರಂಭದಲ್ಲಿ ಅಸತ್ ಎನ್ನಿ ಸುವ ಪದಾರ್ಥವು ಇರಲಿಲ್ಲ. ಸತ್ತೆನ್ನಿಸುವ ಪದಾರ್ಥವೂ ಇರಲಿಲ್ಲ. ಎಂದರೆ, ಆಗ ಇದ್ದ ವಸ್ತುವನ್ನು ಅಸತ್ ಎಂದಾಗಲಿ ಸತ್ ಎಂದಾಗಲಿ ಹೇಳುವ ಹಾಗಿರಲಿಲ್ಲ. ಏಕೆಂದರೆ ವಿಂಗಡವೆಲ್ಲವೂ ಸೃಷ್ಟಿಯಾದ ಮೇಲೆ ಮಾತ್ರ ಸಂಭವಿಸುತ್ತದೆ. ಹಾಗೆಯೇ ಅದರ ಆಚೆಗಿರುವ ಈ ಆಕಾಶವೂ ಇರಲಿಲ್ಲ. ಇಂತಹ ಸ್ಥಿತಿಯಲ್ಲಿ ಯಾವುದು ಯಾವು ದನ್ನು ಎಲ್ಲಿ ಯಾರ ಸುಖಕ್ಕಾಗಿ ಅಥವಾ ರಕ್ಷಣೆಗಾಗಿ ಆವರಿಸಿತೆನ್ನ ಲಾದೀತು ? ಆಗ ಅಗಾಧವೂ ಗಂಭೀರವೂ ಆದ ನೀರಾದರೂ ಇತ್ತೆನ್ನಲಾದೀತೆ ?

ನಮೃತ್ಯುರಾಸೀದ ಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರ
ಕೇತಃ ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ॥

ಆಗ ಮೃತ್ಯು ಎಂದರೆ, ಮರಣ ಧರ್ಮವುಳ್ಳ, ವಿನಾಶಿಯಾದ ದೃಶ್ಯ ವಸ್ತುಗಳಿರಲಿಲ್ಲ. ಹಾಗೆಯೇ ಅವಿನಾಶಿಯೂ ನಿತ್ಯವೂ ಆದ ವಸ್ತುವಾದರೂ ಇದ್ದಿತೆನ್ನಲಾಗದು. ರಾತ್ರಿ ಹಗಲು ಮುಂತಾದ ಭೇದಗಳಿಗೆ ವಿಂಗಡಗಳಿಗೆ ಕಾರಣವಾದ ಗುರುತು ಯಾವುದಕ್ಕೂ ಆಗ ಅವಕಾಶವಿರಲಿಲ್ಲ. ಆ ತತ್ವವು ಒಂದೇ ಇತ್ತು. ಅದು ಇರಲು ಆಧಾರವಾಗಬಲ್ಲ ಬೇರೊಂದು ವಸ್ತುವಿನ ಅವಲಂಬನೆಯನ್ನು ಅಪೇಕ್ಷಿಸದೆ ತಾನೇ ಸ್ವತಂತ್ರವಾಗಿ ತನ್ನಲ್ಲಿಯೇ ಸ್ಪಂದವಿಲ್ಲದೆ ಇತ್ತು. ಉಸಿರಾಡುತ್ತಾ ಪ್ರಾಣ ಶಕ್ತಿಯುಳ್ಳದ್ದಾಗಿತ್ತು. ಸ್ಫುರಿಸುವ ಜ್ಞಾನ ಶಕ್ತಿಯುಳ್ಳದ್ದಾಗಿತ್ತು. ಅದು ಹೊರತು ಇನ್ನು ಬೇರೆ ಯಾವ ವಸ್ತುವೂ ಇರಲಿಲ್ಲ. ಇದರಿಂದ ಶೂನ್ಯವಾದವೂ ಏರ್ಪಡಲಾರದು.

ತಮ ಆಸೀತ್ತಮಸಾ ಗೂಢಮಗ್ರೇ ಅಪ್ರಕೇತಂ ಸಲಿಲಂ ಸರ್ವಮಾ ಇದಂ।
ತುಚ್ಛೇನಾಭ್ವಪಿಹಿತಂ ಯದಾಸೀತ್ ತಪಸಸ್ತನ್ಮಹಿನಾಽಜಾಯತೈಕಂ॥

ಆಗ ಕತ್ತಲೆ ಇದ್ದಿತು. ಅಜ್ಞಾನವಿತ್ತೆನ್ನಬಹುದು. ಅದೆಲ್ಲವೂ ವಿಂಗಡಗಳಿಗೆ ತಕ್ಕ ಗುರುತುಗಳಿಲ್ಲದೆ ನೀರು ಇತ್ತೆನ್ನಬಹುದು. ಅಥವಾ ಆಗ ಬ್ರಹ್ಮವು ಅಭು ಎಂದರೆ, ಸರ್ವವ್ಯಾಪಿಯಾಗಿತ್ತೆಂತಲೂ ಹೇಳಬಹುದು. ಏಕೆಂದರೆ ತುಚ್ಛದಿಂದ ಮಾಯಿಕವಾದ ತೋರಿಕೆ ಮಾತ್ರದಿಂದ ಮುಚ್ಚಲ್ಪಟ್ಟಿರಲಾಗದು. ಇಂತಹ ಆ ಮೂಲ ಪರಬ್ರಹ್ಮ ತತ್ವವು ತಪಸ್ಸಿನ ಮಹಿಮೆಯಿಂದ ಅಂಥಾದ್ದಾಗಿ ಪ್ರಕಟವಾಗಿತ್ತು ಎನ್ನಬಹುದಾಗಿದೆ. ಋಗ್ವೇದ ಅಷ್ಟಕ ೮. ಅಧ್ಯಾಯ ೭. ಮಂತ್ರ ೧೯.

ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ
ಯದಾಸೀತ್ ।
ಸತೋ ಬಂಧು ಮಸತಿ ನಿರ ವಿಂದನ್ ಹೃದಿ ಪ್ರತೀಷ್ಯಾ
ಕವಯೋ ಮನೀಷಾ ॥

ಆಗ ಮೊದಲು ಇಚ್ಛೆಯು ಉಂಟಾಯಿತು. ಯಾವುದು ಉಂಟಾಯಿತೋ ಅದೇ ಆ ತತ್ವದ ಮನಸ್ಸಿನ ಪ್ರವೃತ್ತಿ ಅಥವಾ ಬೀಜವಾಯಿತು. ಎಂದರೆ, ಅದೇ ಸೃಜಿಸಬೇಕೆಂಬ ಸಂಕಲ್ಪ ಶಕ್ತಿಯಾಯಿತು. ವೈದಿಕ ಋಷಿಗಳು ಆ ಮೊದಲಿನ ಇಚ್ಛಾ ಪ್ರವೃತ್ತಿಯನ್ನು ಸ್ಪಂದ ಶಕ್ತಿಯನ್ನು ಅಸತ್ತಾದ ಆ ಮೂಲ ತತ್ವದಲ್ಲಿ ಸತ್ ಆದ ಪ್ರಪಂಚದ ಸಂಬಂಧವೆಂದು ತಮ್ಮ ಅಂತಃಕರಣದಲ್ಲಿ ವಿಚಾರಿಸಿ ಧ್ಯಾನ ಯೋಗದಿಂದ ಬುದ್ಧಿಯಲ್ಲಿ ನಿಶ್ಚಯಿಸಿದರು. ಮಂತ್ರ ೨೦.

ಹೀಗೆ ಸಾಹಿತ್ಯವು ಜನ ಜೀವನ ಕ್ರಮವನ್ನು ಕನ್ನಡಿಯಂತೆ ಓದುಗರಿಗೆ ತೋರಿಸುತ್ತದೆ. ಇಷ್ಟೇ ಅಲ್ಲದೆ ಸಾಹಿತ್ಯವು ಸಂಸ್ಕೃತಿಯ ತಿಳಿವಳಿಕೆಗೆ ವಾಹನದಂತೆ ಇರುತ್ತದೆ. ಎಂದರೆ, ಅದು ಮುಂದಿನ ತಲೆಮಾರಿನವರಿಗೂ ಹಿಂದಿನ ಕಾಲದ ಪರಿಸ್ಥಿತಿಯ ತಿಳಿವಳಿಕೆಯನ್ನು ಎಲ್ಲ ದೇಶಗಳ ಜನರಿಗೂ ತಂದು ಕೊಡುತ್ತಿರುತ್ತದೆ.

ಸೃಷ್ಟಿಗೆ ಮೊದಲು ಆ ತತ್ವವು ಅಖಂಡವಾಗಿರಬೇಕು. ಆ ಮೂಲ ತತ್ವವನ್ನು ಅಸತ್, ಸತ್, ಮೃತ್ಯು, ಅಮೃತ, ಬೆಳಕು, ಕತ್ತಲೆ, ಆಕಾಶ, ನೀರು—ಇವೇ ಮುಂತಾದ ಪದಗಳಿಂದ ವರ್ಣಿಸಲಾಗು ವುದಿಲ್ಲ. ಏಕೆಂದರೆ ಇಂತಹ ಪದಗಳು ಯಾವುವೇ ಆದರೂ ಪರಸ್ಪರ ವಾಗಿ ಸಾಪೇಕ್ಷವಾದ ಖಂಡವಾದ ಭಾವಗಳನ್ನು ತಿಳಿಸುತ್ತವೆ ಯಾದುದರಿಂದ ಇಂತಹ ಇತರಾಪೇಕ್ಷೆಯುಳ್ಳ ಪದಗಳನ್ನು ಅಖಂಡ ವಾದ ಆ ಮೂಲ ತತ್ವವನ್ನು ತಿಳಿಸಲು ಉಪಯೋಗಿಸುವುದಕ್ಕೆ ಹೊಂದಿ ಬರುವುದಿಲ್ಲ, ಆದುದರಿಂದಲೇ ಶ್ರುತಿಯು "ಅಥಾತ ಆದೇಶೋ ನೇತಿ ನೇತಿ ನ ಹ್ಯೇತಸ್ಮಾದಿತಿ.........." ಬೃ.ಉ. ೨. ೩. ೬. ಎಂದರೆ, ನಮ್ಮ ವ್ಯವಹಾರದಲ್ಲಿ ಬಳಕೆಯಲ್ಲಿರುವ ಯಾವ ಪದವನ್ನು ಪ್ರಯೋಗಿಸಿದರೂ ಪರಿಚ್ಛಿನ್ನವಾದ ಅರ್ಥವನ್ನು ಅದು ತಿಳಿಸಬಲ್ಲದೇ ಹೊರತು ಆ ಅಖಂಡ ಪರಬ್ರಹ್ಮ ತತ್ವವನ್ನು ತಿಳಿಸಲಾರದೆಂದು ಬೋಧಿಸುತ್ತಿದೆ. ನಮಗೆ ಗೋಚರವಾಗುವ ಈ ಎಲ್ಲ ಪದಾರ್ಥಗಳಿ ಗಿಂತ ಆ ಮೂಲ ತತ್ವವು ವಿಲಕ್ಷಣವಾಗಿರುತ್ತದೆ. ಆದುದರಿಂದ

ಅದೊಂದೇ ಅಪಾರ ಅನಂತ ಶಕ್ತಿಯುಳ್ಳದ್ದಾಗಿ ಸ್ಫುರಿಸುತ್ತಿತ್ತೆಂದೂ ಆ ಶಕ್ತಿಯೂ ಅಂತರ್ಲೀನವಾಗಿ ಅವಿನಾಭಾವದಿಂದ ಇತ್ತೆಂದೂ ಮಾತ್ರ ಹೇಳಬಹುದು.

ಮೇಲಿನ ಎರಡನೆಯ ಮಂತ್ರದಲ್ಲಿರುವ ಆನೀತ್ ಎಂಬ ಪದವು ಅನ್‌ಪ್ರಾಣನೇ ಎಂಬ ಧಾತುವಿನ ಭೂತಕಾಲ ಕ್ರಿಯಾ ರೂಪವಾಗಿದೆ. ಪ್ರಾಣ ಶಬ್ದವೂ ಪ್ರ ಎಂಬ ಉಪಸರ್ಗದಿಂದ ಕೂಡಿದ ಅನ್ ಧಾತುವಿನಿಂದ ರೂಪಗೊಂಡಿದೆ. ಆ ಮೂಲ ತತ್ವವು ಶ್ವಾಸೋಚ್ಛ್ವಾಸವನ್ನು ಮಾಡಬೇಕಾದರೆ ನಮ್ಮ ಹಾಗೆ ಹೊರಗಿನ ಭೌತವಾಯುವನ್ನು ಅವಲಂಬಿಸುವುದಿಲ್ಲ. ಅದು ತನ್ನ ಸ್ವಂತ ಮಹಿಮೆಯಿಂದಲೇ ಸ್ಫುರಿಸುತ್ತಿತ್ತೆಂದು ಹೇಳಬೇಕಾಗುತ್ತದೆ. ಏಕೆಂದರೆ ಭೂತ ಸೃಷ್ಟಿಯಾದ ಮೇಲೆ ವಾಯುವು ಉಂಟಾಗಬೇಕು. ಆ ಮೂಲ ತತ್ವವು ಸೃಷ್ಟಿಗೆ ಮೊದಲೇ ಇರಬಲ್ಲದ್ದಾದುದರಿಂದ ಅದಕ್ಕೆ ವಾಯುವಿನ ಸಹಾಯವು ಸಂಭವಿಸಲಾರದು, ಬೇಕಾಗಿಯೂ ಇಲ್ಲವು. ಅಲ್ಲದೆ ಎಲ್ಲ ಸೃಷ್ಟಿಗಿಂತ ಮುಂಚೆ ಇರುವ ಈ ಮೂಲ ಪರಬ್ರಹ್ಮ ತತ್ವವು ಎಲ್ಲ ಜಗತ್ತಿನ ಪ್ರಳಯವಾದಮೇಲೂ ಇರಬಲ್ಲದ್ದಾಗಿರುತ್ತದೆಂಬುದೂ ಸಹಜವಾಗಿ ತಾನಾಗಿಯೇ ಏರ್ಪಡುತ್ತದೆ.

ಮೂರನೆಯ ಮಂತ್ರದಲ್ಲಿ ಅಭು ಎಂಬ ಶಬ್ದವು ಹುಟ್ಟು ಇಲ್ಲದ ಮೂಲ ತತ್ವವನ್ನು ಹೇಳುತ್ತದೆ. ಹುಟ್ಟಿಲ್ಲದ ತತ್ವವು ನಾಶವಿಲ್ಲದ್ದೂ ಆಗಿರುತ್ತದೆ. ಹುಟ್ಟು ಸಾವುಗಳುಳ್ಳ ನಾಶಿಯಾದ ಈ ಜಗತ್ತಿಗಿಂತ ಆ ಮೂಲ ತತ್ವವು ಜನನ ಮರಣಗಳಿಲ್ಲದ ನಿತ್ಯವಸ್ತುವು ಎಂದಾಗುತ್ತದೆ. ಆದುದರಿಂದ ಅಭು ಎಂದರೆ, ತ್ರಿಕಾಲಾಬಾಧ್ಯವಾದ ಬ್ರಹ್ಮ ತತ್ವವು. ತುಚ್ಛ ಎಂದರೆ, ಅದನ್ನು ಆಚ್ಛಾದಿಸುವ ಮಾಯೆ. ಅದು ಅಂಧಕಾರ ಅಥವಾ ಕತ್ತಲೆಯಂತಿರುವ ಅಜ್ಞಾನ ರೂಪವಾದುದರಿಂದಲೂ, ತಿಳಿವಳಿಕೆಯ ಬೆಳಕಿನ ಎದುರಲ್ಲಿ ಅದು ನಿಲ್ಲಲಾರದೆ ಹೋಗುವುದರಿಂದಲೂ, ಅದನ್ನು ತುಚ್ಛ, ಮಾಯೆ, ತೋರಿಕೆ ಎಂದು ಹೇಳಿದೆ. ತಪಶ್ಶಬ್ದವು ಮೂಲ ತತ್ವದ ಜ್ಞಾನಮಯವಾದ ವಿಲಕ್ಷಣ ಶಕ್ತಿಯನ್ನು

ತಿಳಿಸುತ್ತದೆ. ಇದರಿಂದ ಆ ಮೂಲ ತತ್ವವು ಚೇತನವೆಂದೂ, ಮಾಯೆಯು ಅಚೇತನ ಜಡ ಜ್ಞಾನನಾಶ್ಯವೆಂದೂ ಸಿದ್ಧವಾಗುತ್ತದೆ.

ತತ್ವ ಜ್ಞಾನದ ಬೆಳವಣಿಗೆ.

ಈ ಮಂತ್ರಗಳಲ್ಲಿ ಈ ಜಗತ್ತಿಗೆ ಮೂಲಕಾರಣವಾದ ತತ್ವವನ್ನು ತಿಳಿಸಲು ಅಸತ್ ಎಂಬ ಪದವನ್ನು ಪ್ರಯೋಗಿಸಿದೆ. ಹಾಗೆಯೇ ಕಾರ್ಯವಾದ ಈ ಜಗತ್ತನ್ನು ಸತ್ ಎಂಬ ಪದದಿಂದ ತಿಳಿಸಿದೆ. ಆದರೆ, ಇತರ ಉಪನಿಷತ್ತುಗಳಲ್ಲೂ ದರ್ಶನಗಳಲ್ಲೂ ಜಗತ್ಕಾರಣವನ್ನು ಸತ್ ಪದದಿಂದಲೂ, ಕಾರ್ಯವಾದ ಜಗತ್ತನ್ನು ಅಸತ್ ಪದದಿಂದಲೂ ಬೋಧಿಸಿರುತ್ತದೆ. ಸತ್ ಎಂದರೆ, ಇರುವ ವಸ್ತುವು (ಅಸ್ತೀತಿ ಸತ್) ಎಂದು ಅರ್ಥವಾಗುತ್ತದೆ. ಯಾವಾಗ ಇರುವುದು, ಎಲ್ಲಿ ಇರುವುದು, ಎಂದು ವಿಮರ್ಶಿಸಿದರೆ ಎಲ್ಲ ಕಾಲಗಳಲ್ಲೂ, ಎಲ್ಲ ದೇಶಗಳಲ್ಲೂ ಇರುವುದು ಎಂದು ಹೇಳಬೇಕಾಗುತ್ತದೆ. ಏಕೆಂದರೆ ಸಂಕೋಚಕ ಪ್ರಮಾಣವು ಇಲ್ಲದಿರುವುದರಿಂದ ತ್ರಿಕಾಲಾಬಾಧ್ಯವಾದ ಸರ್ವ ವ್ಯಾಪಿಯಾದ ತತ್ವವೇ ಸತ್ ಪದಕ್ಕೆ ಅರ್ಥವೆಂದು ಹೇಳಬೇಕಾದುದು ನ್ಯಾಯುವಾಗಿರುತ್ತದೆ. ಹಾಗೆಯೇ ಅಸತ್ ಪದವು ಸತ್ ಪದಾರ್ಥಕ್ಕೆ ವಿಲಕ್ಷಣವಾಗಿ ಯಾವುದಾದರೂ ಒಂದು ಕಾಲ ದೇಶದಲ್ಲಿ ಮಾತ್ರ ಇರುವ, ಉಳಿದ ದೇಶ ಕಾಲಗಳಲ್ಲಿ ಇಲ್ಲದಿರುವ, ಒಂದು ದೇಶ ಕಾಲದಲ್ಲೂ ಇರುವಂತೆ ತೋರುವ ಪದಾರ್ಥವೆಂದು ಹೇಳಬೇಕಾದುದೂ ನ್ಯಾಯುಪ್ರಾಪ್ತವಾಗುತ್ತದೆ. ಆದುದರಿಂದ "ಅಸತ್", "ಸತ್" ಎಂಬ ಪದಗಳ ಅರ್ಥವನ್ನು ಆಯಾ ಪ್ರಕರಣಾನುಸಾರವಾಗಿ ತಿಳಿಯಬೇಕು.

ಅಸತ್ ಸತ್ ಶಬ್ದಾರ್ಥ.

ಮೇಲಿನ ನಾಲ್ಕನೆಯ ಮಂತ್ರದಲ್ಲೂ ಅಸತ್ ಪದದ ಪ್ರಯೋಗವಿದೆ. ಇದರ ಅರ್ಥವು "ಅಭಾವ, ಏನೂ ಇಲ್ಲ" ಎಂದು ಆಗಲಾರದು. ಏಕೆಂದರೆ ಮೇಲಿನ ಮೊದಲನೆಯ ಮತ್ತು ಎರಡನೆಯ ಮಂತ್ರದಲ್ಲೂ "ಅದು ಇದೆ" ಎಂದು ಹೇಳಿದೆ. ಆ ಅನಿರ್ವಾಚ್ಯವಾದ, ಎಂದರೆ, ಮಾತಿಗೂ ಮನಸ್ಸಿಗೂ ಸಿಲುಕದ, ಮೂಲ ಬ್ರಹ್ಮ ತತ್ವದ

ಮನಸ್ಸಿನಲ್ಲಿ ಕಾಮವು ಎಂದರೆ, ಇಚ್ಛೆಯು ಜಗತ್ತನ್ನು ಸೃಜಿಸಬೇಕೆಂಬ ಸಂಕಲ್ಪ ಶಕ್ತಿಯು, ಆವಿರ್ಭವಿಸಿತು. ಇದಕ್ಕೆ ಕಾರಣವನ್ನು ಇಲ್ಲಿ ಹೇಳಿಲ್ಲ. ಮುಂದೆ ವೇದಾಂತ ಮುಂತಾದ ದರ್ಶನಗಳಲ್ಲಿ ಕಾರಣವನ್ನು ಹೀಗೆ ಹೇಳಿದ್ದಾರೆ. ಸೃಜಿಸಬೇಕಾಗಿರುವ ಪ್ರಪಂಚದಲ್ಲಿ ಜೀವರು ತಮ್ಮ ತಮ್ಮ ಕರ್ಮಫಲಗಳನ್ನು ಅನುಭವಿಸಲು ಏರ್ಪಡಿಸುವುದು ಆ ಮೂಲ ತತ್ವದ ಧರ್ಮವಾಗಿದೆ. ಸೃಷ್ಟಿಲಯಗಳಿಗೆ ಮೊಟ್ಟಮೊದಲೆನ್ನುವುದೇ ಇಲ್ಲ. ಇದು ಅನಾದಿಯಾಗಿ ನಡೆದುಕೊಂಡು ಬರುತ್ತಲೇ ಇದೆ ಎಂದು ಹೇಳಿದ್ದಾರೆ. ಆ ಕಾಮನಾರೂಪ ತತ್ವವು, ಪ್ರಥಮ ಪ್ರವೃತ್ತಿಯು, ಆಪೇಕ್ಷಿಕವಾಗಿಯೇ ಉಂಟಾಗುತ್ತಿರುತ್ತದೆ. ಅದು ಬಟ್ಟೆಯೊಳಗಿರುವ ನೂಲುಗಳಂತೆಯೂ, ಸೂರ್ಯಪ್ರಕಾಶದ ಕಿರಣಗಳಂತೆಯೂ ಒಟ್ಟಿಗೇ ಹತ್ತು ದಿಕ್ಕುಗಳಲ್ಲಿಯೂ ಪ್ರಸರಿಸಿ ಈ ಪ್ರಪಂಚವು ಪಾಂಚಭೌತಿಕ ಜಗತ್ತಿನ ಸೃಷ್ಟಿಯು ಮುಂದುವರಿಯುತ್ತದೆ.

ಇಲ್ಲಿ ನಾವು ಗಮನಿಸಬೇಕಾದ ವಿಶೇಷವೇನೆಂದರೆ — ಈ ನಿರಾಕಾರ ನಿರ್ಗುಣ ಮೂಲ ತತ್ವದಿಂದ ಸಾಕಾರ ಸಗುಣವಾದ, ಚರಾಚರಾತ್ಮಕವಾದ, ಪ್ರಪಂಚದ ಹೊರಹೊಮ್ಮುವಿಕೆಯೂ, ಅಸತ್ ತತ್ವದಿಂದ ಸತ್ ರೂಪವಾದ ಜಡಚೇತನಗಳನ್ನೊಳಗೊಂಡಿರುವ, ಈ ಜಗತ್ತಿನ ಸೃಷ್ಟಿಯೂ, ಅದ್ವೈತ ತತ್ವದಿಂದ ದ್ವೈತ ಸಂಸಾರದ ಪ್ರಸಾರವೂ, ಅಸಂಗ ತತ್ವದಿಂದ ಅಹಂತಾ ಮಮತಾ ಸಂಗವುಳ್ಳ, ಕರ್ತೃತ್ವ ಭೋಕ್ತೃತ್ವ, ಧರ್ಮಾಧರ್ಮ, ಸುಖದುಃಖಗಳ ಸಂಗವುಳ್ಳ, ಪ್ರಾಪಂಚಿಕ ವ್ಯವಹಾರದ ಉದ್ಗಮವೂ, ಹೇಗೆ ಉಂಟಾಗುತ್ತಿರುತ್ತವೆ ? ಎಂಬ ಸಂಶಯಕ್ಕೆ ಉತ್ತರವನ್ನು ಮೇಲಿನಂತೆಯೇ ಹೇಳಬೇಕಾಗಿದೆ. ಇದು ಅನಾದಿಕಾಲದಿಂದ ಬಂದಿದೆ. ಮೊಟ್ಟಮೊದಲು ಎನ್ನುವುದು ಇದಕ್ಕಿಲ್ಲ. ಇದರಿಂದ ಜೀವರು ಸ್ವಸ್ವರೂಪದ ಅಜ್ಞಾನದಿಂದ, ಅಧಿಷ್ಠಾನ ತತ್ವದ ವಾಸ್ತವ ಸ್ವರೂಪದ ತಿಳಿವಳಿಕೆ ಇಲ್ಲದೆ ಇರೋಣದರಿಂದ, ಈ ಸಂಸಾರದಲ್ಲಿ ಅಹಂತಾ ಮಮತಾ ರೂಪವಾದ ಅಭಿಮಾನ ಉಳ್ಳವನಾಗಿರುತ್ತಾನೆ. ಇದು ಬರಿಯ ತೋರಿಕೆ ಮಾತ್ರ

ವಾಗಿರುತ್ತದೆ; ಮತ್ತು ಇದು ತತ್ತ್ವಜ್ಞಾನದಿಂದ ನಿವೃತ್ತವಾಗುತ್ತದೆ, ಎಂದು ಉತ್ತರವನ್ನು ಹೇಳಿದೆ. ಈ ಅಜ್ಞಾನವೂ ಅಭಿಮಾನಿಕವಾದುದು.

ಸಂಸ್ಕೃತಿಯಲ್ಲಿ ಧರ್ಮ ಆಸ್ತಿಕತೆಗಳು.

ಭಾರತಾರ್ಯರ ಸಂಸ್ಕೃತಿಯಲ್ಲಿ ಧರ್ಮದ ತತ್ತ್ವವು ಮುಂದಾಗಿರುವಂತೆಯೇ ಆಸ್ತಿಕತೆಯೂ ಪ್ರಾಮುಖ್ಯವನ್ನು ಪಡೆದಿದೆ. ಆಸ್ತಿಕತೆ ಎಂದರೆ, ದೇವರು ಇದ್ದಾನೆಂದು ನಂಬುವುದು ಮಾತ್ರವಲ್ಲವು. ಮತ್ತೇನೆಂದರೆ, ದೇವರು ನಿತ್ಯನು, ತ್ರಿಕಾಲಾಬಾಧ್ಯನಾಗಿರುತ್ತಾನೆ. ಅವನು ಸರ್ವಜ್ಞನು. ಆದುದರಿಂದಲೇ ನಮ್ಮೆಲ್ಲರ ಕರ್ಮಗಳನ್ನೂ ಕಾಮನೆಗಳನ್ನೂ ತಿಳಿಯುವ ಸಾಕ್ಷಿಯೂ ಆಗಿರುತ್ತಾನೆ. ಹಾಗೆಯೇ ದೇವರು ಸರ್ವಶಕ್ತನು. ಆದುದರಿಂದಲೇ ನಮ್ಮ ಒಳ್ಳೆಯ ಪ್ರಾರ್ಥನೆಗಳನ್ನು ಲಾಲಿಸಿ, ನಮ್ಮ ಕೋರಿಕೆಗಳನ್ನು ಈಡೇರಿಸಿಕೊಡಬಲ್ಲವನಾಗಿದ್ದಾನೆ. ಜೀವರೂ ನಿತ್ಯರು. ಅವರು ಮಾಡುವ ಕರ್ಮಗಳಿಗೆ ದೇವರು ಫಲವನ್ನು ಕೊಡಬಲ್ಲವನು. ದೇವರು ಸರ್ವಶಕ್ತನಾದುದರಿಂದಲೇ ಈ ಎಲ್ಲ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ನಿರ್ವಹಿಸುತ್ತಿರುತ್ತಾನೆ. ಪ್ರಾಣಿಗಳಿಗೂ ಅವರ ಕರ್ಮಗಳಿಗೂ ಪರಸ್ಪರವಾಗಿ ಘರ್ಷಣೆಗೊಂದಲವಾಗದಂತೆ ವ್ಯವಸ್ಥೆಯನ್ನು ಮಾಡುತ್ತಿರುವವನೂ ಅವನೇ. ದೇವರ ಇಚ್ಛೆಯೂ ವ್ಯವಸ್ಥೆಯೂ ಧಾರ್ಮಿಕವಾದುದು. ಭಗವಂತನಾದ ದೇವರ ಇಚ್ಛೆಗೆ ವಿರೋಧವಾಗಿ ನಮ್ಮ ಅಜ್ಞಾನದಿಂದ ನಡೆಯಹೋಗುವುದೇ ಅಧರ್ಮವು. ಆವನ ಇಚ್ಛಾನುಸಾರವಾದ ಶಾಸ್ತ್ರದ ಕಟ್ಟಲೆಯನ್ನು ಅನುಸರಿಸಿ ನಡೆಯುವುದೇ ಧರ್ಮವು. ಧರ್ಮಾಚರಣೆಯಿಂದ ಐಹಿಕವಾದ ಅಭ್ಯುದಯಗಳೂ, ಆಮುಷ್ಮಿಕಗಳಾದ ಸದ್ಗತಿಗಳೂ, ತಪ್ಪದೆ ಉಂಟಾಗುತ್ತವೆ. ಅಧರ್ಮಾಚರಣೆಗೆ ಶಿಕ್ಷೆಯೂ ತಪ್ಪದೆ ಆಗುತ್ತದೆ. ಧರ್ಮವನ್ನೇ ಆಚರಿಸಬೇಕು. ಅಧರ್ಮವನ್ನು ಆಚರಿಸಬಾರದು. ದುಷ್ಟಕಾಮನೆಗಳ ಪೂರ್ತಿಗಾಗಿ ಪ್ರಾರ್ಥಿಸುವ ಜನರೂ ದೇವರು ಇದ್ದಾನೆಂದು ನಂಬಿದ್ದರೂ ಆ ನಂಬಿಕೆಯನ್ನು ಆಸ್ತಿಕತೆ ಎನ್ನಲಾಗುವುದಿಲ್ಲ. ಏಕೆಂದರೆ—ಅದು ಅಧಾರ್ಮಿಕವಾದುದು. ಅಧಾರ್ಮಿಕ

ವಾದ ಪ್ರವೃತ್ತಿಗೆ ಆ ನಂಬಿಕೆಯು ಸಹಾಯಕವಾಗುತ್ತದೆ. ಆದುದರಿಂದ ಅಂಥವರನ್ನೂ ಆಸ್ತಿಕರೆನ್ನಲಾಗದು. ಧರ್ಮತತ್ವವೇ ಈ ಸಂಸಾರಕ್ಕೆ ಪ್ರಪಂಚಕ್ಕೆ ಮೂಲಾಧಾರವಾದ ತತ್ವವಾಗಿರುತ್ತದೆ. "ದರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬ ಶ್ರುತಿ ವಾಕ್ಯದಂತೆ ಇತರ ವಾಕ್ಯಗಳೂ "ಧಾರಣಾದ್ಧರ್ಮ ಇತ್ಯಾಹುಃ ಧರ್ಮೋಧಾರಯತಿಪ್ರಜಾಃ|" "ಧರ್ಮಏವಹತೋಹಂತಿ ಧರ್ಮೋರಕ್ಷತಿ ರಕ್ಷಿತಃ" "ಯತೋಧರ್ಮಃ ತತೋಜಯಃ, ಯತಃ ಅಧರ್ಮಃ ತತಃ ಅಜಯಃ" ಎಂದು ಮುಂತಾದ ಸೂಕ್ತಿಗಳು ಈ ಅಂಶವನ್ನು ಬೋಧಿಸುತ್ತಿವೆ. ದೇವರು ಧರ್ಮಕರ್ಮಗಳ ಸ್ವರೂಪನೂ ಆಗಿದಾನೆ. ಇಂತಹ ಧರ್ಮವನ್ನು ಬೋಧಿಸುವ ಶ್ರುತಿವಾಕ್ಯಗಳು ಪ್ರಮಾಣಗಳು. ಧರ್ಮದ ನಿಯತವಾದ ಸ್ವರೂಪವನ್ನು ಶ್ರುತಿ ಸ್ಮೃತಿಗಳ ಆಧಾರದ ಮೇಲೆಯೇ ನಿರ್ಧರಿಸಬೇಕು. "ತಸ್ಮಾಚ್ಛಾಸ್ತ್ರಂ ಪ್ರಮಾಣಂತೇಕಾರ್ಯಾಕಾರ್ಯವ್ಯವಸ್ಥಿತೌ||" ಭ.ಗೀ. ಇಂತಹ ನಂಬಿಕೆಯೇ ಈ ನಂಬಿಕೆಗೆ ಅನುಸಾರವಾಗಿರುವ ತಿಳಿವಳಿಕೆ ನಡೆವಳಿಕೆಗಳಿಗೇ ಆಸ್ತಿಕತೆ ಎಂದು ಒಪ್ಪಬೇಕು.

**ಧಾರ್ಮಿಕ ಸಂಸ್ಕೃತಿಯಲ್ಲಿ ಪರಮತ ಸಹನೆ.**

ವೈದಿಕಾರ್ಯರ ಸಂಸ್ಕೃತಿಯಲ್ಲಿ ಧಾರ್ಮಿಕತೆ, ಆಸ್ತಿಕತೆಗಳ ಹಾಗೆ ಪರಮತ ಸಹನೆಯು ಮುಖ್ಯವಾದ ಮೂರನೆಯ ಗುಣವಾಗಿದೆ. ಮತಭೇದಗಳನ್ನು ಮನ್ನಿಸುವ ಈ ಗುಣದಿಂದ ಭಾರತಾರ್ಯರ ಸಂಸ್ಕೃತಿಯು ಕಾಲಕ್ರಮದಲ್ಲಿ ಅದಕ್ಕೆ ಬಂದೊದಗಿದ ಇತರ ಸಂಸ್ಕೃತಿಗಳ ಆಘಾತದಿಂದ ನೊಂದು ನಷ್ಟವಾಗದೆ ಉಳಿದು ಊರ್ಜಿತವಾಗಿರುವ ಶಕ್ತಿಯನ್ನು ಪಡೆಯಿತೆನ್ನಬಹುದು. ಈ ಗುಣದಿಂದ ಆರ್ಯರು ಇಂದ್ರ, ಮಿತ್ರ, ಅಗ್ನಿ, ವಾಯು, ವರುಣ ಮುಂತಾದ ಅನೇಕ ದೇವತೆಗಳನ್ನು ಆರಾಧಿಸುತ್ತಿದ್ದರೂ, ನನ್ನ ದೇವರು ಹೆಚ್ಚು ಇತರರು ಪೂಜಿಸುವ ದೇವರು ಕಡಿಮೆ, ನಮ್ಮ ಮತಧರ್ಮವೇ ಶ್ರೇಷ್ಠ ಇತರರ ಮತಧರ್ಮವು ಶ್ರೇಯಸ್ಕರವಲ್ಲ ಎಂಬ ಹಟವನ್ನು ಸಾಧಿಸುತ್ತಾ ಪರಸ್ಪರವಾಗಿ ಜಗಳವಾಡದೆ ಎಲ್ಲರೂ ಪರಮತ ಸಹನೆ, ಸಹಾನು

ಭೂತಿ, ಸಹಕಾರ, ನಮ್ಮಂತೆಯೇ ಇತರರೂ ಎಂಬ ವಿಶಾಲ ಮನೋಭಾವ ಮುಂತಾದ ಸುಗುಣಗಳಿಂದ ಒಬ್ಬರೊಡನೊಬ್ಬರು ಪ್ರೀತಿ ವಿಶ್ವಾಸಗಳಿಂದ ಬಾಳನ್ನು ಮುಂದುವರಿಸುತ್ತಿದ್ದರು. ಈ ಅಂಶವನ್ನು "ಏಕಂ ಸತ್ ವಿಪ್ರಾಬಹುಧಾ ವದಂತಿ" ಎಂಬ ಮೇಲೆ ಉದಾಹರಿಸಿರುವ ಶ್ರುತಿ ವಾಕ್ಯದಿಂದ ಮನಗಾಣಬಹುದು. ಇತರ ಮತೀಯರನ್ನೂ ತಮ್ಮಂತೆಯೇ ಪ್ರಾಮಾಣಿಕರೆಂದೂ, ಇತರರ ಮತಧರ್ಮಗಳು ತಮ್ಮವುಗಳಂತೆಯೇ ಶ್ರೇಯಸ್ಕರಗಳೆಂದೂ ಭಾವಿಸಿ ಗೌರವಿಸುತ್ತಾ, ಅವರನ್ನೂ 'ವಿಪ್ರಾಃ' ಎಂದರೆ, ತಿಳಿದವರು, ವಿದ್ವಾಂಸರು, ಧಾರ್ಮಿಕರು ಎಂದು ಪೂಜಾಪರವಾದ ಮಾತನ್ನು ಹೇಳಿ ವರ್ಣಿಸಿರುತ್ತಾರೆ. ಇದರಿಂದ ಎಂದರೆ, ತಮ್ಮಂತೆಯೇ ಇತರರೂ ಪ್ರಾಮಾಣಿಕರು ಎಂಬ ಭಾವನೆಯು ಪ್ರಮುಖವಾಗಿದ್ದುದರಿಂದ ಅವರ ಮನಸ್ಸು ವಿಶಾಲವಾಗಿರುತ್ತಾ ಸಂಕುಚಿತ ಭಾವವನ್ನು ಬಿಡುವಂತಾಯಿತು. ಅಲ್ಲದೆ, ಇತರರ ಮತ ಧರ್ಮಗಳಲ್ಲಿರುವ ಗುಣಗಳನ್ನು ಗ್ರಹಿಸಿ ತಮ್ಮ ಮತದೊಳಗೆ ಅವನ್ನೂ ಅಳವಡಿಸಿಕೊಳ್ಳುವ ಮನೋಭಾವನೆಯು ಬೆಳೆಯುವಂತಾಯಿತು. ಇದರಿಂದ ಮತ ಪರಿವರ್ತನೆಯಲ್ಲಿ ಹಟವೂ ಆ ಆರ್ಯರ ಮನಸ್ಸಿನಲ್ಲಿ ಅಧಿಕಾರ ಮಾಡಲು ಅವಕಾಶವು ದೊರೆಯಲಿಲ್ಲ. ಇದರ ಫಲ ಪರಿಣಾಮವಾಗಿ ಇತರ ಮತಗಳೂ ಮತಾನುಯಾಯಿಗಳೂ ಭಾರತ ಭೂಮಿಯಲ್ಲಿ ನೆಮ್ಮದಿಯಿಂದ ಬಾಳುವಂತಾಯಿತು. ಈ ಗುಣದ ಸುಫಲವನ್ನು ಮುಂದಿನ ಪ್ರಕರಣದಲ್ಲಿ ಇನ್ನೂ ವಿವರಗಳೊಡನೆ ವಿವರಿಸಲಾಗಿದೆ.

ವೈದಿಕಾರ್ಯರು ಮಾಂಸಾಹಾರಿಗಳೂ ಮದ್ಯಪಾಯಿಗಳೂ ಆಗಿದ್ದರು ಎನ್ನುವುದಕ್ಕೆ ಪ್ರಮಾಣಗಳು ಇವೆ. ಅವರು ದೇವರನ್ನು ಆರಾಧಿಸುವುದರಲ್ಲಿ ತಮಗೆ ಪ್ರಿಯವಾದ ವಸ್ತುಗಳನ್ನು ದೇವರಿಗೆ ಸಮರ್ಪಿಸುವುದು ಸಹಜವಾದ ವಾಡಿಕೆಯಾಗಿತ್ತು. ಹಾಗೆ ದೇವರಿಗೆ ಅರ್ಪಣೆಯನ್ನು ಅಗ್ನಿಯಲ್ಲಿ ಹೋಮದ ಮೂಲಕ ಮಾಡುತ್ತಿದ್ದರು. ದೇವರಿಗೆ ಸಮರ್ಪಿತವಾದ ಮದ್ಯ ಮಾಂಸಗಳಲ್ಲಿ ಒಂದು ಸಂಸ್ಕಾರ

ವಾಗುತ್ತದೆಂದೂ, ಹಾಗೆ ಸಂಸ್ಕೃತವಾದ ಮದ್ಯ ಮಾಂಸಗಳನ್ನು ಪ್ರಸಾದವೆಂದು ಸ್ವೀಕರಿಸುವುದರಿಂದ ಅವರು ತಮ್ಮ ಇಷ್ಟಾರ್ಥಗಳು ಈಡೇರುವುವೆಂದೂ ಭಾವಿಸಿದ್ದರು. ಅಂತಹ ಪ್ರಸಾದನನ್ನು ಅವರು "ಅಮೃತಂ ವಿಘಸೋಯಜ್ಞಶೇಷಭೋಜನಶೇಷಯೋಃ" ಎಂಬ ಕೋಶ ವಾಕ್ಯದಂತೆ ಅಮೃತವೆಂದು ಭಾವಿಸಿ ಸೇವಿಸುತ್ತಿದ್ದರು. ಅವರ ಮತಾಚಾರಗಳು ವಾಸ್ತವಿಕತೆಯ (Realistic nature)ನ್ನು ಬಿಟ್ಟಿರಲಿಲ್ಲ. ಅಲ್ಲದೆ ಆಗಿನ ಕಾಲದ ಆರ್ಯರು ಯಜ್ಞಯಾಗಗಳನ್ನು ಅಗ್ನಿಯಲ್ಲಿ ಹವನ ಹೋಮಗಳಿಂದ ಆಚರಿಸುತ್ತಿದ್ದರು. ಉಪಾಸನಾ ಧ್ಯಾನಗಳಲ್ಲಿ ಅವರು ಹೆಚ್ಚಾದ ಸಾಮರ್ಥ್ಯ ಶಕ್ತಿಗಳನ್ನು ಗಳಿಸಿ ಸಿದ್ಧರಾಗಿದ್ದರು. "ಕೊಟ್ಟರೆ ವರ, ಇಟ್ಟರೆ ಶಾಪ" ಎನ್ನುವ ಹಾಗೆ ಅವರ ಮಾತುಗಳಿಗೆ ಬೆಲೆ ಇತ್ತು. ದಿನಗಟ್ಟಲೆಯ ಆಹಾರಕ್ಕಾಗಿ ಪ್ರಾಣಿ ಹಿಂಸೆಯು ಅಧರ್ಮವೆಂದು ಅನಾವಶ್ಯಕವೆಂದು ಕಂಡುಬಂದ ಕೂಡಲೆ ಹಿಂಸೆಯನ್ನು ಬಿಡುವುದಕ್ಕೂ ಆರಂಭಿಸಿ ಸಿದ್ಧ ಸಂಕಲ್ಪರಾಗಿದ್ದರು. ತಿಳಿವಳಿಕೆಯೂ ನಡೆವಳಿಕೆಯೂ ಹೊಂದಿಕೊಂಡಿರುವುದು ಆರ್ಯರ ಧಾರ್ಮಿಕ ಸಂಸ್ಕೃತಿಯಲ್ಲಿರುವ ಮುಖ್ಯ ಚಿಹ್ನೆಯಾಗಿದೆ.

ಸ್ತ್ರೀಯರ ಸ್ಥಾನ ಮಾನಗಳು.

ವೇದಸಂಹಿತೆಗಳು ಬ್ರಾಹ್ಮಣಗಳು ಉಪನಿಷತ್ತುಗಳು ಇವುಗಳ ಕಾಲದಲ್ಲಿ ಭಾರತಾರ್ಯರು ಸ್ತ್ರೀಯರ ವಿಷಯದಲ್ಲೂ ಉನ್ನತವಾದ ಭಾವವನ್ನು ಹೊಂದಿದ್ದರು. ವಿವಾಹ ಕಾಲದಲ್ಲಿ ನವವಧುವನ್ನು, ಮದವಣಿಗಿತ್ತಿಯನ್ನು ಕುರಿತು ಆಶೀರ್ವಾದವನ್ನು ಮಾಡುವಾಗ ಉಪಯೋಗಿಸುವ ಮಂತ್ರಗಳು ಗಮನಾರ್ಹವಾಗಿವೆ. "ಸಮ್ರಾಜ್ಞೀಶ್ವಶುರೇ ಭವ ಸಮ್ರಾಜ್ಞೀಶ್ವಶ್ರ್ವಾಂ ಭವ। ನನಾಂದರಿ ಸಂರಾಜ್ಞೀ ಭವ ಸಂರಾಜ್ಞೀ ಅಧಿದೇವೃಷು॥" ಋ. ವೇ. ೮, ೩೨೮. ಎಂದರೆ, ಓ ನವ ವಧುವೇ, ನೀನು ನಿನ್ನ ಪತಿಯ ಗೃಹದಲ್ಲಿ ಸಂಸಾರ ಮಾಡುತ್ತಿರುವಾಗ ಮಾವನವರ ಮೇಲೂ ಅತ್ತೆಯವರ ಮೇಲೂ ಗೌರವವು ದೊರೆಯುವ ಪ್ರಭಾವಶಾಲಿಯಾದ ರೀತಿಯಲ್ಲಿ ನಡೆದುಕೊಳ್ಳು

ವವಳಾಗು. ಹಾಗೆಯೇ ನಿನ್ನ ಭಾವಂದಿರ ಮತ್ತು ಮೈದುನರ ವಿಷಯದಲ್ಲೂ ನಿನ್ನ ನಡತೆಯು ಗೌರವಾರ್ಹವಾಗುವಂತಿರಲಿ—ಎಂದು ಈ ಮಂತ್ರದ ಅರ್ಥವಾಗಿದೆ. “ಧರ್ಮೇಚ ಅರ್ಥೇಚ ಕಾಮೇಚ ನಾತಿಚರಿತವ್ಯಾ ತ್ವಯೇಯಂ” ಎಂಬ ನಿಯಮವನ್ನು “ನಾತಿಚರಾಮಿ” ಎಂದು ಒಪ್ಪಿ ಗಂಡನು ಅಗ್ನಿಸಾಕ್ಷಿಕವಾಗಿ ಪ್ರಮಾಣ ವಚನವನ್ನು ಸ್ವೀಕರಿಸುತ್ತಾನೆ. ಅಲ್ಲದೆ, ಗಂಡಹೆಂಡಿರನ್ನು ಒಟ್ಟಿಗೆ ತಿಳಿಸುವ ದಂಪತೀ ಶಬ್ದವು ದಮ ಪತಿ ಶಬ್ದಗಳ ರೂಪಾಂತರವಾಗಿದೆ. ದಮ ಎಂದರೆ ಮನೆ, ಪತಿ ಎಂದರೆ ಯಜಮಾನ ಒಡೆಯ ಎಂದು ಅರ್ಥವಿದೆ. ಆದುದರಿಂದ ಮನೆಗೆ ಗಂಡನೂ ಹೆಂಡತಿಯೂ ಸಮವಾಗಿ ಯಜಮಾನರೆಂದು ಆ ಪದವು ತಿಳಿಸುತ್ತದೆ. ಸಂಸಾರ ಮಾರ್ಗದಲ್ಲಿ ಹೇಗೋ ಹಾಗೆ ವೇದಾಂತ ಮಾರ್ಗದಲ್ಲೂ ಸ್ತ್ರೀಯರು ಮಾನ್ಯವಾದ ಸ್ಥಾನಮಾನಗಳನ್ನು ಪಡೆದಿದ್ದರೆಂಬುದೂ ಗೊತ್ತಾಗುತ್ತದೆ. ಉದಾಹರಣೆಗೆ ಗಾರ್ಗೀ, ಮೈತ್ರೇಯೀ, ಕಾತ್ಯಾಯನೀ ಮುಂತಾದವರನ್ನು ಸೂಚಿಸಬಹುದು. ಪುರಾಣಗಳಲ್ಲಿ ಚೂಡಾಲಾ, ಹೇಮಲೇಖಾ ಮುಂತಾದವರ ಕಥೆಗಳೂ ಪ್ರಸಿದ್ಧವಾಗಿವೆ.

ಗೃಹಸ್ಥ ಧರ್ಮವನ್ನು ತೃಪ್ತಿಕರವಾಗಿ ನಿರ್ವಹಿಸದೇ ಸಂನ್ಯಾಸಾಶ್ರಮ ಧರ್ಮವನ್ನು ಸ್ವೀಕರಿಸಲು ಸಾಮಾನ್ಯವಾಗಿ ಅವಕಾಶವಿರಲಿಲ್ಲ. “ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್” ಎಂಬ ನಿಯಮವನ್ನು ಎಲ್ಲರೂ ಪಾಲಿಸುತ್ತಿದ್ದರು.

ಋಣತ್ರಯ ಸ್ವರೂಪವನ್ನೂ, ಅದರ ನಿರ್ಯಾತನಕ್ರಮವನ್ನೂ ತೈತ್ತಿರೀಯ ಸಂಹಿತೆಯಲ್ಲಿ ಹೀಗೆ ಹೇಳಿದೆ :—

**ಸಂಸ್ಕೃತಿ ಮತ್ತು ಋಣತ್ರಯ.**

“ಜಾಯಮಾನೋವೈ ಬ್ರಾಹ್ಮಣಃ (ಮಾನವಃ) ತ್ರಿಭಿಃ ಋಣವಾ ಜಾಯತೇ । ಬ್ರಹ್ಮಚರ್ಯೇಣ ಋಷಿಭ್ಯಃ । ಯಜ್ಞೇನ ದೇವೇಭ್ಯಃ । ಪ್ರಜಯಾ ಪಿತೃಭ್ಯಃ ಏಷವಾ ಅನೃಣಃ ॥” ತೈತ್ತಿ. ಸಂ. ೬. ೩, ೧೦. ಎಂದರೆ—ಮನುಷ್ಯನು, ಅದರಲ್ಲೂ ಬ್ರಾಹ್ಮಣನು ವಿಶೇಷವಾಗಿ, ಹುಟ್ಟುವಾಗಲೇ ಮೂರು

ಬಗೆಯ ಸಾಲಗಳನ್ನು ಹೊತ್ತುಕೊಂಡೇ ಹುಟ್ಟುತ್ತಾನೆ. ಮೊದಲನೆಯ ದಾಗಿ ತಂದೆ ತಾಯಿಯರು ನಮ್ಮನ್ನು ಹೊತ್ತು ಹೆತ್ತು ಸಾಕಿ ಸಲಹಿ ಈ ದೇಹವನ್ನು ಕೊಟ್ಟು ಉಪಕರಿಸಿರುತ್ತಾರೆ. ಇದಕ್ಕೆ ಪಿತೃ ಋಣವೆಂದು ಹೆಸರು. ಎರಡನೆಯದಾಗಿ ಮಾತಾಪಿತೃಗಳಿಂದಲೂ, ಗುರು ಗಳಿಂದಲೂ, ಗ್ರಂಥಗಳಿಂದಲೂ ನಾವು ತಿಳಿವಳಿಕೆಯನ್ನು ಪಡೆ ಯುತ್ತಾ ಮುಂದುವರಿಯುತ್ತಿರುತ್ತೇವೆ. ಇದು ಋಷಿ ಋಣವೆನಿಸು ತ್ತದೆ. ಮೂರನೆಯದಾಗಿ ಹಾಲು, ಸಸ್ಯ, ದವಸ ಮುಂತಾದ ಆಹಾರಗಳಿಂದ ನಾವು ಬೆಳೆಯುತ್ತೇವೆ. ನೆಲ, ನೀರು, ಶಾಖ, ಗಾಳಿ, ಆಕಾಶ, ಅವಕಾಶ ಬೆಳಕುಗಳಿಲ್ಲದೆ ಬದುಕಲಾರೆವು. ಹೀಗೆ ತಂದೆ ತಾಯಿಯರು, ಗುರುಗಳು, ಇತರ ಜನರು, ಪ್ರಾಣಿಗಳು, ಸಸ್ಯಗಳು ಮುಂತಾದ ಪಂಚಭೂತಗಳಿಂದ ನಾವು ಉಪಕಾರವನ್ನು ಪಡೆದಿರು ತ್ತೇವೆ. ಇದರಂತೆಯೇ ಸಮಾಜವೂ ಸರ್ಕಾರವೂ ದೇಶದಲ್ಲಿ ಶಾಂತಿ ನೆಮ್ಮದಿಗಳನ್ನು ಕಾಪಾಡುತ್ತಾ, ನಮಗೆ ಸುಖ ಸೌಕರ್ಯಗಳನ್ನು ಒದಗಿಸುತ್ತಾ ನಮ್ಮ ಸುಖಕ್ಕೆ ಕಾರಣವಾಗಿವೆ. ಆದುದರಿಂದ ಈ ಮಾನವನು ಬ್ರಹ್ಮಚರ್ಯದಿಂದ ಋಷಿ ಋಣವನ್ನೂ, ಯಜ್ಞಯಾಗಾ ಚರಣೆಗಳಿಂದ ದೇವ ಋಣವನ್ನೂ, ಮಕ್ಕಳನ್ನು ವಿವಾಹಿತಳಾದ ಹೆಂಡತಿ ಯಲ್ಲಿ ಪಡೆಯುವುದರಿಂದ ಪಿತೃ ಋಣವನ್ನೂ ತೀರಿಸಿ ಋಣಮುಕ್ತನಾಗ ಬೇಕಾಗಿದೆ. ಎಂದು ಭಾವವು.

ಆದುದರಿಂದ "ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ ||" ಎಂದರೆ, ಈ ಮೂರು ಸಾಲಗಳನ್ನು ತೀರಿಸಿದ ಮೇಲೆಯೇ ಪರಮಪುರುಷಾರ್ಥವಾದ ಮೋಕ್ಷವನ್ನು ಪಡೆಯಲೂ ಅರ್ಹತೆಯುಂಟಾಗುತ್ತದೆ. ಇದರಿಂದ ವೇದಾಂತೋಪದೇಶವು ಜನರನ್ನು ಐಹಿಕವಾದ ವ್ಯವಹಾರಗಳಲ್ಲಿಯೂ ಮಾನವರಿಗೆ ಇರ ಬೇಕಾದ ಚಟುವಟಿಕೆಗೆ ಅಡ್ಡಿಯಾಗುತ್ತದೆ ಎಂಬ ಆಕ್ಷೇಪಣೆಗೆ ಅವಕಾಶವಿಲ್ಲವೆಂಬ ಅಂಶವನ್ನು ಗಮನಿಸಬೇಕು. ಇದರಂತೆಯೇ "ಕೃತೇಚ ಪ್ರತಿಕರ್ತವ್ಯಂ ಏಷ ಧರ್ಮಸ್ಸನಾತನಃ ||" ಎಂದರೆ, ನಾವು

ಉಪಕಾರವನ್ನು ಪಡೆದರೆ ನಾವೂ ನಮ್ಮ ಸರದಿಯಲ್ಲಿ ಪ್ರತ್ಯುಪಕಾರವನ್ನು ಮಾಡಿ ಕೃತಾರ್ಥರಾಗಬೇಕೆಂದು ಸನಾತನವಾದ ಎಂದರೆ, ತ್ರಿಕಾಲಗಳಲ್ಲೂ ಎಲ್ಲ ದೇಶಗಳಲ್ಲೂ ಒಪ್ಪಿಗೆಯನ್ನು ಪಡೆಯಬೇಕಾದ ಶಾಶ್ವತವಾಗಿರುವ ಧರ್ಮವಾಗಿರುತ್ತದೆ. ಇದು ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ವಿಶೇಷಗುಣವಾಗಿದೆ. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಬೆಳೆದ ಪ್ರತಿಯೊಬ್ಬ ವ್ಯಕ್ತಿಯೂ ಮುಖ್ಯವಾಗಿ ತನ್ನ ಹಕ್ಕು ಬಾಧ್ಯತೆ, ಸ್ವಾತಂತ್ರ್ಯಗಳಿಗಾಗಿ ಹೋರಾಡುವುದೂ ಹೊಡೆದಾಡುವುದೂ ಸಹಜವಾದ ಗುಣವಾಗಿರುವಂತೆ ಕಾಣಬರುತ್ತಿದೆ. ಇದು ಗುಣವೆಂಬುದೇನೋ ನಿಜ. ಆದರೂ ಇದು ಮಿತಿಮೀರಬಾರದು. ಮಿತಿಮೀರಿದರೆ ಗುಣವೂ ದೋಷವಾಗುತ್ತದೆ. ಹೇಗೆಂದರೆ ದೇಶಾಭಿಮಾನವೂ, ಕುಲಾಭಿಮಾನವೂ ಗುಣಗಳೇ ಹೌದು. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ॥" ಎಂದು ನಮ್ಮ ಹಿರಿಯರೂ ಒಪ್ಪಿದ್ದಾರೆ. ಆದರೆ ಇವು ಮಿತಿಯಲ್ಲಿರಬೇಕು. ಇವು ಮಿತಿಮೀರಿ ಬೆಳೆದರೆ ತಮ್ಮ ದೇಶದ ಹಿತಕ್ಕಾಗಿ ತಮ್ಮ ಜನಾಂಗದ ಸುಖಕ್ಕಾಗಿ ಇತರ ದೇಶಗಳನ್ನೂ ಜನಾಂಗಗಳನ್ನೂ ಕೊಳ್ಳೆಹೊಡೆಯುವುದೂ, ಸೂರೆ ಮಾಡುವುದೂ, ಅಧರ್ಮವಲ್ಲವೆಂದೂ, ಕರ್ತವ್ಯಧರ್ಮವೆಂದೂ ಭ್ರಾಂತಿಯುಂಟಾಗುವುದೂ ಸಹಜವಾಗಿರುತ್ತದೆ. ಇದರಿಂದಲೇ ಪಾಶ್ಚಾತ್ಯರು ತಮ್ಮ ದೇಶದ ಜನಾಂಗದ ಏಳಿಗೆಗೆ. ಐಶ್ವರ್ಯ, ಸುಖ–ಇವುಗಳ ಸಾಧನೆಗಾಗಿ ಇತರ ದೇಶಗಳನ್ನು ತಮ್ಮ ಸೌಕರ್ಯಕ್ಕಾಗಿ ಉಪಯೋಗಿಸಿಕೊಂಡರು. ಅದರಲ್ಲೂ ಇತರ ದೇಶಗಳು ತಿಳಿವಳಿಕೆಯಲ್ಲಿ ಹಿಂದೆ ಬಿದ್ದಿದ್ದರಂತೂ ಅವನ್ನು ತಮಗೆ ತುಂಬ ಅನುಕೂಲ್ಯವನ್ನು ಒದಗಿಸುವಂತೆ ಮಾಡಿಕೊಂಡುದು ಸುಲಭವಾಯಿತು. ತಮ್ಮ ಕೈಗಾರಿಕೆಗಳನ್ನು ಹೆಚ್ಚಿಸಲು ಇತರರ ಕೈಗಾರಿಕೆಗಳನ್ನು ಹಾಳು ಮಾಡಲೂ ಹಿಂಜರಿಯಲಿಲ್ಲ. ತಮ್ಮ ಅಧಿಕಾರಕ್ಕೆ ಇತರ ದೇಶಗಳನ್ನು ಸೇರಿಸಿಕೊಂಡು ಚಕ್ರಾಧಿಪತ್ಯಗಳನ್ನು ಕಟ್ಟಿದರು. ವಸಾಹತುಗಳನ್ನು ಸ್ಥಾಪಿಸಿ ಅವನ್ನು ತಮ್ಮ ವ್ಯಾಪಾರಕ್ಕೂ ದ್ರವ್ಯಾರ್ಜನೆಗೂ ಮಾರುಕಟೆ

ಗಳನ್ನಾಗಿಯೂ ಮೂಲಗಳನ್ನಾಗಿಯೂ ಮಾಡಿಕೊಂಡರು. ಇತರರಿಗೂ ತಿಳಿವಳಿಕೆಯೂ ಶಕ್ತಿಸಾಮರ್ಥ್ಯಗಳೂ ಬಂದಕೂಡಲೆ ಈ ಸ್ವಾರ್ಥ ಪ್ರಯತ್ನಗಳಿಗೆ ತಡೆಯುಂಟಾಯಿತು. ನಮ್ಮಂತೆಯೇ ಇತರರೂ ಸುಖವಾಗಿ ಸ್ವತಂತ್ರವಾಗಿ ಬಾಳಲು ಹಕ್ಕುಳ್ಳವರು—ಎಂಬ ಭಾವನೆಯೇ ಧರ್ಮದ, ವಿಶ್ವಧರ್ಮದ ಮೊದಲನೆಯ ಸ್ವರೂಪವು. ಈ ಮೇಲೆ ಹೇಳಿದ ದೇಶಾಭಿಮಾನ ಕುಲಾಭಿಮಾನಗಳು ಮಿತಿಮೀರಿದ್ದರಿಂದ ಈ ಧರ್ಮಕ್ಕೆ ಗ್ಲಾನಿಯುಂಟಾಗಿ, ಅವು ಅಧರ್ಮಗಳೆಂಬುದು ಜನರಿಗೂ ಗೊತ್ತಾಗಿದೆ. ಆದರೂ ಪಾಶ್ಚಾತ್ಯರ ಈ ಸಂಪರ್ಕದಿಂದ ಒಳ್ಳೆಯ ಫಲಗಳೂ ಉಂಟಾದುವೆಂಬುದನ್ನು ಗಮನಿಸದೆ ಇರಲಾಗುವುದಿಲ್ಲ. ಆದರೆ ಉಪಕಾರಕ್ಕಿಂತಲೂ ಅಪಕಾರವೇ ಹೆಚ್ಚಾಗಿದೆ ಎಂಬುದನ್ನೂ ಮರೆಯಲಾಗುವುದಿಲ್ಲ.

ಆದುದರಿಂದ ಮೇಲೆ ಹೇಳಿದ ಮೂರು ಸಾಲಗಳನ್ನೂ ಪ್ರತಿಯೊಬ್ಬರೂ ತೀರಿಸುವುದಕ್ಕೆ ಪ್ರಯತ್ನಿಸಬೇಕಾದುದು ಎಲ್ಲರಿಗೂ ಧರ್ಮವಾಗಿದೆ.

" ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಂ ।
ಆತ್ಮನಃ ಪ್ರತಿಕೂಲಾನಿ ಪರೇಷಾಂ ತಾನಿ ನಾಚರೇತ್ ॥ "

—ಯಾಜ್ಞವಲ್ಕ್ಯ ಸ್ಮೃತಿ 23 III—65.

" ಆತ್ಮನೋ ಯದ್ಯದಿಷ್ಟಂ ಸ್ಯಾತ್ ಪರೇಷಾಂ ತತ್ತದಾಚರೇತ್ ।
ಆತ್ಮನೋ ಯದನಿಷ್ಟಂ ಸ್ಯಾತ್ ಪರೇಷಾಂ ನ ತದಾಚರೇತ್ ॥ "

" ಅಷ್ಟಾದಶ ಪುರಾಣೇಷು ವ್ಯಾಸಸ್ಯ ವಚನ ದ್ವಯಂ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥"

ಇವುಗಳ ಅರ್ಥವನ್ನು ಮುಂದಿನ ಪ್ರಕರಣದಲ್ಲಿ ವಿವರಿಸುವುದು ಪ್ರಕರಣಕ್ಕೆ ಹೊಂದುತ್ತದೆ. ಮೇಲೆ ಶ್ರುತಿಯಲ್ಲಿ ಹೇಳಿದ ಮೂರು ಬಗೆಯ ಸಾಲಗಳನ್ನು ತೀರಿಸುವ ಕ್ರಮವು ಹೀಗಿದೆ :—

ಋಣತ್ರಯವನ್ನು ತೀರಿಸುವ ಬಗೆ.

ಮೊದಲನೆಯದಾಗಿರುವ ಪಿತೃಋಣವನ್ನು ತೀರಿಸುವುದು ಹೇಗೆಂದರೆ : ತಂದೆತಾಯಿಯರು ಹೇಳಿದ ಬುದ್ಧಿವಾದಗಳನ್ನು ಕೇಳುತ್ತಾ ಅದರಂತೆ

ಮನಃಪೂರ್ವಕವಾಗಿ ನಡೆದುಕೊಳ್ಳುವುದು, ಅವರು ವೃದ್ಧರಾಗಿ ಅಶಕ್ತರಾದಾಗ ಅವರಿಗೆ ಆ ಮುಪ್ಪಿನಲ್ಲಿ ಸೇವೆಯನ್ನು ಸಲ್ಲಿಸಿ ಕಾಪಾಡುವುದು, ಅವರು ಸ್ವರ್ಗಸ್ಥರಾದ ಮೇಲೆ ಅವರ ತೃಪ್ತ್ಯರ್ಥ ವಾಗಿ ಶ್ರಾದ್ಧ ಮುಂತಾದ ಕರ್ಮಗಳನ್ನು ಆಚರಿಸುವುದು-ಇವು ಗಳಿಂದ ತಂದೆತಾಯಿಯರ ಸಾಲವನ್ನು ತೀರಿಸಬಹುದು. ಇಂತಹ ಅವಕಾಶವು ಎಲ್ಲರಿಗೂ ದೊರೆಯದೆ ಹೋಗಬಹುದು. ಆಗ ಅಂತಹ ಮಕ್ಕಳು ಪ್ರಾಯಕ್ಕೆ ಬಂದಕೂಡಲೆ ಗೃಹಸ್ಥರಾಗಿ ತಾವೂ ಮಕ್ಕಳನ್ನು ಪಡೆದು ಕಾಪಾಡಿ ಮುಂದಕ್ಕೆ ಬರುವಂತೆ ಮಾಡುವುದರಿಂದ ಎಲ್ಲರೂ ಪಿತೃಋಣವನ್ನು ತೀರಿಸಬಹುದು. ಇದರಿಂದ ಮನೆಯಲ್ಲೂ ದೇಶ ದಲ್ಲೂ ಶಾಂತಿ ಸುಖಗಳು ದೊರೆಯುವಂತಾಗುತ್ತದೆ.

ಎರಡನೆಯದಾದ ಋಷಿ ಋಣವನ್ನು ತೀರಿಸುವ ಬಗೆಯು ಹೀಗಿರುತ್ತದೆ. ಗುರುವಿನಿಂದ ತಿಳಿವಳಿಕೆಯನ್ನು ಪಡೆದ ಶಿಷ್ಯನು ಗುರುವಿಗೆ ತಿರುಮಂತ್ರವನ್ನು ಉಪದೇಶಿಸಲು ಹೊರಡಬಾರದು. ತಾನು ಪಡೆದಿರುವ ತಿಳಿವಳಿಕೆಯನ್ನು ಇತರರಲ್ಲೂ ಹರಡಿ, ಪಾಠ ಪ್ರವಚನಗಳನ್ನು ಮಾಡಿ, ಪುರಾಣ ವ್ಯಾಖ್ಯಾನಗಳನ್ನು ನೆರವೇರಿಸಿ, ಗ್ರಂಥರಚನೆಯನ್ನು ಮಾಡಿ, ಅಥವಾ ಉಪನ್ಯಾಸಗಳನ್ನು ಕೊಟ್ಟು, ಸಾಧ್ಯವಾದರೆ ಇದೆಲ್ಲವನ್ನೂ ಮಾಡಿ ಋಷಿ ಋಣವನ್ನು ತೀರಿಸ ಬೇಕಾಗಿರುತ್ತದೆ. ತಿಳಿವಳಿಕೆಯಂತೆ ನಡೆವಳಿಕೆಯನ್ನೂ ಮೇಲ್ಪಡಿಸಿ ಕೊಳ್ಳುತ್ತಾ ಇತರರಿಗೆ ಮೇಲುಪಂಕ್ತಿಯನ್ನು ಹಾಕಿಕೊಟ್ಟು, " ಉಪ ದೇಶಕ್ಕಿಂತ ಉದಾಹರಣೆ ಮೇಲು " ಎಂಬ ನಾಣ್ಣುಡಿಯನ್ನು ಮಾದರಿ ಯಿಂದ ತೋರಿಸುತ್ತಿರಬೇಕು. ಇದರಿಂದ ಅಧ್ಯಯನ, ಬೋಧನ, ಆಚರಣ, ಪ್ರಚಾರಣ ಕಾರ್ಯಗಳು ಯಶಸ್ವಿಯಾಗಿ ನೆರವೇರು ವಂತಾಗಬೇಕಾಗಿದೆ. ಸಂಸ್ಕೃತಿ ಪ್ರಚಾರ ಕಾರ್ಯವು ಹೀಗೆ ತೃಪ್ತಿ ಕರವಾಗಿ ಮುಂದುವರಿಯುತ್ತದೆ. ಇನ್ನು ಮೂರನೆಯದಾದ ದೇವ ಋಣವನ್ನು ತೀರಿಸುವ ಮಾರ್ಗವನ್ನು ಹೀಗೆ ವಿವರಿಸಬಹುದು ; ಯಜ್ಞಯಾಗಗಳನ್ನು ಆಚರಿಸುವುದರಿಂದ ದೇವಋಣವು ಪರಿಹಾರ

ವನ್ನು ಪಡೆಯುತ್ತದೆ. ಯಾಗಾನುಷ್ಠಾನದಲ್ಲಿ ಮಧುಪರ್ಕವನ್ನು ದೇವತೆಗಳಿಗೆ ಕೊಡುವ ಸಂದರ್ಭದಲ್ಲಿ ಮದ್ಯಮಾಂಸಗಳನ್ನೂ ಉಪಯೋಗಿಸುವುದು ವಾಡಿಕೆಯಾಗಿತ್ತು. ಸೋಮರಸವು ಒಂದು ಬಳ್ಳಿಯ ರಸವಾಗಿದೆ. ಇದರ ಸಾರವನ್ನು ವೈದಿಕಾರ್ಯರು ಧಾರಾಳವಾಗಿ ಪಾನಮಾಡುತ್ತಿದ್ದರು. ಆದರೂ ಇದರಲ್ಲಿ ತುಂಬ ಮಿತಿಯನ್ನು ಅನುಸರಿಸುತ್ತಿದ್ದರು. ಆದುದರಿಂದಲೇ ಮದ್ಯಪಾನದಿಂದ ಅಮಲುಂಟಾಗಿ ಕುಡಿದವರ ನಡೆವಳಿಕೆಯು ಅಸಹ್ಯಕರವೂ ಅಪಾಯಕರವೂ ಆಗುತ್ತಿದ್ದ ಉದಾಹರಣೆಗಳ ಉಲ್ಲೇಖವನ್ನು ನಾವು ಕಾಣುವುದಿಲ್ಲ. ಜನಜೀವನವನ್ನು ಪ್ರತಿಬಿಂಬಿಸುವ ಸಾಹಿತ್ಯದಲ್ಲಿ, ಎಂದರೆ ಆಗಿನ ವೇದಮಂತ್ರಗಳು, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳು— ಇವುಗಳಲ್ಲಿ ಕುಡುಕರ ವರ್ಣನೆಯು ಕಾಣಬರುವುದಿಲ್ಲ. ಸೋಮರಸದ ಆಸ್ವಾದನೆಯ ಸುಖವನ್ನೂ, ಸೋಮಲತೆಯ ವರ್ಣನೆಯನ್ನೂ ಮುಖ್ಯವಾಗಿ ತಿಳಿಸುವ ಪವಮಾನಸೂಕ್ತಗಳಲ್ಲಿ ನೂರಾರು ಮಂತ್ರಗಳಿವೆ. ಅಲ್ಲೂ ಈ ಅಂಶವನ್ನು ಹೆಚ್ಚಾಗಿ ಕಾಣಲಾಗುವುದಿಲ್ಲ. ಮದ್ಯಮಾಂಸಗಳ ಉಪಯೋಗವು ಅತಿಯಾಗಿತ್ತೆಂದೂ, ಮಾಂಸಾಹಾರವು ಮಿತಿಮೀರಿತ್ತೆಂದೂ ಯಾಗಾನುಷ್ಠಾನದ, ಧರ್ಮಾಚರಣೆಯ ನೆಪದಿಂದ ಆ ದುಷ್ಟಪದ್ಧತಿಗಳು ಮೇರೆ ಮೀರಿದ್ದುವೆಂದೂ, ಬುದ್ಧದೇವನೂ ಜಿನದೇವನೂ ಅವತರಿಸಿ ಈ ಅಧರ್ಮವನ್ನು ನಿವಾರಿಸಬೇಕಾಗಿಬಂದು ಅವರು ಹಾಗೆ ಮಾಡಿದರೆಂದೂ, ಈಚಿನ ಚರಿತ್ರೆ ಗ್ರಂಥಗಳಲ್ಲಿ ಬರೆದಿರುವುದು ಅತಿಶಯೋಕ್ತಿಯಿಂದ ಕೂಡಿವೆ. ಎಷ್ಟರ ಮಟ್ಟಿಗೆ ನಿಜಾಂಶವನ್ನು ತಿಳಿಸುತ್ತವೆಂಬುದನ್ನು ಶೋಧಿಸಿ ನೋಡಬೇಕಾಗಿದೆ. "ವ್ಯವಸ್ಥಿತಿಸ್ತಾಸು ವಿವಾಹ ಯಜ್ಞಸುರಾಗ್ರಹೈರಾಸು ನಿವೃತ್ತಿರಿಷ್ಟಾ" ಎಂದರೆ, ಅವಲ್ಲಿ ಮಿತಿ ಇರಬೇಕು, ಅವನ್ನು ಬಿಡುವುದೇ ಲೇಸು. ಈ ಉಪದೇಶಗಳು ಆಗ ಆಚರಣೆಯಲ್ಲಿದ್ದುವು.

ಮಕ್ಕಳಾಗಬೇಕೆಂಬ ಇಚ್ಛೆಯುಂಟಾದಾಗ ಪುತ್ರಕಾಮೇಷ್ಟಿಯನ್ನು ನೆರವೇರಿಸುವುದೂ, ಬೆಳೆ ಚೆನ್ನಾಗಬೇಕೆಂದು ಆಶೆಯುಂಟಾ

ದಾಗ ಕಾರೀರೀಷ್ಟಿಯನ್ನೂ, ಆಗ್ರಯಣೇಷ್ಟಿಯನ್ನೂ, ಮಳೆ ಬರ ಬೇಕೆಂದು ಬಯಸಿದಾಗ ಪರ್ಜನ್ಯಸೂಕ್ತ ಜಪ ಇಷ್ಟಿಗಳನ್ನೂ ವೈದಿಕಾರ್ಯರು ಆಚರಿಸುತ್ತಿದ್ದರು. ಇಷ್ಟಿಗಳಲ್ಲಿ ಮದ್ಯಮಾಂಸಗಳನ್ನು ಉಪಯೋಗಿಸುತ್ತಿರಲಿಲ್ಲ. ಪಶುಹಿಂಸೆಯನ್ನೂ ಮದ್ಯಪಾನವನ್ನೂ ಆಚರಿಸಬೇಕಾಗುವ ಯಜ್ಞಯಾಗಗಳು ಇರಲಿಲ್ಲವೆಂದಲ್ಲವು. ಆ ದೊಡ್ಡ ಕರ್ಮಗಳು ಬಹುದ್ರವ್ಯ ವ್ಯಯದಿಂದಲೂ ಬಹುಜನ ವಿದ್ವಾಂತರ ನೆರವಿನಿಂದಲೂ ನೆರವೇರಿಸಬೇಕಾಗಿದ್ದುದರಿಂದ ಅವುಗಳನ್ನು ಆಚರಿಸುವುದು ಅತ್ಯಂತವಾಗಿ ವಿರಳವಾಗಿತ್ತೆಂದೇ ಹೇಳಬೇಕು. ಜೈನ ಬೌದ್ಧಮತಗಳು ಕ್ರಿ.ಪೂ. 7 ಮತ್ತು 6ನೆಯ ಶತಮಾನಗಳಲ್ಲಿ ಉಂಟಾಗಿ ಹರಡುತ್ತಾ ಬಂದುವೆನ್ನುವುದು ಚರಿತ್ರೆಯಿಂದಲೂ ಗೊತ್ತಾಗಿದೆ. ಮುಂಡಕ ಮುಂತಾದ ಉಪನಿಷತ್ತುಗಳಲ್ಲಿ ಕರ್ಮಕಾಂಡದ ಪ್ರಾಮುಖ್ಯವನ್ನು ಆ ವೈದಿಕಾರ್ಯರೇ ಅಲ್ಲಗಳೆದು, ಮದ್ಯ ಮಾಂಸಗಳ ದೋಷವನ್ನು ಮನಗಂಡು ಅವನ್ನು ಕಲಿವರ್ಜ್ಯದಲ್ಲಿ ಸೇರಿಸಿ ಅವುಗಳ ಉಪಯೋಗವನ್ನು ಕರ್ಮಗಳಲ್ಲಿ ನಿಷೇಧಿಸಿದ್ದರು. ಈ ಮುಂಡಕ ಮುಂತಾದ ಉಪನಿಷತ್ತುಗಳು ಜೈನ ಬೌದ್ಧರ ಕಾಲಕ್ಕಿಂತ ಹಿಂದಿನವೆಂಬುದೂ ಗೊತ್ತಾಗಿದೆ. ಆದುದರಿಂದ ಕರ್ಮಗಳಲ್ಲಿ ಬ್ರಾಹ್ಮಣರು ಮದ್ಯಮಾಂಸಗಳ ಉಪಯೋಗವನ್ನು ಬಿಟ್ಟಿದ್ದರೆಂದೇ ಹೇಳಬೇಕು. ಅಷ್ಟೇ ಅಲ್ಲದೆ ಕರ್ಮಮಾರ್ಗವನ್ನೇ, ಎಂದರೆ ಸಕಾಮ ಕರ್ಮಾಚರಣೆಯಿಂದ ಐಹಿಕವಾದ ಅಭ್ಯುದಯ ಆಮುಷ್ಮಿಕವಾದ ಸದ್ಗತಿಗಳನ್ನು ಪಡೆಯುತ್ತಾ ಜನನ ಮರಣ ಚಕ್ರ ರೂಪವಾದ ಈ ಸಂಸಾರದಲ್ಲಿ ಬಳಸುತ್ತಾ ಬಳಲುತ್ತಿರುವುದನ್ನೂ ತೆಗಳಿದರು. ಅದರ ಬದಲು ಜ್ಞಾನ ಮಾರ್ಗವನ್ನು ಹೊಗಳಿ ಅದರಿಂದ ಆಗುವ ನಿತ್ಯಾನಂದ ರೂಪವಾದ ಮೋಕ್ಷವೆಂಬ ಪರಮ ಪುರುಷಾರ್ಥವೇ ಮಾನವನ ಗುರಿ ಎಂದು ಸಾರಿ ಹೇಳುತ್ತಾ ಆಚರಣೆಗೆ ಬರುವಂತೆ ಮಾಡುತ್ತಿದ್ದರೆಂಬುದೂ ಈ ಮುಂಡಕೋಪನಿಷತ್ತಿನ ಮಂತ್ರಗಳಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ. "ಯಸ್ಯಾಗ್ನಿ

ಹೋತ್ರಮದರ್ಶ ಮಪೌರ್ಣಮಾಸಂ ಅಚಾತುರ್ಮಾಸ್ಯಂ ಅನಾಗ್ರಯಣಂ ಅತಿಥಿವರ್ಜಿತಂ ಚ। ಅಹುತಮ ವೈಶ್ವದೇವಂ ಅವಿಧಿನಾ ಹುತಂ ಆಸಪ್ತಮಾನ್ ತಸ್ಯ ಲೋಕಾನ್ ಹಿನಸ್ತಿ ॥" (ಮುಂಡಕೋಪನಿಷತ್ ೨ ೩.) ಬ್ರಹ್ಮಚಾರಿಯು ವಿದ್ಯಾಭ್ಯಾಸ ಮಾಡುವಾಗ ಪ್ರತಿದಿನವೂ ಸಂಧ್ಯಾವಂದನೆಯನ್ನು ಮಾಡಿದ ಅನಂತರದಲ್ಲಿ ಅಗ್ನಿಕಾರ್ಯವನ್ನು ಪ್ರಾತಃಕಾಲ ಸಾಯಂಕಾಲಗಳಲ್ಲಿ ಮಾಡುತ್ತಿದ್ದನು ಅವನು ಗೃಹಸ್ಥನಾದಮೇಲೆ ಗೃಹ್ಯಾಗ್ನಿಯಲ್ಲಿ ಔಪಾಸನ ಕರ್ಮದಿಂದ ಅಗ್ನಿಸೇವೆಯನ್ನು ಮಾಡುತ್ತಿದ್ದು, ಆಧಾನ ಕರ್ಮದಿಂದ ಶ್ರೌತಾಗ್ನಿಯನ್ನು, ಅರಣಿಯಲ್ಲಿ ಮಥನದಿಂದ ಪಡೆದ ಅಗ್ನಿಯನ್ನು, ಆರಾಧಿಸಲು ಅಗ್ನಿ ಹೋತ್ರವನ್ನು ಪ್ರತಿನಿತ್ಯವೂ ಆಚರಿಸುತ್ತಿದ್ದನು. ಪ್ರತಿ ಪೂರ್ಣಿಮಾ ದಿನಗಳಲ್ಲಿ ಪೌರ್ಣಮಾಸೇಷ್ಟಿಯನ್ನೂ, ಅಮಾವಾಸ್ಯೆಗಳಲ್ಲಿ ದರ್ಶೇಷ್ಟಿಯನ್ನೂ, ನಾಲ್ಕು ತಿಂಗಳಿಗೊಂದಾವೃತ್ತಿ ಚಾತುರ್ಮಾಸ್ಯೇಷ್ಟಿಯನ್ನೂ, ವರ್ಷಕ್ಕೊಂದಾವೃತ್ತಿ ಆಗ್ರಯಣೇಷ್ಟಿಯನ್ನೂ ಆಚರಿಸಬೇಕೆಂದು ಮೇಲಿನ ಮಂತ್ರದಲ್ಲಿ ವಿಧಿಸಿದೆ. ಇದು ನಿತ್ಯಕರ್ಮವು, ಬಿಟ್ಟರೆ ಪಾಪವುಂಟಾಗುತ್ತದೆ. ಪರದಲ್ಲಿ ದುರ್ಗತಿಯಾಗುತ್ತದೆ. ಇಹದಲ್ಲೂ ಕೆಡಕಾಗುತ್ತದೆ—ಎಂದೂ ಇಲ್ಲಿ ಹೇಳಿದೆ. ಇಂತಹ ಕರ್ಮಗಳಲ್ಲಿ ಮದ್ಯಮಾಂಸಗಳ ಉಪಯೋಗದ ಪ್ರಸ್ತಾಪವೇ ಇಲ್ಲ. ಇಂತಹ ಧರ್ಮಾಚರಣೆಯ ಫಲವಾದ ಸದ್ಗತಿ ಪ್ರಾಪ್ತಿಯ ಪ್ರಕಾರವನ್ನೂ "ಏಹ್ಯೇಹೀತಿ ತಮಾಹುತಯಃ ಸುವರ್ಚಸಃ ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹಂತಿ । ಪ್ರಿಯಾಂ ವಾಚಮಭಿವದಂತ್ಯೋಽರ್ಚಯಂತ್ಯಃ ಏಷ ವಃ ಪುಣ್ಯಸ್ಸುಕೃತೋ ಬ್ರಹ್ಮಲೋಕಃ ॥" ೨. ೬. ಎಂದು ಮುಂತಾಗಿ ವರ್ಣಿಸಿದೆ. ಅಲ್ಲದೆ ಯಾವುದೂ ಅತಿಯಾಗದೆ ಮಿತಿಯಲ್ಲಿರಬೇಕೆಂಬ ಎಚ್ಚರಿಕೆಯನ್ನೂ ವೈದಿಕಾರ್ಯರು ಆಚರಣೆಗೆ ತರುತ್ತಿದ್ದರೆಂಬ ಅಂಶವನ್ನು "ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ । ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ ಜರಾಮೃತ್ಯುಂತೇ ಪುನರೇವಾಪಿಯಂತಿ ॥" ೨.೭.

"ಇಷ್ಟಾಪೂರ್ತಂ ಮನ್ಯಮಾನಾವರಿಷ್ಠಂ...." ಎಂಬ ಮುಂಡಕೋಪನಿಷತ್ತಿನ ಮಂತ್ರಗಳಿಂದಲೂ ತಿಳಿಯಬಹುದಾಗಿದೆ. "ನಾಮಾಂಸೋ ಮಧುಪರ್ಕಃ" ಎಂದು ವಿಧಿಸಿದ್ದರೂ ಕಲಿವರ್ಜ್ಯವಚನವೂ "ಅತಿ ಸರ್ವತ್ರ ವರ್ಜಯೇತ್" "ಅತ್ಯುನ್ನತಿಃ ಪತನಹೇತುಃ" ಎಂಬ ಎಚ್ಚರಿಕೆಯ ಮಾತುಗಳು ಆಗಿನ ಜನರನ್ನೂ ಸಮಸ್ಥಿತಿಯಲ್ಲಿರುವಂತೆ ಮಾಡುತ್ತಿದ್ದುವೆಂಬುದನ್ನು ಮರೆಯಲಾಗುವುದಿಲ್ಲ ಹೀಗೆ ಪಂಚಮಹಾಯಜ್ಞಗಳ ಆಚರಣೆಯಿಂದ ದೇವಋಣವನ್ನು ತೀರಿಸಬೇಕೆಂದು ತಿಳಿದು ಹಾಗೆ ಆಚರಿಸುತ್ತಿದ್ದರು.

ಈ ಋಣತ್ರಯಾಪಾಕರಣವು ಸಾಮಾನ್ಯ ಎಂದರೆ, ಸರ್ವವ್ಯಾಪಿಯಾದ ವಿಶ್ವಧರ್ಮವು. ಇದನ್ನು ಮಾನವನು ಹುಟ್ಟಿನಿಂದಲೆ ಹೊತ್ತು ತಂದಿರುವ ಸಾಲ ಎಂದರೆ ಪಿತೃಋಣ, ಋಷಿಋಣ, ದೇವಋಣ ಎಂಬ ಈ ಮೂರು ಬಗೆಯ ಸಾಲಗಳನ್ನು ತೀರಿಸಬೇಕೆಂದು ಎಲ್ಲ ಜನರ ಮೇಲೂ, ವಿಶೇಷವಾಗಿ ಬ್ರಾಹ್ಮಣನ ಮೇಲೂ ವೇದದಲ್ಲಿ ವಿಧಿಸಿರುತ್ತದೆ. ಈ ಧರ್ಮಾಚರಣೆಯನ್ನು ಸಾರ್ವಕಾಲಿಕವಾಗಿ ಸಾರ್ವತ್ರಿಕವಾಗಿ ಮತ್ತು ಸಾರ್ವಜನೀನವಾಗಿ ಎಲ್ಲರೂ ಪಾಲಿಸುವಂತಾಗಬೇಕು. ಅಲ್ಲದೆ ಸರ್ಕಾರದವರು ತಮ್ಮ ಹತೋಟಿಯಲ್ಲಿಟ್ಟುಕೊಂಡಿರುವ ವಿದ್ಯಾಭ್ಯಾಸ ಪದ್ಧತಿಯಲ್ಲಿ ಧರ್ಮದ ತಿಳಿವಳಿಕೆ ನಡೆವಳಿಕೆಗಳೂ ತಕ್ಕ ಸ್ಥಾನಮಾನಗಳನ್ನು ಪಡೆಯಬೇಕಾದುದು ಆವಶ್ಯಕವೂ ಅನಿವಾರ್ಯವೂ ಆಗಿದೆ. ಇಂತಹ ನಡೆವಳಿಕೆಯಿಂದ ಜನರಲ್ಲಿ ತಮ್ಮ ಹಕ್ಕುಬಾಧ್ಯತೆ ಸ್ವಾತಂತ್ರ್ಯಗಳಿಗೇ ಹೊಡೆದಾಡುವ ಮನೋಭಾವವು ಹೆಚ್ಚು ಮುಂದಾಗದೆ ಇರುತ್ತದೆ. ಅದರ ಬದಲು ಪ್ರತಿಯೊಬ್ಬ ಪ್ರಜೆಯೂ ತನ್ನ ಧರ್ಮ, ಜವಾಬುದಾರಿ, ಹೊಣೆಗಾರಿಕೆಗಳನ್ನು ತಿಳಿದು, ಸ್ವಾರ್ಥವನ್ನೂ ಸ್ವಾಭಿಮಾನವನ್ನೂ ಮುಂದಾಗಲು ಬಿಡದೆ, ಪರೋಪಕಾರಕ್ಕಾಗಿಯೇ ಹೆಚ್ಚಾಗಿ ದುಡಿಯುವಂತಾಗುತ್ತದೆ. ಅದರಿಂದ ದೇಶದಲ್ಲಿ ಶಾಂತಿ ನೆಮ್ಮದಿ ಸುಖಗಳು ನೆಲೆಸಲು ಹೆಚ್ಚು ಸಹಾಯವು ದೊರೆಯುತ್ತದೆ. ಹಾಗಲ್ಲದೆ ಈಗಾಗಿರುವಂತೆ

ಲೌಕಿಕ ವಿದ್ಯಾಭ್ಯಾಸ (Secular Education)ದ ಕ್ರಮವೇ ಉತ್ತಮವೆಂದೂ, ಅಪಾಯಕಾರಿಯಲ್ಲವೆಂದೂ ಜನರೂ ಮುಖಂಡರೂ ತಿಳಿದು ನಂಬಿರುವಂತಾಗಿರುವ ಈ ಕಾಲದಲ್ಲಿ ಧಾರ್ಮಿಕ ಶಿಕ್ಷಣಕ್ಕೆ ತಕ್ಕ ಸ್ಥಾನವು ದೊರೆಯುವುದು ಅಸಾಧ್ಯವೆಂದೇ ತೋರುತ್ತಿರಬಹುದು. ಆದರೂ "ಧರ್ಮಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ।" ಎಂದರೆ, ನಾವು ಧರ್ಮದ ತಿಳಿವಳಿಕೆ ಮತ್ತು ನಡೆವಳಿಕೆಗಳಿಂದ ಧರ್ಮವನ್ನು ಕಾಪಾಡುತ್ತಿದ್ದರೆ ಅದು ನಮ್ಮನ್ನೂ ಕಾಪಾಡುತ್ತದೆ. ಹಾಗೆ ಮಾಡದೆ ಧರ್ಮವನ್ನು ಔದಾಸೀನ್ಯ ಅಜ್ಞಾನಗಳಿಂದ ಕೈಬಿಟ್ಟರೆ, ಮೆಟ್ಟಿತುಳಿದರೆ, ಅದು ನಮ್ಮನ್ನೂ ನಾಶಮಾಡುತ್ತದೆ—ಎಂದು ಸಾರುತ್ತಿರುವ ಈ ಧರ್ಮದ ಸ್ವಭಾವವು ಇಂದಲ್ಲದಿದ್ದರೆ ನಾಳೆಯಾದರೂ ಜನಮನ್ನಣೆಗೆ ಪಾತ್ರವಾಗಿ ಸರ್ಕಾರದ ಆದರವೂ ರಕ್ಷಣೆಯೂ ಈ ಧರ್ಮಕ್ಕೆ ದೊರೆಯುತ್ತದೆಂದು ನಂಬಬಹುದಾಗಿದೆ.

**ಮಾನವ ಜನ್ಮವು ಶ್ರೇಷ್ಠವಾದುದು.**

ಈ ಜಗತ್ತಿನಲ್ಲಿ ಮಾನವನು ಪ್ರಗತಿಯ ಮಾರ್ಗದಲ್ಲಿ ಎಲ್ಲಕ್ಕಿಂತಲೂ ಮುಂದುವರಿದಿರುತ್ತಾನೆ. ಹೇಗೆಂದರೆ ಬಾಹ್ಯ ಪ್ರಪಂಚದಲ್ಲಿರುವ ಭೌತಸೃಷ್ಟಿಯನ್ನು ಒಟ್ಟಿನಲ್ಲಿ ಗಮನಿಸಿದರೆ ಚರಾಚರ ಪದಾರ್ಥಗಳನ್ನು ನಾಲ್ಕು ಬಗೆಗಳಲ್ಲಿ ವಿಂಗಡಿಸಬಹುದು. ಸ್ಥಾವರವೂ ಅಚೇತನವೂ, ಜಡವೂ ಆಗಿರುವ ಮೃತ್ಪಾಷಾಣವರ್ಗವು, ಸ್ಥಾವರವಾದ ಎಂದರೆ, ಚಲಿಸಲಾರದ ಸ್ವಭಾವವುಳ್ಳದ್ದೇ ಆದರೂ ಬೆಳವಣಿಗೆಯಿಂದ ಪ್ರಾಣಶಕ್ತಿಯನ್ನು ಹೊರಹೊಮ್ಮಿಸುತ್ತಿರುವ ಸಸ್ಯವರ್ಗವು, ಜಂಗಮವಾದ ಇಷ್ಟ ಪ್ರಾಪ್ತಿ ಅನಿಷ್ಟ ಪರಿಹಾರಗಳಿಗಾಗಿ ಚಲಿಸಬಲ್ಲ ಪ್ರಾಣಿವರ್ಗವು, ಅಭಿಪ್ರಾಯಗಳನ್ನೂ, ವೇದನೆಗಳನ್ನೂ ತಿಳಿಯಲೂ, ತಿಳಿಸಲೂ ಮಾತನಾಡಬಲ್ಲ ಮತ್ತು ವಿವೇಚನಶಾಲಿಯಾದ ಮಾನವವರ್ಗವು. ಈ ನಾಲ್ಕು ಬಗೆಯ ಪದಾರ್ಥಗಳಲ್ಲಿ ಮೊದಲನೆಯದಾದ ಮೃತ್ಪಾಷಾಣ ಅಥವಾ ಕಲ್ಲು ಮಣ್ಣುಗಳ ಗುಂಪಿನಲ್ಲಿ ಸತ್ತಾ ಎಂದರೆ, ಇರುವಿಕೆ ಎಂಬ ಧರ್ಮವು ಮಾತ್ರ ಪ್ರಕಟವಾಗಿರುತ್ತದೆ ಎರಡನೆಯ

ದಾದ ಸಸ್ಯವರ್ಗದ ಗಿಡಮರ ಬಳ್ಳಿಗಳಲ್ಲಿ ಬದುಕುವಿಕೆ, ಬೆಳೆಯುವಿಕೆ ಎಂಬ ಪ್ರಾಣವ್ಯಾಪಾರವೂ ಕಾಣಬರುತ್ತದೆ. ಮೂರನೆಯದಾದ ಪ್ರಾಣಿವರ್ಗದಲ್ಲಿ ಎಂದರೆ, ಹುಳು, ಹಕ್ಕಿ, ದನ, ಮೃಗಗಳ ಗುಂಪಿನಲ್ಲಿ ಇಷ್ಟಾನಿಷ್ಟಗಳ ಸುಖದುಃಖಗಳ ಪ್ರಾಪ್ತಿ ಪರಿಹಾರಗಳಿಗಾಗಿ ಚಲನ ವ್ಯಾಪಾರವೂ ಪ್ರಕಟವಾಗಿರುತ್ತದೆ. ಕೊನೆಯದಾದರೂ ಮುಖ್ಯತಮವಾದ ಮಾನವ ವರ್ಗದಲ್ಲಿ ತನ್ನ ಮತ್ತು ಇತರರ ಅಭಿಪ್ರಾಯಗಳನ್ನು ತಿಳಿಯಲೂ, ತಿಳಿಸಲೂ ಆವಶ್ಯಕವಾದ ಮಾತನಾಡುವ ಸಾಮರ್ಥ್ಯವೂ, ಗ್ರಂಥರಚನೆ ಲೇಖನಗಳ ಶಕ್ತಿಯೂ, ಹಿಂದಿನ ಅನುಭವಗಳ ನೆನಪೂ ಮುಂದಿನ ಮೇಲ್ಮೆಗೆ ತಕ್ಕ ಸಾಧನಗಳ ಊಹೆ ಪರಿಶೀಲನೆಯ ಸಾಮರ್ಥ್ಯವೂ, ಹಿತಾಹಿತಗಳ, ಧರ್ಮಾಧರ್ಮಗಳ, ನಿಜವಾದ ಸುಖದುಃಖಗಳ, ಪುಣ್ಯಪಾಪಗಳ ವಿವೇಚನ ಶಕ್ತಿಯೂ, ತಕ್ಕ ಒಳ್ಳೆಯ ಕರ್ಮಗಳನ್ನು ಆರಿಸಿಕೊಂಡು ಆಚರಿಸುವ ಸ್ವಭಾವವೂ, ದುಷ್ಕರ್ಮಗಳನ್ನು ತಿಳಿದು ಆಚರಿಸದಿರುವಿಕೆಯೂ—ಇವೇ ಮುಂತಾದ ವಿಶೇಷ ಧರ್ಮಗಳು ಪ್ರಕಟವಾಗುವುದೂ, ಕಂಡುಬರುತ್ತದೆ. ಮುಂದು ಮುಂದಿನ ವರ್ಗದ ಪ್ರಾಣಿಗಳಲ್ಲಿ ಹಿಂದುಹಿಂದಿನ ವರ್ಗಕ್ಕೆ ಸೇರಿದ ಪ್ರಾಣಿಗಳಲ್ಲಿ ಕಂಡುಬಂದ ವಿಶೇಷ ಗುಣಧರ್ಮಗಳ ಜೊತೆಗೆ ಈ ಮೇಲೆ ಹೇಳಿದಂತೆ ಗುಣಧರ್ಮ ವಿಶೇಷಗಳೂ ಪ್ರಕಟವಾಗುವುದೂ ಕಂಡುಬರುತ್ತದೆ. ಹೀಗೆ ಮಾನವನು ಪ್ರಾಣಿಗಳಲ್ಲಿ ತುಂಬುಜೀವನವನ್ನು ಎಲ್ಲಕ್ಕಿಂತಲೂ ಹೆಚ್ಚಾಗಿ ಪ್ರಕಟಿಸಬಲ್ಲವನಾಗಿದಾನೆ. ಇದನ್ನೇ ಜೀವರ ಪ್ರಗತಿಮಾರ್ಗವೆನ್ನಬಹುದು. ಆದುದರಿಂದಲೇ ಮಾನವ ಜನ್ಮವನ್ನು ಬ್ರಹ್ಮಸೃಷ್ಟಿಯಲ್ಲಿ ಶ್ರೇಷ್ಠವೆಂದು ಹೇಳಿದೆ. "Man is the lord of creation" ಎಂಬ ಆಂಗ್ಲ ಸೂಕ್ತಿಯೂ ಈ ವಿಷಯವನ್ನು ಸೂಚಿಸುತ್ತಿದೆ. "ಜಂತೂನಾಂ ನರಜನ್ಮ ದುರ್ಲಭಂ" ಮುಂತಾದ ಆರ್ಯರ ಸೂಕ್ತಿಗಳೂ ಪ್ರಸಿದ್ಧವಾಗಿವೆ.

ಈ ಅಂಶವನ್ನು ಐತರೇಯ ಆರಣ್ಯಕದಲ್ಲಿ ಹೀಗೆ ಹೇಳಿದೆ: "ತಸ್ಯ ಯ ಆತ್ಮಾನ ಮಾವಿಸ್ತರಾಂ" ವೇದ ಅಶ್ನುತೇ ಹ ಆವಿ

ಭೂರ್ಯಃ। ಓಷಧಿವನಸ್ಪತಯೋ ಯಚ್ಚ ಕಿಂ। ಚಿತ್ ಪ್ರಾಣಭೃತ್ ಸ ಆತ್ಮಾನ ಮಾವಿಸ್ತರಾಂ ವೇಧ। ಓಷಧಿವನಸ್ಪತಿಷು ಹಿ ರಸೋ ದೃಶ್ಯತೇ। ಚಿತ್ತಂ ಪ್ರಾಣಭೃತ್ಸು। ಪ್ರಾಣಭೃತ್ಸುತು ಏವ ಆವಿಸ್ತರಾ ಮಾತ್ಮಾ। ತೇಷುಹಿರಸೋ಼ (ಚೇತನಂ) ದೃಶ್ಯತೇ। ನಚಿತ್ತಮಿತರೇಷು। ಪುರುಷೇ ತ್ವೇವ ಆವಿಸ್ತರಾಮಾತ್ಮಾ। ಸಹಿ ಪ್ರಜ್ಞಾನೇನ ಸಂಪನ್ನ ತಮಃ। ವಿಜ್ಞಾತಂ ವದತಿ। ವಿಜ್ಞಾತಂ ಪಶ್ಯತಿ। ವೇದ ಶ್ವಸ್ತನಂ। ವೇದ-ಲೋಕಾಲೋಕೌ। ಮರ್ತ್ಯೇನ ಅಮೃತಂ ಈಪ್ಸತಿ। ಏವಂ ಸಂಪನ್ನಃ। ಅಥ ಇತರೇಷಾಂ ಪಶೂನಾಂ ಅಶನಾ (ಯಾ) ಪಿಪಾಸೇ ಏವ ಅಭಿವಿಜ್ಞಾನಂ। ನವಿಜ್ಞಾತಂ ವದಂತಿ। ನವಿಜ್ಞಾತಂ ಪಶ್ಯಂತಿ। ನವಿದುಃ ಶ್ವಸ್ತನಂ। ನ ಲೋಕಾಲೋಕೌ। ತ ಏತಾವಂತೋ ಭವಂತಿ। ಯಥಾ ಪ್ರಜ್ಞಂ ಹಿ ಸಂಭವಾಃ॥'' ಐ.ಆರ. ೨.೩.೨.

ಸ್ವಷ್ಟ್ಯಾತ್ಮಕ ಪರಿವರ್ತನೆ (Creative Evolution.)

ಬ್ರಾಹ್ಮಣಗಳ ಕಾಲವನ್ನು ವೇದಸಂಹಿತೆಗಳ ಕಾಲಕ್ಕಿಂತ ಈಚೆಗೂ, ಉಪನಿಷತ್ತುಗಳ ಕಾಲಕ್ಕಿಂತ ಹಿಂದೆಯೂ ಇತ್ತೆಂದು ವಿಮರ್ಶಕರೆಲ್ಲರೂ ಒಪ್ಪಿರುತ್ತಾರೆ. ಎಂದರೆ, ಬ್ರಾಹ್ಮಣಗಳ ಕಾಲವು ಅವುಗಳಲ್ಲೂ ಐತರೇಯ ಬ್ರಾಹ್ಮಣದ ಕಾಲವು ಕ್ರಿಸ್ತಪೂರ್ವ ೧೨೦೦ ವರ್ಷಗಳಿಗಿಂತ ಈಚೆಗೆ ಎನ್ನಲಾಗುವುದಿಲ್ಲ. ಇಷ್ಟು ಪೂರ್ವ ಕಾಲದಲ್ಲಿಯೇ ಭಾರತಾರ್ಯರು ಸ್ವಷ್ಟ್ಯಾತ್ಮಕ ಪರಿವರ್ತನ (Theory of Creative Evolution) ದ ತತ್ವವನ್ನು ತಮ್ಮ ಧ್ಯಾನಯೋಗದ ಸಾಮರ್ಥ್ಯದಿಂದ ಮನಗಂಡು ಹೊರಗೆಡ ವಿರುತ್ತಾರೆ. ಕ್ರಿ.ಶ. ೧೯ನೆಯ ಶತಮಾನದಲ್ಲಿದ್ದ ಡಾರ್ವಿನ್ ಎಂಬ ಪಾಶ್ಚಾತ್ಯ ವಿಜ್ಞಾನ ಶಾಸ್ತ್ರಪಂಡಿತನು 1859ರಲ್ಲಿ "Origin of Species" "Descent of Man" ಎಂಬ ಗ್ರಂಥಗಳನ್ನು ಬರೆದು ಪರಿಣಾಮವಾದ (Theory of Evolution) ವನ್ನು ವಿವರಿಸಿ ಪ್ರಸಿದ್ಧನಾದನು. ಈ ಪರಿಣಾಮವಾದ ತತ್ವವನ್ನೂ ಸ್ವಷ್ಟ್ಯಾತ್ಮಕ ಪರಿವರ್ತನದ ತತ್ವವನ್ನೂ ಹೋಲಿಕೆ

ಉದಾಹರಿಸಿರುವ ಬ್ರಾಹ್ಮಣ ವಾಕ್ಯದಲ್ಲಿ ಕಾಣಬಹುದು. ಐತರೇಯೋಪನಿಷತ್ತಿನಲ್ಲೂ ಈ ಅಂಶದ ಸೂಚನೆಗಳನ್ನು ತಿಳಿಯಬಹುದಾಗಿದೆ. ಇದರ ಅರ್ಥವನ್ನು ಹೀಗೆ ಸಂಗ್ರಹಿಸಬಹುದು.

ಚೇತನ ಚೋದಿತ ಪ್ರಕೃತಿ ಪರಿಣಾಮ ವಾದ.

ಯಾರು ಆ ಜೀವನ ಸ್ವರೂಪವನ್ನು, ಜೀವನ ಉಪಾಧಿಗಳಾದ ದೇಹಗಳಲ್ಲಿ ತನ್ನ ಗುಣಶಕ್ತಿಗಳ ಆವಿರ್ಭಾವದ ಕ್ರಮದಲ್ಲಿನ ರೀತಿ ನೀತಿಗಳನ್ನು, ಹೆಚ್ಚಾಗಿ ತಿಳಿಯಬಲ್ಲವನಾಗುತ್ತಾನೋ ಅಂಥವನು ತನ್ನ ಆತ್ಮ ವಿಕಾಸದ ಆವಿರ್ಭಾವವನ್ನು ಹೆಚ್ಚಾಗಿ ಅನುಭವಕ್ಕೆ ತಂದುಕೊಳ್ಳುತ್ತಾ, ಹೆಚ್ಚು ಹೆಚ್ಚಾಗಿ ಪ್ರಕಟಿಸುತ್ತಾ ಮುಂದುವರಿಯುತ್ತಿರುತ್ತಾನೆ. ಗಿಡಮರ ಬಳ್ಳಿಗಳು ಮುಂತಾದ ಪ್ರಾಣವ್ಯಾಪಾರವನ್ನು ಹೊಂದಿರುವ ಭೂತಗಳು ಮೃತ್ಪಾಷಾಣಾದಿಗಳಿಗಿಂತ ಹೆಚ್ಚಾಗಿ ಆತ್ಮಾವಿರ್ಭಾವವನ್ನು ತಿಳಿಯಿಸುತ್ತವೆ. ಗಿಡಮರ ಬಳ್ಳಿ ಮುಂತಾದ ಸಸ್ಯವರ್ಗದಲ್ಲಿ ರಸವು, ಪ್ರಾಣವ್ಯಾಪಾರವು, ಬೆಳೆಯುವ ಶಕ್ತಿಯು, ಸ್ವಲ್ಪಮಟ್ಟಿಗೆ ಉಸಿರಾಡುವ ಶಕ್ತಿಯೂ ಇರುತ್ತದೆ. ಪ್ರಾಣಿಗಳಲ್ಲಿ ಚಿತ್ತ (ಚಲನ) ವೂ ಇರುತ್ತದೆ. ಆದುದರಿಂದ ಪ್ರಾಣಿಗಳಲ್ಲಿ, ಹುಳ, ಹಕ್ಕಿ, ದನ, ಮೃಗಗಳಲ್ಲಿ, ಆತ್ಮನು ಸಸ್ಯಗಳಿಗಿಂತ ಹೆಚ್ಚಾಗಿ ಆವಿರ್ಭಾವವನ್ನು ಪಡೆದಿರುತ್ತಾನೆ. ಏಕೆಂದರೆ ಅಲ್ಲಿ ಎಂದರೆ, ಸಸ್ಯಗಳಲ್ಲಿ ರಸವು ಮಾತ್ರ ಕಾಣಬರುತ್ತದೆ. ಚಿತ್ತ (ಚಲನ) ವು ಕಾಣಬರುವುದಿಲ್ಲ. ಹಾಗೆಯೇ ಮಾನವನಲ್ಲಿ ಆತ್ಮನು ಇನ್ನೂ ಹೆಚ್ಚಾಗಿ ಆವಿರ್ಭಾವವನ್ನು ಪಡೆದಿರುತ್ತಾನೆ. ಏಕೆಂದರೆ ಮಾನವನು ಮಾತ್ರ ಮಾತನಾಡಬಲ್ಲನು. ಅಲ್ಲದೆ, ವಿವೇಚನೆ ಎಂಬ ಹೆಚ್ಚಿನ ತಿಳಿವಳಿಕೆಯನ್ನು ಹೊಂದಿರುತ್ತಾನೆ. ತಿಳಿದುದನ್ನು ಹೇಳಬಲ್ಲನು. ತಿಳಿದು ನೋಡಬಲ್ಲನು. ಮುಂದಾಗುವುದನ್ನು ಊಹಿಸಿ ತಿಳಿಯಬಲ್ಲನು. ಕಾಣುತ್ತಿರುವ ಗೊತ್ತಾಗಿ ತಿಳಿದಿರುವ (ಅಂಕಿ ಅಂಶಗಳಿಂದ) ವುಗಳಿಂದ ಕಾಣದೇ ಇರುವುದನ್ನೂ ಗೊತ್ತುಮಾಡಿಕೊಳ್ಳಬಲ್ಲನು. ವಿನಾಶಿಯಾಗಿರುವ ಈ ಭೌತಜೀವನದಿಂದ ಅವಿನಾಶಿಯಾದ ಶಾಶ್ವತವಾದ

ನಿರುಪಾಧಿಕವಾದ ವಾಸ್ತವವಾದ ಮೋಕ್ಷಾನಂದದ ಅಖಂಡ ಸಚ್ಚಿದಾನಂದ ಚೈತನ್ಯದ ಸ್ಥಿತಿಯನ್ನು ಪಡೆಯಲು ಇಚ್ಛಿಸುತ್ತಾನೆ. ಹೀಗೆ ಅವನು ತುಂಬು ಜೀವನವುಳ್ಳವನು. ಇತರ ಸಸ್ಯಪ್ರಾಣಿ ಮುಂತಾದ ಪದಾರ್ಥಗಳಾದರೋ ಹಸಿವು ಬಾಯಾರಿಕೆಗಳನ್ನು ಮಾತ್ರ ತಿಳಿಯಬಲ್ಲವು. ತಿಳಿದುದನ್ನು ಮಾತಿನಿಂದ ವಿವರಿಸಲಾರವು. ತಿಳಿದು ವಿವೇಚಿಸಿ ನೋಡಲಾರವು. ನಾಳಿನದನ್ನೂ ಊಹಿಸಿ ತಿಳಿಯಲಾರವು. ಹಾಗೆಯೇ ಕಾಣುತ್ತಿರುವುದರಿಂದ ಕಾಣದೆ ಇರುವುದನ್ನೂ ಗೊತ್ತುಮಾಡಿಕೊಳ್ಳಲಾರವು. ಅವುಗಳ ಶಕ್ತಿಯು ಅಷ್ಟರಲ್ಲೇ ಪರಿಮಿತವಾಗಿರುತ್ತದೆ. ಹೀಗೆ ಮೇಲು ಮೇಲಿನ ಜನ್ಮಗಳಲ್ಲಿ, ಎಂದರೆ, ಮೃತ್ಪಾಷಾಣವರ್ಗ, ಸಸ್ಯವರ್ಗ, ಪ್ರಾಣಿವರ್ಗ, ಮಾನವವರ್ಗದ ದೇಹಗಳಲ್ಲಿ, ತಿಳಿವಳಿಕೆಯ ಹೆಚ್ಚಿಗೆ ಮತ್ತು ಮೇಲ್ಮೆಗಳನ್ನು ನಾವು ಮನಗಾಣಬಹುದು. ಆದುದರಿಂದ ಜನ್ಮಗಳ ಮೇಲ್ಮೆಯು ತಿಳಿವಳಿಕೆಯ ಹೆಚ್ಚಿಗೆ ಮೇಲ್ಮೆಗಳನ್ನು ಅವಲಂಬಿಸಿರುತ್ತದೆ.

ಜೀವನ ಆತ್ಮೋನ್ನತಿ ಕ್ರಮ.

ಅಲ್ಲದೆ, ಮಾನವನು ಅನೇಕ ವಿಷಯಗಳಲ್ಲಿ ಇತರ ಪ್ರಾಣಿಗಳನ್ನು ಮೀರಿಸಿರುತ್ತಾನೆ. ಮನೆ ಕಟ್ಟುವುದರಲ್ಲಿ ಕಾಗೆಗಳಿಗಿಂತ ಗೀಜಗನ ಹಕ್ಕಿಯು ಮೇಲೆನಿಸಿಕೊಂಡಿದೆ. ಸಮಾಜ ಜೀವನವನ್ನು ನಡೆಸುವುದರಲ್ಲಿ ಇರುವೆಯು ಇತರ ಪ್ರಾಣಿಗಳಿಗಿಂತಲೂ ಮೇಲೆನ್ನಬಹುದು. ಮಾನವನು ಇವನ್ನು ಮೀರಿಸಿ ಮುಂದುವರಿಯುತ್ತಿದಾನೆ. ಸೌಂದರ್ಯವನ್ನು ಮನಗಂಡು ಮಾತಿನಲ್ಲಿ ವರ್ಣಿಸಿ ಮೇಲು ಮೇಲಾದ ಗ್ರಂಥಗಳನ್ನು ರಚಿಸುತ್ತಾ, ತಿಳಿವಳಿಕೆಯನ್ನು ಹರಡುತ್ತಾ ಇತರ ಪ್ರಾಣಿಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುತ್ತಾ, ಪ್ರಕೃತಿ ತತ್ವಗಳನ್ನು ಹೆಚ್ಚು ಹೆಚ್ಚಾಗಿ ಕಂಡುಹಿಡಿಯುತ್ತಾ, ಸಹಜೀವನವನ್ನು ನೀತಿ ಧರ್ಮಗಳ ಪಾಲನೆಯಿಂದ ಉತ್ತಮಗೊಳಿಸುತ್ತಿದಾನೆ. ಅಷ್ಟೇ ಅಲ್ಲದೆ ಜೀವನದ ಗುರಿ (ಪುರುಷಾರ್ಥ)ಗಳನ್ನು ವಿಮರ್ಶೆಯಿಂದ ಗೊತ್ತುಮಾಡಿಕೊಂಡು ಪ್ರಗತಿ ಮಾರ್ಗದಲ್ಲಿ ಸ್ವತಂತ್ರವಾಗಿ

ಮುಂದುವರಿಯುತ್ತಿದ್ದಾನೆ. ಇತರ ಪ್ರಾಣಿಗಳು ಮಾನವನ ಈ ಮೇಲಿನ ಮಾದರಿಗಳು ಎಡುರಿಗಿದ್ದರೂ ಮುಂದುವರಿಯಲಾರದೆ ಸಾವಿರಾರು ವರ್ಷಗಳಿಂದ ಇದ್ದಲ್ಲಿಯೇ ಇವೆ. ಆದುದರಿಂದಲೇ ಮಾನವ ಜನ್ಮವನ್ನು ಶ್ರೇಷ್ಠವೆನ್ನುತ್ತಾರೆ.

ಸಾಂಖ್ಯರು ವಿವರಿಸಿರುವ ಪ್ರಕೃತಿ ಪರಿಣಾಮವಾದದ (The Theory of Evolution) ಮೂಲವನ್ನು ಈ ಬ್ರಾಹ್ಮಣ ವಾಕ್ಯಗಳಲ್ಲಿ ಮನಗಾಣಬಹುದು. (God sleeps in stones, grows in plants, walks in animals, talks and thinks in man and perfects in himself again and again) ಎಂದು ಹೇಳಿರುವ ವಾಕ್ಯವೂ ನೆನಪಿಗೆ ಬರುತ್ತದೆ. ವೇದಾಂತ ತತ್ತ್ವದರ್ಶನದ ದೃಷ್ಟಿಯಿಂದ ಇದನ್ನೇ ಉಪಾಧಿಗುಣ ಶಕ್ತಿ ವಿಕಾಸಕ್ರಮವು ಎನ್ನಬಹುದಾಗಿದೆ ಅಥವಾ ಪ್ರಾಕೃತಾದ್ವೈತ (Material monism) ಎಂತಲೂ ಹೇಳಬಹುದು.

ವೈದಿಕಾರ್ಯರ ಸಂಸ್ಕೃತಿಯಲ್ಲಿ ಪ್ರಮುಖವಾಗಿರುವ ಅಂಶಗಳಲ್ಲಿ ಧರ್ಮ ಅಥವಾ ಕರ್ಮವಾದವೂ ವಿಶೇಷವಾಗಿ ಗಮನಾರ್ಹವಾಗಿದೆ. ಒಂದು ಫಲಕ್ಕೆ ಹಿಂದೆ ಪ್ರಯತ್ನವು ಇರುತ್ತದೆ. ತಕ್ಕ ಪ್ರಯತ್ನವನ್ನು ಸಕಾಲದಲ್ಲಿ ಮಾಡಿದ್ದರೆ ಆ ಪ್ರಯತ್ನಕ್ಕೆ ಮುಂದೆ ಯಥಾಕಾಲದಲ್ಲಿ ಮತ್ತು ತಕ್ಕ ಸನ್ನಿವೇಶದಲ್ಲಿ ಒಂದು ಫಲವು ತಪ್ಪದೆ ಉಂಟಾಗುತ್ತದೆ. ಪ್ರಯತ್ನವನ್ನು ಮಾಡದೆ ಫಲವನ್ನು ಪಡೆಯಲಾಗುವುದಿಲ್ಲ. ಸರಿಯಾದ ಯತ್ನವು ನಿಷ್ಫಲವಾಗುವುದಿಲ್ಲ. ಹೀಗೆ ಪ್ರಯತ್ನ ಫಲಗಳ ನಿಯತ ಸಂಬಂಧವೇ ಕರ್ಮವಾದದ ಸರಳವಾದ ಪ್ರಮುಖ ಸ್ವರೂಪವಾಗಿರುತ್ತದೆ. ವ್ಯವಸಾಯಗಾರನು ಭೂಮಿಯನ್ನು ಉತ್ತು ಸಕಾಲದಲ್ಲಿ ಬೀಜವನ್ನು ಬಿತ್ತಿ, ಗೊಬ್ಬರವನ್ನೂ ಸೇರಿಸಿ ನೀರನ್ನು ಹಾಕುತ್ತಿದ್ದರೆ, ಬೀಜವು ಮೊಳೆತು ಗಿಡವಾಗಿ ಸಕಾಲದಲ್ಲಿ ಬತ್ತ ಮುಂತಾದ

ಕರ್ಮವಾದ ಸಿದ್ಧಾಂತ.

ಕರ್ಮಸಿದ್ಧಾಂತದ ವಿವರಣೆ.

ದವಸವನ್ನು ಕೊಡುತ್ತದೆ. ಹೀಗೆ ಪ್ರಯತ್ನವನ್ನು ಮಾಡದೆ ಇರುವವನಿಗೆ ಫಸಲೂ ದೊರೆಯುವುದಿಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಕೆಲವು ಸೊಪ್ಪಿನ ಬೀಜಗಳು ಒಂದು ವಾರದಲ್ಲಿಯೇ ಆಹಾರಕ್ಕೆ ಉಪಯೋಗಿಸುವ ಸೊಪ್ಪನ್ನು ಕೊಡುತ್ತವೆ. ಬತ್ತದ ಬೀಜವು ಫಸಲನ್ನು ಕೊಡಬೇಕಾದರೆ ಐದು ತಿಂಗಳ ಕಾಲವು ಬೇಕು. ತೆಂಗಿನ ಬೀಜವು ಮೊಳೆಯಬೇಕಾದರೆ ಆರು ತಿಂಗಳು ಕಾಲ ಬೇಕಾಗುತ್ತದೆ. ತೆಂಗಿನ ಕಾಯಿಯನ್ನು ಕೊಡಬೇಕಾದರೆ ಹತ್ತು ವರ್ಷಗಳ ಕಾಲ ಬೇಕಾಗುತ್ತದೆ. ಪ್ರಯತ್ನವನ್ನು ಮಾಡಿದವನು ಫಲದ ಕಾಲದವರೆಗೆ ಆಯುಷ್ಮಂತನಾಗಿಲ್ಲದೆ ಇರಬಹುದು. ಅಂತಹ ಸಂದರ್ಭದಲ್ಲಿ ಪ್ರಯತ್ನ ನಿಷ್ಫಲವಾದಂತೆ ಕಾಣುತ್ತದೆ. ಒಂದು ತಲೆಮಾರಿನವರು ಮಾಡಿದ ಪ್ರಯತ್ನದ ಫಲವನ್ನು ಮುಂದಿನ ತಲೆಮಾರಿನವರು ಅನುಭವಿಸಬಹುದು. ಆಗ ಪ್ರಯತ್ನವಿಲ್ಲದೆ ಫಲಲಾಭವಾದಂತೆ ಕಾಣುತ್ತದೆ. ಇಷ್ಟರಿಂದ ವಿಮರ್ಶಿಸಿ ಗೊತ್ತುಮಾಡಿದ್ದ, ಒಪ್ಪಿಕೊಂಡಿದ್ದ ಕರ್ಮಸಿದ್ಧಾಂತವನ್ನು ಬಿಡುವುದು ನ್ಯಾಯವಲ್ಲವು. ಇಂತಹ ಉದಾಹರಣೆಗಳನ್ನು ಜನ್ಮಾಂತರವನ್ನು ಒಪ್ಪುವುದರಿಂದ ವಿವರಿಸುವುದೇ ನ್ಯಾಯಪ್ರಾಪ್ತವಾಗುತ್ತದೆ. ಇದರಂತೆ ಈಗ ಪ್ರಯತ್ನವಿಲ್ಲದೆ ಫಲಲಾಭವಾದರೆ ಅದರ ಪ್ರಯತ್ನವನ್ನು ಹಿಂದಿನ ಜನ್ಮದಲ್ಲಿ ಆ ಫಲಭೋಕ್ತೃವು ಮಾಡಿರಬೇಕೆಂದೂ, ಇಲ್ಲಿ ಫಲ ಲಾಭವಾಗದೆ ಹೋದರೆ ಮುಂದಿನ ಜನ್ಮದಲ್ಲಿ ಫಲವು ದೊರೆಯಬೇಕೆಂದೂ ಒಪ್ಪುವುದೇ ಯುಕ್ತಿಯಿಂದ ಕೂಡಿರುವುದರಿಂದ ಉಚಿತವಾಗಿರುತ್ತದೆ.

ಈ ಸಂದರ್ಭದಲ್ಲಿ ಬೃಹದಾರಣ್ಯಕ ಮುಂತಾದ ಉಪನಿಷದ್ವಾಕ್ಯಗಳನ್ನು ಪರಿಶೀಲಿಸಬೇಕಾಗಿರುತ್ತದೆ.

೧. '' ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮು (ಮ) ಪಾದಾಯ ಅನ್ಯನ್ನವತರಂ ಕಲ್ಯಾಣ ತರಂ ರೂಪಂ ತನುತೇ ಏವಮೇವಾಯಮಾತ್ಮಾ ಇದಂ ಶರೀರಂ ನಿಹತ್ಯ ಅವಿದ್ಯಾಂ ಗಮಯಿತ್ವಾ ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ''—ಬೃ.ಉ. ೪.೪.೧.

ಕಾಮ್ಯಕರ್ಮದಿಂದ ಜನ್ಮಾಂತರ ಪ್ರಾಪ್ತಿ ಕ್ರಮವನ್ನು ಇಲ್ಲಿ ಹೇಳಿರುತ್ತದೆ. ಹೇಗೆ ಪೇಶಸ್ಕಾರಿಯು ಎಂದರೆ, ಅಕ್ಕಸಾಲೆಯು ಒಂದು ಚಿನ್ನದ ಚೂರನ್ನು ತೆಗೆದುಕೊಂಡು ಮತ್ತೊಂದು ಇನ್ನೂ ಹೊಸದಾದ ಸುಂದರತರವಾದ, ಕಲ್ಯಾಣತರವಾದ, ಹೆಚ್ಚು ಪ್ರಯೋಜನಕಾರಿಯಾದ, ರೂಪವನ್ನು ಮಾಡಿಕೊಳ್ಳುತ್ತಾನೋ, ಹಾಗೆಯೇ ಈ ಆತ್ಮನೂ ಈ ಶರೀರವನ್ನು ಬಿಟ್ಟು, ಅದನ್ನು ಅವಿದ್ಯೆಯನ್ನು, ಅಚೇತನತ್ವವನ್ನು, ಹೊಂದಿಸಿ, ತನ್ನನ್ನು ಅದರಿಂದ ಉಪಸಂಹರಿಸುವುದರಿಂದ ಹಿಂದಿನ ದೇಹವನ್ನು ಜಡವನ್ನಾಗಿ ಮಾಡಿ, ಮತ್ತೊಂದು ಇನ್ನೂ ಹೊಸದೂ ಹೆಚ್ಚು ಪ್ರಯೋಜನಕಾರಿಯೂ ಆಗಿರುವ ರೂಪವನ್ನು, ಶರೀರವನ್ನು ಮಾಡಿಕೊಳ್ಳುತ್ತಾನೆ. ಇಲ್ಲಿ ಪ್ರಕೃತಿ ಪರಿಣಾಮವು ಚೇತನ ಚೋದಿತವೆಂದು ಹೇಳಿದೆ. ಇದು ವಿಶೇಷ ಗಮನಾರ್ಹವಾದುದು.

ಕಾಮ್ಯಕರ್ಮದಿಂದ ಸಂಸಾರ.

೨. ತದೇಷಶ್ಲೋಕೋ ಭವತಿ-ತದೇವ ಸಕ್ತಃ ಸಹಕರ್ಮಣೈತಿ ಲಿಂಗಂ ಮನೋಯತ್ರ ನಿಷಕ್ತಮಸ್ಯ। ಪ್ರಾಪ್ಯಾಂತಂ ಕರ್ಮಣಸ್ತಸ್ಯ ಯತ್ಕಿಂಚೇಹಕರೋತ್ಯಯಂ। ತಸ್ಮಾಲ್ಲೋಕಾತ್ ಪುನರೈತ್ಯಸ್ಮೈ ಲೋಕಾಯಕರ್ಮಣ ಇತಿ ನುಕಾಮಯಮಾನಃ । ಅಥ ಅಕಾಮಯಮಾನಃ ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ। —ಬೃ.ಉ. ೪.೪.೬.

ಈ ವಿಷಯದಲ್ಲಿ ಈ ಶ್ಲೋಕವು ಪ್ರಮಾಣವಾಗಿದೆ. ಇವನ ಲಿಂಗವಾದ ಮನಸ್ಸು ಎಲ್ಲಿ ನಿಷಕ್ತ ಎಂದರೆ, ಆಸಕ್ತವಾಗುತ್ತದೋ ಆಸಕ್ತನಾದವನು ಅದನ್ನೇ ಕರ್ಮದೊಡನೆ ಹೋಗಿ ಸೇರುವನು. ಇಲ್ಲಿ ಯಾವ ಯಾವ ಕರ್ಮವನ್ನು ಮಾಡುವನೋ ಅದರ ಅಂತವನ್ನು ಪಡೆದುಕೊಂಡು ಆ ಲೋಕದಿಂದ ಮತ್ತೆ ಈ ಲೋಕಕ್ಕೆ ಕರ್ಮಕ್ಕಾಗಿ ಬರುವನು. ಇಂತಲ್ಲವೇ ಕಾಮಿಸುವವನು ? ಇನ್ನು ಕಾಮಿಸದೆ ಇರುವವನು : ಯಾವನು ಅಕಾಮನೋ, ನಿಷ್ಕಾಮನೋ, ಆಪ್ತಕಾಮನೋ, ಆತ್ಮ

ಕಾಮನೋ, ಅವನ ಪ್ರಾಣಗಳು ಉತ್ಕ್ರಾಂತವಾಗುವುದಿಲ್ಲ. ಅವನು ಬ್ರಹ್ಮವೇ ಆಗಿದ್ದು ಇಲ್ಲಿಯೇ ಈಗಲೇ ಬ್ರಹ್ಮದಲ್ಲಿ ಸೇರಿಹೋಗುತ್ತಾನೆ.

೩. ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ ಉಭಾಭ್ಯಾ ಮೇವ ಮನುಷ್ಯಲೋಕಂ—ಬೃ.ಉ. ೩ ೭

ಧರ್ಮಾಚರಣೆಯಿಂದ ಸ್ವರ್ಗ ಮುಂತಾದ ಪುಣ್ಯಲಭ್ಯವಾದ ಸುಖಕರವಾಗಿರುವ ಲೋಕವನ್ನು ಪಡೆಯುತ್ತಾನೆ. ಅಧರ್ಮಾಚರಣೆ ಯಿಂದ ಪಾಪಕ್ಕೆ ಫಲವಾದ ನರಕ ಮುಂತಾದ ಲೋಕವನ್ನು ಜೀವನು ಪಡೆಯುತ್ತಾನೆ. ಪುಣ್ಯಪಾಪಗಳ ಮಿಶ್ರಣದಿಂದ ಈ ಮನುಷ್ಯ ಲೋಕವನ್ನು ಪಡೆದು ಸುಖದುಃಖಗಳನ್ನು ಅನುಭವಿಸುತ್ತಾನೆ.

೪. ಪರೀಕ್ಷ್ಯಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾ ಯಾನ್ನಾಸ್ತ್ಯಕೃತಃ ಕೃತೇನ।—ಮುಂ.ಉ. ೧.೨-೧೨.

ಕರ್ಮದಿಂದ ಉಂಟಾಗುವ ಸ್ವರ್ಗ ಮುಂತಾದ ಲೋಕಗಳೆಲ್ಲವೂ ಅನಿತ್ಯತ್ವ, ದುಃಖ ಮಿಶ್ರವಾಗಿರುವಿಕೆ, ಸಾತಿಶಯತ್ವ ತಾರತಮ್ಯ ದಿಂದ ಅಸೂಯಾದಿಗಳಿಗೆ ಕಾರಣವಾಗಿರುವಿಕೆ ಎಂಬ ದೋಷವುಳ್ಳ ವೆಂಬುದನ್ನು ಮನಗೊಂಡು ಅದರಲ್ಲಿ ವೈರಾಗ್ಯವನ್ನು ಪಡೆಯ ಬೇಕು. ನಿತ್ಯವಾದ ಮೋಕ್ಷ ಸುಖವು ಕಾಮ್ಯಕರ್ಮದಿಂದ ಉಂಟಾಗು ವುದಲ್ಲವೆಂದು ಶ್ರುತಿ ಗುರೂಪದೇಶ ಅನುಭವಗಳಿಂದ ತಿಳಿಯಬೇಕು.

೫. ಅಸುರ್ಯಾನಾಮ ತೇಲೋಕಾ ಅಂಧೇನ ತಮಸಾಽಽವೃತಾಃ। ತಾಂಸ್ತೇಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥-ಈ.ಉ. ೩.

ತನಗೆರಡನೆಯದಿಲ್ಲದ ಪರಮಾತ್ಮ ಸ್ವರೂಪಕ್ಕೆ ಹೋಲಿಸಿದರೆ ದೇವತೆ ಗಳು ಮೊದಲಾದವರೂ ಅಸುರರೇ ಎನ್ನಬಹುದು. ಅಸುರ್ಯವೆಂಬ ಆ ಲೋಕಗಳು ಕುರುಡುಗತ್ತಲೆಯಿಂದ ಮುಚ್ಚಿದಂತಿರುತ್ತವೆ. ಯಾರು ತಮ್ಮ ಆತ್ಮನನ್ನು ಕೊಲ್ಲುವರೋ, ಎಂದರೆ ಆತ್ಮನ ಅಜರಾ ಮರತ್ವ ಸ್ವರೂಪವನ್ನು ತಿಳಿಯದೆ ಇರುವರೋ ಆ ಅಜ್ಞಾನಿಗಳು ತಮ್ಮನ್ನು ಕೊಂದಂತೆಯೇ ಆಗುವರು, ಅಂಥವರು ಜನನ ಮರಣ ಚಕ್ರದಲ್ಲಿ-ಸಂಸಾರದಲ್ಲಿ ಬಳಲುತ್ತಿರುವರು.

ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯಃ... ..ಪುಣ್ಯಃ ಪುಣ್ಯೇನ ಭವತಿ ಪಾಪಃ ಪಾಪೇನ । ಅಥೋಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ ಸಯಥಾ ಕಾಮೋಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ-ಬೃ.ಉ. ೪.೪.೫.

ನಿಷ್ಕಾಮ ಕರ್ಮದಿಂದ ಉತ್ತಮ ಪುರುಷಾರ್ಥ.

ಆ ಈ ಆತ್ಮನೇ ಬ್ರಹ್ಮವು, ವಿಜ್ಞಾನ ಮಯನು, ಮನೋಮಯನು,.......ಸಾಧುಕರ್ಮಕಾರಿಯಾದವನು ಸಾಧುವಾಗುವನು. ಪಾಪ ಕರ್ಮಾಚಾರಿಯಾದವನು ಪಾಪಿಯಾಗುವನು. ಹಾಗೆಯೇ ಮತ್ತೂ ಹೇಳುತ್ತಾರೇನೆಂದರೆ, ಆ ಪುರುಷನು ಕಾಮಮಯನೇ ಆಗಿರುತ್ತಾನೆ. ಅವನು ಎಂಥಾ ಕಾಮದವನೋ ಅಂಥ ಕ್ರತುವಿನ ಅಧ್ಯವಸಾಯದವನಾಗುವನು ಎಂಥ ಕ್ರತುವಿನ ನಿಶ್ಚಯದವನೋ ಅಂಥ ಕರ್ಮವನ್ನು ಮಾಡುವನು. ಎಂಥ ಕರ್ಮವನ್ನು ಮಾಡುವನೋ ಅದನ್ನೇ ಸೇರುವನು—ಆ ಕರ್ಮದ ಫಲವನ್ನೇ ಪಡೆಯುವನು. ಆದುದರಿಂದ ಇವನು ಸರ್ವಮಯನಾಗುವುದಕ್ಕೂ ಸಂಸಾರದಲ್ಲಿ ತೊಳಲುತ್ತಿರುವುದಕ್ಕೂ ಕಾಮವೇ ಕಾರಣವಾಗಿರುತ್ತದೆ.

ತುರ್ಯೇ ಧರ್ಮಕಲಾ ಸರ್ಗೇ ನರನಾರಾಯಣಾ ವೃಷೀ । ಭೂತ್ವಾ ಶಮದಮೋ ಪೇತಂ ಅಕರೋತ್ ದುಶ್ಚರಂ ತಪಃ ॥—ಭಾ.ಪು. ೧.೭.೯.

ನಾಲ್ಕನೆಯ ಅವತಾರದಲ್ಲಿ ವಿರಾಟ್ಪುರುಷನು ಧರ್ಮನ ಪತ್ನಿಯಾದ ಮೂರ್ತಿ ದೇವಿಯಲ್ಲಿ ನರನಾರಾಯಣರೆಂಬ ಋಷಿಗಳಾಗಿ ಅವತರಿಸಿ ಇತರರು ಆಚರಿಸಲಾರದ ಶಮದಮಾದಿಗಳನ್ನುಂಟುಮಾಡುವ ತಪಸ್ಸನ್ನು ಆಚರಿಸಿದನು.

ಬ್ರೂಹಿಯೋಗೇಶ್ವರೇ ಕೃಷ್ಣೇ ಬ್ರಹ್ಮಣ್ಯೇ ಧರ್ಮವರ್ಮಣಿ । ಸ್ವಾಂ ಕಾಷ್ಠಾ ಮಧುನೋ ಪೇತೇ ಧರ್ಮಃ ಕಂ ಶರಣಂ ಗತಃ ॥—ಭಾ. ೧.೨.೩.

ಯೋಗೀಶ್ವರನಾಗಿಯೂ ಧರ್ಮಪಾಲಕನಾಗಿಯೂ ಇರುವ ಕೃಷ್ಣನಲ್ಲಿ ಧರ್ಮವು ರಕ್ಷಕನನ್ನು ಪಡೆಯಿತು.

ದ್ಯೂತಂ ಪಾನಂ ಸ್ತ್ರಿಯಃ ಸೂನಾ ಜಾತರೂಪಂಚ ಅಧರ್ಮಸ್ಥಾನಾನಿ ತತೋऽನೃತಂಮದಂ ಕಾಮಂರಜೋವೈರಂಚ ಪಂಚಮಂ ಅಧರ್ಮಸ್ಥಾನಾನಿ

—ಭಾ.ಪು. ೧. ೧೭. ೩೮-೩೯

ಜೂಜಾಡುವುದು, ಮದ್ಯಪಾನ, ಪರಸ್ತ್ರೀಗಮನ, ಪಂಚಸೂನಾ ಎಂದರೆ ನೀರಿನ ಪಾತ್ರೆ, ಒಲೆ ಬೆಂಕಿ, ಒರಳು, ಬೀಸುವ ಕಲ್ಲು, ಹುರಿಯುವ ಓಡು—ಈ ಐದೂ ಪ್ರಾಣಿಹತ್ಯಾಸ್ಥಾನಗಳು, ಅದರಂತೆಯೇ ಸುಳ್ಳು ಹೇಳುವುದು, ನಿಷಾ ಪಡೆಯುವುದು, ಪರದ್ರವ್ಯ ಪರಸ್ತ್ರೀ ಕಾಮನೆ, ರಾಗದ್ವೇಷಗಳು ಸುವರ್ಣಾಪಹಾರ—ಇವು ಐದೂ ಪಾಪ ಕಾರ್ಯಗಳು.

ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥ —ಮುಂ.ಉ. ೩. ೨. ೨.

ಅತಃ ಉಚ್ಛಿನ್ನಕಾಮಸ್ಯ ವಿದ್ಯಮಾನಾನ್ಯಪಿ ಕರ್ಮಾಣಿ ವಂಧ್ಯ ಪ್ರಸವಾನಿ ಭವಂತಿ! —ಶಾಂ.ಭಾ.

ಸಂಪೂರ್ಣವಾಗಿ ಆಪ್ತಕಾಮನಾದ ಕೃತಾರ್ಥನಿಗಾದರೋ ಇಲ್ಲಿಯೇ ಸರ್ವಕಾಮಗಳೂ ಪ್ರವಿಲಯವನ್ನು ಪಡೆಯುವುವು. ಆದುದರಿಂದ ಎಂದರೆ ಕಾಮವೇ ಸಂಸಾರಕ್ಕೆ ಮೂಲವಾದುದರಿಂದ, ಕಾಮವು ನಾಶವಾಗಿರುವ ಬ್ರಹ್ಮಜ್ಞಾನಿಗೆ ಕರ್ಮಗಳಿದ್ದರೂ ನಿಷ್ಫಲವಾಗುವುವು. ಎಂದರೆ, ಸುಖ ದುಃಖ ರೂಪವಾದ ಫಲಗಳನ್ನು ನಮಗೆ ಹೇಗೆ ಉಂಟುಮಾಡುತ್ತವೆಯೋ ಹಾಗೆ ಜ್ಞಾನಿಗೆ, ಉಂಟುಮಾಡಲಾರದೆ ಹೋಗುತ್ತವೆ. ಆತ್ಮನು ಪರಮ ಪ್ರೇಮಾಸ್ಪದನು. ಎಂದರೆ, ಎಲ್ಲ ಕಾಮ್ಯವಸ್ತುಗಳಲ್ಲಿರುವ ಪ್ರೇಮಕ್ಕಿಂತಲೂ ನಮ್ಮ ಆತ್ಮನಲ್ಲಿರುವ ಪ್ರೇಮವು ಹೆಚ್ಚಾದುದಾಗಿರುತ್ತದೆ. ಅಂಥ ಆತ್ಮನನ್ನು ತಿಳಿದುಕೊಂಡರೆ ಮತ್ತೆ ಯಾವ ವಿಷಯದಲ್ಲೂ ಪ್ರೇಮಾನುರಾಗಗಳು ಉಂಟಾಗಲಾರವು ಎಂದು ತಾತ್ಪರ್ಯವು.

ವೈದಿಕ ಕಾಲದಲ್ಲಿ ಚಾತುರ್ವರ್ಣ್ಯ.

“ಈ ವರ್ಣಾಶ್ರಮ ವಿಭಾಗ ವ್ಯವಸ್ಥೆಯು ನಾಗರೀಕತೆಯಲ್ಲಿ, ಆತ್ಮೋನ್ನತಿಯಲ್ಲಿ ಮುಂದುವರಿಯುವವರಿಗೆ ಮಾರ್ಗದಂತಿದೆ ; ಪ್ರತಿ ವ್ಯಕ್ತಿಯೂ ತನ್ನ ವಿದ್ಯಾ ಮತ್ತು ಸಂಸ್ಕೃತಿಗಳ ಅಂತಸ್ತಿನಿಂದ ಮೇಲು ಮೇಲಕ್ಕೆ ಏರಲು ಮೆಟ್ಟಲಿನಂತಿದೆ” ಎಂದು

ಸ್ವಾಮಿ ವಿವೇಕಾನಂದರು (Vol.V, page 439) ಹೇಳಿರುತ್ತಾರೆ. ಈ ಅಂಶವನ್ನು ಮಹಾತ್ಮ ಗಾಂಧೀಜಿಯವರೂ ತಿಳಿಸಿರುತ್ತಾರೆ.

ಪುರುಷ ಸೂಕ್ತದ ಮಂತ್ರಗಳು.

ಋಗ್ವೇದದಲ್ಲಿ ಒಂದೇ ಒಂದು ಪುರುಷ ಸೂಕ್ತದಲ್ಲಿ ಮಾತ್ರ ಚಾತುರ್ವರ್ಣ್ಯದ ಉಲ್ಲೇಖವು ದೊರೆಯುತ್ತದೆ. ಈ ಸೂಕ್ತದಲ್ಲಿ ಜಗತ್ತಿನ ಸೃಷ್ಟಿ ಪ್ರಕಾರವನ್ನು ತಿಳಿಸಲಾಗಿದೆ ಎಂಬುದು ನಿಜವಾಗಿದೆ. ಇದನ್ನು ಮನಗಂಡು ಪ್ರಕಟಿಸಿದ ನಾರಾಯಣನೆಂಬ ಋಷಿಯು ಈ ಪ್ರಪಂಚವು ಉಂಟಾದ ರೀತಿಯನ್ನು ಕವಿಯಂತೆ ಆಲಂಕಾರಿಕವಾದ ರೀತಿಯಲ್ಲಿ ವರ್ಣಿಸಿರುತ್ತಾನೆ. ಪುರುಷನೆಂದರೆ ಮೊದಲಿನಿಂದಲೂ ಇರುವ, ಎಲ್ಲವನ್ನೂ ಪ್ರಕಟಿಸುವ ಅಭಿವ್ಯಕ್ತವಾಗಿ ರುವ ಪರಬ್ರಹ್ಮ ಚೈತನ್ಯ ತತ್ತ್ವವೆನ್ನಬಹುದು.

೧. ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್।
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠತ್ ದಶಾಂಗುಲಂ ॥೧॥

ಆ ಆದಿಪುರುಷನು ಅಸಂಖ್ಯಾತವಾದ ಶಿರಸ್ಸುಗಳೂ ಕಣ್ಣುಗಳೂ ಪಾದಗಳೂ—ಇವೇ ಮುಂತಾದ ಅವಯವಗಳನ್ನು ಹೊಂದಿರುತ್ತಾನೆ. ಅವನು ಈ ಪ್ರಪಂಚವೆಲ್ಲವನ್ನೂ ಎಲ್ಲ ಕಡೆಗಳಿಂದಲೂ ಆವರಿಸಿ ವ್ಯಾಪಿಸಿ ಮೀರಿಯೂ ಹೊರಗೂ ಇರುತ್ತಾನೆ. ವಿರಾಡ್ರೂಪನಾದ ವಿಶ್ವಶರೀರಿಯಾಗಿರುವ ಆ ಪರಮೇಶ್ವರನಿಗೆ ಅವನ ಅವ್ಯಕ್ತ ಸ್ಥಿತಿ ಯಲ್ಲಿ ದೇಹ ಅವಯವ ಲಿಂಗಗಳು ಯಾವುವೂ ಇಲ್ಲವು. ಆದರೂ ಅವನ ಅಭಿವ್ಯಕ್ತ ಸ್ಥಿತಿಯಲ್ಲಿ ಅವು ಉಂಟಾಗಿ ಇರುವ ಹಾಗೆ ತೋರುತ್ತಿರುತ್ತವೆ. ಸಮುದ್ರದಲ್ಲಿ ಒಂದು ಅಲ್ಪಭಾಗದಷ್ಟು ನೀರು ಸೂರ್ಯಾತಪದಿಂದ ಆವಿಯಾಗಿ ಮೇಲಕ್ಕೆ ಹೋಗಿ ಮೋಡವಾಗಿ ಮಳೆ ಯಾಗಿಯೂ ಭೂಮಿಯ ಮೇಲೆ ಸುರಿದು, ನದಿಗಳಾಗಿಯೂ ಹರಿದು ಪುನಃ ಆ ಸಮುದ್ರವನ್ನೇ ಸೇರಿ ನಾಮರೂಪಗಳನ್ನು ಕಳೆದುಕೊಂಡು ಲೀನವಾಗುವಂತೆ, ಆ ವಿರಾಟ್ಸ್ವರೂಪನಾದ ಪರಮೇಶ್ವರನೂ ತನ್ನ

ವಾಸ್ತವ ಸ್ವರೂಪದಲ್ಲಿ ನಾಮರೂಪ ರಹಿತನಾಗಿ ಅಪರಿಚ್ಛಿನ್ನನಾಗಿದ್ದರೂ, ಅಭಿವ್ಯಕ್ತ ಸ್ಥಿತಿಯಲ್ಲಿ ನಾಮರೂಪ ಲಿಂಗಗಳುಳ್ಳ ಈ ವಿಶ್ವರೂಪದಲ್ಲಿ ತೋರಿರುತ್ತಾನೆ. ಇದೆಲ್ಲವೂ ಅವನ ಅಪರಿಮಿತವಾದ ಶಕ್ತಿಯೂ ಅದ್ಭುತವಾದ ಮಹಿಮೆಯೂ ಆಗಿರುತ್ತದೆ.

೨. ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ ।
ಉತಾಮೃತ ತ್ವಸ್ಯೇಶಾನೋ ಯದನ್ನೇನಾತಿ ರೋಹತಿ ॥೨॥

ಈಗ ಕಾಣುತ್ತಿರುವ ಈ ಎಲ್ಲ ಪ್ರಪಂಚವೂ ಮತ್ತು ಹಿಂದೆ ಇದ್ದ, ಮುಂದೆ ಉಂಟಾಗುವ ಎಲ್ಲ ಜಗತ್ತೂ ಆ ಆದಿಪುರುಷನೇ ಆಗಿದೆ. ಅಲ್ಲದೆ ಆ ಹಿರಣ್ಯಗರ್ಭನು ಅಮೃತತ್ವಕ್ಕೆ ಒಡೆಯನು ಮತ್ತು ಪ್ರಾಣಿಗಳಿಗೆ ಭೋಗ್ಯವಾದ ಅನ್ನದಿಂದ ಅವನು ಬೆಳೆಯುತ್ತಾನೆ. ಎಂದರೆ ಕಾರಣಾವಸ್ಥೆಯಿಂದ ಈ ಜಗದ್ರೂಪವಾದ ಕಾರ್ಯಾವಸ್ಥೆಯನ್ನೂ ಪಡೆಯುತ್ತಾನೆ. ಏಕೆಂದರೆ ಪ್ರಾಣಿಗಳು ಮಾಡಿಯೂ ಮಾಡುತ್ತಲೂ ಇರುವ ಕರ್ಮಗಳ ಫಲವಾದ ಸುಖದುಃಖಾನುಭವಗಳು ಆಯಾ ಪ್ರಾಣಿಗಳಿಗೆ ಆಗುತ್ತಿರುವುದಕ್ಕೋಸ್ಕರ ಈ ವಿಶ್ವದ ಸೃಷ್ಟಿ ಸ್ಥಿತಿಲಯಗಳನ್ನು ನೆರವೇರಿಸುತ್ತಿರುತ್ತಾನೆ. ಇದು ಆ ಪರತತ್ವದ ವ್ಯಾವಹಾರಿಕವಾದ ಸ್ವರೂಪವಾಗಿರುತ್ತದೆ.

೩. ಏತಾವಾನಸ್ಯ ಮಹಿಮಾ ಅತೋ ಜ್ಯಾಯಾಂಶ್ಚ ಪುರುಷಃ ।
ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥೩॥

ಈ ಪ್ರಪಂಚದಲ್ಲಿ ಕಾಣಬರುತ್ತಿರುವ ನಾಮರೂಪಶಕ್ತಿ ವಿಶೇಷಗಳೆಲ್ಲವೂ ಈ ಸರ್ವ ಕಾರಣನಾದ ವಿರಾಟ್‌ಪುರುಷನ ಮಹಿಮೆಯೇ, ಪರಮಾತ್ಮನ ವಿಭೂತಿಗಳ ವಿಸ್ತಾರವೇ, ಆ ಪರಬ್ರಹ್ಮ ತತ್ವದ ಅಭಿವ್ಯಕ್ತಿ ವಿಶೇಷಗಳೇ ಆಗಿದೆ ! ಅಲ್ಲದೆ ಈ ಪುರುಷನು ಇದೆಲ್ಲಕ್ಕಿಂತ ಮಿಗಿಲಾಗಿಯೂ ಇರುತ್ತಾನೆ. ಈ ವಿಶ್ವದಲ್ಲಿರುವ ಎಲ್ಲ ಪದಾರ್ಥಗಳೂ ಆ ಪರಮಾತ್ಮನಾದ ಪುರುಷನ ಒಂದು ಕಾಲುಭಾಗ ಅಥವಾ ಅಲ್ಪಭಾಗ ಮಾತ್ರವಾಗಿವೆ. ಉಳಿದ ಮುಕ್ಕಾಲು ಅಥವಾ ಬಹುಭಾಗವು ಅಂತರಿಕ್ಷದಲ್ಲಿ ನಮಗೆ ಗೋಚರವಾಗದೆ ಇರುತ್ತಾ ನಿತ್ಯನೂ

ನಿರ್ವಿಕಾರಿಯೂ ಆಗಿರುವ ಆ ಪರಮಪುರುಷನ ವಾಸ್ತವ ಸ್ವರೂಪದ ಮಹಿಮೆಯನ್ನು ಸೂಚಿಸುತ್ತಿರುತ್ತದೆ.

೪. ತ್ರಿಪಾದೂರ್ಧ್ವ ಉದೈತ್ ಪುರುಷಃ ಪಾದೋಽಸ್ಯೇಹಾಭವತ್ ಪುನಃ।
ತತೋ ವಿಶ್ವಂ ವ್ಯಕ್ರಾಮತ್ ಸಾಶನಾನಶನೇ ಅಭಿ ॥ ೪ ॥

೫. ತಸ್ಮಾದ್ವಿರಾಡ್ ಅಜಾಯತ ವಿರಾಜೋ ಅಧಿಪೂರುಷಃ।
ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ॥ ೫ ॥

ಆ ಪರಮ ಪುರುಷನ ಮುಕ್ಕಾಲು ಎಂದರೆ ಬಹುಭಾಗವು ಈ ಸಂಸಾರದಿಂದ, ಎಂದರೆ ಕರ್ತೃತ್ವ ಭೋಕ್ತೃತ್ವ ಜನನ ಮರಣ ಸುಖದುಃಖಾನುಭವ ನಿರ್ಬಂಧದ ದುಃಖ ಪರಂಪರೆಯಿಂದ, ಮೇಲಕ್ಕೆ ಎದ್ದಿರುತ್ತದೆ. ಎಂದರೆ ಈ ಸಾಂಸಾರಿಕವಾದ ಗುಣದೋಷಗಳ, ಅಹಂಕಾರ ಮಮಕಾರಗಳ, ಹುಟ್ಟು ಸಾವು ಮುಂತಾದ ವಿಕಾರಗಳ, ಸಂಸ್ಪರ್ಶವಿಲ್ಲದೆ ಶುದ್ಧವಾಗಿರುತ್ತದೆ. ಈ ಕಾಲು ಭಾಗವು, ಸ್ವಲ್ಪ ಭಾಗವು ಈ ಲೌಕಿಕ ವ್ಯವಹಾರದಲ್ಲಿ, ಅಜ್ಞಾನ ರೂಪವಾದ ಮಾಯಿಕ ಸಂಸಾರದಲ್ಲಿ ಸೃಷ್ಟಿ ಸಂಹಾರಗಳನ್ನು ಬಾರಿಬಾರಿಗೂ ಪಡೆಯುತ್ತಿರುತ್ತದೆ ಈ ಅಂಶವನ್ನು ಗೀತೆಯಲ್ಲೂ,

"ವಿಷ್ಟಭ್ಯಾಹ ಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್॥"

೧೦. ೪೬. ರಲ್ಲಿ ಈ ಎಲ್ಲ ಜಗತ್ತನ್ನೂ ನಾನು ನನ್ನ ಒಂದು ಅಂಶದಿಂದ ಆಧರಿಸಿಕೊಂಡಿರುತ್ತೇನೆ—ಎಂದು ಹೇಳಿದೆ. ಈ ಜಗತ್ತಿನಲ್ಲಿ ಮೃತ್ಪಾಷಾಣಾದಿ ಪಂಚಭೂತಗಳು, ಗಿಡ ಮರ ಬಳ್ಳಿ ಸಸ್ಯಗಳು, ತಿರ್ಯಕ್ ಪ್ರಾಣಿಗಳು, ರಾಕ್ಷಸರು, ಮಾನವರು, ದೇವತೆಗಳು--ಇವೇ ಮುಂತಾದ ದೇಹರೂಪಗಳನ್ನು ಪಡೆಯುತ್ತಿರುತ್ತವೆ. ಈ ವ್ಯವಹಾರದಲ್ಲಿ ಸಾಶನ ಎಂದರೆ ಭೋಜನಾದಿ ವ್ಯಾಪಾರದಿಂದ ಕೂಡಿರುವ ಚೇತನ ಪ್ರಾಣಿಗಳಾಗಿಯೂ, ಅನಶನ ಎಂದರೆ ಭೋಜನಾದಿ ಕಾರ್ಯಗಳನ್ನು ಮಾಡಲಾರದ ಅಚೇತನವಾದ ಮೃತ್ ಪಾಷಾಣ ಗಿರಿನದೀ ಮುಂತಾದ ಜಡ ಪದಾರ್ಥಗಳಾಗಿಯೂ, ಹೀಗೆ ನಾನಾ ಬಗೆಯ ನಾಮರೂಪಗಳುಳ್ಳದ್ದಾಗಿ ವ್ಯಾಪಿಸಿರುತ್ತವೆ.

ಹೀಗೆ ಆ ವಿರಾಟ್ ಪುರುಷನಿಂದ ಕ್ರಮವಾಗಿ ಮೃತ್ ಸಸ್ಯ ಪ್ರಾಣಿ ಪುರುಷ ವರ್ಗಗಳೆಲ್ಲವೂ ಉಂಟಾಗುತ್ತಿರುತ್ತದೆ.

೬. ಯತ್ ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ |

ಈ ವ್ಯವಹಾರದಲ್ಲಿ ವಿರಾಟ್ ರೂಪನಾದ ಪರಮಾತ್ಮನು ತನ್ನನ್ನೇ ಹವಿಸ್ಸನ್ನಾಗಿ ವಿನಿಯೋಗಿಸಿ ಆತ್ಮ ಯಜ್ಞವನ್ನು ನೆರವೇರಿಸುತ್ತಿರುತ್ತಾನೆ. ಈ ಮುಖ್ಯ ಸೃಷ್ಟಿಯಾದ ಮೇಲೆ ಅನುಸೃಷ್ಟಿಯಲ್ಲಿ ಜೀವರೂ ಅವರ ಉಪಾಧಿಗಳಾಗಿರುವ ಶರೀರ ಮುಂತಾದ ಚರಾಚರಗಳೂ ಉಂಟಾಗುತ್ತವೆ. ದೇವತೆಗಳು ಮಾನಸ ಯಜ್ಞವನ್ನು ಮಾಡಿದರು. ಯಜ್ಞಸ್ವರೂಪನಾದ ಹಿರಣ್ಯಗರ್ಭನಿಂದಲೇ ವೇದಗಳೂ ಹೊರ ಹೊಮ್ಮಿದವು. ಶ್ವೇತಾಶ್ವತರೋಪನಿಷತ್ತಿನಲ್ಲಿ,

"ಯೋಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚಪ್ರಹಿಣೋತಿ ತಸ್ಮೈ"

ಆ ಪರಮಾತ್ಮನು ಮೊದಲು ಬ್ರಹ್ಮನನ್ನು ಸೃಜಿಸಿ ಅವನಿಗೆ ಮುಂದಿನ ಕಾರ್ಯನಿರ್ವಾಹದಲ್ಲಿ ಮಾರ್ಗದರ್ಶನಾರ್ಥವಾಗಿ ವೇದಗಳನ್ನು ಅನುಗ್ರಹಿಸಿದನು, ಎಂದು ಹೇಳಿರುತ್ತದೆ.

**ಚಾತುರ್ವರ್ಣ್ಯವು ಪ್ರಾರಂಭವಾದ ಬಗೆ.**

ವೇದ ಸಂಹಿತಾ ಕಾಲದಲ್ಲಿ ಆರ್ಯ ಅನಾರ್ಯ ಅಥವಾ ದಾಸ ದಸ್ಯು ಮುಂತಾದ ಪಂಗಡಗಳ ಉಲ್ಲೇಖಗಳು ಇರುವಂತೆಯೇ ಬ್ರಾಹ್ಮಣ ಮುಂತಾದ ನಾಲ್ಕು ವರ್ಣಗಳ ಉಲ್ಲೇಖಗಳೂ ಇವೆ. ತಿಳಿವಳಿಕೆಯನ್ನು ಸಂಪಾದಿಸಿ ಹರಡುವ ಮತ್ತು ಯಜ್ಞಯಾಗಗಳನ್ನು ಆಚರಿಸಲು ಸಹಾಯ ಮಾಡುವ ಪೌರೋಹಿತ್ಯ ವೃತ್ತಿಯನ್ನು ಬ್ರಾಹ್ಮಣರು ಹೆಚ್ಚಾಗಿ ಅವಲಂಬಿಸಿದ್ದರೂ, ದೇವಾಪಿ, ಆರ್ಷ್ಟಿಷೇಣ, ವಿಶ್ವಾಮಿತ್ರ ಮುಂತಾದ ಕ್ಷತ್ರಿಯರು ಯಾಗಗಳನ್ನು ಮಾಡಿಸಿದ ಉಲ್ಲೇಖಗಳೂ ಇವೆ. ಈ ಹಿನ್ನೆಲೆಯಿಂದ ಮುಂದಿನ ಮಂತ್ರಗಳನ್ನು ಅರ್ಥಮಾಡಿಕೊಳ್ಳಬೇಕಾದುದು ನ್ಯಾಯವಾಗಿರುತ್ತದೆ. ಅಲ್ಲದೆ ವರ್ಣ ಮತ್ತು ಜಾತಿ ಪದಗಳ ಅರ್ಥ ವಿಶೇಷಗಳನ್ನೂ ನೆನಪಿನಲ್ಲಿಡುವು

ದರಿಂದ ಪ್ರಯೋಜನವಾಗುತ್ತದೆ. ವರ್ಣಪದದಿಂದ ಮೇರು ಪ್ರಸ್ತಾರ ಕ್ರಮದಿಂದ ಆತ್ಮೋನ್ನತಿಯ ಮೆಟ್ಟಿಲುಗಳನ್ನು ಏರುವ ವಿಷಯವೂ ಸೂಚಿತವಾಗುತ್ತದೆ. ಜಾತಿಪದದಿಂದ ಭೂ ಪ್ರಸ್ತಾರಕ್ರಮದಲ್ಲಿ ಆತ್ಮೋನ್ನತಿಯ ಕ್ರಮವನ್ನು ವಿಸ್ತರಿಸುವ ರೀತಿಯು ಸೂಚಿತವಾಗುತ್ತದೆ.

೧೦. ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್।
ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾವುಚ್ಯೇತೇ॥

೧೧. ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋಽಜಾಯತ॥

ಹೀಗೆ ಅಭಿವ್ಯಕ್ತನಾದ ವಿರಾಟ್ ಪುರುಷನನ್ನು ಎಷ್ಟು ಬಗೆಯಾಗಿ ಕಲ್ಪಿಸಿಕೊಂಡರು ? ಈ ವಿರಾಟ್ ರೂಪನಾದ ಪರಮಾತ್ಮನಿಗೆ ಯಾವುದು ಮುಖವು ? ತೋಳುಗಳು ಯಾವುವು ? ತೊಡೆ ಕಾಲುಗಳು ಯಾವುವು ? ಈ ವಿರಾಟ್ ಪುರುಷನಿಗೆ ಬ್ರಾಹ್ಮಣನೇ ಮುಖವಾದನು, ಎಂದರೆ ಜ್ಞಾನಾರ್ಜನ ತಿಳಿವಳಿಕೆಯ ಪ್ರಸಾರಣಗಳಿಗೆ ದ್ವಾರವಾಗಿ ಪರಿಣಮಿಸಿದನು. ಕ್ಷತ್ರಿಯನೇ ತೋಳುಗಳಾಗಿ ಭಾವಿಸಲ್ಪಟ್ಟನು, ಎಂದರೆ ದುಷ್ಟನಿಗ್ರಹ ಶಿಷ್ಟ ರಕ್ಷಣೆಗಳಿಂದ ದೇಶದೊಳಗೆ ಶಾಂತಿ ಪಾಲನೆಯನ್ನೂ, ಹೊರಗಿನ ಶತ್ರುಗಳಿಂದ ದೇಶ ರಕ್ಷಣ ಕಾರ್ಯವನ್ನೂ ಸಾಧಿಸಲು ಮುಖ್ಯ ಸಾಧನವಾದನು. ವೈಶ್ಯನೇ ಈ ಪುರುಷನ ತೊಡೆಗಳೆನ್ನುವುದು. ಎಂದರೆ ದೇಶದ ಆರ್ಥಿಕ ಸಂಪತ್ತನ್ನು ಕಾಪಾಡುತ್ತಾ, ಬೆಳೆದ ದವಸಗಳನ್ನೂ ತಯಾರಿಸಿದ ವಸ್ತುಗಳನ್ನೂ ಆವಶ್ಯಕವಾದ ದ್ರವ್ಯ ಸಹಾಯವನ್ನೂ ಎಲ್ಲ ಜನರಿಗೂ ಯಥಾಯೋಗ್ಯವಾಗಿ ತಲುಪುವಂತೆ ಹಂಚಿಕೆಯ ಕಾರ್ಯಗಳನ್ನು ವ್ಯವಸಾಯ ವ್ಯಾಪಾರ ವಾಣಿಜ್ಯಗಳಿಂದ ನೆರವೇರಿಸಲು ಅನುವಾಗಿದ್ದನು. ಈ ವಿರಾಟ್ ಪುರುಷನ ಪಾದಗಳಿಂದ ಶೂದ್ರನು ಉಂಟಾದನು. ಎಂದರೆ ದೇಹ ಶಕ್ತಿಯಿಂದ ನೆರವೇರಿಸಬೇಕಾದ ಕಾರ್ಯಗಳನ್ನು ನೆರವೇರಿಸುತ್ತಾ ಉದ್ಯೋಗ ಸ್ಥಾನಗಳಲ್ಲೂ ವ್ಯವಸಾಯ ಕ್ಷೇತ್ರಗಳಲ್ಲೂ ಕಾರ್ಮಿಕನಾಗಿ ಸೇವೆಯನ್ನು ಸಲ್ಲಿಸುತ್ತಿರಲು ಅನುವಾಗಿದ್ದನು. ಮೇಲು ಕೀಳು ಎಂಬ ಭಾವವಿರಲಿಲ್ಲ.

ಚಾತುರ್ವರ್ಣ್ಯದ ಗುಣ ವಿಶೇಷಗಳು.

ಈ ಚಾತುರ್ವರ್ಣ್ಯದ ಪದ್ಧತಿಯು ವೈಯಕ್ತಿಕವಾದ ರುಚಿ, ಆನುವಂಶಿಕವಾದ ಸಂಸ್ಕೃತಿ, ಸನ್ನಿವೇಶ ಮುಂತಾದ ಕಾರಣಗಳಿಂದ ತಾನಾಗಿಯೇ ಏರ್ಪಟ್ಟಿತೇ ಹೊರತು, ಎಂದರೆ ಜನರು ತಾವಾಗಿಯೇ ಒಪ್ಪಿ ಆರಿಸಿಕೊಂಡು ಅವಲಂಬಿಸಿದರೇ ಹೊರತು, ಸ್ವಾರ್ಥಪರರಾದ ಕುಶಲಮತಿಗಳಾದ ಕೆಲವರು ಕಲ್ಪಿಸಿ ಇತರರ ಮೇಲೆ ಹೇರಿದ ಏರ್ಪಾಡಲ್ಲವು. ಅದು ಯಾವಾಗಲೂ ಸಾಧ್ಯವಾಗುವುದೂ ಇಲ್ಲವು. ಧಾರ್ಮಿಕ ಸಂಸ್ಕೃತಿಯಿಂದ ಮುಂದುವರಿಯುತ್ತಿದ್ದ ಆರ್ಯರ ಮೇಲೆ ಇಂತಹ ಆರೋಪಣೆಯನ್ನು ಮಾಡುವುದು ನ್ಯಾಯವೂ ಅಲ್ಲವು ಈ ಪದ್ಧತಿಯು ಆನುವಂಶಿಕವಾದ ಮೇಲೆ ಬಹು ಕಾಲಾನಂತರದಲ್ಲಿ ವೃತ್ತಿ ಸ್ವಾತಂತ್ರ್ಯವು ತಪ್ಪಿದುದು ದೋಷವಾದರೂ, ಈಗಿನಂತೆ ಅಧಾರ್ಮಿಕವೂ ವಿನಾಶಕಾರಿಯೂ ಆಗಿರುವ ಸ್ಪರ್ಧೆಯ ದೋಷಗಳು ಆಗ ಇರಲಿಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ಅಲ್ಲದೆ ವೃತ್ತಿಯು ಆನುವಂಶಿಕವಾಗಿರುವುದರಿಂದ ವೃತ್ತಿ ಕೌಶಲದ ಪ್ರಾವೀಣ್ಯವೂ, ಪರಿಷ್ಕಾರಗಳೂ, ಸುಲಭವೂ, ಸುಕರವೂ, ಶೀಘ್ರ ಸಾಧ್ಯವೂ ಆಗಿರುತ್ತದೆಂಬುದನ್ನು ಮರೆಯಬಾರದು. ಈ ವೇದೋಪನಿಷತ್ತುಗಳ ಕಾಲದಲ್ಲಿ ಚಾತುರ್ವರ್ಣ್ಯದ ಪದ್ಧತಿಯು ರೂಢಿಗೆ ಬಂದಿತ್ತು. ಅದರ ಗುಣಗಳೂ ಪಲ ವಿಶೇಷಗಳೂ ಮುಂದಾಗಿ ಕಾಣುತ್ತಿದ್ದುವು. ದೋಷಗಳು ಮುಂದಾಗಿರಲಿಲ್ಲ. ಅಲ್ಲದೆ ಅದು ಧಾರ್ಮಿಕ ಸಂಸ್ಕೃತಿಯ ಬೆಳವಣಿಗೆಯಿಂದ ಸಹಜವಾಗಿ ಉಂಟಾದ ಸತ್ಪರಿಣಾಮವಾಗಿತ್ತೇ ಹೊರತು, ಬ್ರಾಹ್ಮಣರು ತಮ್ಮ ಪ್ರತಿಷ್ಠೆಯನ್ನು ಸ್ಥಾಪಿಸಿಕೊಳ್ಳಲೂ, ಇತರರ ಮೇಲೆ ತಮ್ಮ ಅಧಿಕಾರವನ್ನು ಪ್ರಸರಿಸಲೂ ಅವರಿಂದ ಕಲ್ಪಿತವಾಗಿರಲಿಲ್ಲ. ಅದು ಯಾವಾಗಲೂ ಸಾಧ್ಯವಾಗುವುದೂ ಅಲ್ಲವು. "ಗುಣಾಃ ಪೂಜಾಸ್ಥಾನಂ ಗುಣಿಷುನಚಲಿಂಗಂ ನಚವಯಃ" ಎಂದರೆ ಗುಣಗಳಿಂದಲೇ ಗೌರವವು ದೊರೆಯುತ್ತದೆಯೇ ಹೊರತು, ಲಿಂಗವಾಗಲಿ, ಹೊರಗಿನ

ಆಡಂಬರದ ಚಿಹ್ನೆಗಳಾಗಲಿ, ವಯಸ್ಸಾಗಲಿ, ನಿರ್ಬಂಧವಾಗಲಿ ಗೌರವವನ್ನು ಕೊಡಲಾರವು—ಎಂಬ ಮಾತು ಯಾವಾಗಲೂ ನಿಜವಾಗಿರುವ ಗಾದೆಯಂತಿದೆ. ಇದು ಈಗ ನಿಜವಾಗಿರುವ ಹಾಗೆ ಆಗಲೂ ನಿಜವಾಗಿತ್ತು. ಗುಣವಿಲ್ಲದವರು ಇತರರಿಂದ ಗೌರವವನ್ನು ನಿರೀಕ್ಷಿಸಿದರೆ ಈಗ ಹೇಗೆ ದೊರೆಯುವುದಿಲ್ಲವೋ ಹಾಗೆಯೇ ಅಂಥವರು ತಮ್ಮ ಅಧಿಕಾರವನ್ನು ಇತರರ ಮೇಲೆ ಪ್ರಸರಿಸಲು ಪ್ರಯತ್ನಿಸಿದರೆ ಈಗ ಹೇಗೆ ಇತರರು ಅದನ್ನು ಒಪ್ಪಿಕೊಳ್ಳುತ್ತಿಲ್ಲವೋ ಹಾಗೆಯೇ ಆಗಿನ ಕಾಲದಲ್ಲೂ ಜನರು ಒಪ್ಪಿಕೊಳ್ಳುತ್ತಿರಲಿಲ್ಲ. ಮಾನವನ ಸ್ವಭಾವವೇ ಹಾಗಿರುತ್ತದೆ.

**ಚಾತುರ್ವರ್ಣ್ಯವು ಸ್ವಾಭಾವಿಕವಾದುದು.**

ಆದುದರಿಂದ ವೈದಿಕಾರ್ಯರಲ್ಲೂ ಯಾರು ತಿಳಿವಳಿಕೆಯನ್ನು ಸಂಪಾದಿಸುವುದರಲ್ಲೂ ಸಂಪಾದಿಸಿದ ತಿಳಿವಳಿಕೆಯನ್ನು ಇತರರಲ್ಲೂ ಹರಡಿ ಅವರೂ ಆತ್ಮೋನ್ನತಿಯ ಮಾರ್ಗದಲ್ಲಿ ಮುಂದುವರಿಯುವಂತೆ ಅವರವರ ಸಂಸ್ಕೃತಿಯ ಮತ್ತು ರುಚಿಯ ಅಂತಸ್ತನ್ನು ಅನುಸರಿಸಿ ಸಹಾಯಸೇವೆಯನ್ನು ಮಾಡುವುದಕ್ಕಾಗಿ ತಮ್ಮ ಜೀವಿತ ಕಾಲವನ್ನು ಮುಡಿಪಾಗಿ ಇಡುತ್ತಿದ್ದರೋ ಅಂಥವರನ್ನು ಇತರರು ಬ್ರಾಹ್ಮಣರೆಂದು ಗೌರವಿಸಿ ಅನುಸರಿಸುತ್ತಿರಲು ಪ್ರಾರಂಬಿಸಿದರು. ಆ ಬ್ರಾಹ್ಮಣರು ಅಧಿಕಾರವನ್ನಾಗಲಿ ಐಶ್ವರ್ಯವನ್ನಾಗಲಿ ಇತರರಂತೆ ಆಶಿಸಿ ಪಡೆಯುತ್ತಿರಲಿಲ್ಲ. ಇಂತಹ ಸೇವೆಯಿಂದ ತಾವೂ ತೀರಿಸಬೇಕಾಗಿದ್ದ ಋಷಿ ಋಣವು ತೀರಿ ಋಣ ಮುಕ್ತರಾಗುವಂತೆಯೂ ಕೃತಕೃತ್ಯರಾಗುವಂತೆಯೂ ಭಾವಿಸುತ್ತಿದ್ದರು.

ಪ್ರತಿಯೊಂದು ಜನಾಂಗ, ಸಮಾಜ ಅಥವಾ ದೇಶದಲ್ಲಿ ಈ ನಾಲ್ಕು ಕಾರ್ಯಗಳು ನೆರವೇರಬೇಕಾಗಿರುತ್ತವೆ. ೧. ತಿಳಿವಳಿಕೆಯನ್ನು ಬುದ್ಧಿ ಶಕ್ತಿಯ ಅತಿಶಯದಿಂದ ಸಂಪಾದಿಸಿ ಹೆಚ್ಚಿಸಿಕೊಂಡು ಅದನ್ನು ಇತರರಲ್ಲೂ ಹರಡುವುದು. ೨. ದೇಶದ ಆಡಳಿತವನ್ನು ಶೌರ್ಯ ಧೈರ್ಯ ಸಾಹಸ ಪರಾಕ್ರಮಗಳಿಂದ ನಿರ್ವಹಿಸುತ್ತಾ

ಜನರನ್ನು ಕಾಪಾಡುವುದು. ೩. ದೇಶದಲ್ಲಿ ಎಲ್ಲ ಬಗೆಯ ಸಂಪತ್ತನ್ನು ಕೌಶಲ ಮುಂದಾಲೋಚನೆ ಸಾಹಸಗಳಿಂದ ಹೆಚ್ಚಿಸುತ್ತಾ ಧರ್ಮಾಚರಣೆಗೂ ರಾಜ್ಯನಿರ್ವಾಹಕ್ಕೂ ಬೆಂಬಲವಾಗಿದ್ದು ಸಹಾಯ ಮಾಡುವುದು. ೪. ಮತ್ತು ದೇಹ ಶಕ್ತಿಯಿಂದ ಎಲ್ಲ ಕಾರ್ಯನಿರ್ವಾಹದಲ್ಲೂ ಸಹಾಯ ಸಹಕಾರವನ್ನು ನೀಡುವುದು. ಈ ನಾಲ್ಕು ಗುಣಶಕ್ತಿಗಳೂ ಕ್ರಮವಾಗಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಲ್ಲಿ ಸಾಮಾನ್ಯವಾಗಿ ಮುಂದಾಗಿರುತ್ತವೆ. ಇವೆಲ್ಲವನ್ನೂ ಒಬ್ಬರೇ ನಿರ್ವಹಿಸಲಾಗುವುದಿಲ್ಲ. ಒಂದು ದೇಶವು ಮುಂದುವರಿಯುತ್ತಿರಬೇಕಾದರೆ ಈ ನಾಲ್ಕು ಕಾರ್ಯಗಳೂ ಸಮವಾಗಿ ನೆರವೇರುತ್ತಿರಬೇಕು. ಇದರಲ್ಲಿ ಮೇಲು ಕೀಳು ಎಂಬ ಭಾವವಿಲ್ಲ. ಆದುದರಿಂದ ಈ ನಾಲ್ಕು ವರ್ಣಗಳನ್ನು ಕ್ರಮವಾಗಿ ಮಾನವನ ನಾಲ್ಕು ಮುಖ್ಯವೂ ವಿಶೇಷ ಸ್ವಭಾವವುಳ್ಳವೂ ಆಗಿರುವ ಅಂಗಗಳಿಗೆ ಎಂದರೆ ಮುಖ, ತೋಳು, ತೊಡೆ, ಕಾಲುಗಳಿಗೆ ಹೋಲಿಸಿ ವರ್ಣಿಸಿದೆ. ಈ ಅಂಗಗಳಲ್ಲಿ ಮೇಲಿನ ಗುಣಶಕ್ತಿಗಳು ಪ್ರಮುಖವಾಗಿ ಮುಂದಾಗಿರುತ್ತವೆ ಎಂಬುದನ್ನು ಗಮನಿಸಬೇಕು. ಈ ಕಾರಣದಿಂದ ಎಂದರೆ, ವರ್ಣಗಳಿಗೂ ಅಂಗಗಳಿಗೂ ಗುಣ ಧರ್ಮಶಕ್ತಿಗಳಲ್ಲಿ ಸಾಮ್ಯವಿರುವುದರಿಂದ ಕ್ರಮವಾಗಿ ಆಯಾ ಅಂಗಗಳಿಂದ ಆ ಆ ವರ್ಣಗಳು ಉಂಟಾದುವು ಎಂದು ಆಲಂಕಾರಿಕ ರೀತಿಯಲ್ಲಿ ವರ್ಣಿಸಲಾಗಿದೆಯೇ ಹೊರತು, ಅಕ್ಷರಾರ್ಥದಲ್ಲಿಯೇ ತಾತ್ಪರ್ಯವಿಲ್ಲವೆಂದು ಹೇಳಿದರೆ ತಪ್ಪಾಗಲಾರದೆಂಬುದನ್ನೂ ನೆನಪಿನಲ್ಲಿಡಬೇಕು. ಇದು ಹೀಗಿರುವುದರಿಂದಲೇ ಕಾಲಿಗೆ ಒಂದು ಮುಳ್ಳು ಚುಚ್ಚಿಕೊಂಡರೆ ತಲೆಯು ಅದರ ನೋವನ್ನು ಅನುಭವಿಸಿ ಕೈಯಿಂದ ಸೂಜಿಯನ್ನು ತೆಗೆದುಕೊಂಡು ಆ ಮುಳ್ಳನ್ನು ಹೊರಕ್ಕೆ ತೆಗೆದು ಬಿಸುಟು ನೋವನ್ನು ನಿವಾರಿಸುತ್ತದೆ. ಅದರಂತೆಯೇ ಕಾಲಿಗೆ ಕೊಳೆ ತಗಲಿದರೆ ಕಣ್ಣು ಅದನ್ನು ನೋಡಿ ಒಂದು ಕೈಯಿಂದ ನೀರನ್ನು ಹಾಕುತ್ತಾ ಇನ್ನೊಂದು ಕೈಯಿಂದ ಆ ಕೊಳೆಯನ್ನು ತೊಳೆದು ನಿರ್ಮಲವಾಗಿಡುತ್ತದೆ. ಹಾಗೆಯೇ ಕಾಲುಗಳು ತಲೆ ತೋಳುಗಳು ತೊಡೆಗಳು ಇವೆಲ್ಲ

ವನ್ನೂ ಹೊತ್ತು ತಿರುಗುತ್ತವೆ. ಅದರಂತೆಯೇ ತೊಡೆಗಳು ದೇಹದ ನಿಲುಗಡೆಗೆ ಆಧಾರವಾಗಿರುತ್ತವೆ. ಜಂಘಾಬಲವು ತಪ್ಪಿದರೆ ಅಂಗಗಳೆಲ್ಲವೂ ಅಶಕ್ತವಾಗಿ ದೇಹವೆಲ್ಲವೂ ಅಧೀರವಾಗಿ ತೂರಾಡುತ್ತದೆ ಅಂಗಗಳಲ್ಲಿರುವ ಐಕಮತ್ಯ, ಸಹಾನುಭೂತಿ, ಸಹಕಾರ, ಅಸೂಯೆ ಇಲ್ಲದಿರುವಿಕೆ ಮುಂತಾದ ಸರ್ವೋಪಕಾರಕಗಳಾದ ಭಾವಗಳನ್ನು ಸೂಚಿಸುವ, ಮತ್ತು "All for each and each for all" ಎಂದರೆ ಪ್ರತಿಯೊಬ್ಬರೂ ಎಲ್ಲರ ಯೋಗಕ್ಷೇಮಗಳ ನಿರ್ವಹಣೆಗಾಗಿ, ಎಲ್ಲರೂ ಪ್ರತಿಯೊಬ್ಬರ ಹಿತಕ್ಕಾಗಿ ಇರಬೇಕು, ಎಂಬ ತತ್ತ್ವವನ್ನೂ ಸೂಚಿಸುವ ಸಲುವಾಗಿಯೇ ಅಂಗಗಳಿಗೆ ವರ್ಣಗಳನ್ನು ಹೋಲಿಸಿ ವರ್ಣಿಸಿದೆ. ಇದರಲ್ಲಿ ಕೆಲವರ ಸ್ವಾರ್ಥಸಾಧನೆಯಾಗಲಿ, ಉಳಿದವರ ಅಜ್ಞಾನವಾಗಲಿ ಏನೂ ಇಲ್ಲವು.

ಸಂಸ್ಕೃತಿಯಿಂದ ಗುಣಕರ್ಮ ಶಕ್ತಿಗಳು.

ಒಂದು ಸಮಾಜದ ಜನರಲ್ಲಿ ಜೀವನದ ಅನುಭವದಿಂದ ಉಂಟಾಗುವ ಸಂಸ್ಕೃತಿಯನ್ನನುಸರಿಸಿ ಗುಣಕರ್ಮಶಕ್ತಿಗಳು ಉಂಟಾಗುತ್ತವೆ. ಇವುಗಳ ಅಂತಸ್ತಿಗೆ ಅನುಸಾರವಾಗಿ ವರ್ಣಭೇದಗಳು ನೈಸರ್ಗಿಕವಾಗಿಯೇ ಏರ್ಪಡುತ್ತವೆ ಜನರೂ ತಮ್ಮ ರುಚಿ ಸಂಸ್ಕೃತಿಗಳಿಗೆ ತಕ್ಕಂತೆ ಆರಿಸಿಕೊಂಡು ಒಪ್ಪಿಕೊಳ್ಳುತ್ತಾ ಮುಂದುವರಿಯುತ್ತಾರೆ. ಯಾರೂ ಇತರರ ಮೇಲೆ ಅಧಿಕಾರವನ್ನು ಹೇರುವುದು ಆಗುವುದೂ ಇಲ್ಲ. ಇತರರೂ ಅದನ್ನು ಒಪ್ಪಿಕೊಳ್ಳುವುದೂ ಇಲ್ಲ. ಇದು ಈಗ ಹೇಗೆ ನಿಜವೋ ಪೂರ್ವಕಾಲದಲ್ಲಿಯೂ ಹಾಗೆಯೇ ನಿಜವಾಗಿತು ; ಮುಂದೆಯೂ ಹಾಗೆಯೇ ನಿಜವಾಗಿರುತ್ತದೆ ನಾಮರೂಪಗಳು ಮಾತ್ರ ಭಿನ್ನ ಭಿನ್ನವಾದ ದೇಶ ಕಾಲಗಳಲ್ಲಿ ಬೇರೆ ಬೇರೆಯಾಗಿರಬಹುದು. ವರ್ಣ, ಜಾತಿ, ವರ್ಗ, ತರಗತಿ ಎಂದು ಮುಂತಾದ ಹೆಸರುಗಳಿಂದ ಈ ವಿಭಾಗ ಪಂಗಡಗಳು ಎಲ್ಲ ದೇಶ ಕಾಲಗಳಲ್ಲೂ ಇರುತ್ತವೆ. ಇಂದಿನ ಕಾಲದ ಆರ್ಥಿಕ ಪರಿಸ್ಥಿತಿಯಲ್ಲಿ, ಸಾಮಾಜಿಕ ಸಮಸ್ಯೆಗಳಲ್ಲಿ, ಔದ್ಯೋಗಿಕ ತೊಡಕುಗಳಲ್ಲಿ

ವರ್ಣಾಶ್ರಮಗಳ ಏರ್ಪಾಡು ಉಳಿಯುವುದು ಕಷ್ಟವಾಗಿದೆ. ವರ್ಣಗಳು ಬೆರೆದುಹೋಗುತ್ತಿವೆ. ಗುಣಕರ್ಮಗಳ ದೃಷ್ಟಿಯಿಂದ ಪರಿಶೀಲಿಸಿದರೆ ಜಗತ್ತಿನ ಎಲ್ಲ ದೇಶಗಳಲ್ಲೂ ಇವು ಇವೆ. ಪಾಶ್ಚಾತ್ಯರಲ್ಲಿ ವರ್ಣ ಎಂಬ ಹೆಸರಿಲ್ಲ. ವರ್ಗಗಳು ಇವೆ. ಬಡವ ಶ್ರೀಮಂತವರ್ಗಗಳ ಸಮಸ್ಯೆ ತೀವ್ರವಾಗುತ್ತಿದೆ. ಇದಕ್ಕೆಲ್ಲ ಮದ್ದು ಈ ದೇಶದ ವರ್ಣಧರ್ಮದ ಏರ್ಪಾಡಿನಲ್ಲಿ ಅಡಗಿರುವುದನ್ನು ಮುಂದುವರಿಸುವುದರಲ್ಲಿದೆ. "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂಬ ಸಾಮಾನ್ಯಧರ್ಮದ ವಿಶ್ವಧರ್ಮದ ಆಚರಣೆ ಪ್ರಚಾರಣಗಳನ್ನು ಮಾಡಿದರೆ ಸಾಕಾಗುತ್ತದೆ.

"ಸ್ನಾನಂ ಸಂಧ್ಯಾಜಪಃ ಪೂಜಾ ಸ್ವಾಧ್ಯಾಯೋಽತಿಥಿಸತ್ಕೃತಿಃ |
ಪರೋಪಕರಣಂ ಧರ್ಮಃ ಸರ್ವೇಷಾಂ ಸರ್ವಸಿದ್ಧಿದಃ ||"

ಸಾಮಾನ್ಯ ಅಥವಾ ವಿಶ್ವಧರ್ಮ.

ವೈದಿಕಾರ್ಯರ ದಿನಗಟ್ಟಲೆಯ ಧರ್ಮಾಚರಣೆಯ ಕ್ರಮವು ಮೇಲೆ ವಿವರಿಸಿರುವ ಭಾವನೆಗಳ ಫಲವಾಗಿ ಹೇಗೆ ರೂಪಗೊಂಡಿತ್ತೆಂಬ ವಿಷಯವನ್ನು ಈ ಶ್ಲೋಕದಲ್ಲಿ ಸಂಗ್ರಹಿಸಿದೆ. ಆಗ ಆರ್ಯರು ಪ್ರತಿದಿನವೂ ಸ್ನಾನವನ್ನೂ, ಸಂಧ್ಯಾಕಾಲಗಳಲ್ಲಿ ಅರ್ಘ್ಯ ಪ್ರದಾನ, ಗಾಯತ್ರೀ ಮಂತ್ರಜಪ, ಸೂರ್ಯೋಪಸ್ಥಾನಗಳನ್ನೂ, ವೇದಗಳ ಅಧ್ಯಯನ ಅಧ್ಯಾಪನಗಳನ್ನೂ, ದೇವತಾರ್ಚನೆಯನ್ನೂ, ಮನೆಗೆ ಬರಬಹುದಾದ ಅತಿಥಿಗಳ ಸತ್ಕಾರವನ್ನೂ, ಸಾಮಾನ್ಯವಾಗಿ ಪರೋಪಕಾರಧರ್ಮವನ್ನೂ ಆಚರಿಸುತ್ತಿದ್ದರು. ಇದರಿಂದ ಎಲ್ಲರಿಗೂ ಎಲ್ಲ ಬಗೆಯ ಸಿದ್ಧಿಗಳೂ ಉಂಟಾಗುತ್ತಿದ್ದುವು.

ಸಂಧ್ಯಾವಂದನ.

ಸಂಧ್ಯಾಕಾಲಗಳಲ್ಲಿ ಅರ್ಘ್ಯ ಜಪ ಉಪಸ್ಥಾನಗಳನ್ನೂ ಈ ಶ್ರುತಿಯಲ್ಲಿ ವಿವರಿಸಿದೆ.

"ತದುಹವಾಏತೇ ಬ್ರಹ್ಮವಾದಿನಃ ಸಂಧ್ಯಾಯಾಂ ಗಾಯತ್ರ್ಯಾ ಅಭಿಮಂತ್ರಿತಾ ಆಪ ಊರ್ಧ್ವಮುಕ್ಷಿಪಂತಿ | ತಾ ಆಪೋವಜ್ರೀಭೂತ್ವಾ

ತಾನಿ ರಕ್ಷಾಂಸಿ ಮಂದೇಹಾರುಣೇದ್ವೀಪೇ ಪ್ರಕ್ಷಿಪಂತಿ । ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನ ಮವಧೂನ್ವಂತಿ । ಉದ್ಯಂತಂ ಅಸ್ತಂಯಂತಮಾದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್‌ಸಕಲಂ ಭದ್ರಮಶ್ನುತೇ ಅಸಾವಾದಿತ್ಯೋ ಬ್ರಹ್ಮೇತಿ । ಬ್ರಹ್ಮೈವಸನ್‌ಬ್ರಹ್ಮಾಪ್ಯೇತಿ । ಯಏವಂವೇದ ॥'' ಐತರೇಯಾರಣ್ಯಕ. ೨, ೩, ೨.

ಎರಡು ಸಂಧ್ಯಾಕಾಲಗಳಲ್ಲೂ ಬ್ರಹ್ಮವಾದಿಗಳಾದ ಸೂರ್ಯೋಪಾಸಕರಾದ ಆ ಆರ್ಯರು ಆಚರಿಸುತ್ತಿದ್ದ ಈಗಲೂ ಆಚರಿಸುತ್ತಿರುವ ಸಂಧ್ಯಾವಂದನೆಯಲ್ಲಿ ಮುಖ್ಯವಾಗಿ ಮೂರು ಅಂಗಗಳಿವೆ. ಅರ್ಘ್ಯಪ್ರದಾನ, ಗಾಯತ್ರೀಜಪ, ಸೂರ್ಯೋಪಾಸನ–ಎಂಬ ಈ ಮೂರರಲ್ಲಿ ಅರ್ಘ್ಯಪ್ರದಾನ ಕ್ರಮವನ್ನು ವಿಸ್ತಾರವಾಗಿಯೂ ಜಪ ಉಪಾಸನೆಗಳನ್ನು ಸೂಕ್ಷ್ಮವಾಗಿಯೂ ಈ ಮೇಲಿನ ವಾಕ್ಯವು ತಿಳಿಸುತ್ತದೆ. ಸಂಧ್ಯಾಕಾಲಗಳಲ್ಲಿ ಈ ಉಪಾಸಕರು ಗಾಯತ್ರೀಮಂತ್ರ ಜಪದಿಂದ ಅಭಿಮಂತ್ರಿತವಾಗಿರುವ ನೀರನ್ನು ಸೂರ್ಯಾಭಿಮುಖವಾಗಿ ಮೇಲಕ್ಕೆ ಎರಚುತ್ತಾರೆ. ಆ ನೀರು ಅಭಿಮಂತ್ರಣದ ಮಹಿಮೆಯಿಂದ ವಜ್ರಾಯುಧದಷ್ಟು ಶಕ್ತಿಯುಳ್ಳದ್ದಾಗಿ ಸೂರ್ಯಗಮನವನ್ನು ಅಡ್ಡಿಪಡಿಸಲು ಋತಧರ್ಮವನ್ನು ಕೆಡಿಸಲು ಬರುವ್ವರಾಕ್ಷಸರನ್ನು ಮಂದೇಹಾರುಣ (ಕೀಳಾದ ಆಸೆಯಿಂದ ಕೆಂಪಾಗಿರುವ) ಎಂಬ ದ್ವೀಪದಲ್ಲಿ ಆ ರಾಕ್ಷಸರನ್ನು ಹಾರಿಸಿಕೊಂಡುಹೋಗಿ ಕೆಡವುತ್ತದೆ. ಪ್ರದಕ್ಷಿಣೆಯನ್ನು ಮಾಡುವುದರಿಂದ ಅವರು ಈ ತಮ್ಮ ಪಾಪವನ್ನು ನಿವಾರಿಸಿಕೊಳ್ಳುತ್ತಾರೆ. ಪ್ರಾತಃಕಾಲದಲ್ಲಿ ಉದಯಿಸುತ್ತಿರುವ ಮತ್ತು ಸಾಯಂಕಾಲದಲ್ಲಿ ಅಸ್ತವಾಗುತ್ತಿರುವ ಸೂರ್ಯನನ್ನು ಎದುರಿಗೆ ನಿಂತು ಧ್ಯಾನ ಮಾಡುತ್ತಿರುವ, ''ಈ ಸೂರ್ಯನೇ ಬ್ರಹ್ಮತತ್ವ''ವೆಂದು ''ಆ ಬ್ರಹ್ಮವೇ ನಾನು'' ಎಂದೂ ಉಪಾಸನೆಮಾಡುತ್ತಿರುವ, ಈ ಸಂಧ್ಯಾವಂದನರೂಪವಾದ ಕರ್ಮದ ಸ್ವರೂಪ ಮತ್ತು ಉದ್ದೇಶಗಳನ್ನು ತಿಳಿದಿರುವ ಬ್ರಾಹ್ಮಣನು ಎಲ್ಲ ಬಗೆಯ ಕಲ್ಯಾಣಗಳನ್ನೂ ಅನುಭವಿಸುತ್ತಾನೆ.

ಯಾವ ಉಪಾಸಕನು ಹೀಗೆ ಸೂರ್ಯನಲ್ಲೂ ಇರುವ, ತೇಜೋಽಂತರ್ಯಾಮಿಯಾಗಿರುವ ಚೈತನ್ಯವನ್ನು ಬ್ರಹ್ಮಚೈತನ್ಯದೊಡನೆಯೂ ಅದನ್ನು ತನ್ನೊಡನೆಯೂ ಅಭಿನ್ನವಾಗಿರುವಂತೆ ಉಪಾಸನೆಯಿಂದ ಸಾಕ್ಷಾತ್ಕಾರರೂಪವಾದ ಜ್ಞಾನವನ್ನು ಪಡೆದಿರುತ್ತಾನೋ ಅಂತಹ ಬ್ರಾಹ್ಮಣನೂ ಬ್ರಹ್ಮವೇ ಆಗಿ ಬ್ರಹ್ಮತತ್ತ್ವದಲ್ಲಿ ಲಯವನ್ನು ಹೊಂದುತ್ತಾನೆ. ಈ ಸಂಧ್ಯಾವಂದನೆಯನ್ನು ವಿಶೇಷವಾಗಿ ಬ್ರಾಹ್ಮಣರಿಗೂ, ದ್ವಿಜರಿಗೂ ಎಂದರೆ ಕ್ಷತ್ರಿಯ ವೈಶ್ಯರಿಗೂ ಹೇಳಿದೆ. ಆದರೂ ರೈತರು ನೇಗಿಲಿನಿಂದ ಉಳುವುದಕ್ಕೆ ಪ್ರಾರಂಭಿಸುವಾಗಲೂ, ಬುತ್ತಿಯಲ್ಲಿನ ಆಹಾರವನ್ನು ಸೇವಿಸಲು ಉಪಕ್ರಮಿಸುವಾಗಲೂ, ಸೂರ್ಯನ ಕಡೆಗೆ ಕೈಮುಗಿಯುವುದೂ ಸಂಧ್ಯಾವಂದನದ ಸರಳವಾದ ಮೂಲರೂಪವೆಂಬುದನ್ನೂ ಗುರುತಿಸಬಹುದು.

> ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।
> ಧಿಯೋ ಯೋ ನಃ ಪ್ರಚೋದಯಾತ್॥ ಋ. ೩. ೪. ೧೦, ಮಂ. ೩. ೫. ೯;

ಪ್ರಕಾಶಮಾನನಾದ ಸೂರ್ಯನ ಶ್ರೇಷ್ಠವಾದ ಆ ಪ್ರಸಿದ್ಧವಾಗಿರುವ ತೇಜಸ್ಸನ್ನು ಧ್ಯಾನಮಾಡುತ್ತೇವೆ. ಯಾವ ಆ ಸೂರ್ಯನು ನಮ್ಮ ಬುದ್ಧಿಯನ್ನು ಧರ್ಮಾದಿವಿಷಯಗಳಲ್ಲಿ ಪ್ರೇರಿಸಲಿ.

> ಯೋ ದೇವಸ್ಸವಿತಾಽಸ್ಮಾಕಂ ಧಿಯೋ ಧರ್ಮಾದಿಗೋಚರಾಃ ।
> ಪ್ರೇರಯೇತ್ತಸ್ಯ ತದ್ಭರ್ಗಃ ತದ್ವರೇಣ್ಯಮುಪಾಸ್ಮಹೇ ॥
>
> ತತ್ ಜಿಜ್ಞಾಸೂ ಪಾಸಕಾನಾಂ ವಸ್ತುಜ್ಞಾನೋಪಕಾರಕಂ ।
> ಸವಿತುಸ್ಸರ್ವಲೋಕಸ್ಯ ಸೃಷ್ಟಿ ಸ್ಥಿತ್ಯಂತಕಾರಿಣಃ ॥
>
> ವರೇಣ್ಯಂ ಸತ್ಪ್ರತೀಕಂ ಸ್ಯಾತ್ ಮೋಕ್ಷಸಂಪಾದಕಂ ಕ್ರಮಾತ್ ।
> ಭರ್ಗಃ ತಮೋಽಜ್ಞಾನದಾಹಾತ್ ಜೀವಬ್ರಹ್ಮೈಕ್ಯಭಾಸಕಂ ॥
>
> ದೇವಸ್ಯ ಸ್ವಪ್ರಕಾಶಸ್ಯ ಸರ್ವವ್ಯಾಪಿ ಚಿದಾತ್ಮನಃ ।
> ಧೀಮಹಿ ಅಸೌ ಪರಬ್ರಹ್ಮ ಅಹಂ ಬ್ರಹ್ಮೇತ್ಯಭೇದತಃ ॥
>
> ಧಿಯೋ ಮಾನಸವೃತ್ತೀರ್ನಃ ಧರ್ಮಬ್ರಹ್ಮಾಂತಗೋಚರಾಃ ।
> ಯ ಇತ್ಯಲಿಂಗಂ ಬ್ರಹ್ಮ ಸ್ಯಾತ್ ಸಚ್ಚಿದಾನಂದ ಲಕ್ಷಣಂ ॥
>
> ನೋಽಸ್ಮಾಕಂ ಬಹುಧ್ಯಾತೄನಸ್ತಜಗದ್ಭೇದದೃಶಾಂ ಸದಾ ।
> ಪ್ರಚೋದಯಾತ್ ಪ್ರೇರಯೇದ್ಯತ್ ಪ್ರತೀಕೈರುತ್ತರೋತ್ತರೈಃ ॥

ಶೈತ್ಯಜಾಡ್ಯಾಪನೋದೇನ ಪ್ರಕಾಶೌಷ್ಣ್ಯಪ್ರದಾನತಃ ।
ಸ್ಪಂದಶಕ್ತಿಃ ಸೂರ್ಯತೇಜಃ ಪ್ರತೀಕಂ ಪ್ರಥಮಂ ಪರಂ ॥

ತೇಜೋಽಂತರ್ಯಾಮಿ ದೇವೋಽಯಂ ದ್ವಿತೀಯೋ ಧ್ಯೇಯಚೇತನಂ ।
ವಿಭೂತಿತ್ವಾತ್ ಪರೇಶಸ್ಯ ಪ್ರತೀಕತ್ವಂ ತತೋಽರ್ಹತಿ ॥

ಹೈರಣ್ಯಗರ್ಭಂ ಚೈತನ್ಯಂ ತಸ್ಮಿನ್ ಮಯಿ ಸಮಂ ಯತಃ ।
ಸರ್ವವ್ಯಾಪಿ ಚ ಸೂತ್ರಾತ್ಮಾ ತೃತೀಯೋ ಧ್ಯೇಯದೇವತಾ ॥

ಮಾಯೋಪಹಿತ ಬ್ರಹ್ಮತ್ವಾತ್ ತಸ್ಯ ಮಾಯಾ ತುರೀಯಕೇ ।
ಧ್ಯೇಯಾ ಸ್ಯಾತ್ ಸರ್ವಶಕ್ತೀನಾಂ ಮೂಲಭೂತಾ ಸನಾತನೀ ॥

ನಿರುಪಾಧಿ ಪರಂ ಬ್ರಹ್ಮ ಉಪಾಸ್ಯಂ ಸ್ಯಾತ್ ತತೋಽಂತಿಮೇ!
ಜೀವಬ್ರಹ್ಮಾಭೇದ ಸಾಕ್ಷಾತ್ಕಾರೋ ಮೋಕ್ಷಃ ಪರಂ ಸುಖಂ ॥

ಸಂಧ್ಯಾಭಾಷ್ಯ ಸಮುಚ್ಚಯದಲ್ಲಿ ವಿದ್ಯಾರಣ್ಯ ಭಾಷ್ಯದ ಕೊನೆಯಲ್ಲಿ ಇದರ ಮೂಲವನ್ನು ನೋಡಿ.

ಇತರ ಜನಾಂಗಗಳು ಎಂದರೆ, ಕ್ರಿಶ್ಚಿಯನ್ನರೂ, ಮುಸಲ್ಮಾನರೂ ಮುಂತಾದವರು ಉಪಯೋಗಿಸುವ ದೈನಂದಿನ ಪ್ರಾರ್ಥನಾವಾಕ್ಯಗಳೊಡನೆ ಇದನ್ನು ಹೋಲಿಸಿದರೆ, ಇದರ ಉದಾತ್ತಭಾವನೆಯು ಎಷ್ಟು ಮೇಲಿನ ಅಂತಸ್ತಿನದೆಂಬುದು ಗೊತ್ತಾಗುತ್ತದೆ. ಧಾರ್ಮಿಕ ಸಂಸ್ಕೃತಿಯ ಸತ್ಫಲವಿದು ಎಂಬುದು ಸ್ಪಷ್ಟವಾಗಿದೆ. ಅಲ್ಲದೆ ಈಶೋಪನಿಷತ್ತಿನಲ್ಲಿ 'ತತ್ತ್ವಂಪೂಷನ್ನಪಾವೃಣು ಸತ್ಯ ಧರ್ಮಾಯ ದೃಷ್ಟಯೇ' ಎಂದರೆ, ಓ ಸೂರ್ಯನೇ, ನಾನು ಸತ್ಯಧರ್ಮಗಳ ದರ್ಶನವನ್ನು ಪಡೆಯಲು ಅನುಕೂಲವಾಗುವಂತೆ ಮುಸುಕಿರುವ ಅಜ್ಞಾನವೆಂಬ ಅಡ್ಡಿಯನ್ನು ನಿವಾರಿಸು ಎಂದು ಹೇಳಿದೆ.

ಗಾಯತ್ರೀಜಪ ಸೂರ್ಯೋಪಸ್ಥಾನ.

ಈ ಅಂಶವನ್ನು ತೈತ್ತಿರೀಯೋಪನಿಷತ್ತಿನ ಆನಂದವಲ್ಲಿಯಲ್ಲಿಯೂ ಭೃಗುವಲ್ಲಿಯಲ್ಲೂ ಹೀಗೆ ಹೇಳಿದೆ—೨.೮; ೩.೧೦.೪; "ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ ಸ ಯ ಏವಂ ವಿತ್।" ಎಂದರೆ, ಈ ಉಪಾಸಕನಾದ ಪುರುಷನಲ್ಲಿ ಅಂತರ್ಯಾಮಿಯಾಗಿ ಯಾವ ಚೈತನ್ಯವು ಆತ್ಮನೆನಿಸಿಕೊಂಡಿರು

ತ್ತದೋ, ಹಾಗೆಯೇ ಸರ್ವಾಂತರ್ಯಾಮಿಯಾಗಿರುವ ಆ ಚೈತನ್ಯವೇ ಸೂರ್ಯ ತೇಜಸ್ಸಿನಲ್ಲೂ ಅಭಿಮಾನಿಯಾಗಿರುವ ದೇವತೆಯಲ್ಲೂ ಅಂತರ್ಯಾಮಿಯಾಗಿರುತ್ತದೆ. ಹೀಗೆ ಈ ಎರಡು ಚೈತನ್ಯಗಳೂ, ಎಂದರೆ ಉಪಾಸಕನಾದ ಪುರುಷನಲ್ಲಿಯೂ ಮತ್ತು ಉಪಾಸ್ಯವಾದ ಸೂರ್ಯ ದೇವತೆಯಲ್ಲಿಯೂ ಇರುವ ಚೈತನ್ಯಗಳೂ ಒಂದೇ ಎಂದು ಯಾವ ಉಪಾಸಕನು ತಿಳಿಯುತ್ತಾನೋ ಆ ಉಪಾಸಕನು ಬ್ರಹ್ಮಾತ್ಮೈಕ್ಯವನ್ನು ಅಪರೋಕ್ಷಾನುಭವದಿಂದ ಮನಗಂಡು ಮೋಕ್ಷವನ್ನು ಪಡೆಯುತ್ತಾನೆ.

ಉತ್ತಮವಾಗಿರುವ ಸಂಸ್ಕೃತಿಯಿಂದ ಜನರ ದಿನಗಟ್ಟಲೆಯ ಜೀವನಕ್ರಮವು ಮೇಲ್ಪಡುತ್ತಿರುತ್ತದೆ. ಸಂಸ್ಕೃತವಾದ ಬಾಳಿನ ರೀತಿಯಿಂದ ಭಾಷೆಯೂ ಸಾಹಿತ್ಯವೂ ಉತ್ತಮಗೊಳ್ಳುತ್ತಿರುತ್ತವೆ. ಸಂಸ್ಕೃತಭಾಷೆಯೂ ಧಾರ್ಮಿಕ ಸಂಸ್ಕೃತಿಯೂ ಒಂದಕ್ಕಾಗಿಯೇ ಇನ್ನೊಂದು ಉಂಟಾಗಿದೆಯೋ ಎನ್ನುವಷ್ಟರಮಟ್ಟಿಗೆ ಒಂದರೊಡನೆ ಇನ್ನೊಂದು ಹೊಂದಿಕೊಂಡಿರುತ್ತಾ ಪರಸ್ಪರ ಮೇಲ್ಮೆಗೆ ಕಾರಣವಾಗಿರುತ್ತವೆ. ಇವೆಲ್ಲಕ್ಕೂ ಮೂಲಾಧಾರವಾದುದು ಧರ್ಮದ ತಿಳಿವಳಿಕೆ ಮತ್ತು ಧಾರ್ಮಿಕ ನಡೆವಳಿಕೆಯಾಗಿದೆ. ಒಳ್ಳೆಯವಾದ ಆಲೋಚನೆ ಅಥವಾ ಭಾವಗಳು, ಮೃದುವೂ ಹಿತವೂ ಆಗಿರುವ ಮಾತುಗಳು, ಪ್ರಿಯವೂ ಶ್ರೇಯಸ್ಕರವೂ ಆಗಿರುವ ನಡೆವಳಿಕೆಗಳು, ಹೀಗೆ ಒಳ್ಳೆಯ ಭಾವ ನುಡಿ ನಡೆಗಳ ಸಮ್ಮೇಳನಕ್ಕೆ, ಈ ತ್ರಿವೇಣೀ ಸಂಗಮಕ್ಕೆ ಧಾರ್ಮಿಕ ಸಂಸ್ಕೃತಿ ಎಂದು ಹೆಸರು. ಇದನ್ನು ಮೇಲೆ ತಿಳಿಸಲಾಗಿದೆ.

**ಗುರುಕುಲ ವೇದಾಭ್ಯಾಸ.**

ವೈದಿಕಾರ್ಯರ ವಿದ್ಯಾಭ್ಯಾಸ ಕ್ರಮವು ಗುರುಕುಲ ಪದ್ಧತಿಯನ್ನು ಅವಲಂಬಿಸಿತ್ತು. "ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ||೧೨|| ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ ಶಮಾನ್ವಿತಾಯ । ಯೇನಾಕ್ಷರಂ ಪುರುಷಂ

ವೇದ ಸತ್ಯಂ ಪ್ರೋವಾಚ ತಾಂ ತತ್ವತೋ ಬ್ರಹ್ಮವಿದ್ಯಾಂ ||" ಮುಂ. ಉ. ೧೨-೧೩.

ಆ ತಿಳಿವಳಿಕೆಯನ್ನು ಪಡೆಯಲು ಆ ಶಿಷ್ಯನು ಸಮಿತ್ತುಗಳ ಕಟ್ಟನ್ನು ಕೈಯಲ್ಲಿ ತೆಗೆದುಕೊಂಡು, ಶ್ರೋತ್ರಿಯನಾದ ಎಂದರೆ ಅಧ್ಯಯನಮಾಡಿ ವೇದದ ಅರ್ಥವನ್ನು ತಿಳಿದಿರುವ, ಬ್ರಹ್ಮನಿಷ್ಠನಾದ ಗುರುವನ್ನು ಪಡೆದು ವಿದ್ಯೆಯನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸ್ಬೇಕು. ಹೀಗೆ ಸಮೀಪಕ್ಕೆ ಬಂದಿರುವ ಶಾಂತವಾದ ಚಿತ್ತವುಳ. ಶಮಗುಣದಿಂದ ಕೂಡಿರುವ ಆ ಶಿಷ್ಯನಿಗೆ ಆ ಗುರುವು ವಿದ್ಯೆಯನ್ನು ಉಪದೇಶಿಸಬೇಕು.

"ದ್ವಾದಶವರ್ಷಾಣಿ ವೇದಬ್ರಹ್ಮಚರ್ಯಂ ಗ್ರಹಣಾಂತಂ ವಾ" ಆಪಸ್ತಂಬ ಧರ್ಮಸೂತ್ರದಲ್ಲಿ ಹನ್ನೆರಡು ವರ್ಷಗಳವರೆಗೆ ಅಭ್ಯಾಸ ಮಾಡಿ ವೇದಗಳನ್ನು ಕಲಿಯಬೇಕು ಅಥವಾ ಅವು ಚನ್ನಾಗಿ ಬರುವ ವರೆಗೂ ಅಭ್ಯಾಸಮಾಡಿ ಕಲಿಯಬೇಕು. ಎಂದು ವಿಧಿಸಿದೆ.

ದ್ವಾದಶವರ್ಷಸೇವಾಪುರಸ್ಸರಂ ಸರ್ವವಿದ್ಯಾಭ್ಯಾಸಂ ಕೃತ್ವಾ...
......ಸಾಧನಚತುಷ್ಟಯಸಂಪನ್ನಃ ಸನ್ಯಸ್ತುಮರ್ಹತಿ, ನಾ. ಪ. ೧.೧

—ನಾರದಪರಿವ್ರಾಜಕೋಪನಿಷತ್.

ಬ್ರಹ್ಮ = ವೇದಾನ್, ಚರತಿ = ಚರಗತಿಭಕ್ಷಣಯೋಃ. ಅಭ್ಯಸ್ಯತಿ ಇತಿ ಬ್ರಹ್ಮಚಾರೀ.

ಬ್ರಹ್ಮಚಾರಿಯು ಎಂದರೆ ವೇದಗಳನ್ನು ಕಲಿಯುವವನಿಗೆ ಅನೇಕ ನಿಯಮಗಳನ್ನು ವಿಧಿಸಿದೆ. ಗುರು ಶುಶ್ರೂಷೆ, ವಿಷಯಭೋಗ ತ್ಯಾಗ, ಇಂದ್ರಿಯನಿಗ್ರಹ, ಮಿತವಾದ ಭೋಜನ ನಿದ್ರೆ ವಿಹಾರಗಳು, ಇವೇ ಮುಂತಾದುವನ್ನು ತುಂಬ ಕಟ್ಟುನಿಟ್ಟಾಗಿ ವಿಧಿಸಿದೆ. ಇದರಿಂದ ವಿದ್ಯಾರ್ಥಿಗಳಲ್ಲಿ ಶಿಸ್ತು ನೆಲೆಗೊಳ್ಳುವಂತಾಗುತ್ತದೆ. ಈಗಿನ ಹಾಗೆ ಒಳ್ಳೆಯ ಊಟದ ಜತೆಗೆ ತಿಂಡಿ ಹೋಟಲು, ಸಿನೀಮಾ ನಾಟಕಗಳು, ಕ್ರೀಡಾರಂಗ, ಹುಡುಗಿಯರೊಡನೆ ವಿದ್ಯಾಭ್ಯಾಸ ಮುಂತಾದ

ಆಕರ್ಷಣೆಗಳು ಆಗ ಇರಲಿಲ್ಲ. ಇವುಗಳಿಂದ ಶಿಸ್ತು ಅಭ್ಯಾಸವಾಗು ವುದರ ಬದಲು ವಿಷಯಲಂಪಟತೆಯು ಮುಂದಾಗುತ್ತದೆ. ಧಾರ್ಮಿಕ ಸಂಸ್ಕೃತಿಯ ಈ ಸತ್ಪರಿಣಾಮವನ್ನು ಈಗ ಜನರೂ ಮುಖಂಡರೂ ತಿಳಿದಿದ್ದರೂ ವಿದ್ಯಾಭ್ಯಾಸಕ್ರಮದಲ್ಲಿ ಧರ್ಮಕ್ಕೆ ತಕ್ಕ ಸ್ಥಾನವನ್ನು ಕೊಡದೆ ಇರುವುದು ಹಿರಿಯರ ಮತ್ತು ಕಿರಿಯರ ದುರದೃಷ್ಟದ ಫಲ ವಾಗಿದೆ. ಮುಂದಾದರೂ ಸರಿಯಾದ ಏರ್ಪಾಡನ್ನು ಮಾಡಿಯಾ ರೆಂದು ನಂಬಬೇಕಾಗಿದೆ. ಪರದಾಸ್ಯವು ತಪ್ಪಿ ಸ್ವಾತಂತ್ರ್ಯವು ದೊರೆ ತಿರುವ ಈಗಲಾದರೂ ನಮ್ಮ ಧಾರ್ಮಿಕ ಸಂಸ್ಕೃತಿಯ ಪುನರುಜ್ಜೀ ವನವನ್ನು ಪ್ರತ್ಯಾಶೆಯಿಂದ ನಿರೀಕ್ಷಿಸುವುದು ಹೆಚ್ಚೆನಿಸಲಾರದು.

ಧಾರ್ಮಿಕ ಸಂಸ್ಕೃತಿಯ ಉತ್ತಮ ಫಲವಾದ ಬ್ರಹ್ಮವಿದ್ಯೆ ಯನ್ನು ಸಂಪಾದಿಸಿ ಕೃತಾರ್ಥರಾದವರ ಒಂದೆರಡು ಉದಾಹರಣೆ ಗಳನ್ನು ಈಗ ಕೊಡುವುದು ಅಪ್ರಕೃತವಾಗಲಾರದು.

**ನಚಿಕೇತನ ಕಥೆ**

ಯಶಸ್ಸನ್ನು ಗಳಿಸಬೇಕೆಂಬ ಅಪೇಕ್ಷೆಯು ಸಾಮಾನ್ಯವಾಗಿ ಎಲ್ಲ ಜನರಲ್ಲೂ ಇರುತ್ತದೆ. ಅದರಲ್ಲೂ ಧಾರ್ಮಿಕ ಕೀರ್ತಿಯನ್ನು ಸಂಪಾದಿಸಬೇ ಕೆಂದು ತಿಳಿವಳಿಕೆಯುಳ್ಳವರಿಗೂ ಆಶೆಯು ಹೆಚ್ಚಾಗಿಯೇ ಇರುತ್ತದೆ. ಅದರಂತೆ ವಾಜಶ್ರವಸನೆಂಬಾತನು ವಿಶ್ವಜಿತ್ ಎಂಬ ಯಾಗವನ್ನು ಆಚರಿಸಬೇಕೆಂದು ಪ್ರಾರಂಭಿಸಿದನು. ಅದರಲ್ಲಿ ಯಜಮಾನನು ತನ್ನ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಬೇಕೆಂಬುದು ಮುಖ್ಯ ನಿಯಮವಾಗಿದೆ. ಅದಕ್ಕನುಸಾರವಾಗಿ ಆ ವಾಜಶ್ರವಸನು ತನ್ನಲ್ಲಿದ್ದ ಬರಡು ಹಸುಗಳನ್ನು ದಕ್ಷಿಣೆಯಾಗಿ ಕೊಡಲು ಹವಣಿಸುತ್ತಿ ದ್ದನು. ಆದರೆ ಅವನ ಮಗನಾದ ನಚಿಕೇತನೆಂಬ ಹುಡುಗನು, ತನ್ನಲ್ಲಿ ಬೆಳೆದಿದ್ದ ಧಾರ್ಮಿಕ ಸಂಸ್ಕೃತಿಯ ಫಲವಾಗಿ, ತಂದೆಯು ಮಾಡುವ ದಾನವನ್ನು ಕುರಿತು ಹೀಗೆ ಯೋಚಿಸಿದನು. "ಅಯ್ಯೋ, ಇಂತಹ ಗುಣಹೀನವಾದ ದಾನದಿಂದ ನಮ್ಮ ತಂದೆಗೆ ಸದ್ಗತಿ ಬರುವುದು ತಪ್ಪಿ ದುರ್ಗತಿಯೇ ಬರುವುದಲ್ಲವೇ ?" ಎಂದು ಪಶ್ಚಾತ್ತಾಪಪಟ್ಟನು.

" ನೇಮಂ ಲೌಕಿಕಮರ್ಥಂ ಪುರಸ್ಕೃತ್ಯ ಧರ್ಮಾಂಶ್ಚರೇತ್,
ನಿಷ್ಫಲಾ ಹ್ಯಭ್ಯುದಯೇ ಭವಂತಿ."

—ಆಪಸ್ತಂಬ ಸೂತ್ರ ೧. ೭. ೧-೩-೪.

ಆತ್ಮಲಾಭಾನ್ನ ಪರಂ ವಿದ್ಯತೇ.

—ಆಪ. ಸೂ. ೧-೮-೨.

ಅಯಂ ಹಿ ಪರಮೋ ಧರ್ಮಃ ಯದ್ಯೋಗೇನಾತ್ಮದರ್ಶನಂ ॥

—ಯಾಜ್ಞವಲ್ಕ್ಯಃ

ಹೀಗಿರುವಲ್ಲಿ ತಂದೆಯ ಹಿತವನ್ನು ಕಾಪಾಡುವುದು ಹೇಗೆ? ಎಂದು ಆಲೋಚಿಸಿದನು. ಕಡೆಗೆ ತನ್ನನ್ನೇ ಅವನಿಂದ ದಕ್ಷಿಣೆಯಾಗಿ ಕೊಡಿಸಿದರೆ ಯಾಗವು ಗುಣಯುಕ್ತವಾಗಿ ಸುಫಲದಾಯಕವಾಗುತ್ತದೆಂದು ನಿರ್ಧರಿಸಿದನು. ಅದರಂತೆ ಕಡೆಗೆ ತಂದೆಯನ್ನು ಕುರಿತು ಆ ಮಗನು "ಅಪ್ಪ, ನನ್ನನ್ನು ಯಾರಿಗೆ ದಕ್ಷಿಣೆಯಾಗಿ ಕೊಡುತ್ತೀಯೆ ?" ಎಂದು ಕೇಳಿದನು. ನಿಜವಾದ ಧರ್ಮದಮೇಲೆ ದೃಷ್ಟಿ ಇಲ್ಲದೆ ಯಶಸ್ಸಿನಮೇಲೆ ಮಾತ್ರ ಮನಸ್ಸಿಟ್ಟಿದ್ದ ತಂದೆಯು ಮಗನ ತ್ಯಾಗವನ್ನು ಸಹಿಸಲಿಲ್ಲ. ಅದರಿಂದ ಅವನ ಪ್ರಶ್ನೆಗೆ ಉತ್ತರವನ್ನೇ ಕೊಡಲಿಲ್ಲ. ಮಗನು ಸುಮ್ಮನಿರದೆ ಅನೇಕಾವೃತ್ತಿ ತನ್ನ ಪ್ರಶ್ನೆಯನ್ನು ಬಿಡದೆ ಕೇಳುತ್ತಿದ್ದನು. ತಂದೆಗೆ ಇವನ ಧಾರ್ಮಿಕ ಪ್ರವೃತ್ತಿಯು ಹಟಮಾರಿತನವೆಂದು ತೋರಿತು. ಕೂಡಲೆ ಕೋಪವು ಹೆಚ್ಚಾಗಿ ಬಂದು ಮಗನನ್ನು ಕುರಿತು " ನಿನ್ನನ್ನು ಯಮನಿಗೆ ಕೊಟ್ಟಿದ್ದೇನೆ ಹೋಗು !" ಎಂದನು. ತಂದೆಯು ಯಾಗಶಾಲೆಯಲ್ಲಿ ದೀಕ್ಷಿತನಾಗಿದ್ದಾಗ ಆಡಿದ ಮಾತು ಸುಳ್ಳಾಗಬಾರದೆಂದು ಮಗನು ಯೋಚಿಸಿದನು. ಅಷ್ಟರಲ್ಲಿ ತಂದೆಗೆ ಕೋಪವು ಇಳಿಯಲು ಅವನು "ಅಯ್ಯೋ ನಾನು ಕೋಪಕ್ಕೆ ಪರವಶನಾಗಿ ಏನನ್ನೋ ಹೇಳಿಬಿಟ್ಟೆನಲ್ಲ!" ಎಂದು ಪೇಚಾಡುತ್ತಿದ್ದನು. ಆಗ ಮಗನು ತಂದೆಯನ್ನು ಕುರಿತು "ಅಪ್ಪ, ನಿನ್ನ ಮಾತಿನಂತೆಯೇ ನಡೆದುಕೊಳ್ಳುವುದು ಒಳ್ಳೆಯದು. ನನ್ನನ್ನು ಯಮನ ಬಳಿಗೆ ಕಳುಹಲು ಹಿಂದೆ ಮುಂದೆ ನೋಡಬೇಡ. ಇದರಿಂದ ನಿನಗೂ

ಒಳ್ಳೆಯದಾಗುವುದು ಖಂಡಿತವು. ಎಲ್ಲರೂ ಎಂದಾದರೊಂದು ದಿನ ಯಮನಬಳಿಗೆ ಹೋಗಲೇಬೇಕು. ಹಿಂದಿನವರೆಲ್ಲರೂ ಹೋಗಲಿಲ್ಲವೇ ? ಮುಂದಿನವರೂ ಹೋಗಲೇಬೇಕಲ್ಲವೇ ? ಈ ಲೋಕದಲ್ಲಿ ಜೀವನವು ಸಸ್ಯದಂತೆ ಸ್ವಲ್ಪಕಾಲ ಮಾತ್ರ ಇರತಕ್ಕದ್ದಲ್ಲವೇ ? ಆಡಿದ ಮಾತನ್ನು ಮಗನ ಮೇಲಣ ಮೋಹದಿಂದ ಸುಳ್ಳುಮಾಡದಿರು.'' ಎಂದು ಮುಂತಾಗಿ ವಿನಯದಿಂದ ಹೇಳಿ ಅವನನ್ನೂ ಒಪ್ಪಿಸಿದನು. ತಂದೆಗೆ ಸ್ವಲ್ಪಧೈರ್ಯವೂ ಸಂತೋಷವೂ ಆಯಿತು. ತಂದೆಯ ಅನುಜ್ಞೆಯನ್ನು ಪಡೆದು ಆ ಕುಮಾರ ನಚಿಕೇತನು ಯಮಲೋಕಕ್ಕೆ ಹೋದನು. ಯಮನು ಆ ವೇಳೆಗೆ ಮನೆಯಲ್ಲಿರಲಿಲ್ಲ. ಬೇರೆ ಮತ್ತೆಲ್ಲಿಗೋ ಕಾರ್ಯಾಂತರದಮೇಲೆ ಹೋಗಿದ್ದನು. ಅವನು ಹಿಂತಿರುಗಿ ಬರಲು ಮೂರು ದಿನಗಳಾದುವು. ಅದುವರೆಗೂ ನಚಿಕೇತನು ಉಪವಾಸ ವಿದ್ದು ಕಾಯ್ದುಕೊಂಡಿದ್ದನು.

ಅತಿಥಿ ಸತ್ಕಾರದ ಮಹಿಮೆ.

ಯಮನು ಮನೆಗೆ ಬಂದಮೇಲೆ ಅವನ ಕುಟುಂಬದವರು, ಅತಿಥಿಯು ಸತ್ಕಾರವಿಲ್ಲದೆ ಉಪವಾಸವಿರುವುದರಿಂದ ಸಂಭವಿಸಿದ್ದ ಧರ್ಮಲೋಪವನ್ನು ತಿಳಿಸಿದರು. ಯಮನು ಮೊದಲು ಅತಿಥಿಯಾದ ನಚಿಕೇತನಿಗೆ ಸತ್ಕಾರಗಳನ್ನು ನೆರವೇರಿಸಿ, ಧರ್ಮಲೋಪದ ಪರಿಹಾರಕ್ಕಾಗಿ ಅವನಿಗೆ ದಿನಕ್ಕೆ ಒಂದರಂತೆ ಮೂರು ವರಗಳನ್ನು ತಾನು ಕೊಡುವುದಾಗಿಯೂ, ಅವನು ಅವನ್ನು ಸ್ವೀಕರಿಸಿ ಧರ್ಮಲೋಪದೋಷವನ್ನು ಪರಿಹರಿಸಬೇಕೆಂದೂ ಕೇಳಿಕೊಂಡು ಒಪ್ಪಿಸಿಕೊಂಡನು.

ನಚಿಕೇತನ ಮೊದಲನೆಯ ಮತ್ತು ಎರಡನೆಯ ವರಗಳು.

ಅದರಂತೆ ನಚಿಕೇತನು ಮೊದಲನೆಯ ವರವನ್ನು ಹೀಗೆ ಕೇಳಿದನು. "ನಾನು ಹಿಂತಿರುಗಿ ನಮ್ಮ ತಂದೆಯ ಬಳಿಗೆ ಹೋದರೆ ಆತನು ನನ್ನನ್ನು ಗುರುತಿಸಿ ನನ್ನ ವಿಷಯದಲ್ಲಿ ಪ್ರೇತನೆಂದು ಬಹಿಷ್ಕರಿಸದೆ ಪ್ರಸನ್ನನಾಗಿ ನನ್ನನ್ನು ಅಂಗೀ

ಕರಿಸುವಂತಾಗಬೇಕು.'' ಯಮನು ಸಂತೋಷದಿಂದ "ಹಾಗೆಯೇ ಆಗಲಿ'' ಎಂದನು. ಆಮೇಲೆ ಎರಡನೆಯ ವರವಾಗಿ ವಿರಾಟ್ಪುರುಷನನ್ನು ಪಡೆಯುವುದಕ್ಕೆ ಸಾಧನವಾದ ಅಗ್ನಿ ವಿದ್ಯೆಯನ್ನು ತಿಳಿಸೆಂದನು. ಅದನ್ನು ಉಪದೇಶಿಸಿದಂತೆಯೇ ಆ ಕುಮಾರನು ಗ್ರಹಿಸಿ ಹೇಳಲು ಯಮನು ಅವನ ಮೇಧಾಶಕ್ತಿಗೂ ಸೂಕ್ಷ್ಮ ಬುದ್ಧಿಗೂ ಮೆಚ್ಚಿದವನಾಗಿ ಹೀಗೆಂದನು. "ಕರ್ಮೋಪಾಸನೆಗಳ ಫಲವಾದ ವಿರಾಜನ ಪ್ರಾಪ್ತಿಯನ್ನು ಉಂಟುಮಾಡುವ ಈ ಅಗ್ನಿ ವಿದ್ಯೆಯಲ್ಲಿ ಉಪಯೋಗಿಸುವ ಅಗ್ನಿಗೆ ನಿನ್ನ ಹೆಸರೇ ಪ್ರಸಿದ್ಧವಾಗಿರಲಿ.'' ಎಂದು ಹೆಚ್ಚಿಗೆಯ ವರವನ್ನೂ ತಾನಾಗಿಯೇ ಕೊಟ್ಟು ಮೂರನೆಯ ವರವನ್ನೂ ಕೇಳೆಂದನು.

ಮೂರನೆಯ ವರ.

ಅದಕ್ಕೆ ನಚಿಕೇತನು "ಯೇಯಂ ಪ್ರೇತೇವಿಚಿಕಿತ್ಸಾಮನುಷ್ಯೇ'' "ಮನುಷ್ಯನು ಸತ್ತಮೇಲೆ, ಈ ದೇಹವನ್ನು ಬಿಟ್ಟು ಹೋದಮೇಲೆ, ಈ ದೇಹ ಇಂದ್ರಿಯ ಮುಂತಾದವುಗಳಿಗಿಂತ ಬೇರೆಯಾಗಿರುವ, ದೇಹಾಂತರವನ್ನು ಪಡೆಯುವ ಆತ್ಮನು ಇದಾನೆಂದು ಕೆಲವರೂ ಇಲ್ಲವೆಂದು ಮತ್ತೆ ಕೆಲವರೂ ಹೇಳುತ್ತಾರೆ. ಈ ಸಂಶಯವನ್ನು ನಿವಾರಿಸುವ ಸಲುವಾಗಿ ಆತ್ಮ ವಿದ್ಯೆಯನ್ನು ನನಗೆ ತಿಳಿಸು. ಇದೇ ನನ್ನ ಮೂರನೆಯ ವರವು'' ಎಂದು ಕೇಳಿದನು. ಯಮನು ಆಗ ನಚಿಕೇತನು ಆತ್ಮ ವಿದ್ಯೋಪದೇಶಕ್ಕೆ ಅರ್ಹನೋ ಅಲ್ಲವೋ ಎಂಬುದನ್ನು ತಿಳಿಯಲು ಹೀಗೆ ಹೇಳಿದನು. "ಅಪ್ಪ ನಚಿಕೇತನೇ, ಈ ವಿದ್ಯೆಯನ್ನು ತಿಳಿಯುವುದು ದೇವತೆಗಳಿಗೂ ಕಷ್ಟಕರವಾಗಿದೆ. ಇದನ್ನು ಬಿಟ್ಟು ಬೇರೊಂದು ವರವನ್ನು ಕೇಳು.'' ಎಂದನು. ಅದಕ್ಕೆ ನಚಿಕೇತನು, "ಇದಕ್ಕೆ ಸಮಾನವಾದ ಮತ್ತೊಂದು ವರವಿಲ್ಲವು. ಇದನ್ನು ತಿಳಿಯುವುದು ಕಷ್ಟವಾದರೂ, ನಿನ್ನಂತಹ ಗುರುವು ದೊರೆತಿರುವಾಗ ಇದನ್ನೇ ತಿಳಿಯಬಯಸುವೆನು.'' ಎಂದು ಉತ್ತರಿಸಿದನು. ಅದಕ್ಕೆ ಯಮನು "ಅದೇಕೆ ಹಾಗೆನ್ನುವೆ? ತುಂಬ ಆಯುಸ್ಸುಳ್ಳ ಮಕ್ಕಳು

ಮೊಮ್ಮಕ್ಕಳನ್ನು ಕೇಳು. ಧನಧಾನ್ಯ ಸಮೃದ್ಧಿಯನ್ನೂ ಐಶ್ವರ್ಯವನ್ನೂ, ಸುಂದರಿಯರಾದ ಹೆಂಡತಿಯರನ್ನೂ ಕೇಳು. ಸಾಮ್ರಾಜ್ಯವನ್ನೂ ದೀರ್ಘಾಯುಸ್ಸನ್ನೂ ಕೇಳು. ಎಲ್ಲ ಅನುಕೂಲ್ಯಗಳನ್ನೂ ನಿನಗೆ ಒದಗಿಸಿಕೊಡುತ್ತೇನೆ. ಅವನ್ನು ಬಿಟ್ಟು ಸಾವಿಗೆ ಸಂಬಂಧಿಸಿರುವ ಈ ಪ್ರಶ್ನೆಯೊಂದನ್ನು ಕೇಳಬೇಡ" ಎಂದು ಉತ್ತರಿಸಿದನು.

ಐಹಿಕ ಫಲಗಳಲ್ಲಿರುವ ದೋಷಗಳು.

ಅದನ್ನು ಕೇಳಿ ನಚಿಕೇತನು "ನೀನು ಸೂಚಿಸುವ ಈ ಎಲ್ಲ ಫಲಗಳೂ ಅನಿತ್ಯವಾದುವು. ಇವು ಅವಿಶುದ್ಧಿ, ಕ್ಷಯ, ಅತಿಶಯಗಳೆಂಬ ದೋಷತ್ರಯದಿಂದ ಕೂಡಿಯೇ ಇರುತ್ತವೆ. ಇದರ ಸ್ವಭಾವವನ್ನು ತಿಳಿದ ವಿವೇಕಿಗಳು ಯಾರೂ ಇವನ್ನು ಆಶಿಸುವುದಿಲ್ಲ. ಇವುಗಳನ್ನು ಅನುಭವಿಸುವವರ ಇಂದ್ರಿಯ ಶಕ್ತಿಯನ್ನೇ ಕುಗ್ಗಿಸಿ ಹಾಳುಮಾಡುವ ಇವನ್ನು ನಾನು ಒಲ್ಲೆನು. ನಾನು ಬೇಡಿರುವ ಆತ್ಮಜ್ಞಾನವನ್ನೇ ನನಗೆ ತಿಳಿಸು" ಎಂದು ಪ್ರಾರ್ಥಿಸಿದನು. ಈ ಬಾಲಬ್ರಹ್ಮಚಾರಿಯ ಸತ್ಯಧೃತಿಯನ್ನು ಮನಗಂಡ ಯಮಧರ್ಮದೇವನು ಅವನ ವಿವೇಕ ವೈರಾಗ್ಯಗಳನ್ನು ಮೆಚ್ಚಿಕೊಂಡನು. ಅವನು ಆತ್ಮ ವಿದ್ಯೋಪದೇಶಕ್ಕೆ ತಕ್ಕ ಅರ್ಹತೆಯುಳ್ಳವನೆಂದೂ ತಿಳಿದು ಹೀಗೆ ಉಪದೇಶಿಸಿದನು.

"ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್
ನಾಸ್ತ್ಯಕೃತಃ ಕೃತೇನ." ಮುಂ. ಉ. ೧. ೨. ೧೨.

"ತದ್ವಿಜ್ಞಾನಾರ್ಥಂ ಸ ಗುರು ಮೇವಾಭಿಗಚ್ಛೇತ್..."

"ತಸ್ಮೈ ಸ ವಿದ್ವಾನುಪ ಸನ್ನಾಯ ಸಮ್ಯಕ್ ಪ್ರಶಾಂತ ಚಿತ್ತಾಯ
ಶಮಾನ್ವಿತಾಯ ।
ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ
ಬ್ರಹ್ಮ ವಿದ್ಯಾಂ ॥" ಮುಂ. ಉ. ೧. ೨. ೧೩.

"ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ ತೌ ಸಂಪರೀಕ್ಷ್ಯ
ವಿವಿನಕ್ತಿ ಧೀರಃ ।
ಶ್ರೇಯೋಹಿಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋ ಮಂದೋ
ಯೋಗಕ್ಷೇಮಾದ್ವೃಣೀತೇ ॥" ಕಠ ಉಪ. ೧.೨೨

"ಓ ನಚಿಕೇತನೇ, ಲೋಕದಲ್ಲಿ ಹಿತವಾದುದು, ಪ್ರಿಯವಾದುದು, ಎಂದು ಎರಡುಬಗೆಯ ಸಾಧನಗಳು ದೊರೆಯುತ್ತವೆ. ಅವುಗಳಲ್ಲಿ ಹಿತವಾದುದನ್ನು ಆರಿಸಿಕೊಂಡವನಿಗೆ ಉತ್ತಮವೂ ನಿತ್ಯವೂ ಆದ ಫಲವಾಗುತ್ತದೆ. ಅದನ್ನು ಬಿಟ್ಟು ಪ್ರಿಯವಾದುದನ್ನು ಆರಿಸಿಕೊಂಡವನಿಗೆ ಅನಿತ್ಯವಾದ ತಾತ್ಕಾಲಿಕವಾದ ಫಲವು ದೊರೆಯುತ್ತದೆ. ನೀನು ಇವುಗಳ ಭೋಗಗಳನ್ನು ಬಿಟ್ಟು ಆತ್ಮ ತತ್ವವನ್ನೇ ಕೇಳಿದುದು ನಿನ್ನ ವಿವೇಕವನ್ನು ತಿಳಿಸುತ್ತದೆ. ಈ ಆತ್ಮತತ್ವವು ಅನೇಕರಿಗೆ ಕಿವಿಗೇ ಬೀಳುವುದಿಲ್ಲ. ಕೆಲವರಿಗೆ ಬಿದ್ದರೂ ತಿಳಿಯುವುದಿಲ್ಲ. ತಿಳಿಸಿಕೊಡಬಲ್ಲ ಗುರುವು ದೊರೆಯುವುದೂ ಸುಲಭವಲ್ಲ. ಆತ್ಮಸಾಕ್ಷಾತ್ಕಾರವನ್ನು ಪಡೆದಿರುವ ಗುರುವು ತಿಳಿಸಿದರೆ ಶಿಷ್ಯನಿಗೆ ಗೊತ್ತಾಗದೆ ಇರುವುದಿಲ್ಲ. ಅದಿಲ್ಲದೆ ಬರಿಯ ಪಾಂಡಿತ್ಯದಿಂದ ತಿಳಿಯ ಹೇಳಿದರೆ ಗೊತ್ತಾಗುವುದೂ ಇಲ್ಲ. ಸಂಪ್ರದಾಯವನ್ನು ಬಲ್ಲ ಆಚಾರ್ಯನು ಉಪದೇಶಿಸಿದರೆ ಆತ್ಮ ತತ್ವವು ತಿಳಿದೀತೇ ಹೊರತು ಬರಿಯ ತರ್ಕಕ್ಕೆ ಅದು ಗೋಚರವಾಗುವುದಿಲ್ಲ. ಈ ಸೂಕ್ಷ್ಮ ತತ್ವವನ್ನು ತಿಳಿಯುವುದಕ್ಕಾಗಿ ನೀನು ಬ್ರಹ್ಮಪದವಿಯನ್ನೂ ಕಡೆಗಣಿಸಿದೆಯಲ್ಲ! ಇದು ನಿನ್ನ ಉತ್ತಮ ಯೋಗ್ಯತೆಯನ್ನು ತಿಳಿಸುತ್ತದೆ. ಪ್ರಾಣಿಗಳ ಹೃದಯದಲ್ಲಿಯೇ ಇದ್ದರೂ ಈ ತತ್ವವು ಅಧ್ಯಾತ್ಮಯೋಗವನ್ನು ಬಲ್ಲವರಿಗೆ ಮಾತ್ರ ಗೊತ್ತಾಗುವುದು. ಶ್ರವಣಮನನಗಳಿಂದ ಇದನು ವಿವೇಚನೆ ಮಾಡಿ ತಿಳಿದುಕೊಂಡವನಿಗೆ ಪರಮಾನಂದವೇ ಪ್ರಾಪ್ತವಾಗುತ್ತದೆ. ಇದನ್ನು ನೀನು ಬಯಸಿದ್ದು ನಿನಗೆ ಬ್ರಹ್ಮಪ್ರಾಪ್ತಿಯಾಗುವುದೆಂಬುವುದಕ್ಕೆ ಸೂಚನೆಯಾಗಿದೆ."

ಹೀಗೆಂದು ತನ್ನಲ್ಲಿ ಪ್ರಸನ್ನನಾಗಿ ನುಡಿದ ಯಮನನ್ನು ಕುರಿತು

**ಮೂರನೆಯ ವರದ ಹೆಚ್ಚುಗಾರಿಕೆ.**

ನಚಿಕೇತನು—"ಅನ್ಯತ್ರಧರ್ಮಾದನ್ಯತ್ರಾಧರ್ಮಾತ್" ಹಾಗಾದರೆ ನಾನು ಕೇಳಿರುವಂತೆ ಧರ್ಮಾಧರ್ಮಗಳನ್ನೂ ಕ್ರಿಯಾಕಾರಕ

ಫಲಗಳನ್ನೂ ಕಾಲತ್ರಯವನ್ನೂ ಮೀರಿರುವ ಈ ಆತ್ಮತತ್ವವನ್ನು ವಿವರಿಸಿ ತಿಳಿಸು" ಎಂದು ತನ್ನ ಕೋರಿಕೆಯನ್ನೇ ಮುಂದುವರಿಯಿಸಿದನು. ಅದಕ್ಕೆ ಯಮನು ಹೀಗೆ ತಿಳಿಯಹೇಳಿದನು. "ಓ ನಚಿಕೇತನೇ, ವೇದ ಪ್ರತಿಪಾದ್ಯವಾದ ಬ್ರಹ್ಮಚರ್ಯಾದಿ ಸಾಧನಗಳಿಂದ ಪಡೆಯಬೇಕಾಗಿರುವ ಈ ಆತ್ಮನಿಗೆ ಓಂಕಾರವು ವಾಚಕವೂ ಪ್ರತೀಕವೂ ಆಗಿರುತ್ತದೆ. ಓಂಕಾರವು ಪರಾಪರಬ್ರಹ್ಮಗಳೆರಡಕ್ಕೂ ಪ್ರತೀಕವಾಗಿರುವುದರಿಂದ ಇದನ್ನು ಬ್ರಹ್ಮವೆಂದು ಉಪಾಸನೆ ಮಾಡಿದರೆ ಆ ಎರಡನ್ನೂ ಪಡೆಯಬಹುದು. ಈ ಬ್ರಹ್ಮವೇ ಆತ್ಮವು; ಈ ಆತ್ಮವೇ ಬ್ರಹ್ಮವು. ಇದಕ್ಕೆ ಹುಟ್ಟು ಸಾವು ಮುಂತಾದ ವಿಕಾರಗಳಿಲ್ಲ. ಇದು ಧರ್ಮಾಧರ್ಮಾದಿಗಳನ್ನು ಮೀರಿರುವದು. ಎಲ್ಲ ನಾಮರೂಪಗಳೂ ಇದಕ್ಕೆ ಉಪಾಧಿಗಳು, ಎಂದರೆ ಪ್ರಕಟವಾಗಿತೋರುವುದಕ್ಕೆ ಸಾಧನಗಳು, ಇದು ಎಲ್ಲ ಚಿಕ್ಕದಕ್ಕಿಂತ ಚಿಕ್ಕದೂ, ದೊಡ್ಡದಕ್ಕಿಂತ ದೊಡ್ಡದೂ ಆಗಿದೆ. ಇತರ ವಿಷಯಗಳಲ್ಲಿ ನಿಷ್ಕಾಮನಾಗಿ ಆತ್ಮನನ್ನು ಬಯಸುವುದೇ ಆತ್ಮಜ್ಞಾನಕ್ಕೆ ಮುಖ್ಯಸಾಧನವಾಗಿರುತ್ತದೆ. ಈ ಶರೀರದಲ್ಲಿ ಇಬ್ಬರು ಆತ್ಮರಿರುವರು. ಇವರಲ್ಲಿ ಒಬ್ಬನು ನಾವು ಕಲ್ಪಿಸಿಕೊಂಡಿರುವ ಸಂಸಾರಿಯು ಇನ್ನೊಬ್ಬನು ಪರಮಾರ್ಥವಾಗಿರುವ ಅಸಂಸಾರಿಯು. ಅವನೇ ಸಾಕ್ಷಿಯು. ಶರೀರವು ಒಂದು ರಥವು. ಆತ್ಮನೇ ರಥಿಯು. ಬುದ್ಧಿಯೇ ಸಾರಥಿಯು. ಮನಸ್ಸು ಕಡಿವಾಣವು. ಇಂದ್ರಿಯಗಳೇ ಕುದುರೆಗಳು. ಶಬ್ದಾದಿ ವಿಷಯಗಳೇ ಇಂದ್ರಿಯಗಳ ಮಾರ್ಗವನ್ನು ಅನುಸರಿಸಿ ಹೋದರೆ ದೊರೆಯುವ ಫಲಗಳು. ಈ ಬುದ್ಧಿ, ಮನಸ್ಸು, ಇಂದ್ರಿಯಗಳಿಂದ ಕೂಡಿರುವ ಆತ್ಮನೇ ಭೋಕ್ತೃವೆನಿಸುತ್ತಾನೆ. ಈ ಶರೀರದಲ್ಲಿ ಜೀವಾತ್ಮ ಪರಮಾತ್ಮರು ಛಾಯಾತಪಗಳಂತೆ ಎಂದರೆ ಬಿಸಿಲು ನೆಳಲುಗಳಂತೆ ವಾಸಿಸುತ್ತಿದ್ದಾರೆ. ಪರಮಾತ್ಮ ಸಾಕ್ಷಾತ್ಕಾರವನ್ನು ಅಪೇಕ್ಷಿಸುವವರು ಇಂದ್ರಿಯಗಳನ್ನು ನಿಗ್ರಹಿಸಿ ಮನಸ್ಸನ್ನು ಸಂಯಮಿಸಿ ಬುದ್ಧಿಯನ್ನು ಶುದ್ಧಿಗೊಳಿಸಿ ಪರಮಾತ್ಮಧ್ಯಾನದಲ್ಲಿ ನಿಮಗ್ನರಾಗಬೇಕು. ಈ ಬಾಹ್ಯೇಂದ್ರಿಯಗಳ ಆಚೆಗೆ ಬುದ್ಧಿಯೂ,

ಬುದ್ಧಿಯು ಆಚೆಗೆ ಮಹದಾತ್ಮನೂ ಅಥವಾ ಹಿರಣ್ಯಗರ್ಭನೂ, ಅವನ ಆಚೆಗೆ ಎಂದರೆ ಸೂಕ್ಷ್ಮಕಾರಣವಾಗಿ ಅವ್ಯಕ್ತವೂ ಪ್ರಕೃತಿಯೂ ಅಥವಾ ಮಾಯಾಶಕ್ತಿಯೂ, ಅದರಾಚೆಗೆ ಎಂದರೆ ಸರ್ವಾಧಿಷ್ಠಾನ ಕಾರಣವಾಗಿ ಪರಪುರುಷನೂ, ಹೀಗೆ ಈ ವಿಶ್ವದರಚನೆ ಇರುವುದು. ಸರ್ವಾಂತರ್ಯಾಮಿಯಾಗಿರುವ ಈ ಗೂಢಾತ್ಮನನ್ನು ಧ್ಯಾನಯೋಗ ದಿಂದ ತೀಕ್ಷ್ಣವಾದ ಬುದ್ಧಿಯಿಂದ ಕಂಡುಕೊಳ್ಳಬೇಕು. ಬಾಹ್ಯ ವಸ್ತುಗಳನ್ನು ಕಾರಣಶಕ್ತಿಗಳಲ್ಲಿಯೂ, ಎಲ್ಲ ಶಕ್ತಿಗಳನ್ನು ಮೂಲಶಕ್ತಿ ಯಲ್ಲಿಯೂ, ಆ ಶಕ್ತಿಯನ್ನು ಪರತತ್ವದಲ್ಲೂ ಲಯಿಸಿ ಧ್ಯಾನಮಾಡ ಬೇಕು. ಚಿತ್ತದಲ್ಲಿ ಶಾಂತಾತ್ಮನ ಅಥವಾ ಪರಮಾತ್ಮನ ಅರಿವು ಒಂದೇ ಅಚಲವಾಗಿರುವಂತೆ ಲಯಚಿಂತನಕ್ರಮದಿಂದ ಧ್ಯಾನವಿಧಿ ಯನ್ನು ಅಭ್ಯಸಿಸಬೇಕು.

ಕಠೋಪನಿಷತ್ತಿನಲ್ಲಿ ಆತ್ಮಸ್ವರೂಪ ಇಂದ್ರಿಯಗಳು ಬಹಿರ್ಮುಖಗಳೇಕೆ?

"ಪರಮಾತ್ಮನು ಈ ವಿಶ್ವವನ್ನು ಸೃಜಿಸುವಾಗ ಜನರ ಇಂದ್ರಿಯ ಶಕ್ತಿಗಳನ್ನು ಹೊರಗಡೆಗೆ ವಿಸ್ತರಿ ಸಿದನು. ಆದುದರಿಂದಲೇ ನಮ್ಮ ಇಂದ್ರಿಯ ಗಳು ಬಹಿರ್ಮುಖವಾಗಿಯೇ ಪ್ರವರ್ತಿಸುವ ಸ್ವಭಾವವುಳ್ಳವಾಗಿವೆ. ಅವುಗಳನ್ನು ಪ್ರತ್ಯಾ ಹಾರ ಕ್ರಮದಿಂದ ಅಂತರ್ಮುಖವಾಗಿ ಮಾಡುವುದರಿಂದಲೇ ಕ್ರಮವಾಗಿ ಆತ್ಮದರ್ಶನವಾಗುವುದು. ಸರ್ವ ವಿಶ್ವಕ್ಕೆ ಆಧಾರಭೂತವಾಗಿರುವ ಈ ಆತ್ಮ ತತ್ವವು ಅಂಗುಷ್ಠ ಪರಿ ಮಾಣವನ್ನು ತಾಳಿದಂತೆ ತೋರುತ್ತಾ ಪ್ರತಿಯೊಬ್ಬರ ಅಂತಃಕರಣ ದಲ್ಲಿಯೂ ವಾಸಿಸುತ್ತಿರುವುದು. ಎಂದರೆ ಅಲ್ಲಿ ಅಪರೋಕ್ಷಾನುಭವಕ್ಕೆ ಬರುತ್ತದೆ. ನಮ್ಮ ಶರೀರದಲ್ಲಿರುವ ಆತ್ಮವೇ ಬ್ರಹ್ಮರೂಪವಾಗಿರು ವುದರಿಂದ ಎಂದರೆ ಸಚ್ಚಿದಾನಂದರೂಪದಲ್ಲಿ ಜೀವರೂ ಬ್ರಹ್ಮವೂ ಒಂದೇ ರೂಪವಾಗಿರುವುದರಿಂದ, ನಮ್ಮ ಆತ್ಮನ ಈ ವಾಸ್ತವ ಸ್ವರೂಪವನ್ನು ಅರಿತರೆ ಅಜ್ಞಾನವು ನಾಶವಾಗಿ, ಅದರಿಂದ ಕಲ್ಪಿತ ವಾಗಿರುವ ಈ ಸಂಸಾರದ ಕಟ್ಟು ಎಂದರೆ ಕರ್ತೃತ್ವ ಭೋಕ್ತೃತ್ವಜನನ

ಮರಣ ಸುಖದುಃಖಾನುಭವಗಳ ನಿರ್ಬಂಧವು ಕಳಚಿಕೊಳ್ಳುವುದು. ಈ ಆತ್ಮ ತತ್ವವು ನಮ್ಮಂತಹ ಅಜ್ಞರಿಗೂ ತೋರೀತೆ ? ಎಂದು ಸಂದೇಹಪಡಲು ಕಾರಣವಿಲ್ಲವು. ಏಕೆಂದರೆ ಅದು ಸ್ವಪ್ರಕಾಶವಾದ ನಮ್ಮ ಸ್ವರೂಪವೇ ಆಗಿರುತ್ತದೆ. ಒಟ್ಟು ಸಾರಾಂಶವೇನೆಂದರೆ, ಜನರ ಹೃದಯದಲ್ಲಿ ಗೋಚರಿಸುತ್ತಿರುವ ಆತ್ಮನ ಸ್ವರೂಪವು ಈಗ ಸಂಸಾರಿಯಾಗಿರುವ ಸಣ್ಣ ಆತ್ಮನೆಂದು ತೋರುತ್ತಿದ್ದರೂ ಚನ್ನಾಗಿ ನೋಡಿ ಅನಾತ್ಮಗಳಿಂದ ಅದನ್ನು ಬಿಡಿಸಿ ತಿಳಿದುಕೊಂಡರೆ ಅದೇ ಆತ್ಮನೇ ನಿಜವಾಗಿ ನಿತ್ಯಶುದ್ಧವಾಗಿ, ಯಾವ ಸಂಸಾರ ಧರ್ಮವೂ ಇಲ್ಲದಿರುವ ಪರಬ್ರಹ್ಮವೆಂದು ಗೊತ್ತಾಗುತ್ತದೆ, ಅಪರೋಕ್ಷಾನುಭವವು ಇಲ್ಲಿಯೇ ಈಗಲೇ ಎಲ್ಲರಿಗೂ ಆಗುತ್ತದೆ. ದೇಶಾಂತರ ಕಾಲಾಂತರದವರೆಗೆ ನಿರೀಕ್ಷಿಸಬೇಕಾಗಿರುವುದಿಲ್ಲವೆಂಬುದು ವಿಶೇಷ ಗುಣವಾಗಿದೆ.

ಧರ್ಮಸ್ಯ ಶಬ್ದಮೂಲತ್ವಾತ್ ಅಶಬ್ದಮನಪೇಕ್ಷಂ ಸ್ಯಾತ್
ಜೈಮಿನಿಸೂತ್ರ ೧.೩.೧.

ವೇದಪ್ರತಿಪಾದ್ಯ ಪ್ರಯೋಜನವಾನ್ ಯಾಗಾದಿರೇವ ಧರ್ಮಃ
ವೇದಬೋಧಿತೇಷ್ಟ ಸಾಧನತಾ ಕೋ ಧರ್ಮಃ
ದೃಷ್ಟೋಹಿ ತಸ್ಯಾರ್ಥಃ ಕರ್ಮಾವಬೋಧ ನಂ
ಅಗ್ನಿಹೋತ್ರಂ ಗವಾಲಂಭಂ ಸನ್ಯಾಸಂ ಪಲ ಪೈತೃಕಂ ।
ದೇವರಾಚ್ಚ ಸುತೋತ್ಪತ್ತಿಂ ಕಲೌ ಪಂಚ ವಿವರ್ಜಯೇತ್ ॥

ವೈದಿಕೈಃ ಸ್ಮರ್ಯಮಾಣತ್ವಾತ್ ತತ್ಪರಿಗ್ರಹದಾರ್ಢ್ಯತಃ ।
ಸಂಭಾವ್ಯವೇದಮೂಲತ್ವಾತ್ ಸ್ಮೃತೀನಾಂ ವೇದ ಮೂಲತಾ ॥
ಶಾಸ್ತ್ರದೀಪಿಕಾ ೧.೩.೧

ಶಾಖಾನಾಂ ವಿಪ್ರಕೀರ್ಣತ್ವಾತ್ ಪುರುಷಾಣಾಂ ಪ್ರಮಾದತಃ ।
ನಾನಾ ಪ್ರಕರಣ ಸ್ಥತ್ವಾತ್ ಸ್ಮೃತೇರ್ಮೂಲಂ ನ ದೃಶ್ಯತೇ ॥
ತಂತ್ರವಾರ್ತಿಕ ೧.೩.೧.

ವಿಷಯ ವ್ಯವಸ್ಥಾಪನಾಚ್ಚ ಯಥಾವಿಷಯಂ ಪ್ರಾಮಾಣ್ಯಂ ಅನ್ಯೋ ಮಂತ್ರ ಬ್ರಾಹ್ಮಣಸ್ಯ ವಿಷಯ ಅನ್ಯಶ್ಚ ಇತಿಹಾಸ ಪುರಾಣ ಧರ್ಮಶಾಸ್ತ್ರಾಣಾಮಿತಿ ಯಜ್ಞೋ ಮಂತ್ರ ಬ್ರಾಹ್ಮಣಸ್ಯ, ಲೋಕವೃತ್ತಮಿತಿ ಹಾಸ ಪುರಾಣಸ್ಯ, ಲೋಕ ವ್ಯವಹಾರ ವ್ಯವಸ್ಥಾಪನಂ ಧರ್ಮಶಾಸ್ತ್ರಸ್ಯ (ಸ್ಮೃತೇಃ) ವಿಷಯಃ ಇತಿನ್ಯಾಯಭಾಷ್ಯ ೧.೪.೬.೨.

ಅಥಾತಃ ಸ್ವಾಧ್ಯಾಯ ಪ್ರಶಂಸಾ ಪ್ರಿಯೇ ಸ್ವಾಧ್ಯಾಯಪ್ರವಚನೇ ಭವತಃ ಯುಕ್ತಮನಾ ಭವತಿ ಅಪರಾಧೀನಃ ಅಹರಹರರ್ಥಾನ್ ಸಾಧಯತೇ ಸುಖಂ ಸ್ವಪಿತಿ ಪರಮಚಿಕಿತ್ಸಕಃ
ಆತ್ಮನೋ ಭವತಿ ಇಂದ್ರಿಯ ಸಂಯಮಶ್ಚ ಏಕಾತ್ಮತಾಚ ಪ್ರಜ್ಞಾವೃದ್ಧಿಃ ಯಶಃ ಲೋಕ
ಪಕ್ತಿಃ ತಸ್ಮಾತ್ ಸ್ವಾಧ್ಯಾಯಃ ಅಧ್ಯೇತವ್ಯಃ, ಶತಪಥ ಬ್ರಾಹ್ಮಣ ೧೧.೫.೭.೯.

ಧರ್ಮದ ಪ್ರಮಾಣಗಳು.

ವೈದಿಕ ಕಾಲದಿಂದಲೂ ಆರ್ಯ ಸಂಸ್ಕೃತಿಯು ಧರ್ಮದ ತಿಳಿವಳಿಕೆಯಿಂದಲೇ ಉಂಟಾಗಿ ಧರ್ಮಾಚರಣೆಯಿಂದಲೇ ಬೆಳೆದು ಬೇರೂರಿ ನಿಂತಿದೆ ಎಂಬುದನ್ನು ಇದುವರೆಗಿನ ವಿಚಾರದಿಂದ ಸ್ಪಷ್ಟವಾಗಿ ತಿಳಿಯಬಹುದು. ಈ ಧರ್ಮತತ್ವದ ತಿಳಿವಳಿಕೆಯು ನಮಗೂ ಉಂಟಾಗುವುದಕ್ಕೆ ಪ್ರಮಾಣಗಳನ್ನು ವೈದಿಕ ಸಾಹಿತ್ಯದಲ್ಲಿ ಚೆನ್ನಾಗಿ ಕಾಣಬಹುದಾಗಿದೆ. ಮಾನವನು ಧರ್ಮವನ್ನು ಆಚರಿಸುವುದಕ್ಕೆ ಒಲಿಯುತ್ತಾನೆಂಬುದೂ ಗೊತ್ತಾಗಿದೆ. ಆದುದರಿಂದ ಧರ್ಮಾಧರ್ಮಗಳ ತಿಳಿವಳಿಕೆಯನ್ನು ಪಡೆದು, ಅಧರ್ಮದ ಆಚರಣೆಯನ್ನು ಪೂರ್ಣವಾಗಿಬಿಟ್ಟು, ಧರ್ಮವನ್ನೇ ಆಚರಿಸುತ್ತಾ ಮಾನವನು ತನ್ನ ಎಲ್ಲ ಕಾರ್ಯಕ್ಷೇತ್ರಗಳಲ್ಲೂ ಯಶಸ್ವಿಯಾಗಿ ಮುಂದುವರಿಯಬೇಕಾಗಿದೆ. ಈ ಧರ್ಮತತ್ವದ ಸ್ವರೂಪವನ್ನೂ ವಿಶೇಷಗಳನ್ನೂ ತಿಳಿಸುವ ಗ್ರಂಥಗಳು, ಪ್ರಮಾಣಗಳು ಯಾವುವು ಎಂಬುದನ್ನೂ ನಾವು ತಿಳಿಯಬೇಕಾಗಿದೆ.

ವೇದೋಽಖಿಲೋಧರ್ಮಮೂಲಂ ಸ್ಮೃತಿ ಶೀಲೇ ಚ ತದ್ವಿದಾಂ |
ಆಚಾರಶ್ಚೈವ ಸಾಧೂನಾಂ ಆತ್ಮನಸ್ತುಷ್ಟಿ ರೇವಚ ||

ನಮಗೆ ಧರ್ಮದ ತಿಳಿವಳಿಕೆಯನ್ನು ಉಂಟುಮಾಡಬಲ್ಲ ಪ್ರಮಾಣ ಗ್ರಂಥಗಳಲ್ಲಿ ವೇದಗಳು ಮುಖ್ಯವಾದುವು. ವೇದಾಧ್ಯಯನವನ್ನು ಮಾಡಿ ಅದರ ಅರ್ಥವನ್ನು ತಿಳಿದಿರುವವರು ರಚಿಸಿರುವ ಸ್ಮೃತಿ ಗ್ರಂಥಗಳೂ ಮತ್ತು ಅವರ ನಡೆವಳಿಕೆಗಳೂ ನಮಗೆ ಕರ್ಮವನ್ನು ತಿಳಿಸು

ತ್ತವೆ. ಹಾಗೆಯೇ ಸಾಧುಸಂತರು ಸತ್ಪುರುಷರು ಮಾಡುವ ಆಚರಣೆಯನ್ನು ನೋಡಿಯೂ ನಾವು ಧರ್ಮ ವಿಶೇಷಗಳನ್ನು ತಿಳಿಯಬಹುದು. ಕಡೆಯದಾಗಿ ನಮ್ಮ ಮನಸ್ಸಿಗೆ ಒಪ್ಪಿಬರುವ ನಡೆವಳಿಯೂ ಧರ್ಮವೇ ಆಗಿರುತ್ತದೆ. ಇದರಂತೆ ನಮಗೆ ಧರ್ಮದ ತಿಳಿವಳಿಕೆಯನ್ನು ಪಡೆಯಲು ನಾಲ್ಕು ಪ್ರಮಾಣಗಳಿವೆ. ೧. ವೇದ, ೨. ಸ್ಮೃತಿ, ೩. ಶಿಷ್ಟಾಚಾರ, ೪. ಆತ್ಮತುಷ್ಟಿ. ಈ ನಾಲ್ಕರಲ್ಲಿ ಮೊದಮೊದಲನೆಯ ಪ್ರಮಾಣಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಒಪ್ಪಬೇಕು. ಹೇಗೆಂದರೆ—ಆತ್ಮತುಷ್ಟಿ ಎಂದರೆ, ತನಗೆ ಸರಿ ಎಂದು ತೋರುವ ಧರ್ಮಕ್ಕಿಂತ ಸದಾಚಾರವು ಮೇಲಾದ ಧರ್ಮ ಪ್ರಮಾಣವು. ಸದಾಚಾರಕ್ಕಿಂತ ಋಷಿಗಳು ರಚಿಸಿರುವ ಸ್ಮೃತಿಗಳೂ, ಅವಕ್ಕಿಂತ ಸಾಕ್ಷಾತ್ತಾಗಿ ದೊರೆಯುವ ಶ್ರುತಿವಾಕ್ಯಗಳೂ ಮೇಲು ಮೇಲಾದ ಪ್ರಮಾಣಗಳಾಗಿರುತ್ತವೆ. ಏಕೆಂದರೆ ಮಾನವನ ಸೃಷ್ಟಿಯ ಆದಿಯಲ್ಲಿಯೇ ಬ್ರಹ್ಮನ ಸೃಷ್ಟಿಯಾದ ಕೂಡಲೆ ವೇದಗಳೂ ದೇವರಿಂದ ಪ್ರಕಟಿತವಾದುವು.

" ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈವೇದಾಂಶ್ಚ
ಪ್ರಹಿಣೋತಿ ತಸ್ಮೈ ।
ತಂ ಹ ದೇವಮಾತ್ಮ ಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ
ಪ್ರಪದ್ಯೇ ॥ "

ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ 6-18ರಲ್ಲಿ ಹೇಳಿದೆ. ಎಂದರೆ, ಯಾವ ದೇವರು ಮೊದಲು ಬ್ರಹ್ಮನನ್ನು ಉಂಟುಮಾಡಿ ಅವನಿಗೆ ವೇದಗಳನ್ನೂ ಕೊಟ್ಟು ಕಳುಹಿಸಿದನೋ, ನಮ್ಮ ಬುದ್ಧಿಯಲ್ಲಿ ಸ್ವಪ್ರಕಾಶನಾಗಿ ಸ್ಫುರಿಸುತ್ತಿರುವ ಆ ದೇವನನ್ನು ಮೋಕ್ಷವೆಂಬ ಪರಮ ಪುರುಷಾರ್ಥವನ್ನು ಪಡೆಯಲು ಇಚ್ಛಿಸುತ್ತಿರುವ ನಾನು ರಕ್ಷಕನನ್ನಾಗಿ ತಿಳಿದು ಮರೆಹೋಗುತ್ತೇನೆ. ಎಂದು ಇದರ ಅರ್ಥವಾಗಿದೆ.

ಧರ್ಮ ಪ್ರಮಾಣಗಳಲ್ಲಿ ತಾರತಮ್ಯ.

ತಂದೆಯ ಅನುಗ್ರಹವನ್ನು ಪಡೆಯಲು ಆಶಿಸುವ ಮಗನು ತಂದೆಯ ಅಪ್ಪಣೆಯನ್ನು ವಿಶ್ವಾಸಪೂರ್ವಕವಾಗಿ ನೇರವೇರಿಸುತ್ತಾನಲ್ಲವೇ ? ಹಾಗೆಯೇ ಆತ್ಮೋನ್ನತಿಯನ್ನು ಪಡೆಯಲು ಅಪೇಕ್ಷಿಸುವ ಮಾನವರೆಲ್ಲರೂ ದೇವರ ಅಪ್ಪಣೆಯಂತಿರುವ ವೇದಗಳಲ್ಲಿ ಹೇಳಿರುವ ಧರ್ಮಗಳನ್ನು ಭಕ್ತಿ ಶ್ರದ್ಧೆಗಳಿಂದ ಆಚರಿಸಬೇಕು. ಸಂಶಯಕ್ಕೆ ಅಥವಾ ಆಲಸ್ಯಕ್ಕೆ ತನ್ನ ಮನಸ್ಸಿನಲ್ಲಿ ಎಡೆಯನ್ನು ಕೊಡದೆ ಶ್ರುತ್ಯುಕ್ತ ಧರ್ಮಗಳನ್ನು ಮನುಷ್ಯರು ತಪ್ಪದೆ ಆಚರಿಸುತ್ತಿರಬೇಕು. ಅನಂತವಾದ ವೇದಗಳಲ್ಲಿ ಯಾವುದಾದರೂ ಒಂದು ಧರ್ಮವು ಎಲ್ಲಿ ಹೇಳಲ್ಪಟ್ಟಿದೆ ಎಂಬುದು ಗೊತ್ತಾಗದಿದ್ದರೆ ಆಗ ಸ್ಮೃತಿಯಲ್ಲಿ ಹೇಳಿರುವ ಆ ಧರ್ಮದ ಸ್ವರೂಪವನ್ನು ತಿಳಿದು ಆಚರಿಸಬೇಕು. ಏಕೆಂದರೆ, ಆ ಸ್ಮೃತಿ ಕರ್ತೃಗಳಾದ ಮಹರ್ಷಿಗಳು ತಮ್ಮ ದಿವ್ಯ ಜ್ಞಾನದಿಂದ ವೇದಗಳನ್ನು ಎಲ್ಲವನ್ನೂ ತಿಳಿದು ಅವುಗಳ ನೆನಪಿನಿಂದ ಸ್ಮೃತಿಗಳನ್ನು ರಚಿಸುತ್ತಾರೆ. ಆದುದರಿಂದ ಶ್ರುತಿಯನ್ನು ಬಿಟ್ಟರೆ ಎರಡನೆಯ ಪ್ರಮಾಣವು ಸ್ಮೃತಿಗಳಾಗಿರುತ್ತವೆ. ಸ್ಮೃತಿಗಳೆಂದರೆ ಧರ್ಮಶಾಸ್ತ್ರ ಗ್ರಂಥಗಳು. "ಶ್ರುತಿಸ್ತು ವೇದೋ ವಿಜ್ಞೇಯಃ ಧರ್ಮಶಾಸ್ತ್ರಂತು ವೈ ಸ್ಮೃತಿಃ" ಎಂದು ಹೇಳಿದೆ ಹಾಗೆಯೇ ಒಂದು ಧರ್ಮದ ನಿರ್ಣಯವನ್ನು ಮೂಲ ಸ್ಮೃತಿಗಳಿಂದಲೂ ಮಾಡಿಕೊಳ್ಳಲು ತೋರದೆ ಹೋದರೆ ನಿಬಂಧ ಗ್ರಂಥಗಳ ಸಹಾಯವನ್ನು ಪಡೆಯಬೇಕು. ಆಗಲೂ ಧರ್ಮ ನಿರ್ಣಯವು ಆಗದೆ ಹೋದರೆ ಶಿಷ್ಟಾಚಾರವನ್ನು ಅನುಸರಿಸುವುದು ಒಳ್ಳೆಯದು. ಏಕೆಂದರೆ, ನಮಗೆ ಎಲ್ಲ ವೇದಗಳ ಮೂಲ ಸ್ಮೃತಿಗಳ ನಿಬಂಧ ಗ್ರಂಥಗಳ ಪರಿಚಯವಿಲ್ಲದಿದ್ದರೂ ಶಿಷ್ಟರಿಗೆ ಆ ಪರಿಚಯವಿರುವುದರಿಂದಲೂ ಅವರು ಅದಕ್ಕನುಸಾರವಾಗಿಯೇ ದಿನಗಟ್ಟಲೆಯ ನಡೆವಳಿಕೆಗಳನ್ನು ಗೊತ್ತುಮಾಡಿಕೊಂಡಿರುವುದರಿಂದಲೂ ಅಂಥ ಶಿಷ್ಟರ ಆಚರಣೆಯನ್ನು ಅನುಸರಿಸಿದರೂ ನಮಗೆ ಶ್ರುತ್ಯುಕ್ತ ಧರ್ಮವನ್ನು ಆಚರಿಸಿದ ಫಲವೇ ದೊರೆಯುವುದರಲ್ಲಿ ಸಂದೇಹವಿಲ್ಲವು. ಒಂದು ಸಮಯದಲ್ಲಿ ಶಿಷ್ಟರ ಆಚರಣೆಗಳಲ್ಲೂ

ಬೇರೆ ಬೇರೆ ಬಗೆಗಳು ಕಂಡುಬಂದಲ್ಲಿ ಅಂತಹ ಸಂದರ್ಭದಲ್ಲಿ ಮಾತ್ರ ಆತ್ಮ ತುಷ್ಟಿಯನ್ನು ಎಂದರೆ ತನ್ನ ಮನಸ್ಸಿಗೆ ಒಪ್ಪಿಬಂದ ನಡೆವಳಿಕೆಯನ್ನು ಧರ್ಮವೆಂದು ತಿಳಿದು ಆಚರಿಸಬೇಕು. ಇಷ್ಟು ಮಾತ್ರವಲ್ಲದೆ ತನಗೆ ಸರಿ ಎಂದು ತೋರಿಬಂದುದೆಲ್ಲವೂ ಧರ್ಮವೆಂದು ಗೊತ್ತು ಮಾಡಿಕೊಳ್ಳುವ ಸ್ವಾತಂತ್ರ್ಯ ಸಾಹಸಗಳಿಗೆ ಅವಕಾಶವನ್ನು ಕೊಡಬಾರದು.

ಆತ್ಮ ತುಷ್ಟಿ ಪ್ರಮಾಣವು.

ಹೀಗೆ ಆತ್ಮತುಷ್ಟಿ ಅಥವಾ ತನಗೆ ಹಿತವೆಂದು ತೋರಿದ ನಡೆವಳಿಕೆಯು ಶಿಷ್ಟಾಚಾರಕ್ಕೆ ವಿರುದ್ಧವಾದುದಾಗಿ ಕಂಡುಬಂದರೆ ಆಗ ಆತ್ಮ ಪ್ರಿಯವನ್ನು ಧರ್ಮ ಪ್ರಮಾಣವೆಂದು ತಿಳಿಯದೆ ಶಿಷ್ಟಾಚಾರವನ್ನೇ ಅನುಸರಿಸಬೇಕು. ಹಾಗೆಯೇ ಶಿಷ್ಟಾಚಾರವು ಒಂದು ಸ್ಮೃತಿಗೆ ವಿರೋಧವಾಗಿರುವುದಾಗಿ ಕಂಡುಬಂದರೆ ಆ ಶಿಷ್ಟಾಚಾರವನ್ನು ಬಿಟ್ಟು ಸ್ಮೃತಿಯಲ್ಲಿ ಹೇಳಿರುವ ಧರ್ಮವನ್ನೇ ಆಚರಿಸಬೇಕು. ಇದರಂತೆಯೇ ಸ್ಮೃತ್ಯುಕ್ತ ಧರ್ಮದಲ್ಲಿ ಯಾವುದಾದರೂ ಸಾಕ್ಷಾತ್ತಾಗಿ ಶ್ರುತಿವಾಕ್ಯಕ್ಕೆ ವಿರೋಧವಾಗಿರುವುದು ಕಂಡುಬಂದಲ್ಲಿ ಆ ಸ್ಮೃತ್ಯುಕ್ತ ಧರ್ಮವನ್ನು ಬಿಟ್ಟು ಶ್ರುತ್ಯುಕ್ತ ಧರ್ಮವನ್ನೇ ಆಚರಿಸಬೇಕು. ಹೀಗೆ ವಿವರಿಸಿರುವುದರಿಂದ ಸ್ಮೃತಿ, ಶಿಷ್ಟಾಚಾರ, ಆತ್ಮತುಷ್ಟಿ ಎಂಬ ಧರ್ಮ ಪ್ರಮಾಣಗಳಿಗೆ ಪ್ರಾಮಾಣ್ಯವನ್ನು ಕುಂದಿಸುವುದರಲ್ಲಿ ತಾತ್ಪರ್ಯವೆಂದೂ ಗ್ರಹಿಸಬಾರದು. ಏಕೆಂದರೆ, ಸ್ಮೃತಿಯು ಶ್ರುತಿಯನ್ನು ಅನುಸರಿಸಿಯೇ ಇರುತ್ತದೆ. ಹಾಗೆಯೇ ಶಿಷ್ಟಾಚಾರವು ಶ್ರುತಿ ಸ್ಮೃತಿಗಳಿಗೆ ಅನುಸಾರವಾಗಿಯೇ ಇರುತ್ತದೆ. ಅದರಂತೆ ಆತ್ಮತುಷ್ಟಿ ಮತ್ತು ಆತ್ಮಪ್ರಿಯವೂ ಪ್ರಮಾಣವೆಂಬುದಕ್ಕೆ ಅಡ್ಡಿ ಇರುವುದಿಲ್ಲ. ಈ ಧೈರ್ಯವಿರುವುದರಿಂದಲೇ ಶ್ರುತಿ, ಸ್ಮೃತಿ, ಶಿಷ್ಟಾಚಾರ, ಆತ್ಮತುಷ್ಟಿಗಳು ಧರ್ಮದ ವಿಷಯದಲ್ಲಿ ಪ್ರಮಾಣಗಳೆಂದು ಸ್ಮೃತಿಯಲ್ಲಿ ಹೇಳಿರುತ್ತದೆ ಎಂಬುದನ್ನು ಯಾವಾಗಲೂ ಮರೆಯದೆ ಇರಬೇಕು.

ಶ್ರುತಿ ಸ್ಮೃತಿಗಳ ಸ್ವರೂಪವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಿ ವಿವರಿಸುವುದೂ ಅಪ್ರಕೃತವಾಗಲಾರದು. ಶ್ರುತಿ ಎಂದರೆ ಕೇಳಿಬಂದ ವಾಕ್ಯವೆಂದು ಅರ್ಥವು. ಪೂರ್ವ ಕಾಲದಲ್ಲಿ ಶಿಷ್ಯನು ಗುರುಮುಖದಿಂದ ವೇದ ಮಂತ್ರಗಳನ್ನು ಕೇಳಿ ಕೇಳಿ ಅಭ್ಯಾಸ ಮಾಡುತ್ತಾ ಕಲಿಯುತ್ತಿದ್ದನು. ಆ ಶಿಷ್ಯನೂ ತನ್ನ ಶಿಷ್ಯರಿಗೆ ಹೇಳುವುದು, ಅವರೂ ಆ ವೇದ ಮಂತ್ರಗಳನ್ನು ಕೇಳಿ ಕೇಳಿ ಅಭ್ಯಾಸ ಮಾಡುತ್ತಾ ಕಲಿಯುವುದು, ಹೀಗೆ ಗುರು ಶಿಷ್ಯ ಪರಂಪರೆಯಿಂದ ಕೇಳಿ ಕಲಿತ ಮಂತ್ರವಾಕ್ಯಗಳಾದುದರಿಂದ ವೇದಗಳಿಗೆ ಶ್ರುತಿಗಳೆಂದು ಹೆಸರು ಬಂದಿದೆ. ಪುಸ್ತಕವನ್ನು ನೋಡಿ ಗುರುವು ಹೇಳಿಕೊಡುತ್ತಿರಲಿಲ್ಲ. ಶಿಷ್ಯನೂ ಪುಸ್ತಕದಲ್ಲಿ ಓದಿಕೊಂಡು ವೇದಮಂತ್ರ ವಾಕ್ಯಗಳನ್ನು ಕಲಿಯುತ್ತಿರಲಿಲ್ಲ. ಆ ಕಾಲದಲ್ಲಿ ಬರವಣಿಗೆಯು ಗೊತ್ತಿರಲಿಲ್ಲ. ಲಿಪಿಯನ್ನು ಆಗಿನ ಜನರು ಕಂಡುಹಿಡಿದಿರಲಿಲ್ಲ. ಶ್ರುತಿ ಶಬ್ದವೂ ಶ್ರು-ಶ್ರವಣೆ ಎಂಬ ಧಾತುವಿಗೆ "ತಿ" ಎಂಬ ಪ್ರತ್ಯಯವನ್ನು ಸೇರಿಸುವುದರಿಂದ ಉಂಟಾಗುತ್ತದೆ. ಗುರುಮುಖದಿಂದ ಶ್ರವಣ ಮಾಡಿ ಕಲಿಯುತ್ತಿದ್ದುದರಿಂದ ಶ್ರುತಿ ಎಂದು ಅನ್ವರ್ಥನಾಮವಾಗಿದೆ. ಹಾಗೆಯೇ ಶ್ರುತಿಗಳಿಗೆ ವೇದವೆಂದೂ ಹೆಸರಿದೆ. ವೇದ ಶಬ್ದವು ವಿದ್‌ಜ್ಞಾನೇ ಎಂಬ ಧಾತುವಿಗೆ ಅ ಎಂಬ ಪ್ರತ್ಯಯವು ಸೇರಿ ಇಕಾರಕ್ಕೆ ಗುಣವಾಗಿ ವೇದ ಎಂಬ ರೂಪವಾಗಿದೆ. ಧಾತುವಿಗೆ ತಿಳಿಯುವಿಕೆ ಎಂದು ಅರ್ಥವಿದೆ. ಆದುದರಿಂದ ವೇದ ಎಂದರೆ ತಿಳಿವಳಿಕೆ ಎಂದು ಅರ್ಥವಾಗುತ್ತದೆ. ಭಾರತಾರ್ಯರ ಜ್ಞಾನದ ಭಂಡಾರವೇ ವೇದವು.

"ಪ್ರತ್ಯಕ್ಷೇಣಾನು ಮಿತ್ಯಾ ವಾ ಯ ಸ್ತೂ ಪಾಯೋ ನ ಬುಧ್ಯತೇ |
ಏನಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ||"

ಪ್ರತ್ಯಕ್ಷ ಪ್ರಮಾಣದಿಂದಲಾಗಲಿ ಅನುಮಾನ ಪ್ರಮಾಣದಿಂದಲಾಗಲಿ ಯಾವ ಉಪಾಯವನ್ನು ತಿಳಿಯಲಾಗುವುದಿಲ್ಲವೋ, ಆ ಉಪಾಯವನ್ನು ತಿಳಿಸುವುದರಿಂದಲೇ ವೇದಕ್ಕ ವೇದತ್ವವು ಪ್ರಸಿದ್ಧವಾಗಿದೆ.

ವೇದಗಳಿಗೆ ವೇದತ್ವವು ಏತರಿಂದ?

ವೇದಭಾಷ್ಯದಲ್ಲಿ ಶ್ರೀ ಸಾಯಣಾಚಾರ್ಯರೂ ಹೀಗೆ ವಿವರಿಸುತ್ತಾರೆ. "ಅಲೌಕಿಕಂ ಪುರುಷಾರ್ಥೋಪಾಯಂ ವೇತ್ತಿ ಮಾನವಃ ಅನೇನೇತಿ ವೇದಶಬ್ದ ನಿರ್ವಚನಂ." ಈ ಲೋಕದಲ್ಲಿ ದೊರೆಯುವ ತಿಳಿವಳಿಕೆಯಿಂದಲೇ ಗೊತ್ತುಮಾಡಿಕೊಳ್ಳಲಾಗದೆ ಇರುವ, ಉತ್ತಮವಾದ ಪುರುಷಾರ್ಥಗಳಿಗೆ ಸಾಧನವಾಗಬಲ್ಲ ಎಂದರೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪುರುಷರು ಅಪೇಕ್ಷಿಸುವ ಫಲಗಳನ್ನು ಪಡೆಯಲು ಏಕಮಾತ್ರ ಸಾಧನವಾಗಿರುವ ಉಪಾಯವನ್ನು ಎಂದರೆ, ಕರ್ಮವನ್ನು ತಿಳಿಸುವ ಶಬ್ದರಾಶಿಗೆ ವೇದಗಳೆಂದು ಅರ್ಥವು. ಈ ಲೋಕದ ಸಂಬಂಧವಾದ ಉಪಾಯಗಳನ್ನು ಜನರು ಪ್ರತ್ಯಕ್ಷದಿಂದಲೋ, ಅನುಮಾನದಿಂದಲೋ ತಮಗೆ ತಾವೇ ತಿಳಿದುಕೊಳ್ಳುತ್ತಾರೆ. ಅವುಗಳ ತಿಳಿವಳಿಕೆಯನ್ನುಂಟುಮಾಡಲು ವೇದಗಳು ಬೇಕಾಗಿಲ್ಲವೆಂದು ತಾತ್ಪರ್ಯವು. ವೇದಗಳು ತಿಳಿಸುವ ವಿಶೇಷ ಬಗೆಯ ಕರ್ಮಗಳಿಗೆ ಧರ್ಮವೆಂದು ಹೆಸರು ಪ್ರಸಿದ್ಧವಾಗಿದೆ.

ವೇದಗಳು ಅಪೌರುಷೇಯಗಳೆಂದು ಭಾರತಾರ್ಯರ ನಂಬಿಕೆಯಾಗಿದೆ. ದೇವರು ಈ ಪ್ರಪಂಚವನ್ನು ಸೃಜಿಸಿದಾಗಲೇ ದೇವರ ಮುಖದಿಂದಲೇ ಸಾಕ್ಷಾತ್ತಾಗಿ ವೇದವಾಣಿಯು ಹೊರಹೊಮ್ಮಿತು. ವೇದಗಳನ್ನು ಮನುಷ್ಯರು

ವೇದಗಳು ಅಪೌರುಷೇಯಗಳೆಂದರೇನು?

ರಚಿಸಲಿಲ್ಲ. ಹಾಗೆ ದೇವರಿಂದಲೇ ಪ್ರಕಟವಾದ ಶಬ್ದರಾಶಿಗೆ ವೇದವೆಂದೂ, ಆ ಶಬ್ದರಾಶಿಯನ್ನು ಮರೀಚಿ, ಭೃಗು, ಅಂಗೀರಸ, ಅತ್ರಿ ವಿಶ್ವಾಮಿತ್ರ, ಸನಕ, ಸನಂದನ ಮುಂತಾದ ಋಷಿಗಳು ಕೇಳಿ ಗ್ರಹಿಸಿ ತಮ್ಮ ಶಿಷ್ಯರಿಗೆ ಹೇಳಿ ಕಲಿಸಿ ಪ್ರಚಾರಕ್ಕೆ ಬರುವಂತೆ ಮಾಡಿ ಮರೆಯದಂತೆ ಕಾಪಾಡಿದರು. ವೇದ ಮಂತ್ರಗಳಲ್ಲಿ ಒಂದೊಂದಕ್ಕೂ ಒಬ್ಬೊಬ್ಬರು ಋಷಿಗಳೆಂದು ಹೇಳಿರುವುದು ಕಂಡುಬರುತ್ತದೆ. ಇದರಿಂದ ಆಯಾ ಋಷಿಗಳೇ ಆಯಾ ಮಂತ್ರಗಳನ್ನು ರಚಿಸಿದರೆಂದು ಅರ್ಥವಲ್ಲವು. ಋಷಿಗಳೆಂದರೆ, ಮಂತ್ರದ್ರಷ್ಟ್ರುಗಳೆಂದು ಅರ್ಥವನ್ನು "ಋಷಯೋ ಮಂತ್ರದ್ರಷ್ಟಾರಃ" ಎಂದು ಹೇಳಿದೆ. ಆಯಾ ಋಷಿಗಳು ಆಯಾ ಮಂತ್ರಗಳನ್ನು ಕಂಡುಹಿಡಿದವರೆಂದು ಅರ್ಥವು. ಇದರಿಂದ ಆ ಋಷಿಗಳ ಮುಂಚಿನ ಕಾಲದಲ್ಲೂ ಆ ಮಂತ್ರಗಳು ಇದ್ದುವು ಎಂದು ಏರ್ಪಡುತ್ತದೆ. ಕೊಲಂಬಸನು ಅಮೇರಿಕಾ ಖಂಡವನ್ನೂ, ನ್ಯೂಟನ್ನನು ಗುರುತ್ವಾಕರ್ಷಣ ಶಕ್ತಿಯನ್ನೂ ಕಂಡುಹಿಡಿದಂತೆಯೇ ವಿಶ್ವಾಮಿತ್ರಾದಿ ಮಹರ್ಷಿಗಳೂ, ಬ್ರಹ್ಮರ್ಷಿಗಳೂ, ವೇದಮಂತ್ರಗಳನ್ನು ಕಂಡುಹಿಡಿದರು. ಅವರು ಕಂಡುಹಿಡಿಯುವುದಕ್ಕೆ ಮುಂಚೆಯೂ ಅವು ಇದ್ದಂತೆ ವೇದ ಮಂತ್ರಗಳೂ ನಿತ್ಯವಾಗಿ ಇದ್ದೇ ಇದ್ದುವು. ಋಷಿಗಳು ಮಂತ್ರಗಳನ್ನು ಮೊದಲು ಕಂಡುಹಿಡಿದಂತೆಯೇ ಅವರು ಆ ಮಂತ್ರಗಳ ಪುರಶ್ಚರಣ ಜಪಗಳಿಂದ ಸಿದ್ಧಿಯನ್ನೂ ಪಡೆದರಾದುದರಿಂದಲೂ ಆ ಮಂತ್ರಗಳಿಗೆ ಆ ಋಷಿಗಳ ಹೆಸರುಗಳನ್ನು ಸೇರಿಸಿ ಹೇಳಲಾಗುತ್ತಿದೆ. ಈ ಲೌಕಿಕವಾದ ಗ್ರಂಥಗಳನ್ನು ಕವಿಗಳು ಅಥವಾ ಗ್ರಂಥಕಾರರು ರಚಿಸಿದಂತೆ ಮಂತ್ರಗಳು ಋಷಿಗಳಿಂದ ರಚಿತವಾದುವಲ್ಲದ್ದರಿಂದ ಅವು ಅಪೌರುಷೇಯವೂ, ಪುರುಷದೋಷಗಳಾದ ಭ್ರಾಂತಿ, ತಪ್ಪುತಿಳಿವಳಿಕೆ ಮುಂತಾದ ದೋಷರಹಿತವೂ ಆಗಿವೆ. ಆದುದರಿಂದ ಉತ್ತಮ ಪ್ರಮಾಣಗಳಾಗಿಯೂ ಇವೆ. ಅವುಗಳಲ್ಲಿ ಹೇಳಿರುವ ಅನೇಕ ವಿಷಯಗಳು ಆಧುನಿಕ ವೈಜ್ಞಾನಿಕರು ಕಂಡುಹಿಡಿಯುತ್ತಿರುವ ತತ್ವ ನಿಯಮಗಳಿಗೆ ಅವಿರುದ್ಧವಾಗಿಯೂ ಇರುವು

ವಲ್ಲದೆ, ವೈಜ್ಞಾನಿಕರ ಶೋಧನೆಗಳಿಂದ ಪುಷ್ಟಿಯನ್ನೇ ಪಡೆಯುತ್ತಿವೆ ಎಂಬ ಅಂಶವು ಭಾರತೀಯರ ಹೃದಯದಲ್ಲಿ ಹೆಮ್ಮೆ ಸಮಾಧಾನ ಭರವಸೆಗಳನ್ನೂ ಉಂಟುಮಾಡುತ್ತಿದೆ.

ಮಹರ್ಷಿಗಳು ಮಂತ್ರಗಳನ್ನು ಮನಗಂಡು ಸಾರಿದ ಬಗೆ.

ತಿಳಿವಳಿಕೆಯು ತುಂಬ ಬೆಳೆದು ಮುಂದುವರಿದಿದೆ ಎನ್ನುವ ಈ ಕಾಲದಲ್ಲೂ ದೊಡ್ಡ ದೊಡ್ಡ ವಿದ್ವಾಂಸರಿಗೂ ಮಹತ್ತ್ವದಿಂದ ಕೂಡಿರುವ ಹೊಸ ವಿಷಯಗಳು ಎಷ್ಟೇ ಪ್ರಯತ್ನ ಮಾಡಿದರೂ ಮನಸ್ಸಿನಲ್ಲಿ ಮೂಡುವ ಸಂಭವಗಳು ತುಂಬ ಕಡಿಮೆಯಾಗಿರುತ್ತವೆ. ಹೀಗಿರುವಲ್ಲಿ ಆ ಪೂರ್ವ ಕಾಲದಲ್ಲಿ ಎಲ್ಲ ಲೌಕಿಕರ ಬುದ್ಧಿಗೂ ಮೀರಿದಂಥ ಮೇಲಾದ ತತ್ತ್ವಗಳನ್ನು ತಿಳಿಸುವ ಮಂತ್ರಗಳು ಆ ಬ್ರಹ್ಮರ್ಷಿಗಳ ಬಾಯಿಂದ ಪ್ರಯತ್ನ ವಿಶೇಷವಿಲ್ಲದೆ ಹೇಗೆ ಹೊರಹೊಮ್ಮಿದವು? ಎಂದು ನಮಗೆ ಸಂದೇಹ ಬರುವುದೂ ಸಹಜವಾಗಿರುತ್ತದೆ. ಆದರೆ ಸಂಸ್ಕೃತಿ ವಿಶೇಷಶಾಲಿಯಾದವರ ಬುದ್ಧಿಯಲ್ಲಿ ಉದಾತ್ತಭಾವಗಳ ಸ್ಫೂರ್ತಿಯಾಗುವುದು ನಮ್ಮ ಅನುಭವದಲ್ಲೂ ಇರುತ್ತದೆ. ಆದರೂ ಛಂದೋಬದ್ಧವಾದ ಭಾಷೆಯಲ್ಲಿ ಅಲಂಕಾರ ಸುಂದರವಾದ ರೀತಿಯಲ್ಲಿ ಪ್ರವಾಹರೂಪವಾಗಿ ಹೊರಡುವುದನ್ನು ಆಶು ಕವಿಗಳಲ್ಲಿ ಕಾಣಬಹುದಾಗಿದೆ. ಅದರಂತೆಯೇ ಶತಾವಧಾನಿಗಳ ಉದಾಹರಣೆಯಲ್ಲೂ ಪ್ರಯತ್ನ ವಿಶೇಷವಿರುವುದನ್ನೂ ನಾವು ಮನಗಾಣಬಹುದು. ಆದರೂ ಪ್ರಯತ್ನವಿಲ್ಲದೆ ಹೃದಯವೂ ಅರಿಯದ ರೀತಿಯಲ್ಲಿ ಛಂದೋಬದ್ಧವಾದ ಕಾವ್ಯವಾಣಿಯು ಹೊರಹೊಮ್ಮಿದ ಉದಾಹರಣೆಯೊಂದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ರಾಮಾಯಣ ರಚನೆಯ ಕಾಲ ಸನ್ನಿವೇಶಗಳು.

ವೇದಗಳು ನಾಲ್ಕು, ಐದು ಸಾವಿರ ವರ್ಷಗಳಷ್ಟು ಪ್ರಾಚೀನ ಕಾಲದಲ್ಲಿ ಉಂಟಾದ ಗ್ರಂಥಗಳೆಂದು ಮೇಲೆ ಸೂಚಿಸಿದೆ. ಶ್ರೀಮದ್ರಾಮಾಯಣವು ಸುಮಾರು ಎರಡು ಸಾವಿರ ವರ್ಷಗಳಷ್ಟು

ಈಚಿನ ಕಾಲದಲ್ಲಿ ರಚಿತವಾಯಿತೆಂದು ವಿಮರ್ಶಕರು ತಿಳಿಯುತ್ತಾರೆ. ರಾಮಾಯಣದ ಕಾಲವು ವೇದಗಳ ಕಾಲಕ್ಕಿಂತ ಈಚಿನದು ಎಂಬುದು ಸ್ಪಷ್ಟವಾಗಿದೆ. ವಾಲ್ಮೀಕಿ ಮಹರ್ಷಿಗಳು ಒಂದು ದಿನ ಪ್ರಾತಃಕಾಲದಲ್ಲಿ ನೆರವೇರಿಸಬೇಕಾದ ಧರ್ಮಗಳನ್ನು ಆಚರಿಸಿ ಮಧ್ಯಾಹ್ನದ ವೇಳೆಯಲ್ಲಿ ಮಾಧ್ಯಾಹ್ನಿಕ ಸಂಧ್ಯಾದಿ ಕರ್ಮಗಳನ್ನು ಆಚರಿಸಲು ತಮ್ಮ ಆಶ್ರಮದ ಸಮೀಪದಲ್ಲಿದ್ದ ತಮಸಾ ನದಿಗೆ ಬರುತ್ತಿದ್ದರು. ದಾರಿಯಲ್ಲಿ ಒಬ್ಬ ಬೇಡರವನು ಮರದ ಕೊಂಬೆಯಲ್ಲಿ ಸುಖದಿಂದ ವಿಹರಿಸುತ್ತಿದ್ದ ಕ್ರೌಂಚ ಪಕ್ಷಿಗಳ ದಂಪತಿಯನ್ನು ನೋಡಿ ಅವುಗಳಲ್ಲಿ ಒಂದನ್ನು ಬಾಣದಿಂದ ಹೊಡೆದು ಕೆಡವಿದನು. ಸಾಯುತ್ತಿರುವ ಹಕ್ಕಿಯ ಸಂಕಟವನ್ನೂ ಬದುಕಿರುವ ಪಕ್ಷಿಯ ವೇದನೆಯನ್ನೂ ಮಹರ್ಷಿಯು ಮನಗಂಡು ಮಮ್ಮಲಮರುಗಿದನು. ಹೃದಯವು ಭಾವಪರವಶವಾಗಿರಲು ಆ ಋಷಿಯ ಬಾಯಿಂದ ಈ ಮಾತು ಹೊರಹೊಮ್ಮಿತು.

"ಮಾನಿಷಾದ ಪ್ರತಿಷ್ಠಾಂ ತ್ವ ಮಗಮಃ ಶಾಶ್ವತೀ ಸ್ಸಮಾಃ ।
ಯತ್ ಕ್ರೌಂಚ ಮಿಥುನಾದೇಕ ಮವಧೀಃ ಕಾಮಮೋಹಿತಂ ॥"

ಈ ಮಾತು ಛಂದೋಬದ್ಧವಾಗಿಯೂ ಇದೆ. ಆ ಬೇಡರವನಿಗೆ ಶಾಪ ರೂಪವೂ ಆಗಿರುತ್ತದೆ. ಇದರ ಅರ್ಥವು ಹೀಗಿದೆ.—ಎಲೈ ಬೇಡರವನೇ, ಸುಖಾನುಭವದಲ್ಲಿ ಮೈಮರೆತಿದ್ದ ಕ್ರೌಂಚ ಪಕ್ಷಿಗಳ ಕುಟುಂಬದ ಒಂದನ್ನು ನೀನು ಕೊಂದಿರುವೆ. ಆದುದರಿಂದ ನೀನು ಬಹು ಕಾಲ ಬದುಕದೆ ಬೇಗನೆ ಮರಣವನ್ನು ಪಡೆ. ಒಳ್ಳೆಯ ಕರ್ಮವನ್ನು ನೆರವೇರಿಸಬೇಕೆಂದು ಸಂಕಲ್ಪಗೊಂಡಿದ್ದ ಋಷಿಯ ಬಾಯಿಂದ ಈ ಅಮಂಗಳಕರವಾದ ಶಾಪದ ಮಾತು ಹೊರಹೊಮ್ಮಿದುದಕ್ಕಾಗಿ ಋಷಿಯು ಖಿನ್ನನಾದನು. ಆದರೆ ಸರ್ವ ಕರ್ತೃವಾದ ಬ್ರಹ್ಮ ದೇವನೇ ಬಂದು ಮೇಲಿನ ಶ್ಲೋಕಕ್ಕೆ ಮಂಗಳಕರವಾದ ಅರ್ಥವೂ ಒಂದು ಇದೆ ಎಂದು ತಿಳಿಸಿಕೊಟ್ಟು ರಾಮಾಯಣವನು ಈ ಛಂದಸ್ಸಿನಿಂದ ಕೂಡಿದ ಈ ಭಾಷೆಯಲ್ಲೇ ರಚಿಸು ಎಂದ

ಪ್ರೇರಿಸಿದನು. ಆ ಮಂಗಳಕರವಾದ ಅರ್ಥವು ಹೀಗಿದೆ.—ಲಕ್ಷ್ಮೀ ದೇವಿಯನ್ನು ಧರಿಸಿರುವ ವಿಷ್ಣುವೇ, ರಾಕ್ಷಸ ದಂಪತಿಗಳಲ್ಲಿ ಕಾಮಾಂಧ ನಾಗಿದ್ದ ರಾವಣನನ್ನು ಸಂಹರಿಸಿ ಧರ್ಮ ರಕ್ಷಣೆಯನ್ನು ನೆರವೇರಿ ಸಿರುವೆಯಾದುದರಿಂದ ನಿನ್ನ ಜೀವಿತ ಕಾಲವು ಅನಂತವಾಗಿ ಶಾಶ್ವತ ವಾಗಿರಲಿ.

ಶುದ್ಧ ಸಂಸ್ಕೃತಿಯು ಕಾವ್ಯ ಮೂಲ.

ಈ ಅರ್ಥವನ್ನು ಬ್ರಹ್ಮದೇವನು ಸೂಚಿಸುವವರೆಗೂ ವಾಲ್ಮೀಕಿಯೇ ತಿಳಿಯದೆ ಇದ್ದನು. ಪ್ರಯತ್ನವಿಲ್ಲದೆ ಇದ್ದರೂ ಶುಭ ಭಾವ ಪೂರ್ಣವಾದ ಕವಿತಾ ವಾಣಿಯು ಶುದ್ಧ ಹೃದಯದಿಂದ ಹೊರಬೀಳ ಬಹುದೆಂದು ಇದರಿಂದಲೂ ಗೊತ್ತಾಗುತ್ತದೆ. ಧಾರ್ಮಿಕ ಸಂಸ್ಕೃತಿಯ ಪ್ರಭಾವಕ್ಕೆ ಇದನ್ನೂ ಒಂದು ಕುರುಹೆಂದು ಹೇಳಿದರೆ ಅತಿಶಯೋಕ್ತಿಯಾಗದು. ಶ್ರುತಿಗಳು ಋಷಿಗಳ ಬಾಯಿಂದ ಹೊರಹೊಮ್ಮಿದುದೂ ಹೀಗೆಯೇ ಎಂದು ಮನಗಾಣ ಬಹುದಾಗಿದೆ. ಶ್ವೇತಾಶ್ವತರ ಉಪನಿಷತ್ತಿನಲ್ಲಿ ೧.೩ರಲ್ಲಿ ಮತ್ತು ನಾ. ಪ. ೯.೨ರಲ್ಲೂ ಯೋಗಸೂತ್ರಗಳಲ್ಲೂ ಈ ಅಂಶವನ್ನು ಸೂಚಿಸಿದೆ.

ಯೋಗಶ್ಚಿತ್ತವೃತ್ತಿ ನಿರೋಧಃ । ಪಾತಂಜಲಯೋಗ ಸೂತ್ರ ೧.೨

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ ಧ್ಯಾನ, ಸಮಾಧಯಃ ಅಷ್ಟಾವಂಗಾನಿ ೨.೨೯.

ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾ ಪರಿಗ್ರಹಾಃ ಯಮಾಃ ೨.೩೦.

ಶೌಚ ಸಂತೋಷ ತಪಸ್ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ ೨.೩೨.

ಸ್ಥಿರಸುಖ ಮಾಸನಂ ೨.೪೬.

ತಸ್ಮಿನ್ಸತಿ ಶ್ವಾಸಪ್ರಶ್ವಾಸಯೋಃ ಗತಿವಿಚ್ಛೇದಃ ಪ್ರಾಣಾಯಾಮಃ ೨.೪೯.

ಸ್ವವಿಷಯಾ ಸಂಪ್ರಯೋಗೆ ಚಿತ್ತಸ್ಯ ಸ್ವರೂಪಾನು ಕಾರಇವ ಇಂದ್ರಿಯಾಣಾಂ ಪ್ರತ್ಯಾಹಾರಃ ೨.೫೪.

ದೇಶಬಂಧಃ ಚಿತ್ತಸ್ಯ ಧಾರಣಾ ೩.೧.

ತತ್ರಪ್ರತ್ಯಯೈಕ ತಾನತಾ ಧ್ಯಾನಂ ೩ ೬.

ತದೇವ ಅರ್ಥ ಮಾತ್ರ ನಿರ್ಭಾಸಂ ಸ್ವರೂಪ ಶೂನ್ಯಮಿವ ಸಮಾಧಿಃ ೩ ೩

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂ
ಶ್ಚ ಪ್ರಹಿಣೋತಿ ತಸ್ಮೈ |

ತಂ ಹ ದೇವಂ ಆತ್ಮಬುದ್ಧಿ ಪ್ರಕಾಶಂ ಮುಮುಕ್ಷುರ್ವೈ
ಶರಣಮಹಂ ಪ್ರಪದ್ಯೇ || ಶ್ವೇ. ಉ. ೬ ೧೮. ಗೋ. ಪೂ. ೪.೫

ವಾಗರ್ಥಾ ವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ |
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ || ಕಾ. ರ. ೧.೧.

ತೇ ಧ್ಯಾನ ಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ
ಸ್ವಗುಣೈರ್ನಿಗೂಢಾಂ ||

ಎಂದರೆ ಆ ವೈದಿಕ ಋಷಿಗಳು, ಯಮನಿಯಮ ಮುಂತಾದ ಎಂಟು ಅಂಗಗಳುಳ್ಳ ಯೋಗದ ಅಭ್ಯಾಸದಲ್ಲಿ ನಿರತರಾಗಿದ್ದ ಆ ಉಪಾಸಕರು ಧ್ಯಾನ ಎಂದರೆ, ಏಕಾಗ್ರವಾದ ಮನಸ್ಸಿನಿಂದ ಒಂದೇ ವಿಷಯವನ್ನು ಆಲೋಚಿಸುತ್ತಿರುವಿಕೆ, ಎಂಬ ಉಪಾಯವನ್ನು ಅನುಷ್ಠಿಸುತ್ತಿರುವವರಾಗಿ, ದೇವಾತ್ಮಶಕ್ತಿಯನ್ನು, ಎಂದರೆ ಸ್ವಪ್ರಕಾಶರೂಪನಾದ ಪರಮಾತ್ಮನ ಉಪಾಧಿಯಾಗಿರುವ ಶಕ್ತಿಯನ್ನು, ಅವಿನಾಭಾವದಿಂದ ಆ ಪರಮಾತ್ಮಸ್ವರೂಪವೇ ಆಗಿರುವ ಮಾಯಾ ಶಕ್ತಿಯನ್ನು ಈ ಎಲ್ಲ ಪ್ರಪಂಚಕ್ಕೂ ಕಾರಣವಾಗಿರುವ ತತ್ವವೆಂದೂ, ಕಾರ್ಯದ ರೂಪದಿಂದ ಕಾರಣ ರೂಪವು ಕಣ್ಣಿಗೆ ಮರೆಯಾಗಿರುವಂತೆ, ಈ ಆತ್ಮಶಕ್ತಿಯೂ ಇಪ್ಪತ್ತುನಾಲ್ಕು ಬಗೆಯಾಗಿ ಪರಿಣಮಿಸಿರುವ ಮಾಯೆಯ ಅಥವಾ ಪ್ರಕೃತಿಯ ಕಾರ್ಯಗಳಿಂದ ಮರೆಯಾಗಿರುತ್ತದೆ ಎಂದೂ ಮನಗಂಡರು. ಎಂದು ಅರ್ಥವು.

ಪರಿಣಾಮ ಕ್ರಮದಿಂದ ಸೃಷ್ಟಿಕ್ರಮ.

ಈ ಚರಾಚರ, ಜಡಚೇತನ ಪ್ರಪಂಚವೆಲ್ಲವೂ ಒಮ್ಮೆಲೇ ಆವಿರ್ಭವಿಸಲಿಲ್ಲವು. ಮತ್ತೇನೆಂದರೆ ಎಲ್ಲವೂ ಕ್ರಮವಾಗಿ ಸೂಕ್ಷ್ಮವಾದ ಕಾರಣದಿಂದ ಸ್ಥೂಲವಾದ ಕಾರ್ಯವೂ, ಆ ಸ್ಥೂಲ ಕಾರ್ಯ (ಕಾರಣ)ದಿಂದ ಸ್ಥೂಲತರ ಕಾರ್ಯವೂ ಕ್ರಮವಾಗಿ ರೂಪ

ಗೊಂಡಿತೆಂದು ಹೇಳಿರುವುದು ಈಗಿನ ಪರಿಣಾಮ (Evolution) ವಾದಕ್ಕೂ ಹೊಂದಿಕೆಯಾಗಿದೆ. ಅರ್ಥ ಪ್ರಪಂಚವೂ ವಾಕ್ಪ್ರಪಂಚವೂ ಜತೆಜತೆಯಾಗಿಯೇ ಕ್ರಮವಾಗಿ ಉಂಟಾದುವೆಂದು ಹೇಳಿರುವುದೂ ಗಮನಾರ್ಹವಾಗಿದೆ. ವೈದಿಕಾರ್ಯರು ಜಗತ್ತಿನಲ್ಲಿ ಶಿಸ್ತುಕ್ರಮಗಳನ್ನು ನೋಡಿ ವ್ಯವಸ್ಥಾಪಕವಾದ ಶಕ್ತಿಯು ಹಿನ್ನೆಲೆಯಲ್ಲಿರಬೇಕೆಂದೂ ತಿಳಿದರು. ಬಾಹ್ಯಪ್ರಕೃತಿಯಲ್ಲಿನ ಅದ್ಭುತ ದೃಶ್ಯಗಳಿಂದ ಅಪಾರಮಹಿಮೆಯನ್ನೂ ಊಹಿಸಿದರು. ಅಪಾಯಕಾರಿಯಾದರೂ ಉಪಕಾರಿಯಾಗಿರುವ ಪ್ರಕೃತಿ ದೃಶ್ಯಗಳ ಪರಿಶೀಲನೆಯಿಂದ ಕೃತಜ್ಞತೆಯ ಭಾವವೂ, ದಿನಗಟ್ಟಲೆಯ ಜೀವನಕ್ಕೆ ಆವಶ್ಯಕವಾದ ಅನ್ನ ನೀರು ಗಾಳಿ ಮಳೆ ಬೆಳೆಗಳಿಂದ ಪ್ರೀತಿಸಹಕಾರ ಭಾವಗಳುಳ್ಳ ದೇವನ ಬೆಂಬಲವಿರಬೇಕೆಂಬುದೂ ಆ ಆರ್ಯರ ಮನಸ್ಸಿನಲ್ಲಿ ತೋರಿಬಂತು. ಕ್ರಮಪಾಲಕರಾದ ದೇವತೆಗಳ ಸಹಾಯ ಅನುಗ್ರಹಗಳನ್ನು ಧಾರ್ಮಿಕವರ್ತನದಿಂದಲೇ ಒಲಿಸಿ ಪಡೆದುಕೊಳ್ಳಬಹುದೆಂಬ ಭಾವವೂ ಮೂಡಿತು. ಎಲ್ಲರ ದೇವರಲ್ಲೂ ಒಂದೇ ಲಕ್ಷಣವಿದ್ದುದನ್ನು ಗಮನಿಸಿ ಅದರಿಂದ ಏಕದೇವ ತತ್ತ್ವವನ್ನೂ ಮನಗಂಡರೆಂಬುದೂ ವಿಶೇಷಗಮನಾರ್ಹವಾಗಿದೆ.

ಧರ್ಮ ಪ್ರಹ್ಲಾದನ, ಕುಮಾಲನ ಇವರ ಕಥೆ.

ಆಪಸ್ತಂಬ ಧರ್ಮಸೂತ್ರದಲ್ಲಿ ೧–೧೧–೨೪ರಲ್ಲಿ ಧರ್ಮಸೂಕ್ಷ್ಮವನ್ನು ವಿಮರ್ಶಿಸಿದ ಸಂದರ್ಭ ಒಂದು ಗಮನಾರ್ಹವಾಗಿದೆ. ಹೇಗೆಂದರೆ— " ರುದನ್‌ಹ ಮೃತ್ಯುಃ ಪ್ರೋವಾಚ. . . . ." ಒಬ್ಬ ಋಷಿಯ ಗುರುಕುಲದಲ್ಲಿ ಧರ್ಮ ಪ್ರಹ್ಲಾದ ಕುಮಾಲನ ಎಂಬ ಹೆಸರುಳ್ಳ ಇಬ್ಬರು ವಿದ್ಯಾರ್ಥಿಗಳು ವೇದಾಭ್ಯಾಸ ಮಾಡುತ್ತಾ ಗುರು ಶುಶ್ರೂಷೆಯನ್ನು ಮಾಡಿಕೊಂಡಿದ್ದರು. ಅವರು ಕಾಡಿನಿಂದ ಸಮಿತ್ತುಗಳ ಹೊರೆಯನ್ನು ತಂದು ಹಾಕುತ್ತಿದ್ದರು ಒಂದು ದಿನ ಅವರು ದೊಡ್ಡದಾದ ಎರಡು ಹೊರೆಗಳನ್ನು ಕಾಡಿನಿಂದ ತರುವ ಹೊತ್ತಿಗೆ ಸಂಜೆ ಮಬ್ಬುಗತ್ತಲೆಯಾಗಿತ್ತು. ಹೊರೆಗಳ

ಭಾರದಿಂದ ಅವರು ಬಳಲಿದ್ದರು. ಆ ಹೊರೆಗಳನ್ನು ಹಾಕುವ ಸ್ಥಳದಲ್ಲಿ ಆ ದಿನ ದುರ್ದೈವವಶದಿಂದ ಗುರುಗಳ ಮಗುವು ಆಡುತ್ತಿತ್ತು. ಶಿಷ್ಯರು ಕೆಳಗೆ ನೋಡದೆ ಹೊರೆಗಳನ್ನು ಒಂದಾದಮೇಲೆ ಒಂದರಂತೆ ಹಾಕಿದರು. ಅಲ್ಲಿದ್ದ ಮಗುವು ಆ ಹೊರೆಯ ಭಾರದ ಏಟಿನಿಂದ ಸತ್ತಿತು. ಗುರುವು ಶಿಶುಮರಣ ದುಃಖವನ್ನು ಸಹಿಸಿಕೊಂಡಮೇಲೆ, ಶಿಷ್ಯರಿಬ್ಬರಲ್ಲಿ ಯಾರು ಅಪರಾಧಿಗಳು ? ಎಷ್ಟರಮಟ್ಟಿನ ಅಪರಾಧಿಗಳು ? ಯಾರಿಗೆ ಯಾವ ಪ್ರಾಯಶ್ಚಿತ್ತವನ್ನು ಮಾಡಿಸಬೇಕು ? ಯಾರು ಗ್ರಾಹ್ಯರು ? ಯಾರು ತ್ಯಾಜ್ಯರು ? ಎಂಬುದನ್ನು ನಿಶ್ಚಯಿಸಲಾಗಲಿಲ್ಲ.

ಧರ್ಮಗತಿಯು ಬಹು ಸೂಕ್ಷ್ಮವಾದುದು.

ಆಗ ಒಬ್ಬನನ್ನು ಕರೆದು ಶಿಶುಹತ್ಯಾ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳ ಹೇಳಿದರು. ಆ ಶಿಷ್ಯನು "ಗುರುಗಳೇ, ನಾನು ಶಿಶುಹತ್ಯೆಯನ್ನು ಮಾಡಲಿಲ್ಲ. ಶಿಶುವಿಗೆ ಸ್ವಲ್ಪ ಪೆಟ್ಟಾಗಿರಬಹುದು. ಅಷ್ಟೇ ಹೊರತು ಸಾಯಲಿಲ್ಲ. ಅದು ಎರಡನೆಯ ಹೊರೆಯ ಭಾರದ ಏಟಿನಿಂದಲೇ ಸತ್ತಿರಬೇಕು. ಹತ್ಯಾ ಪ್ರಾಯಶ್ಚಿತ್ತವು ಅವನಿಗೇತಕ್ಕುದು." ಎಂದನು. ಎರಡನೆಯ ಶಿಷ್ಯನನ್ನು ಕರೆದು ಕೇಳಲು ಅವನು "ಗುರುಗಳೇ, ನಾನು ದೋಷಿಯೇ ಅಲ್ಲ. ಅದು ಎಳೆಯ ಮಗು. ಆದುದರಿಂದ ಮೊದಲನೆಯ ಹೊರೆಯ ಭಾರದ ಏಟಿನಿಂದಲೇ ಸತ್ತು ಹೋಗಿರಬೇಕು. ನಾನು ಕೇವಲ ಶವದಮೇಲೆ ಹೊರೆಯನ್ನು ಹಾಕಿದೆನು. ನಾನು ಪ್ರಾಯಶ್ಚಿತ್ತಾರ್ಹನಲ್ಲ ಎಂದನು. ಗುರುಗಳಿಗೆ ಧರ್ಮ ಸಂಕಟಕ್ಕಿಟ್ಟುಕೊಂಡಿತು. ದೋಷಿಗೇ ತಕ್ಕ ಪ್ರಾಯಶ್ಚಿತ್ತವಾಗಬೇಕಾಗಿದೆ. ಇಬ್ಬರು ಶಿಷ್ಯರ ವಾದದಲ್ಲೂ ಸತ್ಯಾಂಶವಿದೆ. ಶಿಶುಹತ್ಯಾ ದೋಷವು ಯಾರದೆಂದು ಗೊತ್ತುಮಾಡಲಾಗದೆ ಹೋಯಿತು. ಆಗ ಅವರು ಯಮಧರ್ಮದೇವನನ್ನೇ ತಪಶ್ಶಕ್ತಿಯಿಂದ ಆಹ್ವಾನಿಸಿ "ದೋಷವು ಯಾರದು ? ಎಷ್ಟುಮಟ್ಟಿನದು ? ಹೇಳಬೇಕು." ಎಂದು ಕೇಳಿದರು. ಆಗ

ಯಮನು “ ಮಾಡಿದವರ ಪಾಪ ಆಡಿದವರಿಗೆ ” ಎಂಬ ಗಾದೆಯಂತೆ ತಾನು ಸಾಕ್ಷಾತ್ತಾಗಿ ಹೇಳಲು ಹಿಂಜರಿದು, “ ಈ ದೋಷವು ಕುಮಾಲನನಿಗೆ ಇಲ್ಲ” ಎಂದು ಹೇಳಿದನು. ಹಾಗೆ ಹೇಳುವಾಗ ಯಮಧರ್ಮ ದೇವನು ದುಃಖಿಸುತ್ತಾ ತಿಳಿಸಿದನೆಂದು “ ರುದನ್ನ ಮೃತ್ಯುಃವ್ಯುವಾಚ ” ಎಂದು ಹೇಳಿದೆ.

ಧರ್ಮದ ಅರಿವು ಉಂಟಾಗುವ ಬೆಳೆಯುವ ಬಗೆ.

ಮಾನವ ವ್ಯಕ್ತಿಯು, ಗಂಡಸಾಗಲಿ ಹೆಂಗಸಾಗಲಿ, ಮೊದಲು “ ತಾನುಂಟೋ ಮೂರುಲೋಕವುಂಟೋ ” ಎಂಬಂತೆ ತನ್ನ ಯೋಗಕ್ಷೇಮದಲ್ಲಿ ಮಾತ್ರ ಆಸಕ್ತಿಯುಳ್ಳದ್ದಾಗಿರುವುದು ಸ್ವಾಭಾವಿಕವು. ಸ್ವಾಭಾವಿಕವೆಂದರೆ ವಿಚಾರಮಾಡದೆ ಇರುವಾಗ, ಸಾಧುಸತ್ಪುರುಷರ ಸಹವಾಸ ದೊರೆಯದೆ ಇರುವಾಗ, ಮನುಷ್ಯ ಪ್ರಾಣಿಯು ಇತರ ಪ್ರಾಣಿಗಳಂತೆ ಕೇವಲ ಸ್ವಾರ್ಥಪರವಾಗಿರುವುದು ಸಹಜವು. ಹಸಿವಾದರೆ ಊಟವನ್ನು ಬಯಸುವುದು, ಬಾಯಾರಿದರೆ ನೀರನ್ನು ಕುಡಿಯಲು ಆಶಿಸುವುದು. ಆಯಾಸವಾದರೆ ನಿದ್ರಿಸುವುದು. ಹೀಗೆ ಆ ವ್ಯಕ್ತಿಯು ತನ್ನ ಯೋಗಕ್ಷೇಮಗಳ ಚಿಂತೆ ಹೊರತು ಇತರರ ಯೋಗಕ್ಷೇಮಗಳ ಚಿಂತೆಯು ಹವ್ಯಾಸಕ್ಕೆ ಹೋಗದೆ ಇರುತ್ತದೆ. ಆದರೆ ವಯಸ್ಸಾಗಿ ಯೌವನಬಂದರೆ ಗಂಡಸು ಹೆಂಗಸನ್ನೂ, ಹೆಂಗಸು ಗಂಡಸನ್ನೂ ಅಪೇಕ್ಷಿಸುತ್ತಾರೆ. ಆಗ ಇಬ್ಬರಿಗೂ ಇಬ್ಬರ ಯೋಗಕ್ಷೇಮಗಳ ಚಿಂತೆಯು ಗಂಟುಬೀಳುವುದು. ಪರಸ್ಪರ ಸಂಭೋಗದಿಂದ ಮಕ್ಕಳಾದರೆ ಆ ಇಬ್ಬರೂ ಮಕ್ಕಳ ಯೋಗಕ್ಷೇಮ ಚಿಂತನೆಯಲ್ಲಿ ತೊಡಗಿರುವುದೂ ನೈಸರ್ಗಿಕವಾಗಿದೆ. ಇದಿಷ್ಟೂ ಮಾನವರಿಗೂ ಮಾನವೇತರ ಪ್ರಾಣಿಗಳಿಗೂ ಸಮಾನವಾಗಿರುತ್ತದೆ.

ಮನುಷ್ಯನಿಗೆ ಸ್ವಭಾವಿಕವಾಗಿ ಬೇಕಾಗುವುದೇನು ?

ಮಾನವನು ಸುಖವಾಗಬೇಕೆಂದೂ ದುಃಖವು ಬೇಡವೆಂದೂ ದುಃಖವು ಬಂದರೆ ಅದನ್ನು ನಿವಾರಿಸಿಕೊಳ್ಳ ಬೇಕೆಂದೂ ಆಶಿಸುತ್ತಾನೆ. ಇದೇ ಪುರು ಷಾರ್ಥಗಳ ಸರಳ ಸ್ವರೂಪ. ಹಸಿವೂ ಬಾಯಾರಿಕೆಯೂ ದುಃಖಗಳೇ. ಆಹಾರ ಭೋಜನ ಜಲಪಾನಗಳು ದುಃಖ ನಿವಾರಣದ ಸಾಧನಗಳಾ ಗಿವೆ. ಈ ದುಃಖ ನಿವೃತ್ತಿಯನ್ನೆ ಸುಖವೆಂದು ಮಾನವ ಪ್ರಾಣಿ ಯು ಭಾವಿಸುತ್ತದೆ. ಹೆಂಡತಿ ಮಕ್ಕಳಿಗಾಗಿ ದುಡಿಯುವುದು ಸಂಪಾ ದಿಸುವುದೂ ಸ್ವಾಭಾವಿಕವಾಗಿರುತ್ತವೆ. ಎಂದರೆ ಈ ಅವಿಚಾರ ಸ್ಥಿತಿಯಲ್ಲಿ ಕಾರಣವನ್ನು ವಿಮರ್ಶಿಸಿ ಗೊತು ಮಾಡಿಕೊಳ್ಳದೆಯೇ ನೈಸರ್ಗಿಕವಾಗಿ ಅವನು ದುಡಿಮೆ ಸಂಪಾದನೆಗಳಲ್ಲಿ ಪ್ರವರ್ತಿಸುತ್ತಿರು ತ್ತಾನೆ. ಆಹಾರವೂ ಜಲವೂ ಬಟ್ಟೆಯೂ ಮನೆಯೂ ಇವು ಸುಖ ಸಾಧನಗಳು. ಇವನ್ನು ಹೇಗಾದರೂ ಸಂಪಾದಿಸಿದರಾಯಿತು. ಇತರರಿಗೆ ಅದರಿಂದ ತೊಂದರೆ ಆಗಲಿ, ಆಗದಿರಲಿ, ಅದನ್ನು ಈ ಸ್ಥಿತಿ ಯಲ್ಲಿರುವ ಮಾನವನು ಲೆಕ್ಕಿಸುವುದಿಲ್ಲ. ತನ್ನ ಹೆಂಡತಿ ಮಕ್ಕ ಳೊಡನೆ ಅವನ್ನು ಅನುಭವಿಸುವುದೂ ತನಗೆ ಸುಖವಾಗುತದೆಂಬ ಕಾರಣದಿಂದಲೇ ಆಗಿರುತ್ತದೆ. ಆದರೆ ಈ ಸ್ಥಿತಿಯಲ್ಲೂ ತನ್ನ ಸುಖ ಸ್ವಾತಂತ್ರ್ಯಗಳಿಗೆ ಸ್ವಲ್ಪಮಟ್ಟಿಗಾದರೂ ಕಡಿಮೆಯಾಗುವುದನ್ನು ಲಕ್ಷಿಸಿರುವುದಿಲ್ಲ. ಈ ಸ್ಥಿತಿಯಲ್ಲಿ ಮಾನವನು ಕೇವಲ ಅರ್ಥಕಾಮ ಪರನಾಗಿರುತ್ತಾನೆ. ಆ ಅರ್ಥಗಳನ್ನು ಸಂಪಾದಿಸುವುದರಲ್ಲಿ ಇತರ ರಿಗೆ ತೊಂದರೆಯಾಗುತ್ತದೆಯೋ ಇಲ್ಲವೇ ಎಂಬುದನ್ನು ಲಕ್ಷಿಸುವುದಿಲ್ಲ. ತನ್ನ ಕಾಮಗಳು ಕೋರಿಕೆಗಳು ನೆರವೇರಿದರೆ ಸರಿ. ಅವು ಸರಿ ಯಾದುವೇ ಅಲ್ಲವೇ ಎಂದು ಯೋಚಿಸುವುದಿಲ್ಲ. ಇದು ಪಶು ಸ್ಥಿತಿಯು.

ಕಾಲೇಕಾಲೇ ನ ಕಿಮುಪನತಂ ಭುಂಜತೇ ಭೋಗ್ಯಜಾತಂ
ಗೃಹ್ಣಂತ್ಯಂಭೋ ನ ಕಿಮಥ ನ ಕಿಂ ಸಂವಿಶಂತಿ ಕ್ಷಪಾಸು ।

ಪುಷ್ಣಂತಿ ಸ್ವಾನ್ನಕಿಮು ಪೃಥುಕಾನ್ ಸ್ತ್ರೀಷು ಕಿಂ ನೋ ರಮಂತೇ ।
ಕೃತ್ಯಾಕೃತ್ಯ ವ್ಯಪಗತಧಿಯಾಂ ಕಸ್ತಿರಶ್ಚಾಂ ಚ ಭೇದಃ ॥

ಧರ್ಮ ವಿಸ್ತರಣವು ಸಹಾನುಭೂತಿ ಸ್ವಾರ್ಥ ಗಳಿಂದಲೂ ಆಗುತ್ತದೆ.

ಆದರೆ ತನ್ನ ಸಂಸಾರದಲ್ಲಿ ಯಾರಾದರೂ ದುಃಖಿಯಾಗಿದ್ದರೆ ತಾನು ಸುಖಿಯಾಗಿರಲಾಗುವುದಿಲ್ಲ. ಎಲ್ಲರೂ ಸುಖಿಯಾಗಿದ್ದರೆ ಮಾತ್ರ ತಾನು ಸುಖಿಯಾಗಿರುವುದು ಸಾಧ್ಯವೆಂಬುದು ಕ್ರಮವಾಗಿ ಗೊತ್ತಾಗುತ್ತಾ ಬರುತ್ತದೆ. ಆಗ ತನ್ನಂತೆಯೇ ಇತರರೂ ಎಂಬ ಭಾವನೆಯು ಮಾನವನ ಮನಸ್ಸಿನಲ್ಲಿ ಮೂಡುತ್ತದೆ. ತಾನು ಸುಖವಾಗಿರಬೇಕೆಂದೂ ತನಗೆ ದುಃಖವಾಗಬಾರದೆಂದೂ ತಾನು ಸ್ವತಂತ್ರವಾಗಿರಬೇಕೆಂದೂ ಆಶಿಸುವ ಹಾಗೆ ಇತರರೂ ಆಶಿಸುತ್ತಾರೆಂದೂ, ಅವರಿಗೆ ಆಶಾಭಂಗ ದುಃಖಗಳಾಗದಂತೆಯೂ ತಾನು ನೋಡಿಕೊಳ್ಳಬೇಕೆಂದೂ ಭಾವವು ಮನಸ್ಸಿಗೆ ಬಂದಕೂಡಲೆ, ಧರ್ಮದ ಬೀಜವು ಪ್ರಥಮಸ್ಥಿತಿಯು ರೂಪಗೊಳ್ಳುತ್ತದೆ. ತನ್ನಂತೆಯೇ ಇತರರೂ ಎಂಬ ಭಾವವು ಪ್ರಬಲಿಸಿದರೆ ಮಾನವನು ಧಾರ್ಮಿಕನಾಗುತ್ತಾನೆ. ತಾನು ತನ್ನ ಸುಖಸಾಧನಗಳನ್ನು ಇತರರಿಗೆ ತೊಂದರೆಯಾಗದಂತೆ ಸಂಪಾದಿಸಬೇಕೆಂದೂ, ಇತರರಿಗೆ ದುಃಖವಾದರೆ ತನಗೇ ದುಃಖವಾಗುತ್ತದೆಂದೂ ಮನಗಾಣುತ್ತಾನೆ. ಆಗ ತನ್ನ ಸುಖಸಾಧನಗಳನ್ನು ಧರ್ಮದಿಂದಲೇ ಸಂಪಾದಿಸಬೇಕೆಂದೂ ಅಧರ್ಮದಿಂದ ಸಂಪಾದಿಸಬಾರದೆಂದೂ ತನಗೆ ತಾನೆ ನಿರ್ಬಂಧವನ್ನು ಹಾಕಿಕೊಳ್ಳುತ್ತಾನೆ. ಇದೇ ಧರ್ಮದ ಪ್ರಥಮವೂ ಮುಖ್ಯವೂ ಆಗಿರುವ ಸಾಮಾನ್ಯವಾದ ಸ್ವರೂಪವಾಗಿದೆ.

ಶ್ರೂಯತಾಂ ಧರ್ಮ ಸರ್ವಸ್ವಂ ಶ್ರುತ್ವಾಚೈವಾವಧಾರ್ಯತಾಂ ।
ಆತ್ಮನಃ ಪ್ರತಿಕೂಲಾನಿ ಪರೇಷಾಂ ತಾನಿ ನಾಚರೇತ್ ॥

ತನಗೆ ಹಿತವಲ್ಲದ್ದುದನ್ನು ಇತರರಿಗೆ ಮಾಡಬಾರದು. ಇದೆ ಧರ್ಮದ ಒಟ್ಟು ಮುಖ್ಯ ಸ್ವರೂಪವಾಗಿದೆ. ಇದನ್ನು ತಿಳಿದು ಎಲ್ಲರೂ ಮನಸ್ಸಿನಲ್ಲಿಟ್ಟುಕೊಂಡು ನಡೆದುಕೊಳ್ಳುತ್ತಿರಬೇಕು.

ಪ್ರವೃತ್ತಿ ಧರ್ಮದ ಸ್ವರೂಪ.

ತನ್ನ ಒಬ್ಬನ ಯೋಗಕ್ಷೇಮದಲ್ಲಿ ಆಸಕ್ತನಾಗಿದ್ದ ಮಾನವನು ಈಗ ತನ್ನ ಹೆಂಡತಿಮಕ್ಕಳು ಸೊಸೆಯರು ಅಳಿಯಂದಿರು ಹೀಗೆ ತನ್ನ ಸಂಸಾರಕ್ಕೆ ಸೇರಿದವರ ಹಿತಕ್ಕಾಗಿಯೂ ದುಡಿಯುತ್ತಾನೆ. ಸಂಪಾದಿಸಿದ್ದನ್ನು ಅವರೆಲ್ಲರೊಡನೆ ತಾನೂ ಅನುಭವಿಸುತ್ತಾನೆ. ಅವರ ಸುಖವೇ ಇವನ ಸುಖ, ಅವರ ದುಃಖವೇ ಇವನ ದುಃಖ. ಈಗ ಈ ಗೃಹಸ್ಥನ ಕಾರ್ಯಕ್ಷೇತ್ರವು ವಿಸ್ತಾರವಾಗಿರುತ್ತದೆ. ಹತ್ತಾರು ಜನರ ಯೋಗಕ್ಷೇಮ ಸಂಪಾದನೆಯಲ್ಲಿ ಆಸಕ್ತನಾಗಿರುತ್ತಾನೆ. ಹಾಗೆಯೇ ತನ್ನ ವಂಶದವರ, ತನ್ನ ಊರಿನವರ, ತನ್ನ ದೇಶದವರ, ಇಡಿಯ ಪ್ರಪಂಚದವರ, ಇಡಿಯ ಪ್ರಾಣಿವರ್ಗಗಳ ಯೋಗಕ್ಷೇಮ ಸಂಪಾದನೆಯಲ್ಲಿ ಆಸಕ್ತನಾಗಿರುವುದು ಧರ್ಮದ, ಪ್ರವೃತ್ತಿ ಧರ್ಮದ ವಿಶ್ವರೂಪವಾಗಿರುತ್ತದೆ. ಇದು ಧರ್ಮದ ಒಂದು ಭಾಗವು. ಇದರಿಂದ ಈ ಲೋಕದಲ್ಲಿನ ಅಭ್ಯುದಯಗಳನ್ನು ಮಾತ್ರ ಸಂಪಾದಿಸಲಾಗುತ್ತದೆ. ಇದರಂತೆಯೇ ಪರಲೋಕದಲ್ಲಿ ಸದ್ಗತಿಯನ್ನು ಸಂಪಾದಿಸುವುದೂ ಈ ಪ್ರವೃತ್ತಿ ಧರ್ಮದ ಇನ್ನೊಂದು ಭಾಗವಾಗಿರುತ್ತದೆ. ಧರ್ಮವೂ ಕರ್ಮವೂ ಒಂದೇ ಅರ್ಥದಲ್ಲಿದೆ ಎಂದು ಮೇಲೆ ಹೇಳಿದೆ. ಇಲ್ಲೂ ಸ್ಪಷ್ಟವಾಗಿದೆ. ಪ್ರವೃತ್ತಿ ಧರ್ಮವೆಂದರೆ ಧರ್ಮದ ಅಥವಾ ಕರ್ಮದ ಫಲದಲ್ಲಿ ಆಶೆಯನ್ನು ಇಟ್ಟುಕೊಂಡು ಧರ್ಮಾಚರಣೆಯನ್ನು ಮಾಡುವುದಕ್ಕೆ ಪ್ರವೃತ್ತಿ ಧರ್ಮವೆಂದು ಹೆಸರು. ಜನರು ಸಾಮಾನ್ಯವಾಗಿ ನಾವೆಲ್ಲರೂ ಪ್ರವೃತ್ತಿಧರ್ಮಪರರಾಗಿರುತ್ತೇವೆ. ಇಂತಹ ಧರ್ಮಾಚರಣೆಯಿಂದ ಈ ಪ್ರಪಂಚವು ಅನಂತವಾಗಿ ಸಾಗುತ್ತಿರುವಂತಾಗುತ್ತದೆ. ಕರ್ಮವನ್ನು ಆಚರಿಸುವುದು, ಅದರ ಫಲವನ್ನು ಅನುಭವಿಸುವುದು. ಎಲ್ಲ ಕರ್ಮಗಳ ಫಲಗಳನ್ನೂ ಈ ಜನ್ಮದಲ್ಲಿಯೇ ಅನುಭವಿಸಿ ಮುಗಿಸಲಾಗುವುದಿಲ್ಲ. ಆದುದರಿಂದ ಆ ಫಲಭೋಗಕ್ಕಾಗಿ ಇನ್ನೊಂದು ಜನ್ಮವನ್ನು ಪಡೆಯುವುದು. ಕರ್ಮಗಳನ್ನು ಮಾಡುತ್ತಿರುವುದು ನಿಲ್ಲದೆ ಇರುವುದರಿಂದ

ಜನ್ಮಗಳ ಪ್ರಾಪ್ತಿಯೂ ನಿಲ್ಲುವುದಿಲ್ಲವು. ಕರ್ತೃತ್ವ ಭೋಕ್ತೃತ್ವ ಜನನ ಮರಣ ಪುಣ್ಯಪಾಪ ಸುಖದುಃಖಗಳ ಅನುಭವದ ನಿರ್ಬಂಧ ಈ ಪರಂಪರೆಯೆಂಬ ಸಂಸಾರದಲ್ಲಿರುವುದಕ್ಕೆ ಸಹಾಯಕವಾದ ಧರ್ಮಕ್ಕೆ ಪ್ರವೃತ್ತಿ ಧರ್ಮವೆಂದು ಹೆಸರು. ಈ ಪ್ರವೃತ್ತಿ ಧರ್ಮವನ್ನು ವೇದಗಳ ಕರ್ಮಕಾಂಡಗಳಲ್ಲಿ ಹೇಳಿದೆ.

ಐಹಿಕ ಪುರುಷಾರ್ಥದ ಪರಮಾವಧಿ-ಪ್ರವೃತ್ತಿ ಧರ್ಮದ ಲೋಪ ದೋಷಗಳು.

ಈ ಪ್ರವೃತ್ತಿ ಧರ್ಮದಿಂದ ಪಡೆಯಬಹುದಾದ ಎಲ್ಲ ಫಲಗಳಲ್ಲಿಯೂ ಮೂರು ದೋಷಗಳು ಅನಿವಾರ್ಯವಾಗಿರುತ್ತವೆ. "ಸಹ್ಯವಿಶುದ್ಧಿಕ್ಷಯಾತಿಶಯಯುಕ್ತಃ" ಆ ದೋಷಗಳು ಯಾವುವೆಂದರೆ ಅವಿಶುದ್ಧಿ, ಕ್ಷಯ, ಅತಿಶಯ ಅಥವಾ ಸಾತಿಶಯತ್ವ ಎಂಬವು. ಈ ದರ್ಮವನ್ನು ಆಚರಿಸುವಾಗ ದೇಹಶ್ರಮವಾಗುತ್ತದೆ. ಅದರಿಂದ ದುಃಖ ಸಂಬಂಧವಿರುತ್ತದೆ, ಈ ಸುಖಸಾಧನಗಳಾದ ಧರ್ಮಾಚರಣೆಗೆ ಬೇಕಾದ ದ್ರವ್ಯಾದಿಗಳನ್ನು ಸಂಪಾದಿಸುವಾಗ ತಿಳಿದೋ ತಿಳಿಯದೆಯೋ ಪಾಪಸಂಪರ್ಕವಾಗುತ್ತದೆ. ಪಂಚಮಹಾಯಜ್ಞಗಳನ್ನು ಪ್ರತಿದಿನವೂ ಆಚರಿಸುವಾಗಲೂ ಪಂಚಸೂನಾ ಪಾಪಸಂಬಂಧವು ಅನಿವಾರ್ಯವಾಗಿಯೇ ಇರುತ್ತದೆ. ಸೌಕರ್ಯಗಳ ಪದಾರ್ಥಗಳೂ ದ್ರವ್ಯವೂ ಅಶುದ್ಧಮೂಲದಿಂದ ಬಂದಿರುವುದುಂಟು. ಈ ಕಾಮ್ಯಕರ್ಮಗಳಲ್ಲಿ ಆಸಕ್ತಿ ಹೆಚ್ಚಾಗಿರುವಾಗ ಆ ಮೂಲದ ಪಾಪದೋಷ ದುಃಖಗಳನ್ನು ಗಮನಿಸದೆ, ಇರಬೇಕಾಗುತ್ತದೆ. ಇದಕ್ಕೆ ಅವಿಶುದ್ಧಿ ದೋಷವೆಂದು ಹೆಸರಿದೆ.

ಪ್ರವೃತ್ತಿ ಧರ್ಮದ ಎರಡನೆಯ ದೋಷ.

ಈ ಎರಡನೆಯ ದೋಷವು ಕ್ಷಯವೆಂಬುದಾಗಿದೆ. ಎಂದರೆ ಇಂತಹ ಪ್ರವೃತ್ತಿಧರ್ಮದಿಂದ, ಕಾಮ್ಯಕರ್ಮದಿಂದ, ಸಂಪಾದಿಸಬಹುದಾದ ಫಲವು ಎಷ್ಟೇ ಹೆಚ್ಚಿನದಾಗಿದ್ದರೂ ಕಡೆಗೆ ನಾಶವನ್ನು ಪಡೆದೇ ಪಡೆಯುವಂಥಾದ್ದಾಗಿರುತ್ತದೆ. ಈ ಲೋಕದಲ್ಲಿ ಪಡೆಯು

ಬಹುದಾದ ಅತ್ಯುತ್ತಮ ಫಲವೂ, "ಯುವಾ ಸ್ಯಾತ್ ಸಾಧು ಯುವಾಽಧ್ಯಾಯಕಃ, ಆಶಿಷ್ಠೋ ದೃಢಿಷ್ಠೋ ಬಲಿಷ್ಠ; ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್. ಸ ಏಕೋ ಮಾನುಷ ಆನಂದಃ" ಎಂದು ತೈತ್ತಿರೀಯೋಪನಿಷತ್ತಿನಲ್ಲಿ ೨.೮.೩. ರಲ್ಲಿ ಹೇಳಿರುವಂತೆ ಇಂಥ ಅತ್ಯುತ್ತಮವಾದ ಫಲವೂ ಪರಿಮಿತವೂ ಜನ್ಯವೂ ಆಗಿರುವುದರಿಂದ ಅನಿತ್ಯವಾದುದಾಗಿರುತ್ತದೆ. ಇದರ ಅರ್ಥವು ಹೀಗಿದೆ.—ಆ ಮಾನವನು ಯೌವನವಂತನಾಗಿರಬೇಕು. ಯೌವನದ ಜೊತೆಗೆ ಒಳ್ಳೆಯತನವೂ ಸೇರಿರಬೇಕು. ವಿದ್ಯಾವಂತ ನಾಗಿರಬೇಕು. ಸುಖಸಾಧನಗಳನ್ನು ಸಂಪಾದಿಸಲು ಆಶೆಯುಳ್ಳವ ನಾಗಿರಬೇಕು. ಅದಕ್ಕೆ ತಕ್ಕಂತೆ ಉತ್ಸಾಹಶಾಲಿಯಾಗಿರಬೇಕು. ಅಷ್ಟಕ್ಕೆ ತಕ್ಕಷ್ಟು ಶಕ್ತಿಯುಳ್ಳವನಾಗಿಯೂ ಇರಬೇಕು. ಅಂಥವನಿಗೆ ಈ ಇಡಿಯ ಭೂಲೋಕವೇ ಸ್ವಾಧೀನವಾಗಿರಬೇಕು. ಇಂಥವನಿಗೆ ಆಗುವ ಆನಂದವು, ಈ ಲೋಕದಲ್ಲಿ ಪಡೆಯಬಹುದಾದ ಅಭ್ಯುದಯವು. ಇನ್ನು ಪಾರಲೌಕಿಕವಾದ ಸುಖವು ಸ್ವರ್ಗಲೋಕದಿಂದ ಮೊದಲಾಗಿ ಸತ್ಯಲೋಕದವರೆಗಿನ ಸುಖವು. ಅದೆಲ್ಲವೂ ಕರ್ಮಜನ್ಯವಾಗಿರು ತ್ತಾದುದರಿಂದ ಕೆಲವು ಕಾಲಾನಂತರದಲ್ಲಿ ನಷ್ಟವಾಗಿಯೇ ತೀರು ತ್ತದೆ. ಆದುದರಿಂದ ಐಹಿಕ ಮತ್ತು ಆಮುಷ್ಮಿಕ ಸುಖಗಳೆಲ್ಲವೂ ಅನಿತ್ಯತ್ವದೋಷವುಳ್ಳವಾಗಿಯೇ ಇರುತ್ತವೆ.

ಪ್ರವೃತ್ತಿ ಧರ್ಮದ ಮೂರನೆಯ ದೋಷ.

ಇನ್ನು ಮೂರನೆಯ ದೋಷವೆಂದರೆ ಅತಿಶಯ ಅಥವಾ ಸಾತಿ ಶಯತ್ವವೆಂಬ ದೋಷವು. ಈ ಸುಖಗಳಲ್ಲಿ ಒಂದಕ್ಕಿಂತ ಇನ್ನೊಂದು ಹೆಚ್ಚಿನದಾಗಿರುವುದ ರಿಂದಲೂ ಕರ್ತೃವಿನ ಮನಸ್ಸು ಕಾಮನಾ ಸಕ್ತವಾಗಿರುವುದರಿಂದಲೂ, ಮೇಲು ಮೇಲಿನ ಸುಖಗಳನ್ನು ಆಶಿಸುತ್ತಾ ಅದನ್ನು ಪಡೆದಿರುವವರ ವಿಷಯದಲ್ಲಿ ಅಸೂಯೆ ಪಡು ವುದು, ತನ್ನ ಪ್ರಯತ್ನವು ಸಫಲವಾಗುವವರೆಗೆ ಅಸೂಯೆಯಿಂದ ದುಃಖ ಪಡುತ್ತಿರುವುದು ಒಂದು ದೋಷವಾಗಿದೆ. ಹೀಗೆ ಕಾಮ್ಯ

ಕರ್ಮಾಚರಣೆಯಿಂದ ಪಡೆಯಬಹುದಾದ ಸುಖಗಳೆಲ್ಲವೂ ತ್ರಿದೋಷ ದುಷ್ಟಗಳೆಂದು ಮನಗಂಡ ಮೇಲೆ ಅಂತಹ ಕಾಮ್ಯಕರ್ಮದಲ್ಲಿ ಅಥವಾ ಪ್ರವೃತ್ತಿಧರ್ಮದಲ್ಲಿ ಆಸಕ್ತಿಯನ್ನು ಬಿಡುವುದು ಒಳ್ಳೆಯದೆಂದು ವಿಚಾರಶೀಲನಾದ ವಿವೇಕಿಗೆ ತೋರುವುದು ಅನಿವಾರ್ಯವಾಗುತ್ತದೆ.

> ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ ತೌ ಸಂಪರೀತ್ಯ ವಿವಿನಕ್ತಿಧೀರಃ।
> ಶ್ರೇಯೋಹಿ ಧೀರೋಽಭಿಪ್ರೇಯಸೋ ವೃಣೀತೆ ಪ್ರೇಯೋ ಮಂದೋ
> ಯೋಗಕ್ಷೇಮಾದ್ವೃಣೀತ ॥

ಶ್ರೇಯಸ್ಸು ಎಂದರೆ ನಿತ್ಯ ನಿರ್ದುಷ್ಟ ನಿರತಿಶಯ ಸುಖ. ಪ್ರೇಯಸ್ಸು ಎಂದರೆ ತಾತ್ಕಾಲಿಕವಾದ ಅನಿತ್ಯ ಸುಖ. ಈ ಶ್ರೇಯಸ್ಸೂ ಪ್ರೇಯಸ್ಸೂ ಮನುಷ್ಯನ ಬಳಿಗೆ ಎಂದರೆ ಗಮನಕ್ಕೆ ಬರುವುವು. ಅವನು ಅವುಗಳನ್ನು ಚನ್ನಾಗಿ ಒಳಹೊಕ್ಕು ಪರಿಶೀಲಿಸಿ ಧೀರನಾದವನು ವಿವೇಚನೆಮಾಡಿಕೊಳ್ಳುತ್ತಾನೆ. ಧೀರನಾದವನು ಪ್ರೇಯಸ್ಸನ್ನು ಬಿಟ್ಟು ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಮೂಢನಾದ ಮಂದಾಧಿಕಾರಿಯು ಯೋಗಕ್ಷೇಮಕ್ಕೆಂದು ತಾತ್ಕಾಲಿಕ ಸುಖಕ್ಕೆಂದು ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.

ಆಗ ಇದಕ್ಕೆ ವಿರುದ್ಧವಾದ ಎಂದರೆ ನಿತ್ಯವಾದ, ದುಃಖದೋಷ ಮಿಶ್ರವಲ್ಲದ, ನಿರತಿಶಯ ಸುಖವಿದೆಯೋ ? ಅದು ಯಾವುದು ? ಅದನ್ನು ಪಡೆಯುವುದು ಏತರಿಂದ ? ಎಂದು ಜಿಜ್ಞಾಸೆಯುಂಟಾಗುತ್ತದೆ. ಆತ್ಮಸುಖ ಅಥವಾ ಬ್ರಹ್ಮಾನಂದವೇ ನಿತ್ಯವೂ ನಿರ್ದುಷ್ಟವೂ ನಿರತಿಶಯವೂ ಆಗಿರುವ ಸುಖವಾಗಿದೆ. ಅದನ್ನು ನಿವೃತ್ತಿ ಧರ್ಮದಿಂದ ಅಥವಾ ನಿಷ್ಕಾಮಕರ್ಮಯೋಗದಿಂದ ಪಡೆಯಬಹುದೆಂದು ಉಪನಿಷತ್ತುಗಳು ಬೋಧಿಸುತ್ತವೆ.

**ಪ್ರವೃತ್ತಿ ನಿವೃತ್ತಿ ಧರ್ಮಗಳಲ್ಲಿ ಯಾವುದು ಮೇಲು ? ಏಕೆ ?**

ಈ ಪ್ರವೃತ್ತಿ ನಿವೃತ್ತಿ ಧರ್ಮಗಳಲ್ಲಿ ಯಾವುದು ನಮಗೆ ಒಪ್ಪಿಬರುತ್ತದೋ, ಯಾವುದನ್ನು ಆಚರಿಸಲು ನಮ್ಮ ಮನಸ್ಸಿಗೆ ಒಲಿದುಬರುತ್ತದೋ ಅದನ್ನು ಆಚರಿಸುತ್ತಿರಬೇಕು. ಕ್ರಮವಾಗಿ ಪ್ರವೃತ್ತಿ ಧರ್ಮದಿಂದ ದೊರೆಯುವ ಫಲಗಳಲ್ಲಿ ಅನಿ

ವಾರ್ಯವಾಗಿರುವ ಮೂರು ದೋಷಗಳನ್ನು ಭಾವಿಸುತ್ತಾ ನಿವೃತ್ತಿ ಧರ್ಮದಲ್ಲೂ, ಶ್ರೇಯಸ್ಸಾಧನೆಯಲ್ಲೂ ನಮ್ಮ ಮನಸ್ಸು ಆಸಕ್ತವಾಗುವಂತೆ ಮಾಡಿಕೊಳ್ಳಬೇಕು. ಗೃಹಸ್ಥರಾಗಿರುವ ನಾವೆಲ್ಲರೂ ಸಾಮಾನ್ಯವಾಗಿ ಪ್ರವೃತ್ತಿ ಧರ್ಮದಲ್ಲಿ ಆಸಕ್ತರಾಗಿರುತ್ತೇವೆ. ಕ್ರಮವಾಗಿ ತಿಳಿವಳಿಕೆಯು ಹೆಚ್ಚಿದ ಹಾಗೆಲ್ಲಾ ವಿಚಾರ ಸತ್ಸಹವಾಸಗಳಿಂದ ನಿವೃತ್ತಿ ಧರ್ಮದ ಸ್ವರೂಪ ವಿವರವನ್ನೂ ಅದರಿಂದ ತಿಳಿಯುತ್ತಾ ಶ್ರೇಯಸ್ಸಿನ ಸ್ವರೂಪವನ್ನೂ ತಿಳಿದು ನಮ್ಮ ಮನಸ್ಸನ್ನು ನಿವೃತ್ತಿ ಧರ್ಮದಲ್ಲಿ ಆಸಕ್ತವಾಗುವ ಹಾಗೆ ಮಾಡಿಕೊಳ್ಳಬೇಕು.

ಮಾನವನು ಗೃಹಸ್ಥನಾಗಿರುವಾಗಲೂ ನಿವೃತ್ತಿ ಧರ್ಮನಿಷ್ಠನಾಗಿರಲು ಅಡ್ಡಿ ಇಲ್ಲವು.

ಗೃಹಸ್ಥರಾಗಿದ್ದರೂ ನಿವೃತ್ತಿ ಧರ್ಮದಲ್ಲಿ ಆಸಕ್ತರಾಗಿರುವುದು ಸಾಧ್ಯವು. ಇದಕ್ಕೆ ಉದಾಹರಣೆಗಳನ್ನು ಉಪನಿಷತ್ತಿನಲ್ಲಿ ಬೃಹದಾರಣ್ಯಕದಲ್ಲಿ ತಿಳಿಸಿರುತ್ತದೆ. ಗೃಹಸ್ಥಾಶ್ರಮದಲ್ಲಿದ್ದರೂ ಯಾಜ್ಞವಲ್ಕ್ಯನೂ, ರಾಜ್ಯವಾಳುತ್ತಿದ್ದರೂ ಜನಕ ಮಹಾರಾಜನೂ ನಿವೃತ್ತಿ ಧರ್ಮನಿಷ್ಠರಾದ ಜ್ಞಾನಿಗಳೂ ಆಗಿದ್ದರು. ಹಾಗೆಯೇ ಕಠೋಪನಿಷತ್ತಿನಲ್ಲಿ ವರ್ಣಿತನಾಗಿರುವ ನಚಿಕೇತನೂ ನಿವೃತ್ತಿ ಧರ್ಮನಿಷ್ಠನು.

ಯಾಜ್ಞವಲ್ಕ್ಯ ಮೈತ್ರೇಯೀಸಂವಾದ.

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಈ ಅಂಶವನ್ನು ಯಾಜ್ಞವಲ್ಕ್ಯ ಮೈತ್ರೇಯೀ ಇವರ ಸಂವಾದದಲ್ಲೂ ಮನಗಾಣಬಹುದು. ಯಾಜ್ಞವಲ್ಕ್ಯನಿಗೆ ಮೈತ್ರೇಯೀ ಕಾತ್ಯಾಯನೀ ಎಂದು ಇಬ್ಬರು ಹೆಂಡತಿಯರಿದ್ದರು. ಈ ಈರ್ವರಲ್ಲಿ ಕಾತ್ಯಾಯನಿಯು ಗೃಹಸ್ಥ ಧರ್ಮದಲ್ಲಿ ನಿರತಳಾಗಿ ಪತಿಶುಶ್ರೂಷೆಯಲ್ಲಿಯೇ ಆಸಕ್ತಳಾಗಿರುತ್ತಾ ಆದರ್ಶ ಗೃಹಿಣಿಯಂತಿದ್ದಳು. ಮೈತ್ರೇಯಿಯೂ ತನ್ನ ಧರ್ಮವನ್ನು ಕಾಪಾಡಿಕೊಂಡಿರುತ್ತಲೇ ವೇದಾಂತ ನಿಷ್ಣಾತನಾದ ಪತಿಯ ಸಹವಾಸದಿಂದ ಬ್ರಹ್ಮವಾದಿನಿಯೂ ಬ್ರಹ್ಮಚರ್ಯನಿರತಳೂ ಆಗಿದ್ದಳು. ಆದರೆ ಯಾಜ್ಞವಲ್ಕ್ಯ ಋಷಿಯು ಗೃಹಸ್ಥಧರ್ಮಗಳನ್ನು ನಿರ್ವಹಿಸುತ್ತಿದ್ದರೂ ಋಣ

ತ್ರಯವನ್ನು ತೀರಿಸಿ ವೇದಾಂತ ವ್ಯಾಸಂಗದಿಂದ ಶ್ರವಣ ಮನನ ನಿದಿಧ್ಯಾಸಗಳನ್ನೂ ಸಾಧಿಸುತ್ತಾ ಆತ್ಮೋನ್ನತಿಯ ಮಾರ್ಗದಲ್ಲಿ ಮುಂದುವರಿಯುತ್ತಿದ್ದನು. ಗುರು ದೇವಾನುಗ್ರಹದಿಂದ ಅವನಿಗೆ ಜ್ಞಾನ ವೈರಾಗ್ಯಗಳು ಚೆನ್ನಾಗಿಯೇ ಮೈಗೂಡಿದವು. ಹೆಂಡತಿಯು ಇರುವಾಗ ಅವಳ ಅನುಮತಿ ಇಲ್ಲದೆ ಸನ್ಯಾಸಾಶ್ರಮವನ್ನು ಸ್ವೀಕರಿಸಲು ಧರ್ಮಶಾಸ್ತ್ರದ ಪ್ರಕಾರ ಅವಕಾಶವಿಲ್ಲದಿರುವುದನ್ನು ತಿಳಿದು ಆ ಬ್ರಹ್ಮರ್ಷಿಯು ಒಂದು ದಿನ ಹೆಂಡತಿಯರನ್ನು ಸಂಬೋಧಿಸಿ ಹೀಗೆ ಹೇಳಿದನು.

"ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯಃ ಉದ್ಯಾಸ್ಯನ್ವಾ ಅರೇ ಅಹಮಸ್ಮಾತ್ ಸ್ಥಾನಾದಸ್ಮಿ. ಹಂತ ತೇ ಅನಯಾ ಕಾತ್ಯಾಯನ್ಯಾ ಅಂತಂ ಕರವಾಣಿ ಇತಿ॥" ಬೃ.ಉ. ೨.೪.೧.

"ನಿಮ್ಮ ಸಹಾಯ ಸಹಕಾರಗಳಿಂದ ನಾನು ಗೃಹಸ್ಥಾಶ್ರಮ ಧರ್ಮವನ್ನು ಸಾಕಾದಷ್ಟುಮಟ್ಟಿಗೆ ತೃಪ್ತಿಕರವಾಗಿ ನೆರವೇರಿಸಿರುವೆನು. ಜೊತೆಗೆ ವೇದಾಂತಜ್ಞಾನ ವೈರಾಗ್ಯಗಳನ್ನೂ ತಕ್ಕಷ್ಟು ಮೈಗೂಡಿಸಿಕೊಂಡಿರುತ್ತೇನೆ. ಆದುದರಿಂದ ಪರಮ ಪುರುಷಾರ್ಥ ಸಾಧನೆಯಿಂದ ಆತ್ಮೋನ್ನತಿಯನ್ನು ಪಡೆಯಲು ಗೃಹಸ್ಥಾಶ್ರಮಕ್ಕಿಂತಲೂ ಮೇಲಾದ ಸನ್ಯಾಸಾಶ್ರಮವನ್ನು ಅಂಗೀಕರಿಸುವವನಾಗಿದೇನೆ. ಇದಕ್ಕೆ ಪೂರ್ವಭಾವಿಯಾಗಿ ನಿಮ್ಮ ಮುಂದಿನ ಜೀವನದಲ್ಲಿ ತೊಂದರೆಯಾಗದೆ ಇರುವುದಕ್ಕಾಗಿ ನಾನು ಸಂಪಾದಿಸಿರುವ ಆಸ್ತಿಯನ್ನು ನಿಮ್ಮಿಬ್ಬರಲ್ಲೂ ಸಮನಾಗಿ ಹಂಚಿಕೊಡಬೇಕೆಂದಿದ್ದೇನೆ." ಈ ಮಾತನ್ನು ಕೇಳಿ ಪತಿವ್ರತೆಯೂ ಪತಿಯ ವಿಯೋಗಭೀತಳೂ ಆದ ಕಾತ್ಯಾಯನಿಗೆ ತಾನು ಏನನ್ನು ಹೇಳಬೇಕೆಂಬುದು ತಿಳಿಯದೆ ವ್ಯಾಕುಲಳಾಗಿದ್ದಳು. ಮೈತ್ರೇಯಿಯು ಬ್ರಹ್ಮವಾದಿನಿಯ ಗುಣಗಳನ್ನೂ ಸಂಪಾದಿಸಿಕೊಳ್ಳುತ್ತಿದ್ದುದರಿಂದ ಪತಿಯನ್ನು ಕುರಿತು ಹೀಗೆ ಕೇಳಿದಳು.

" ಸಾ ಹೋವಾಚ ಮೈತ್ರೇಯೀ ಯನ್ನುಮ ಇಯಂ ಭಗೋಃ ಸರ್ವಾಪೃಥಿವೀ ವಿತ್ತೇನ ಪೂರ್ಣಾ ಸ್ಯಾತ್ ಕಥಂ ತೇನಾ ಮೃತಾ ಸ್ಯಾಮಿತಿ| ನೇತಿಹೋವಾಚಯಾಜ್ಞವಲ್ಕ್ಯಃ ಯಥೈವೋಪಕರಣವತಾಂ ಜೀವಿತಂ ತಥೈವ ತೇ ಜೀವಿತಂ ಸ್ಯಾತ್ ಅಮೃತತ್ವಸ್ಯತು ನಾಶಾಸ್ತಿ ವಿತ್ತೇನ ಇತಿ." ಬೃ.ಉ. ೨.೪.೨.

" ಹೇ ಪ್ರಿಯಪತಿದೇವನೆ, ಹೆಚ್ಚಾಗಿಯೇ ಇರುವ ಈ ಆಸ್ತಿಯಿಂದ, ಅಷ್ಟೇ ಏಕೆ, ಇಡಿಯ ಪೃಥಿವಿಯೇ ನನಗೆ ಬರುವುದಾದರೂ ಅಂಥ ಆಸ್ತಿಯಿಂದ ನಾನೂ ಅಮೃತತ್ವವನ್ನೂ ಪಡೆಯಲಾಗುವುದೇ ? " ಎಂದು ಪ್ರಶ್ನಿಸಿದಳು.

ಆ ಪ್ರಶ್ನೆಗೆ ಆ ಬ್ರಹ್ಮರ್ಷಿಯು ಹೀಗೆ ಉತ್ತರವನ್ನು ಹೇಳಿದನು.

ಐಹಿಕಾಮುಷ್ಮಿಕ ಸುಖಗಳು ಪರಮ ಪುರುಷಾರ್ಥವಲ್ಲವು.

" ಪ್ರಿಯೆ ಮೈತ್ರೇಯಿಯೇ, ಆಸ್ತಿಯಿಂದಲೂ ಐಶ್ವರ್ಯದಿಂದಲೂ ಐಹಿಕ ಜೀವನವನ್ನು ಸುಖ ಸೌಕರ್ಯಗಳಿಂದ ಪೂರ್ಣವಾಗಿರುವಂತೆ ಮಾಡಿಕೊಳ್ಳಬಹುದೇ ಹೊರತು, ಅಮೃತತ್ವವನ್ನೂ ಎಂದರೆ, ಸಂಸಾರ ನಿರ್ಬಂಧ ದುಃಖದಿಂದ ಬಿಡುಗಡೆ ಎಂಬ ಮೋಕ್ಷವನ್ನೂ ಸಾಧಿಸಿಕೊಳ್ಳುವ ಆಶೆಯೂ ಇರುವುದು ಸಾಧ್ಯವಿಲ್ಲ" ಎಂದನು. ಅದನ್ನು ಕೇಳಿ ಮೈತ್ರೇಯಿಯು " ಈ ಐಹಿಕ ಸುಖಜೀವನಕ್ಕಿಂತಲೂ ಮಿಗಿಲಾದ ಆತ್ಮೋನ್ನತಿಯನ್ನು ಪಡೆಯುವುದಕ್ಕೆಂದಲ್ಲವೇ ನೀವು ಅಲ್ಪತರವಾದ ಈ ಆಸ್ತಿಯನ್ನು ನಮಗೆ ಕೊಟ್ಟುಬಿಟ್ಟು, ಮೇಲ್ಮೆಯನ್ನು ಪಡೆಯಲು ಹೋಗಬೇಕೆಂದಿರುವುದು ?" ಎಂದು ಪ್ರಶ್ನಿಸಿದಳು. ಅದಕ್ಕೆ ಪತಿಯು " ಹೌದು " ಎಂದು ಉತ್ತರಿಸಿದನು. ಆಗ ಮೈತ್ರೇಯಿಯು "ಸಾಹೋವಾಚ ಮೈತ್ರೇಯೀ ಯೇನಾಹಂ ನಾಮೃತಾಸ್ಯಾಂ ಕಿಮಹಂತೇನ ಕುರ್ಯಾಂ ಯದೇವ ಭಗವಾನ್‌ವೇದ ತದೇವ ಮೇ ಬ್ರೂಹೀತಿ." ಬೃ.ಉ. ೨.೪.೩.

" ಹಾಗಾದರೆ ನಾನು ಯಾವ ಈ ಆಸ್ತಿಯಿಂದ ಅಮೃತತ್ವವನ್ನು ಪಡೆಯಲಾಗುವುದಿಲ್ಲವೋ ಅಂಥ ಐಶ್ವರ್ಯದಿಂದ ನನಗೂ

ಏನೂ ಯಾವ ಪ್ರಯೋಜನವೂ ಆಗಬೇಕಾದುದಿಲ್ಲವು. ಯಾವ ಧರ್ಮ ಮಾರ್ಗದಿಂದ ಅಮೃತತ್ವವನ್ನು ಪಡೆಯಲಾಗುತ್ತದೆಂದು ನೀವು ತಿಳಿದು ಇರುವಿರೋ, ಓ ಭಗವನ್ ಪತಿದೇವನೇ, ಆ ಧರ್ಮಮಾರ್ಗ ವನ್ನೇ ನನಗೂ ತಿಳಿಯ ಹೇಳಿ ಅನುಗ್ರಹಿಸಬೇಕು" ಎಂದು ಪ್ರಾರ್ಥಿ ಸಿದಳು. ಗೃಹಿಣೀ ಧರ್ಮವನ್ನು ಆದರ್ಶಸತಿಯಂತೆ ನೆರವೇರಿಸಿ ಪ್ರಿಯಳಾಗಿದ್ದ ಆಕೆಯು ಆದಕ್ಕಿಂತ ಮೇಲಾದ ಸನ್ಯಾಸಾಶ್ರಮ ಧರ್ಮವನ್ನೂ ನೆರವೇರಿಸುವುದರಲ್ಲಿ ತಕ್ಕ ಅರ್ಹತೆಯೂ ಧರ್ಮ ನಿಷ್ಠೆಯೂ ಉಳ್ಳವಳಾಗಿದ್ದಳು. ಅದನ್ನು ಮನಗಂಡ ಆ ಬ್ರಹ್ಮರ್ಷಿಗೆ ಸಂತೋಷವಾಯಿತು. ಅವನು ಆಕೆಯನ್ನು ಕುರಿತು "ಸಹೋವಾಚ ಯಾಜ್ಞವಲ್ಕ್ಯಃ ಪ್ರಿಯಾ ಬತಾರೇನಃ ಸತೀ ಪ್ರಿಯಂಭಾಷಸೇ ಏಹಿ ಆಸ್ವ ವ್ಯಾಚಕ್ಷಾಣಸ್ಯಮೇ ನಿದಿಧ್ಯಾಸಸ್ವೇತಿ." ಬೃ. ಉ. ೨.೪.೪.

"ಆದರ್ಶ ಸತಿಯಂತೆ ಗೃಹಸ್ಥಾಶ್ರಮ ಧರ್ಮವನ್ನು ನೆರ ವೇರಿಸಿದ ನೀನು ಪ್ರಿಯಳೇ ಆಗಿದ್ದೆ. ಈಗ ಇನ್ನೂ ಮೇಲಿನ ಸನ್ಯಾಸಾಶ್ರಮ ಧರ್ಮವನ್ನೂ ನೆರವೇರಿಸುವ ಯೋಗ್ಯತೆಯನ್ನೂ, ಮನೋದಾರ್ಢ್ಯವನ್ನೂ ಪಡೆದಿರುವ ನೀನು ಪ್ರಿಯತರಳ ಹಾಗೆ ಮಾತನಾಡುತ್ತಿರುವೆ. ಬಾ, ಸಮೀಪದಲ್ಲಿ ಕುಳಿತುಕೋ. ಅಮೃತತ್ವಕ್ಕೆ ಸಹಾಯಕರವಾದ ಧರ್ಮವನ್ನೂ ತಿಳಿಯ ಹೇಳುತ್ತೇನೆ ಉಪನಿಷತ್ತಿನಲ್ಲಿ ತಿಳಿಸಿರುವ ಈ ಧರ್ಮದ ಉಪದೇಶವನ್ನು ನನ್ನಿಂದ ಶ್ರವಣ ಮಾಡು, ಆಮೇಲೆ ಅದನ್ನು ಮನನ ನಿದಿಧ್ಯಾಸನ ಕ್ರಮ ದಿಂದ ಮೈಗೂಡಿಸಿಕೊಳ್ಳುವವಳಾಗು" ಎಂದು ಉಪದೇಶವನ್ನು ಮಾಡಿದನು. ಅಮೃತತ್ವವೆಂದರೆ ಸಾವಿಲ್ಲದ ಸಚ್ಚಿದಾನಂದ ಸ್ಥಿತಿಯು.

ಆತ್ಮನೇ, ಪರಮ ಪ್ರೇಮಾಸ್ಪದನು.

ಆಗ ಮೈತ್ರೇಯಿಯು, ಸದ್ಗುರುವಿನ ಸಮೀಪದಲ್ಲಿ ವೇದಾಂತ ರಹಸ್ಯೋಪದೇಶಕ್ಕೆ ತಕ್ಕ ಅರ್ಹತೆಯನ್ನು ಪಡೆದಿರುವ ಶಿಷ್ಯನು ವಿನಯಭಕ್ತಿಗಳಿಂದ ಕೂಡಿ ಕೂತುಕೊಳ್ಳುವಂತೆ, ಯಾಜ್ಞವಲ್ಕ್ಯನ ಸಮೀಪದಲ್ಲಿ ಕೆಳಗೆ ಕುಳಿತಳು.

" ಸಹೋವಾಚ ನವಾಅರೇ ಪತ್ಯುಃಕಾಮಾಯ ಪತಿಃ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ ನವಾ ಅರೆಜಾಯಾಯ್ಕೆ ಕಾಮಾಯ ಜಾಯಾಪ್ರಿಯಾ ಭವತಿ ಆತ್ಮನಸ್ತು ಕಾಮಾಯ ಜಾಯಾಪ್ರಿಯಾ ಭವತಿ. ನವಾಅರೆ ಪುತ್ರಾಣಾಂಕಾಮಾಯ........ ನವಾ ಅರೆ ವಿತ್ತಸ್ಯ ಕಾಮಾಯ ,, ಬ್ರಹ್ಮಣ ಸ್ತು ಕಾಮಾಯ........ ಕ್ಷತ್ರಸ್ಯ ಕಾಮಾಯ..... ......ಲೋಕಾನಾಂ ಕಾಮಾಯ ........ ದೇವಾನಾಂ ಕಾಮಾಯ...........ಭೂತಾನಾಂ ಕಾಮಾಯ........ ನವಾ ಅರೆಸರ್ವಸ್ಯ ಕಾಮಾಯ ಸರ್ವಂ ಪ್ರಿಯಂಭವತಿ ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂಭವತಿ. ಆತ್ಮಾವಾ ಅರೇದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ ಮೈತ್ರೇಯಿ ಆತ್ಮನೋವಾ ಅರೇ ದರ್ಶನೇನ, ಶ್ರವಣೇನ ಮತ್ಯಾ ವಿಜ್ಞಾನೇನ ಇದಂ ಸರ್ವಂ ವಿದಿತಂ." ಬೃ.ಉ. ೨.೪.೫.

ಆಗ ಅವನು ಅವಳನ್ನು ಕುರಿತು ಹೀಗೆ ಕೇಳಿದನು. " ಓ ಮೈತ್ರೇಯಿಯೇ, ಸತಿಗೆ ಪತಿಯು ಪ್ರೀತಿಪಾತ್ರನಾಗಿರುವನಲ್ಲ, ಅದು ಏತಕ್ಕೆಂದು ವಿಮರ್ಶಿಸಿ ತಿಳಿದಿರುವೆಯಾ? ಹಾಗೆಯೇ ಪತಿಗೆ ಸತಿಯು ಪ್ರೇಮಪಾತ್ರಳಾಗಿರುವಳಲ್ಲ, ಅದು ಏತಕ್ಕೆಂದೂ ವಿಚಾರ ಮಾಡಿ ಪರಿಶೀಲಿಸಿರುವೆಯಾ? ಗಂಡನು ಹೆಂಡತಿಯನ್ನು ಪ್ರೀತಿಸುವುದು ತಾನು ಅವಳನ್ನು ಭೋಗಿಸಿ ಸುಖ ಪಡುತ್ತೇನೆಂಬ ಕಾರಣದಿಂದ ಅಲ್ಲವು, ಅವಳು ತನಗೆ ಭೋಗವನ್ನು ಕೊಟ್ಟು ಸುಖಪಡಿಸುತ್ತಾಳೆಂಬ ಕಾರಣದಿಂದಲೂ ಅಲ್ಲವು, ಹಾಗೆಯೇ ಅವರಿಬ್ಬರಲ್ಲಿಯೂ ಪರಸ್ಪರವಾಗಿರುವ ಕಾಮದ ಸಂತೃಪ್ತಿಯಾಗುವುದೆಂಬ ಕಾರಣದಿಂದಲೂ ಅಲ್ಲವು. ಮತ್ತೇನೆಂದರೆ ಪತ್ನಿಯ ದೇಹದಲ್ಲಿಯೂ ತನ್ನ ದೇಹದಲ್ಲಿರುವಂತೆ ಸಚ್ಚಿದಾನಂದ ರೂಪನಾದ ಆತ್ಮನು ಇರುವನು. ತನ್ನ ಆತ್ಮನು ತನಗೆ ಹೇಗೆ ಪರಮಪ್ರೇಮಾಸ್ಪದನೋ ಹಾಗೆಯೇ ಪತ್ನಿಯಲ್ಲಿರುವ ಆತ್ಮನೂ ಸಚ್ಚಿದಾನಂದ ರೂಪನಾದ ಆತ್ಮನಾಗಿರುವ ಕಾರಣದಿಂದ ಪರಮ ಪ್ರೀತಿಪಾತ್ರನಾಗಿರುತ್ತಾನೆಂಬ ಕಾರಣ

ದಿಂದ ಪ್ರೀತಿಸುತ್ತಾನೆ. ಅಲ್ಲದೆ ಎರಡೂ ಆತ್ಮಗಳೂ ಒಂದೇ ಪರಮಾತ್ಮನ ಅಂಶಗಳು ಎಂಬ ಕಾರಣದಿಂದ, ಅಷ್ಟೇ ಅಲ್ಲದೆ, ಆ ಎರಡು ಆತ್ಮಗಳೂ ಭಿನ್ನವಲ್ಲವು, ಸದೃಶವೂ ಅಲ್ಲವು, ಮತ್ತೇನೆಂದರೆ ಕೂಟಸ್ಥ ಆತ್ಮನಮೂಲಕ ಅವೆರಡೂ ಒಂದೇ ಪರಮಾತ್ಮನಾಗಿರುವ ಕಾರಣದಿಂದ, ಆತ್ಮವಸ್ತುವಿನ ಪ್ರೇಮವೇ ಎಲ್ಲಾ ಪ್ರೇಮಭಾವಗಳಿಗೂ ಬೀಜವಾಗಿರುವುದೆಂಬ ಕಾರಣದಿಂದಲೇ ಗಂಡನು ಹೆಂಡತಿಯನ್ನೂ, ಹೆಂಡತಿಯು ಗಂಡನನ್ನೂ, ತಂದೆ ತಾಯಿಯರೂ ಮಕ್ಕಳನ್ನೂ, ಶ್ರೀಮಂತನು ತನ್ನ ಪ್ರೇಮಕ್ಕೆ ಪಾತ್ರವಾಗಿರುವ ಐಶ್ವರ್ಯವನ್ನೂ, ಬ್ರಾಹ್ಮಣನು ತನಗೆ ಪ್ರೀತಿಪಾತ್ರವಾದ ಬ್ರಾಹ್ಮಣತ್ವವನ್ನೂ, ಕ್ಷತ್ರಿಯನು ತನ್ನ ಪ್ರೇಮಾಸ್ಪದವಾಗಿರುವುದರಿಂದ ಕ್ಷತ್ರಿಯತ್ವವನ್ನೂ, ಮಾನವನು ಲೋಕಾದಿಗಳೂ ತನಗೆ ಪ್ರೀತಿಪಾತ್ರವಾಗಿರುವುದರಿಂದ ಅವನ್ನೂ, ಮನುಷ್ಯನು ದೇವತೆಗಳನ್ನು ತನ್ನ ಪ್ರೀತ್ಯಾಸ್ಪದರಾಗಿರುವುದರಿಂದ ಅವರನ್ನೂ, ಮಾನವನು ತನ್ನ ಪ್ರೇಮಾಸ್ಪದಗಳಾಗಿರುವುದರಿಂದ ಭೂತ ಮಾತ್ರಗಳನ್ನೂ, ಮನುಷ್ಯನು ಈ ಜಗತ್ತಿನಲ್ಲಿರುವ ಎಲ್ಲವನ್ನೂ ತನಗೆ ಪ್ರೀತಿಪಾತ್ರವಾಗಿರುವುದರಿಂದ ಎಲ್ಲವನ್ನೂ ಪ್ರೀತಿಸುತ್ತಾನೆಯೇ ಹೊರತು ಅವುಗಳಿಗಾಗಿ ಅಲ್ಲವು. ಯಾವ ಆತ್ಮನ ಪ್ರೀತಿಯ ಮೂಲಕ ಇವೆಲ್ಲವೂ ಪ್ರಿಯವಾಗುವವೋ ಆ ಆತ್ಮನ ವಾಸ್ತವ ಸ್ವರೂಪದ ದರ್ಶನವನ್ನು, ಅಪರೋಕ್ಷಾನುಭವವನ್ನು ಪಡೆಯಬೇಕು. ಓ ಮೈತ್ರೇಯಿಯೇ ಆ ಈ ಆತ್ಮನಿಂದಲೇ ಎಲ್ಲವೂ ಪ್ರೀತಿಪಾತ್ರವಾಗುತ್ತದೆ. ಇಂಥ ಆತ್ಮನ ವಾಸ್ತವ ಸ್ವರೂಪದ ಅಪರೋಕ್ಷಾನುಭವದಿಂದ ಇದೆಲ್ಲವನ್ನೂ ತಿಳಿಯಬಹುದು. ಇವೆಲ್ಲವೂ ಆತ್ಮನಿಂದಲೇ ಉಂಟಾದುವಾದುದರಿಂದ ಮೂಲಕಾರಣವನ್ನು ತಿಳಿದರೆ ಕಾರ್ಯಗಳನ್ನೆಲ್ಲವನ್ನೂ ತಿಳಿದಂತಾಗುವುದು ಎಂದು ತಾತ್ಪರ್ಯವು. ಆದುದರಿಂದ ಈ ಆತ್ಮಜ್ಞಾನದಿಂದ ಮಾನವನು ಅಮೃತತ್ವವನ್ನು ಪಡೆಯುತ್ತಾನೆ.'' ಎಂದು ಉಪದೇಶವನ್ನು ಮಾಡಿದನು. ಮೈತ್ರೇಯಿಯೂ ಆತ್ಮಜ್ಞಾನದಿಂದುಂಟಾಗುವ ಶಾಂತಿಯನ್ನು ಅನುಭವ ಮಾಡಿ

ಕೊಂಡಳು. "ಅನನ್ಯ ಪ್ರೋಕ್ತೇ ಅ ಗತಿರತ್ರ ನಾಸ್ತಿ" ಎಂದರೆ, ಅನುಭವಿಯಾಗಿರುವ ಗುರುವು ಉಪದೇಶಿಸಿದರೆ ಕೇಳುತ್ತಿರುವವರಿಗೆ ತಿಳಿಯದೆ ಹೋಗುವುದಿಲ್ಲವು. ತಿಳಿದೇ ತಿಳಿಯುತ್ತದೆ ಎಂದು ತಾತ್ಪರ್ಯವು.

ಹಿಂದಿನ ಕಾಲದ ವಿದ್ಯಾಭ್ಯಾಸ ಕ್ರಮ.

ಬ್ರಹ್ಮಚಾರಿಯು ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಕೊಂಡಮೇಲೆ ಗೃಹಸ್ಥಾಶ್ರಮದ ಧರ್ಮಗಳನ್ನು ಆಚರಿಸುವುದು ವಾಡಿಕೆಯಾಗಿತ್ತು. ಆ ವೈದಿಕ ಕಾಲದಲ್ಲಿ ಗುರುಕುಲಗಳಲ್ಲಿ ಅನೇಕ ವಿದ್ಯಾರ್ಥಿಗಳಿರುತ್ತಿದ್ದರು. ಮೊದಲು ಬಂದು ಸೇರಿ ಮುಂದುವರಿದಿದ್ದ ವಿದ್ಯಾರ್ಥಿಗಳು ಹೊಸದಾಗಿ ಬಂದು ಸೇರಿದ ವಿದ್ಯಾರ್ಥಿಗಳಿಗೆ ಪ್ರವಚನವನ್ನೂ ಮಾಡಿಸುತ್ತಿದ್ದರು. ಇದರಿಂದ ಗುರುಗಳು ಪ್ರೌಢಪಾಠ ಪ್ರವಚನಗಳಿಗೆ ಹೆಚ್ಚು ಕಾಲ ಪ್ರಯತ್ನಗಳನ್ನು ವಿನಿಯೋಗಿಸಲು ಬಿಡುವಾಗುವುದರಿಂದ ಅನುಕೂಲವಾಗುತ್ತಿತ್ತು. ಅಲ್ಲದೆ, ಶಿಷ್ಯರಲ್ಲಿ ಪ್ರವಚನ ಸಾಮರ್ಥ್ಯವೂ ಗುರುಗಳ ನೇತೃತ್ವದಲ್ಲಿ ಬೇರೂರಿ ಬಲಗೊಳ್ಳುತ್ತಿತ್ತು. ಹೀಗೆ ಗುರುಕುಲ ವಾಸದಲ್ಲಿ ದೊರೆಯುವ ವಿದ್ಯಾಭ್ಯಾಸ ಕ್ರಮದಲ್ಲಿ ಪಾಠ ಮತ್ತು ಪ್ರವಚನ ಇವೆರಡರಲ್ಲೂ ಶಿಕ್ಷಣವು ದೊರೆಯುತ್ತಿದ್ದುದು ಗಮನಾರ್ಹವಾಗಿದೆ. ಪರೀಕ್ಷೆಗಳಿಂದ ಶಿಷ್ಯರ ತಿಳಿವಳಿಕೆಯ ಮಟ್ಟವನ್ನು ತಿಳಿಯಲಾಗುತ್ತದೆ ಎನ್ನುತ್ತಾರೆ. ಈಗಿನ ಪರೀಕ್ಷಾ ಕ್ರಮಗಳಲ್ಲಿ ಕಾಣಬರುವ ಅನ್ಯಾಯ ಪ್ರವೃತ್ತಿ, ಪಕ್ಷಪಾತ, ಗೂಢಾಪಕಾರ, ಆಶಾಭಂಗ, ಮುಷ್ಕರಗಳು, ಆತ್ಮಹತ್ಯೆಗಳು ಇವೇ ಮುಂತಾದ ಲೋಪದೋಷಗಳು ಗುರುಕುಲ ವಿದ್ಯಾಭ್ಯಾಸ ಕ್ರಮದಲ್ಲಿ ಇರಲಿಲ್ಲವೆಂದು ಹೇಳಿದರೆ ಅಸತ್ಯವೂ ಅತಿಶಯೋಕ್ತಿಯೂ ಇಲ್ಲವು. ಗುರುಗಳೂ, ಶಿಷ್ಯರೂ ಒಂದೇ ಕಡೆಯಲ್ಲಿರುತ್ತಿದ್ದುದರಿಂದ ಶಿಷ್ಯರ ವೃತ್ತಾಂತಾವೇಕ್ಷಣವೂ, ಗುರು ಶುಶ್ರೂಷೆಯಿಂದ ಪರೋಪಕಾರ ಸ್ವಭಾವದ ಬೆಳವಳಿಗೆಯೂ, ಶಿಸ್ತಿನ ಸಂರಕ್ಷಣೆಯ ಸ್ವಭಾವವೂ ತೃಪ್ತಿಕರವಾಗಿ ಮುಂದುವರಿಯುತ್ತಾ ಆ

ಗುರುಕುಲಗಳು Residential Universities ವಿಶ್ವವಿದ್ಯಾಲಯು ಗಳಹಾಗೆ ಜನೋಪಕಾರಿಯಾಗಿದ್ದುವು. ವಿದ್ಯಾಭ್ಯಾಸವು ತುಂಬ ವ್ಯಯು ಸಾಧ್ಯವಾಗಿರದೆ ಎಲ್ಲರೂ ವಿದ್ಯಾರ್ಜನೆಮಾಡಲು ಅವಕಾಶವಿತ್ತು. ವೆಚ್ಚದ ಆವಶ್ಯಕತೆಯೇ ಇಲ್ಲದೆ ವಿದ್ಯಾರ್ಜನವು ಸಾಗುತ್ತಿತ್ತು. ನಳಂದ, ತಕ್ಷಶಿಲಾ ಮುಂತಾದ ವಿಶ್ವವಿದ್ಯಾನಿಲಯುಗಳಲ್ಲಿ ಸಾವಿರ ಗಟ್ಟಲೆಯಲ್ಲಿ ಶಿಷ್ಯರು ವಿದ್ಯಾವಂತರಾಗುತ್ತಿದ್ದರು. ಹತ್ತುಸಾವಿರ ವಿದ್ಯಾರ್ಥಿಗಳಿಗೆ ಅಶನ ವಿದ್ಯಾದಾನಗಳನ್ನು ಮಾಡುವ ಏರ್ಪಾಡನ್ನು ವ್ಯವಸ್ಥೆಯಿಂದ ನಡೆಸುತ್ತಿದ್ದ ಗುರುಗಳಿಗೆ ಕುಲಪತಿ ಎಂಬ ಬಿರುದೂ ಇತ್ತೆಂಬುದೂ ಚರಿತ್ರೆಗಳಿಂದ ಗೊತ್ತಾಗುತ್ತದೆ. ಅಲ್ಲದೆ ಈಗಿನಂತೆ ಕ್ಯಾಂಟೀನ್‌ಗಳೂ, ನಾಟಕಗಳೂ, ಸಿನಿಮಾಗಳೂ, ವಿದ್ಯಾರ್ಥಿಗಳ ಗಮನವನ್ನು ಆಕರ್ಷಿಸಿ ಹಂಚಿಹೋಗುವಂತೆಮಾಡುವ ಸನ್ನಿವೇಶಗ ಳಿರಲಿಲ್ಲ. ಅಲ್ಲದೆ ಈಗ ಅನೇಕ ಕಡೆಗಳಲ್ಲಿ ಶಿಷ್ಯರು ವಿದ್ಯಾಭ್ಯಾಸದಲ್ಲಿ ತೋರಬೇಕಾದ ಆದರಕ್ಕಿಂತಲೂ ಹೆಚ್ಚಾಗಿ ಈ ವಿಲಾಸಗಳಲ್ಲಿ ತೋರು ವಂತಾಗಿರುವುದನ್ನೂ ಗಮನಿಸದೆ ಇರಲು ಸಾಧ್ಯವಿಲ್ಲ. ಈ ವಿದ್ಯಾ ಭ್ಯಾಸ ಕ್ರಮದಲ್ಲಿ ಈ ಲೋಪದೋಷಗಳಿವೆ ಎಂಬ ಅಂಶವನ್ನು ಉಪಾಧ್ಯಾಯರೂ ಮತ್ತು ಶಾಲಾಧ್ಯಕ್ಷರೂ, ಇಲಾಖಾ ಮುಖ್ಯಾಧಿ ಕಾರಿಗಳೂ, ಸಂಬಂಧಪಟ್ಟ ಸಚಿವರೂ, ಇತರ ವಿದ್ವಾಂಸರೂ ಸ್ಪಷ್ಟ ವಾಗಿ ಪ್ರಕಟವಾಗಿ ತಮ್ಮ ಭಾಷಣಗಳಲ್ಲೂ ವರದಿಗಳಲ್ಲೂ ಸಾರಿ ಹೇಳುತ್ತಿರುವುದನ್ನು ಗಮನಿಸದಿರಲು ಅಸಾಧ್ಯವಾಗಿದೆ. ಈಗಿನ ವಿದ್ಯಾಭ್ಯಾಸ ಕ್ರಮದಲ್ಲಿನ ಎಲ್ಲ ವಿಷಯುಗಳಲ್ಲೂ ಹಿಂದಿನ ಗುರುಕುಲ ಪದ್ಧತಿಯನ್ನು ಅನುಸರಿಸುವುದು ಅಸಾಧ್ಯವೆಂದು ತೋರಬಹುದು, ಅದರಲ್ಲೂ ವಿಶೇಷವಾಗಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಶಿಲ್ಪ Engineering ಶಾಸ್ತ್ರ, ವೈದ್ಯ Medical ಶಾಸ್ತ್ರ, ಮುಂತಾದು ವಲ್ಲಿ ಪ್ರಯೋಗಪ್ರಧಾನವಾದ ವಿಷಯುಗಳಲ್ಲಿ ಹಾಗೆ ತೋರಬಹುದು. ಆದರೆ ಕುಶಲಕಲೆ Fine Arts, ಭಾಷಾಶಾಸ್ತ್ರ, ಅರ್ಥಶಾಸ್ತ್ರ, ಸಂಸ್ಕೃತ, ಧರ್ಮಶಾಸ್ತ್ರ, ವಾಣಿಜ್ಯಶಾಸ್ತ್ರ Commerce,

ಗಣಿತಶಾಸ್ತ್ರ Mathematics, ಸಾಹಿತ್ಯಶಾಸ್ತ್ರ Literature, ಚರಿತ್ರೆಶಾಸ್ತ್ರ History, ಮುಂತಾದ ಭಾಗಗಳಲ್ಲಿ ಗುರುಕುಲ ಪದ್ಧತಿಯನ್ನು ತಕ್ಕ ಸುಧಾರಣೆಗಳೊಡನೆ ಉಜ್ಜೀವನಗೊಳಿಸುವುದು ಸಾಧ್ಯವಲ್ಲವೇ ? ಎಂಬ ಅಂಶವು ಪರಿಶೀಲನೆಗೆ ಅರ್ಹವಾಗಿದೆ. ಅಲ್ಲದೆ ಬ್ರಹ್ಮಚರ್ಯ ಧರ್ಮ ಮುಂತಾದ ವಿಷಯಗಳಲ್ಲಿ ಶಿಕ್ಷಣವನ್ನು ಕೊಡದೆ ಇರುವುದರಿಂದ ಆಗುತ್ತಿರುವ ಅನರ್ಥಗಳ ನಿವಾರಣೆಯ ಕ್ರಮವನ್ನೂ ಪರ್ಯಾಲೋಚಿಸುವುದು ಹೆಚ್ಚು ಆವಶ್ಯಕವಾಗಿದೆ.

ಈ ಗ್ರಂಥದ ಈ ಮೊದಲನೆಯ ಭಾಗವನ್ನು ಮುಗಿಸುವುದಕ್ಕಿಂತ ಮುಂಚೆ ಹಿಂದಿನ ಗುರುಕುಲದ ವಿದ್ಯಾಭ್ಯಾಸ ಕ್ರಮದಲ್ಲಿ ಶಿಷ್ಯನು ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮುಗಿಸಿ ಗೃಹಸ್ಥಾಶ್ರಮವನ್ನು ಪ್ರವೇಶಿಸಲು ಗುರುಕುಲವನ್ನು ಬಿಟ್ಟು ಹೋಗುವಾಗ ಗುರುಗಳು ಶಿಷ್ಯರಿಗೆ ಕೊಡುತ್ತಿದ್ದ ಉಪದೇಶದ ರೀತಿ ನೀತಿಗಳನ್ನು ಉಲ್ಲೇಖಿಸುವುದು ಯುಕ್ತತರವಾಗಿದೆ. ಉಪನಿಷತ್ತುಗಳಲ್ಲಿ ಪ್ರವೃತ್ತಿಧರ್ಮ ಮಾರ್ಗವನ್ನೂ ನಿವೃತ್ತಿಧರ್ಮ ಮಾರ್ಗವನ್ನೂ ಉಪದೇಶಿಸಲಾಗಿದೆ. ಇವೆರಡಕ್ಕೂ ವಿರೋಧವಿಲ್ಲ. ಸಮನ್ವಯವೇ ಇದೆ ಎಂಬುದು ತಾತ್ಪರ್ಯವು. ಬ್ರಹ್ಮಸಾಕ್ಷಾತ್ಕಾರವೆಂಬ ಮೋಕ್ಷರೂಪವಾದ ಪರಮ ಪುರುಷಾರ್ಥವನ್ನು ಪಡೆಯಲು ಇಹಜೀವನವು ದುಃಖ, ಹೇಯ, ತುಚ್ಛ ಎಂದು ಅಲ್ಲಗಳೆದು ಅದನ್ನೂ ಬಿಡಬೇಕೆಂದು ಎಲ್ಲಿಯೂ ಹೇಳಿಲ್ಲ. ಅರ್ಥಕಾಮಗಳನ್ನು ಧರ್ಮದಿಂದ ಪಡೆದು, ಅವನ್ನು ಧರ್ಮಕ್ಕಾಗಿಯೇ ವಿನಿಯೋಗಿಸಿದರೆ ಆ ನೀತಿಯು ಮೋಕ್ಷ ಸಂಪಾದನೆಗೆ ಸಹಾಯಕವೇ ಆಗುತ್ತದೆ. ಅರ್ಥ ಕಾಮಗಳಲ್ಲಿಯೇ ತೃಪ್ತರಾಗಿ ನಿಲ್ಲಬಾರದು. ಏಕೆಂದರೆ ಅದರಿಂದ ಸಂಸಾರ ನಿರ್ಬಂಧ ದುಃಖವು ಕೊನೆಗಾಣದೆ ಅನಂತವಾಗಿರುವಂತಾಗುತ್ತದೆ. ಆದುದರಿಂದ ವಿವೇಕಿಗಳು ಧರ್ಮದಿಂದ ಅರ್ಥಕಾಮಗಳನ್ನು ಸಂಪಾದಿಸಿ ಅವನ್ನು ಧರ್ಮಕ್ಕಾಗಿಯೇ ವಿನಿಯೋಗಿಸುತ್ತಾ ನಿಷ್ಕಾಮ ಧರ್ಮಾಚರಣೆಯಿಂದ ಚಿತ್ತಶುದ್ಧಿಯ ಮೂಲಕ ಆತ್ಮಜ್ಞಾನವನ್ನು, ಬ್ರಹ್ಮಾತ್ಮೈಕ್ಯದ ಅಪರೋಕ್ಷಾನುಭವ

ವೆಂಬ ಮೋಕ್ಷವನ್ನು ಎಲ್ಲರೂ ಪಡೆಯಬೇಕೆಂದು ಉಪದೇಶಿಸಿರುತ್ತದೆ. ಅದರಂತೆ "ನನ್ನ ಅನ್ನ ವಸ್ತ್ರವು ಹೆಚ್ಚಾಗಬೇಕು. ಆಕಳು ಹೆಚ್ಚಬೇಕು" ಎಂದು ಋಷಿಗಳು ಬೇಡುವರು. "ಪ್ರಜಾತಂತುವನ್ನು ಅಳಿಯಗೊಡ ಬೇಡ" ಎಂದು ಗುರುಗಳು ಶಿಷ್ಯರಿಗೆ ಉಪದೇಶಿಸುವರು. ಈ ವಿದ್ಯೆಯನ್ನು ಬಲ್ಲವನು "ಮಹಾನ್ಭವತಿ ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ" ಎಂದು ಆಶೀರ್ವದಿಸುವರು. ಸತ್ಯವೆಂದರೆ ತತ್ತ್ವವು, The Truth. ಋತವೆಂದರೆ The Right. ಸತ್ಯಕ್ಕೆ ಅನುಸಾರವಾಗಿರುವ ಧರ್ಮವು. ಋತವೂ ಸತ್ಯವೂ ಶ್ರೇಯಸ್ಸಿಗೆ ಆವಶ್ಯಕವು. ಸತ್ಯಜ್ಞಾನ ವಿಲ್ಲದೆ ಮಾನವರಿಕೆಯಾಗದು. ಧರ್ಮಾಚರಣೆ ಇಲ್ಲದೆ, ಆಧ್ಯಾತ್ಮ ಸಾಧನವಿಲ್ಲದೆ, ಸಾಕ್ಷಾತ್ಕಾರವಾಗದು. ಆದುದರಿಂದ ಇವೆರಡೂ ಬೇಕು, ಎಂಬುದು ಉಪನಿಷತ್ತುಗಳ ಉಪದೇಶಸಾರವು. ಆ ಸಂದೇಶದ ಸ್ವರೂಪವನ್ನು ತೈತ್ತಿರೀಯೋಪನಿಷತ್ತಿನಲ್ಲಿ ಶಿಕ್ಷಾವಲ್ಲಿಯ ಹನ್ನೊಂದನೆಯ ಅನುವಾಕದಲ್ಲಿ ಹೀಗೆ ಹೇಳಿದೆ. ಸತ್ಯಋತಗಳಿಂದಲೇ ಶ್ರೇಯಸ್ಸು. ಇದೇ ರಹಸ್ಯವು. ಅನುಶಾಸನವು ಅಥವಾ ಈಶ್ವರವಚನವು. ಪ್ರಮಾಣರೂಪವಾಗಿರುವ ವೇದವೇ ಅಲ್ಲದೆ ಸ್ಮೃತಿಗಳೂ ತಿಳಿದವರೂ ಹೀಗೆಯೇ ಉಪದೇಶಮಾಡಿರುತ್ತಾರೆ. ಹೀಗೆಯೇ ಇದನ್ನು ಉಪಾಸನೆಮಾಡತಕ್ಕದ್ದೇ ಹೊರತು ಬಿಡತಕ್ಕದ್ದಲ್ಲವೆಂದು ಅಭಿಪ್ರಾಯವು. ವಿದ್ಯೆ ಎಂದರೆ, ಉಪಾಸನೆ ಮತ್ತು ಜ್ಞಾನ ಎಂದು ಅರ್ಥವು. ಇದರಿಂದ ಈಗಿನ ಉಪದೇಶ ಕ್ರಮಕ್ಕಿಂತ ಹಿಂದಿನ ಕಾಲದ ಉಪದೇಶ ಕ್ರಮವು ಮೇಲಾದುದು ಎಂದು ಗೊತ್ತಾಗುತ್ತದೆ.

ಎರಡು ಬಗೆಯ ಉಪದೇಶಗಳ ತಾರತಮ್ಯ.

ಈ ಉಪದೇಶಗಳ ರತ್ನಹಾರವನ್ನು ನೋಡುವವರಿಗೆ, ಪರಿಶೀಲಿಸುವವರಿಗೆ ಈಗಿನ ಕಾಲದಲ್ಲಿ ವಿಶ್ವವಿದ್ಯಾನಿಲಯದವರಿಗೆ ಪ್ರತಿವರ್ಷವೂ ಏರ್ಪಡಿಸುತ್ತಿರುವ ಘಟಿಕೋತ್ಸವ, ಪದವೀದಾನ ಮಹೋತ್ಸವ (Convocation)ದ ಸಭೆಗಳಲ್ಲಿ ಸ್ನಾನಪತಿಗಳು ಕೇಳುವ, ಮತ್ತು B.A, M.A. ಮುಂತಾದ ಪದವಿ

ಗಳನ್ನು ಸ್ವೀಕರಿಸುವ ವಿದ್ಯಾವಂತರು ಒಪ್ಪಿಗೆ ಕೊಡುವ, ಪ್ರತಿಜ್ಞಾ ವಚನ (Convocation Oaths)ಗಳು ನೆನಪಿಗೆ ಬರುವುದು ಸಹಜವಾಗಿದೆ. ಈ ಮೇಲಿನ ಉಪದೇಶಗಳೂ ಅಪ್ಪಣೆಗಳೂ, ಘಟಿಕೋತ್ಸವಗಳ ಆ ಪ್ರತಿಜ್ಞಾವಚನಗಳಿಗಿಂತ ಮೇಲಾದುವೂ ವಿಸ್ತಾರವಾದುವೂ ಆಗಿವೆ ಎಂಬುದು ವಿಚಾರಪರರ ಹೃದಯದಲ್ಲಿ ತೋರದೆ ಇರುವುದಿಲ್ಲ. ಧಾರ್ಮಿಕ ಸಂಸ್ಕೃತಿಯು ರೀತಿಯಲ್ಲಿ ವಿದ್ಯಾದಾನ ಮಾಡುವ ಗುರುಗಳೂ ಅದೇ ಧರ್ಮನಿಷ್ಠೆಯಲ್ಲಿರುತ್ತಾ ವಿದ್ಯಾ ಸ್ವೀಕಾರಮಾಡುವ ಶಿಷ್ಯರೂ ಮುಂದೆ ದೇಶದಲ್ಲಿ ಆದರ್ಶ ಗೃಹಸ್ಥರೂ, ಮಾದರಿಯ ಸತ್ಪ್ರಜೆಗಳೂ ಆಗಿರುತ್ತಾ ದೇಶದ ಮೇಲ್ಮೆಗೂ, ಜನರಲ್ಲಿ ಶಾಂತಿ ನೆಮ್ಮದಿ ಸುಖಗಳು ನೆಲಸುವಂತಾಗಲೂ ಹೇಗೆ ಸಹಾಯಕರಾಗಿರಬಲ್ಲವರಾಗುತ್ತಾರೆಂಬುದೂ ಹೃದಯಂಗಮವಾಗಿ ತಿಳಿದು ಬರುತ್ತದೆ. ಈ ಪರಿಸ್ಥಿತಿಯನ್ನು ಪುನರುಜ್ಜೀವನಗೊಳಿಸುವುದರಲ್ಲಿ ಜನರೂ ಮುಖಂಡರೂ ಪ್ರಯತ್ನಿಸುವಂತಾಗಲೆಂದು ಆಶಿಸುವುದೂ ಈ ಸ್ವಾತಂತ್ರ್ಯ ಯುಗದಲ್ಲಿ ಅನುಚಿತವಾಗಲಾರದು.

**ಪ್ರಗತಿಪರರೂ ಪ್ರಾಚೀನ ಪ್ರೇಮಿಗಳೂ**

ಹೀಗೆ ವೈದಿಕ ಕಾಲದ ಭಾರತಾರ್ಯರಲ್ಲಿ ಕೆಲವರು ಪ್ರಗತಿಗಾಮಿಗಳಾಗಿ ಮುಂದುವರಿಯುತ್ತಿದ್ದರು. ಮುಂದುವರಿಯುವುದರಲ್ಲಿ ಮುಂದಾಳುಗಳಾಗಿರುವ ಇಂಥವರು ಎಲ್ಲ ಕಾಲಗಳಲ್ಲೂ ದೇಶಗಳಲ್ಲೂ ಅಲ್ಪಸಂಖ್ಯೆಯಲ್ಲಿರುತ್ತಾರೆ. ಇವರು ನಿಷ್ಕಾಮ ಕರ್ಮನಿಷ್ಠರಾಗಿ, ಪ್ರವೃತ್ತಿಧರ್ಮದ ಆಚರಣೆಯಲ್ಲಿ ಮಾದರಿಯಂತೆ ಇರುತ್ತಾ ನಿವೃತ್ತಿ ಧರ್ಮದಲ್ಲಿ ಆಸಕ್ತರಾಗಿರುತ್ತಾರೆ. ಇಂಥವರಿಂದಲೇ ದೇಶವೂ ಜನರೂ ಮುಂದುವರಿಯುವುದಕ್ಕೆ ಮೇಲು ಪಂಕ್ತಿಯು ದೊರೆಯುತ್ತಿರುತ್ತದೆ. ಜ್ಞಾನಮಾರ್ಗದಲ್ಲಿ ಮುಂದಡಿ ಇಡುವವರಿಗೆ, ದಾರಿಯು ಕವಲೊಡೆಯುವ ಸ್ಥಳದಲ್ಲಿರುವ ಕೈಮರದ ಹಾಗೆ, ಇಂತಹ ಜ್ಞಾನಯೋಗಾಸಕ್ತರು, ಧರ್ಮದ, ವಿಶ್ವಧರ್ಮದ, ಅರಿವು ಆಚರಣೆಗಳಲ್ಲಿ ಎಲ್ಲ ಮಾನವರಿಗೂ ಮಾರ್ಗದರ್ಶಕರಾಗಿರು

ತ್ತಾರೆ. ಇಂಥವರು ಅಲ್ಪಸಂಖ್ಯಾತರಾಗಿದ್ದರೂ ದೇಶದ ಪುರೋಭಿವೃದ್ಧಿಯು ಮುಂದುಮುಂದಕ್ಕೆ ಸಾಗುತ್ತಿರುತ್ತದೆ. ಪ್ರಾಚೀನ ಪ್ರೇಮಾದರಗಳು ಎಂದರೆ, ಹಿಂದಿನ ಸಂಪ್ರದಾಯಗಳನ್ನು ಅನುಸರಿಸುತ್ತಾ ಕಾಪಾಡುವುದರಲ್ಲಿ ಆಸಕ್ತಿಯೂ ಜನರ ಸಂಸ್ಕೃತಿಗೆ ಸ್ಥಾಯಿತ್ವವನ್ನು ಕೊಡುತ್ತಿರುತ್ತದೆ. ಅವರು ಸ್ವಾಭಾವಿಕವಾಗಿ ಬದಲಾವಣೆಗಳನ್ನು ಆದರಿಸಿ ಅಂಗೀಕರಿಸಲು ಮುನ್ನುಗ್ಗುವುದಿಲ್ಲ. ಆದರೆ ಸಂಸ್ಕೃತಿಯ ಪುರೋಭಿಗಮನವು ಬದಲಾವಣೆಗಳನ್ನು, ಸುಧಾರಣೆಗಳನ್ನು, ಅನಿವಾರ್ಯವಾಗಿ ಒಳಗೊಂಡಿರುತ್ತದೆ. ಈ ಸುಧಾರಣೆಗಳು ಜನಾದರಕ್ಕೆ ಪಾತ್ರವಾಗಬೇಕಾದರೆ ವಿಭೂತಿಪುರುಷರ ಮುಂದಾಳುತನವು ಆವಶ್ಯಕವಾಗಿರುತ್ತದೆ. ಉಪನಿಷತ್ಕಾಲದ ಋಷಿಗಳು ಅಂತಹ ಮಹಿಮಾಶಾಲಿಗಳಾಗಿದ್ದರು. ಜನಕನಂತಹ ರಾಜರ್ಷಿಗಳೂ ಯಾಜ್ಞವಲ್ಕ್ಯನಂತಹ ಬ್ರಹ್ಮರ್ಷಿಗಳೂ ಇಂತಹ ವಿಭೂತಿಪುರುಷರಾಗಿದ್ದರು. ಮೈತ್ರೇಯಿಯಂತಹ ಮಹಿಳೆಯರೂ ಜ್ಞಾನಮಾರ್ಗದಲ್ಲಿ ಪ್ರಗತಿಯನ್ನು ಸಾಧಿಸಲು ತಕ್ಕ ಸಾಮರ್ಥ್ಯವನ್ನು ಅನುಗೊಳಿಸಿದರು. ಹೀಗೆ ಉಪನಿಷತ್ತುಗಳ ಕಾಲದಲ್ಲಿ ಪ್ರಗತಿಸಾಧನೆಯು ನಿರಂತರವಾಗಿ ಸಾಗುತ್ತಿತ್ತು. ಇಂತಹ ಜ್ಞಾನಯೋಗದ ಮುಂದಾಳುಗಳು ಸಂಹಿತೆ ಬ್ರಾಹ್ಮಣಗಳಲ್ಲಿ ವಿಧಿಸಿರುವ ಕರ್ಮಕಾಂಡದಲ್ಲಿ ಹೇಳಿರುವ ಯಜ್ಞ ಯಾಗ ರೂಪ ಧರ್ಮಗಳನ್ನು ಆಚರಿಸುವುದರಿಂದ ದೊರೆಯಬಹುದಾದ ಫಲಗಳು ಎಷ್ಟೇ ಹೆಚ್ಚಿನವಾದರೂ ಅವಿಶುದ್ಧಿ ಕ್ಷಯ ಅತಿಶಯಗಳೆಂಬ ಮೂರು ದೋಷಗಳಿಂದ ಕೂಡಿಯೇ ಇರುತ್ತವೆಂಬುದನ್ನು ಮನಗಂಡಿದ್ದರು. ಆದುದರಿಂದಲೇ ಅವರು ಮಾಡುತ್ತಿದ್ದ ಉಪದೇಶ ಕ್ರಮವನ್ನು ಹೀಗೆ ಹೇಳಿದೆ:—

"ವೇದ ಮನೂಚ್ಯ ಆಚಾರ್ಯಃ ಅಂತೇವಾಸಿನ ಮನುಶಾಸ್ತಿ, ಸತ್ಯಂವದ, ಧರ್ಮಂಚರ, ಸ್ವಾಧ್ಯಾಯಾನ್ಮಾ ಪ್ರಮದಃ ಆಚಾರ್ಯಾಯ

ಪ್ರಿಯಂ ಧನಂ ಆಹೃತ್ಯ ಪ್ರಜಾತಂತುಂ ಮಾವ್ಯವಚ್ಛೇತ್ಸೀಃ...... ಸ್ವಾಧ್ಯಾಯ ಪ್ರವಚನಾಭ್ಯಾಂ ನಪ್ರಮದಿತವ್ಯಂ...ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಅತಿಥಿದೇವೋಭವ, ಯಾನ್ಯನವದ್ಯಾನಿಕರ್ಮಾಣಿ, ತಾನಿತ್ವಯೋಪಾಸ್ಯಾನಿ, ನೋಇತರಾಣಿ, ಯಾನ್ಯಸ್ಮಾಕಂ ಸುಚರಿತಾನಿ, ತಾನಿತ್ವಯೋಪಾಸ್ಯಾನಿ, ನೋಇತರಾಣಿ ಯೇಕೇಚಾಸ್ಮಚ್ಛ್ರೇಯಾಂ, ಸೋಬ್ರಾಹ್ಮಣಾಃ ತೇಷಾಂತ್ವಯಾ ಆಸನೇನ ಪ್ರಶ್ವಸಿತವ್ಯಂ,ಶ್ರದ್ಧಯಾ ದೇಯಂ, ಅಶ್ರದ್ಧಯಾ ಅದೇಯಂ, ಸಂವಿದಾ ದೇಯಂ, ಶ್ರಿಯಾದೇಯಂ, ಭಿಯಾದೇಯಂ,...ಅಥಯದಿ ತೇ ಕರ್ಮ ವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ, ವಾಸ್ಯಾತ್, ಯೇತತ್ರ ಬ್ರಾಹ್ಮಣಾಃ ಸಂಮರ್ಶಿನಃ ಯುಕ್ತಾಅಯುಕ್ತಾಃ ಅಲೂಕ್ಷಾಃ ಧರ್ಮಕಾಮಾಃಸ್ಯುಃ ಯಥಾತೇತತ್ರ ವರ್ತೇರನ್, ತಥಾತತ್ರ ವರ್ತೇಥಾಃ...ಏಷಆದೇಶಃ ಏಷಉಪದೇಶಃ, ಏಷಾ ವೇದೋಪನಿಷತ್, ಏತದನುಶಾಸನಂ, ಏವಮುಪಾಸಿತವ್ಯಂ...''

ತೈ. ಉ. ವಲ್ಲಿ ೧ ಅನುವಾಕ ೧೧.

ಹಿಂದೆ ೯ನೆಯ ಅನುವಾಕದಲ್ಲಿ ಕರ್ಮಗಳಿಗೆ ಆನರ್ಥಕ್ಯವನ್ನು ಪರಿಹರಿಸುವುದಕ್ಕಾಗಿ ಋತ, ಸತ್ಯ, ತಪಸ್ಸು, ದಮ, ಶಮ ಮುಂತಾದವುಗಳನ್ನು ಉಪದೇಶಿಸಿದೆ. ಕರ್ಮವು ಜ್ಞಾನದೊಡನೆ ಒಬ್ಬರಲ್ಲಿಯೇ ಒಂದೇ ಕಾಲದಲ್ಲಿಯೇ ಇರಲಾರದೆಂದು ಮುಂದೆ ಹೇಳಿದೆ. ಆದುದರಿಂದ ಕರ್ಮಗಳು ಜ್ಞಾನೋತ್ಪತ್ತಿ ಮೂಲಕವಾಗಿಯೇ ಮೋಕ್ಷ ಕಾರಣಗಳಾಗುತ್ತವೆಂದು ಹೇಳಿದ ಹಾಗಾಯಿತು. ಉಪಾಸನೆಯನ್ನೂ ನಿಷ್ಕಾಮ ಕರ್ಮವನ್ನೂ ಮಾಡಿದವರಿಗೆ ಕಾಲಾಂತರದಲ್ಲಿ ಮುಕ್ತಿಯು ದೊರೆಯುತ್ತದೆ. ಆ ಕರ್ಮವು ನಿರರ್ಥಕವಾಗುವುದಿಲ್ಲವೆಂದು ತಾತ್ಪರ್ಯವು. ಆದರೆ, ಈ ಅನುವಾಕದಲ್ಲಿಯೂ ಅವನ್ನು ಉಪದೇಶಿಸಿರುವುದರಿಂದ ಅವುಗಳು ಜ್ಞಾನವುಂಟಾಗುವುದಕ್ಕೆ ಕಾರಣಗಳಾಗಿರುವುದರಿಂದ ಅವನ್ನು ಎಂದರೆ ಋತ, ಧರ್ಮ

ಮುಂತಾದುವನ್ನು ಆಚರಿಸಲೇಬೇಕೆಂದು ನಿಯಮಮಾಡುವುದಕ್ಕಾಗಿ ತಿಳಿಸಿದೆ ಎಂದು ತಿಳಿಯಬೇಕು.

ವಿದ್ಯಾಭ್ಯಾಸವು ಧಾರ್ಮಿಕ ನಡವಳಿಕೆಗಾಗಿ.

ಈ ಮೇಲಿನ ವಾಕ್ಯಗಳ ಅರ್ಥವು ಹೀಗಿದೆ.—ಗುರುವು ಶಿಷ್ಯನಿಗೆ ವೇದಗಳನ್ನು ಕಲಿಸಿದಮೇಲೆ, ಹೀಗೆಂದು ಅಪ್ಪಣೆಮಾಡಬೇಕು. ಹೇಗೆಂದರೆ :—ಯಾವಾಗಲೂ ಸತ್ಯವನ್ನು ಹೇಳು. ಧರ್ಮವನ್ನು ತಪ್ಪದೆ ಆಚರಿಸುತ್ತಿರು, ಬ್ರಹ್ಮಚರ್ಯಾಶ್ರಮವನ್ನು ಬಿಟ್ಟು ಗೃಹಸ್ಥಾಶ್ರಮದಲ್ಲಿರುವಾಗಲೂ ಪಾಠಪ್ರವಚನಗಳನ್ನು ಬಿಡದೆ ಮರೆಯದೆ ನೆರವೇರಿಸುತ್ತಿರು, ಆಚಾರ್ಯನಿಗೆ ಇಷ್ಟವಾದ ಧನವನ್ನು ತೆಗೆದಿಟ್ಟು ತಂದುಕೊಟ್ಟು ಪ್ರಜಾತಂತುವನ್ನು ಕಡಿದುಹೋಗಲೀಯದಂತೆ ಗೃಹಸ್ಥನಾಗಿ ಮಕ್ಕಳನ್ನು ಪಡೆ. ಪಾಠಪ್ರವಚನಗಳನ್ನು ಮರೆಯದಿರಬೇಕು. ತಾಯಿಯನ್ನು ದೇವರಂತೆ ಗೌರವಿಸು, ತಂದೆಯನ್ನೂ ದೇವರಂತೆ ಸೇವಿಸು. ಆಚಾರ್ಯನನ್ನೂ ದೇವರಂತೆ ಮರ್ಯಾದೆಯಿಂದ ಉಪಚರಿಸು, ಅತಿಥಿಯನ್ನೂ ದೇವರಂತೆ ಸತ್ಕರಿಸು. ಯಾವ ಕರ್ಮಗಳು ನಿಂದಿತವಲ್ಲವೋ ಅಂಥವುಗಳನ್ನು ಆಚರಿಸಬೇಕು. ಉಳಿದವನ್ನು ಮಾಡಬಾರದು. ಯಾವುವು ನಮ್ಮ ಒಳ್ಳೆಯ ನಡವಳಿಕೆಗಳೋ ಅವುಗಳನ್ನು ನೀನು ಅನುಸರಿಸಬೇಕು. ಉಳಿದವನ್ನು ಅನುಸರಿಸಬಾರದು, ಯಾವ ಯಾವ ಬ್ರಾಹ್ಮಣರು ನಮಗಿಂತ ಉತ್ತಮರೋ ಅವರಿಗೆ ನೀನು ಆಸನವನ್ನು ಕೊಟ್ಟು ಆದರಿಸಬೇಕು. ಶ್ರದ್ಧೆಯಿಂದ ದಾನವನ್ನು ಮಾಡಬೇಕು. ಭ. ಗೀ. ೧೭. ೨೮. ಅಶ್ರದ್ಧೆಯಿಂದ ಅನಾದರ ತಿರಸ್ಕಾರಗಳಿಂದ ಕೊಡಬಾರದು. ತನ್ನ ಸಂಪತ್ತಿಗೆ ತಕ್ಕಂತೆ ಲೋಭದಿಂದ ಕಡಿಮೆಮಾಡದೆ ಕೊಡಬೇಕು. ನಾಚಿಕೆಯಿಂದ ನಾನು ಯಾವ ದಾನವನ್ನೂ ಮಾಡಲಿಲ್ಲವಲ್ಲ. ಇದು ತಕ್ಕಷ್ಟಲ್ಲದಿರುವುದರಿಂದ ಇನ್ನೂ ಹೆಚ್ಚಿನ ದಾನವನ್ನು ಕೊಡಲಾರದೆ ಇರುವೆನಲ್ಲ ಎಂದು ನಾಚಿಕೆಯಿಂದ ದಾನವನ್ನು ಮಾಡಬೇಕು. ದಾನ

ವೆಂಬ ನಿತ್ಯಕರ್ಮವನ್ನು ಮಾಡದಿದ್ದರೆ ಸದ್ಗತಿಯಾಗಲಾರದೆಂಬ ಹೆದರಿಕೆಯಿಂದ ದಾನವನ್ನು ಮಾಡಬೇಕು. ಮಿತ್ರರೇ ಮುಂತಾದವರಿಗೆ ಇಂಥ ಸಮಯದಲ್ಲಿ ಸಮಾವರ್ತನೆಯೆಂಬ ಅಥವಾ ಮತ್ತೆ ಯಾವುದಾದರೂ ಧರ್ಮಾಚರಣೆಯ ಸಂದರ್ಭದಲ್ಲಿ ದಾನವನ್ನು ಕೊಡುವುದು ಯುಕ್ತವೆಂಬ ಭಾವನೆಯುಳ್ಳವನಾಗಿ ದಾನವನ್ನು ಮಾಡು. ಇನ್ನು ಹೀಗೆ ಇರುವಲ್ಲಿ ನಿನಗೆ ಶ್ರೌತಕರ್ಮದಲ್ಲಿಯಾಗಲೀ ಸ್ಮಾರ್ತಕರ್ಮದಲ್ಲಿಯಾಗಲಿ ಆಚಾರರೂಪವಾದ ನಡತೆಯಲ್ಲಾಗಲಿ ಯಾವಾಗಲಾದರೂ ಹೇಗೆ ಮಾಡಬೇಕೆಂದು ಸಂಶಯವುಂಟಾದರೆ ಆಗ ಅಂಥ ಕರ್ಮದಲ್ಲಿ ಯಾವ ಬ್ರಾಹ್ಮಣರು ಯುಕ್ತರಾಗಿರುತ್ತಾರೋ, ಸಂಮರ್ಶಿನಃ ಎಂದರೆ, ವಿಚಾರಮಾಡುವುದರಲ್ಲಿ ಸಮರ್ಥರು, ಯುಕ್ತರು, ಕರ್ಮದಲ್ಲಿ ನಿಪುಣರು, ಆಯುಕ್ತರು ಮತ್ತೊಬ್ಬರಿಂದ ಪ್ರೇರಿತರಾಗದೆ ತಾವೇ ಸ್ವತಂತ್ರರಾಗಿ ತಿಳಿದು ಪ್ರವರ್ತಿಸುವವರು, ಅಲೂಕ್ಷರು ಅರೂಕ್ಷರು ಕ್ರೂರವಾದ ಬುದ್ಧಿಯಿಲ್ಲದವರು, ಅದೃಷ್ಟಫಲವನ್ನೇ ಬಯಸುವವರು, ಧರ್ಮಕಾಮಾಃ ಆಸೆಯ ಹೊಡೆತವಿಲ್ಲದೆ ಕಾಮ್ಯಕರ್ಮಗಳನ್ನು ಬಿಟ್ಟು ಪರಗತಿಯನ್ನು ಕೊಡುವ ಸತ್ಕರ್ಮಗಳಲ್ಲೇ ನಿರತರಾಗಿರುವವರು, ಇಂಥ ಯಾವ ಬ್ರಾಹ್ಮಣರು ಇರಬಹುದೋ ಅವರು ಆ ಕರ್ಮದಲ್ಲಿ ನಡತೆಯಲ್ಲಿ ಹೇಗೆ ಇರುವರೋ ಹಾಗೆಯೇ ನೀನೂ ಇರು. ಇದು ಆದೇಶವು ಎಂದರೆ ವಿಧಿಯು, ಮಕ್ಕಳು ಮುಂತಾದವರಿಗೆ ತಂದೆ ಮುಂತಾದವರು ಮಾಡತಕ್ಕ ಉಪದೇಶವು. ಇದು ವೇದೋಪನಿಷತ್ತು ಎಂದರೆ, ವೇದಾರ್ಥವು.

> " ಪ್ಲವಾಹ್ಯೇತೆ ಅದೃಢಾಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ ।
> ಏತಚ್ಛ್ರೇಯೋಯೇಽಭಿನಂದಂತಿಮೂಢಾ ಜರಾಮೃತ್ಯುಂ ತೇಪುನರೇವಾಪಿ ಯಂತಿ ॥ "

> " ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ। "

"ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ ಏವಮೇವಾಮುತ್ರ
ಪುಣ್ಯಚಿತೋ ಲೋಕಃ ಕ್ಷೀಯತೇ।"

ಎಂದು ಮುಂತಾಗಿ ಹೇಳಿ, ಯಜ್ಞ ಯಾಗಾದಿಗಳನ್ನು ಪರಮಪುರುಷಾರ್ಥವಾದ ಮೋಕ್ಷಕ್ಕೆ ಸಾಧನಗಳಲ್ಲವೆಂದು ಉದಾಸೀನತೆಯಿಂದ ಬಿಡುತ್ತಿದ್ದರು ಮತ್ತು ನಿವೃತ್ತಿಮಾರ್ಗದ ಧರ್ಮವನ್ನು ಅನುಸರಿಸುತ್ತಿದ್ದರು.

**ಬುದ್ಧದೇವನ ಅವತಾರಕ್ಕೆ ಕಾರಣ.**

ಮತ್ತೆ ಕೆಲವರು, ಇವರೇ ಅಧಿಕ ಸಂಖ್ಯಾತರಾದ ಸಂಪ್ರದಾಯಶರಣರಾದ ಕರ್ಮಠರು, ಯಜ್ಞಯಾಗಗಳನ್ನು ವೈಭವದಿಂದಲೂ ಆಡಂಬರದಿಂದಲೂ ಆಚರಿಸುತ್ತಿದ್ದರು. ಇವು ಮಿತವಾಗಿದ್ದಾಗ ಜನಪ್ರಿಯವಾಗಿದ್ದುವು. ಅತಿಯಾದಾಗ ಬಿಳಿಯಬಟ್ಟೆಯಮೇಲೆ ಸಿಡಿದ ಮಶಿಯು ಅಲ್ಪವಾಗಿದ್ದರೂ ಎದ್ದುಕಾಣುವುದೆ ಸ್ವಾಭಾವಿಕವಾಗಿರುವುದರಿಂದ ಅವು ಜನಾದರವನ್ನು ಕಳೆದುಕೊಳ್ಳುತ್ತಿದ್ದುವು. ಇವುಗಳ ಜೊತೆಗೆ ಪಶುಹಿಂಸೆಯೂ ಸೇರಿ ಜನರಿಗೂ ಬೇಡವೆನಿಸುವಂತಾಗಿದ್ದುವು. ಈ ಸಮಯದಲ್ಲಿ ಬುದ್ಧದೇವನ ಉಪದೇಶಗಳು ಜನಾದರಪಾತ್ರವಾಗಿ ಬೌದ್ಧಮತವು ಬೆಳೆಯಲಾರಂಭವಾಯಿತು. ಗೌತಮಬುದ್ಧನ ಮಹಿಮೆಯ ವಿಷಯದಲ್ಲಿ ಮಹಾತ್ಮ ಗಾಂಧಿಯವರು ಹೀಗೆ ಹೇಳಿದ್ದಾರೆ :—"ಡೆಕ್ಕನ್ ಹೆರಾಲ್ಡ್" ತಾರೀಖು 24-[illegible]-195[illegible] : "ಬುದ್ಧದೇವನ ಜೀವನಚರಿತ್ರೆಯಿಂದ ನಾನು ಹೆಚ್ಚಾದ ಸ್ಫೂರ್ತಿಯನ್ನು ಪಡೆದಿರುತ್ತೇನೆ. ಹಿಂದೂ ಸಂಸ್ಕೃತಿಯಲ್ಲಿ ಬೌದ್ಧ ಸಂಸ್ಕೃತಿಯು ಸೇರಿಯೇ ಇದೆ. ಏಕೆಂದರೆ ಬುದ್ಧನು ಸ್ವಯಂ ಹಿಂದುವೇ ಆಗಿದ್ದವನು. ಅವನು ಹಿಂದೂ ಮತವನ್ನು ಬಿಟ್ಟು ಹೊಸದಾಗಿ ಬೌದ್ಧಮತವನ್ನು ಸ್ವೀಕರಿಸಿದನೆಂಬುದಕ್ಕೆ ಗಮಕಗಳು ಯಾವುವೂ ಇಲ್ಲ. ಬುದ್ಧನ ಉಪದೇಶಗಳಲ್ಲಿರುವ ಮುಖ್ಯ ಉಪದೇಶಗಳು ಹಿಂದೂಮತದಲ್ಲಿ ಪ್ರಧಾನವಾದ ಅಂಶಗಳೇ ಆಗಿವೆ.

ಬುದ್ಧದೇವನ ಮಿಗಿಲಾದ ಸ್ವಾರ್ಥತ್ಯಾಗವೂ, ಅತಿಶಯವಾದ ವೈರಾಗ್ಯ ಸನ್ಯಾಸಗಳೂ, ಕಟ್ಟುನಿಟ್ಟಾದ ಪವಿತ್ರವಾದ ಜೀವನ ಕ್ರಮವೂ ಹಿಂದೂ ಮತದಮೇಲೆ ಶಾಶ್ವತವಾದ ಪರಿಣಾಮ ವನ್ನುಂಟುಮಾಡಿದುವು. ಹಿಂದೂಮತವು ಬೌದ್ಧಮತದ ಯಾವ ಸಂಪ್ರ ದಾಯಗಳನ್ನು ಅಂಗೀಕರಿಸಿಲ್ಲವೋ ಅಂತಹ ಪದ್ಧತಿಗಳು ಬುದ್ಧನ ಉಪದೇಶಗಳಲ್ಲೂ ಮುಖ್ಯವಾದವುಗಳಾಗಿಲ್ಲವೆಂಬುದೂ ಗಮನಾರ್ಹ ವಾಗಿದೆ. ವೇದಗಳಲ್ಲಿ ಅಡಗಿದ್ದ ಕೆಲವು ಉತ್ತಮವಾದ ಉಪದೇಶ ಗಳಮೇಲೆ ಬೆಳೆದು ಕವಿದಿದ್ದ ಕಳೆಗಳನ್ನು ಬುದ್ಧದೇವನು ತೆಗೆದುಹಾಕಿ ಅವಕ್ಕೆ ತನ್ನ ಆಚರಣೆಯಿಂದ ಹೊಸಜೀವಕಳೆಯ ಮೆರುಗನ್ನು ಕೊಟ್ಟನು. ಕೆಲವು ವೈದಿಕ ವಾಕ್ಯಗಳಿಗೆ ಹೊಸ ಅರ್ಥವನ್ನು ವಿವರಿಸಿ ತಿಳಿಸಿದನು. ಬುದ್ಧನ ಉಪದೇಶಗಳೂ, ಅವನ ಹೃದಯದಹಾಗೆ, ವಿಶ್ವವ್ಯಾಪಿಯಾಗಿ ವಿಸ್ತರಿಸಬಲ್ಲ, ಎಲ್ಲವನ್ನೂ ಒಳಗೊಳ್ಳಬಲ್ಲಷ್ಟು ಮನೋವೈಶಾಲ್ಯದ ಹಿನ್ನೆಲೆಯನ್ನೂ ಸೂಚಿಸುತ್ತಿವೆ. ಆದುದರಿಂದಲೇ ಅವು ಅವನ ಶರೀರವು ಬಿದ್ದುಹೋದಮೇಲೂ ಬೆಳೆದು ಇಡಿಯ ಭಾರತ ದಲ್ಲಿ ಮಾತ್ರವಲ್ಲದೆ ಪ್ರಪಂಚದ ಇತರ ದೇಶಗಳಲ್ಲೂ ವ್ಯಾಪಿಸಿ ಹಬ್ಬಿದವು. ನನ್ನನ್ನೂ ಬೌದ್ಧನೆಂದು ಜನರು ಭಾವಿಸಬಹುದಾದರೂ ಅದನ್ನು ಲೆಕ್ಕಿಸದೆ ಈ ವಿಜಯವು ಹಿಂದೂ ಮತಕ್ಕೆ ಸೇರಿದುದೆಂದು ಪರಿಗಣಿಸು ತ್ತೇನೆ.

ಬೌದ್ಧಮತವು ಹಿಂದೂ ಮತದಲ್ಲಿ ಸೇರಿಯೇ ಇದೆ.

ಬುದ್ಧನು ಹಿಂದೂ ಮತವನ್ನು ಬಿಟ್ಟನೆಂದು ಎಲ್ಲೂ ಹೇಳಿಲ್ಲವು. ಅಲ್ಲದೆ ಹಿಂದೂ ಮತದ ಅಸ್ತಿಭಾರವನ್ನು ವಿಸ್ತಾರಗೊಳಿಸಿದನು; ಮತ್ತು ಅದರ ಆಚರಣೆ ಯಲ್ಲಿ ಹೊಸ ರೀತಿಯನ್ನೂ ವ್ಯಾಖ್ಯಾನವನ್ನೂ ತೋರಿಸಿಕೊಟ್ಟಿರುವನು. ಹಿಂದೂ ಮತದಲ್ಲಿ ಮೊದಲನೆಯದೂ ಮುಖ್ಯವೂ ಆಗಿರುವ ಉಪದೇಶವೆಂದರೆ ಸರ್ವವ್ಯಾಪಿ ಯಾಗಿರುವ ದೇವರಲ್ಲಿ ನಂಬಿಕೆಯಾಗಿದೆ. ಬುದ್ಧ ದೇವನು ದೇವರಲ್ಲಿ ನಂಬಿಕೆಯನ್ನು ಹೊಂದಿರಲಿಲ್ಲವೆಂದು ಅನೇಕರು ಹೇಳುವುದನ್ನು ಕೇಳಿ

ದ್ದೇನೆ, ಗ್ರಂಥಗಳಲ್ಲಿ ಬರೆದಿರುವುದನ್ನೂ ಓದಿರುತ್ತೇನೆ. ಆದರೆ ಈ ಅಭಿಪ್ರಾಯವು ಬುದ್ಧನ ಉಪದೇಶದಲ್ಲಿ ಕೇಂದ್ರದಂತಿರುವ ಮುಖ್ಯಾಂಶಕ್ಕೆ ವಿರುದ್ಧವಾಗಿದೆ ಎಂದು ಹೇಳಬೇಕಾಗಿದೆ. ಗೌತಮ ಬುದ್ಧನು ಆಗಿನ ಕಾಲದಲ್ಲಿ ಜನರೂಢಿಯಲ್ಲಿದ್ದ ಕೀಳುತೆರನಾದ ದೇವರ ಸ್ವರೂಪವನ್ನು ಖಂಡಿಸಿ ತಿರಸ್ಕರಿಸಿದನು. ಇದು ನ್ಯಾಯವೇ ಆಗಿದೆ. ಗೌತಮನು ದೇವರಲ್ಲಿ ಕೆಡುಕನ್ನು ಮಾಡುವ ಸ್ವಭಾವವಿದೆ ಎಂದಾಗಲಿ, ಅದಕ್ಕಾಗಿ ಆ ದೇವನು ಪಶ್ಚಾತ್ತಾಪ ಪಡುತ್ತಾನೆಂದಾಗಲಿ, ಭೂಮಿಯಲ್ಲಿರುವ ರಾಜರಂತೆ ಅವನು ಆಕರ್ಷಣೆಗಳಿಗಾಗಲಿ, ಲಂಚಕ್ಕಾಗಲಿ ಒಳಗಾಗುವನೆಂದೂ, ತನ್ನವರಲ್ಲಿ ಪಕ್ಷಪಾತಿ ಎಂದಾಗಲಿ ಸಾಮಾನ್ಯ ಜನರು ನಂಬುತ್ತಿದ್ದುದನ್ನು ಖಂಡಿಸಿದನು. ತನ್ನ ತೃಪ್ತಿಗಾಗಿ ತಾನೇ ಸೃಜಿಸಿದ ಪ್ರಾಣಿಗಳ ರಕ್ತಬಲಿಯನ್ನು ದೇವರು ಅಪೇಕ್ಷಿಸುತ್ತಾನೆಂಬುದನ್ನು ತೀವ್ರವಾಗಿ ಖಂಡಿಸಿ ಜನರ ಅಜ್ಞಾನವನ್ನು ನಿರ್ಮೂಲ ಮಾಡುತ್ತಿದ್ದನು. ಅಷ್ಟೇ ಅಲ್ಲದೆ ಅಂತಹ ಹಿಂಸಾಕಾರ್ಯದಿಂದ ದೇವರು ಪ್ರೀತನಾಗುತ್ತಾನೆಂದು ನಂಬಿ ನಡೆಯುವುದು ದ್ವಿಗುಣವಾದ ಪಾಪಾಚರಣೆ ಎಂಬುದನ್ನು ವಿವರಿಸಿ ತಿಳಿಯ ಹೇಳಿದನು. ದೇವರ ಕಟ್ಟಳೆಗಳು ಶಾಶ್ವತವಾಗಿರುವಂಥವು. ಅವು ಬದಲಾಯಿಸುವುದಿಲ್ಲ. ಅವನ್ನು ದೇವರಿಂದ ಪ್ರತ್ಯೇಕಿಸಲೂ ಆಗುವುದಿಲ್ಲ. ದೇವರ ಪೂರ್ಣತೆಗೆ ಅವು ಹಾಗಿರಬೇಕಾದುದು ಆವಶ್ಯಕವು. ಆದುದರಿಂದಲೇ ಜನರು ಬುದ್ಧನು ದೇವರನ್ನು ನಂಬಲಿಲ್ಲವೆಂದೂ ನೀತಿ ಧರ್ಮಗಳಲ್ಲಿ ಮಾತ್ರ ನಂಬಿಕೆ ಶ್ರದ್ಧೆಯುಳ್ಳವನಾಗಿದ್ದನೆಂದೂ ಭ್ರಾಂತಿಪಡುವಂತಾಯಿತು. ಅದರಿಂದಲೇ ಪರಿನಿರ್ವಾಣಶಬ್ದದ ಅರ್ಥವನ್ನು ತಿಳಿಯುವುದರಲ್ಲೂ ಜನರಿಗೆ ಭ್ರಾಂತಿಯುಂಟಾಯಿತು. ನಿರ್ವಾಣವೆಂದರೆ ಸಂಪೂರ್ಣವಾಗಿ ಇಲ್ಲದೆ ಹೋಗುವಿಕೆಯಲ್ಲ. ಇದರಿಂದ ಅನಾತ್ಮವಾದವು ಸೂಚಿತವಾಗುವುದೂ ಇಲ್ಲ. ನಿರ್ವಾಣ ಶಬ್ದದ ಅರ್ಥವು ಹೀಗಿದೆ. ನಮ್ಮಲ್ಲಿರುವ ಕೀಳು ಚೋದನೆಗಳನ್ನು ನಿರ್ನಾಮ ಮಾಡುವುದೆಂದು ಅದರ ಅರ್ಥವು. ನಮ್ಮಲ್ಲಿರುವ ದುಷ್ಟವಾಸನೆಗಳನ್ನು, ಕೆಟ್ಟಿರುವ

ಮತ್ತು ಕೆಡುವ ಭಾವಗಳನ್ನು ನಿರ್ಮೂಲವಾಗುವಂತೆ ನಾಶಪಡಿಸುವುದೆಂದು ತಾತ್ಪರ್ಯವು. ನಿರ್ವಾಣವೆಂದರೆ ಭಯಂಕರವಾದ ಸ್ಮಶಾನದ ಮೃತಶಾಂತಿಯಲ್ಲವು. ಮತ್ತೇನೆಂದರೆ ಜೀವಂತವಾದ ಆತ್ಮಸುಖಶಾಂತಿಯು. ಹೃದಯದಿಂದ ಕಾಣುವ ಸ್ವಸಂವೇದ್ಯವಾದ, ಸ್ವಪ್ರಕಾಶವಾದ ತನ್ನ ವಾಸ್ತವ ನೆಲೆಯನ್ನು ಕೃತಕೃತ್ಯತೆಯಿಂದ ಮನಗಂಡ ನಿತ್ಯಶಾಂತಿ ರೂಪವಾದುದು ಎಂದು ತಿಳಿಯಬೇಕು.

ಬುದ್ಧದೇವನ ಉಪದೇಶ ಕ್ರಮದಲ್ಲಿ ಹೊಸ ರೀತಿ.

ಮಾನವನು ಇತರರನ್ನು ತನ್ನಂತೆಯೇ ಕಾಣಬೇಕೆಂದು, ಎಷ್ಟೇ ಅಲ್ಪವಾದ ಅಥವಾ ಹೀನವಾದ ಪ್ರಾಣಿಯನ್ನೂ ತನ್ನಷ್ಟೆ ಬೆಲೆಯುಳ್ಳ ಚೇತನವೆಂದು ಸಹಾನುಭೂತಿಯಿಂದ ತಿಳಿದು ವರ್ತಿಸಬೇಕೆಂದು ಬುದ್ಧನು ಉಪದೇಶಿಸಿದನು. ಮನುಷ್ಯನು ತನ್ನನ್ನು ಈ ಲೋಕದ ಪ್ರಾಣಿಗಳಲ್ಲಿ ಶ್ರೇಷ್ಠನೆಂದೂ, ಇತರ ಪ್ರಾಣಿಗಳನ್ನು ತಾನು ಆಳಬಹುದೆಂದೂ ಭಾವಿಸುವುದು ಅಹಂಕಾರದ ಪಾಪಕರವಾದ ಭಾವನೆಯೆಂದು ತಿಳಿಯ ಹೇಳಿದನು. ಅದಕ್ಕೆ ಬದಲಾಗಿ ಮಾನವನು ಇತರ ಪ್ರಾಣಿಗಳಿಗಿಂತ ಹೆಚ್ಚಿನ ಸೌಕರ್ಯಗಳನ್ನು ಪಡೆದಿರುವುದರಿಂದ ಇತರ ಪ್ರಾಣಿಗಳ ಯೋಗಕ್ಷೇಮಗಳ ಸಾಧನೆಗಾಗಿ ನಿಯಮಿತನಾಗಿರುವ ಧರ್ಮದರ್ಶಿ ಎಂದು ತನ್ನನ್ನು ತಿಳಿಯಬೇಕೆಂದು ಉಪದೇಶ ಮಾಡಿದನು ; ಮತ್ತು ಆ ಮಹರ್ಷಿಯು ಹಾಗೆಯೇ ನಡೆದುಕೊಳ್ಳುತ್ತಿದ್ದನು. "ಉಪದೇಶಕ್ಕಿಂತಲೂ ಉದಾಹರಣೆಯು ಮೇಲು" ಎಂಬ ಗಾದೆಯಂತೆ, ಆ ಸತ್ಯ ತತ್ವವನ್ನು ಅನುಸರಿಸಿ ಆಚರಿಸುತ್ತಿದ್ದನು. ಬ್ರಾಹ್ಮಣರು ಪ್ರಾರಂಭಿಸಿದ್ದ ಒಂದು ಯಜ್ಞದಲ್ಲಿ ಹೋಮಕ್ಕಾಗಿ ತಂದಿದ್ದ ಕುರಿಯನ್ನು ರಕ್ಷಿಸಲು ಬುದ್ಧನು ಮಾಡಿದ ಪ್ರಯತ್ನವು ಸಫಲವಾಯಿತು. ಆ ಬ್ರಾಹ್ಮಣರು ಕರುಣೆಯೇ ಮೂರ್ತಿವೆತ್ತು ಬಂದಿದ್ದಂತಿದ್ದ ಬುದ್ಧದೇವನ ತೇಜಸ್ಸನ್ನು ನೋಡಿ ತಮ್ಮ ಮೂಢ ನಂಬಿಕೆಗೂ ಕ್ರೂರ ವರ್ತನೆಗೂ ನಾಚಿ, ಮನ ಮರುಗಿ, ಹೃದಯವು ದ್ರವಿಸಿ, ಆ ಪಶು

ಗಳನ್ನು ಬಿಡುಗಡೆ ಮಾಡಿದರು. ನೀವು ಹೋಮವನ್ನು ಮಾಡಬೇಕೆಂದಿದ್ದರೆ ನಿಮ್ಮ ಭೋಗಾಭಿಲಾಷೆಯನ್ನೂ, ವಿಷಯಾಶೆಯನ್ನೂ ಹೋಮ ಮಾಡಿರಿ. ಆ ಹೋಮದಿಂದ ನಿಮ್ಮ ಯಾಗವು ಉತ್ಕರ್ಷವನ್ನು ಪಡೆಯುತ್ತದೆ ಎಂದು ತಿಳಿಯ ಹೇಳಿದನು. ಅವರು ಹಾಗೆ ಮಾಡಿದರು. ಹೀಗೆ ಬೌದ್ಧಮತವು ಬೆಳೆದು ಹರಡಿತು.

**ಬುದ್ಧದೇವನೂ ವರ್ಣ ಧರ್ಮಗಳೂ.**

ವರ್ಣ ಧರ್ಮದ ವಿಷಯದಲ್ಲಿ ಬುದ್ಧದೇವನು ಹೀಗೆ ಉಪದೇಶಿಸುತ್ತಿದ್ದನು. ಜಾತಿ ಪದ್ಧತಿಯ ಸಂಪ್ರದಾಯ ಆಚಾರಗಳು ಈಗಿನಂತೆಯೇ ಆಗಲೂ ದುಷ್ಟವಾಗಿದ್ದುವು. ಜಾತಿ ಪದ್ಧತಿಯ ವಿಷಯದಲ್ಲಿ ಮೇಲು ಕೀಳು ಎಂಬ ಭಾವನೆಯು ಹಿಂದೂ ಧರ್ಮದ ತಿರುಳನ್ನೇ ತಿನ್ನುತ್ತಿದ್ದಿತು. ಆದರೂ ಗೌತಮ ಬುದ್ಧನು ವರ್ಣಾಶ್ರಮ ಧರ್ಮವನ್ನು ನಿಂದಿಸಲಿಲ್ಲ. ವರ್ಣ ಧರ್ಮವೂ ಜಾತಿ ಪದ್ಧತಿಯೂ ಭಿನ್ನವಾದುವೆಂದು ವಿವರಿಸಿದನು. ಅವೆರಡರಲ್ಲೂ ಸಾಮ್ಯವಿಲ್ಲವೆಂದು ಅವನ ಮತವು. ವರ್ಣವು ಜೀವವನ್ನು ಕೊಟ್ಟರೆ ಜಾತಿ ಪದ್ಧತಿಯು ಜೀವನಾಶಕವಾಗಿದೆ; ಮತ್ತು ಅಸ್ಪೃಶ್ಯತೆಯು ಜಾತ್ಯಾಚಾರಗಳಿಂದ ಉಂಟಾಗುವ ಪರಿಣಾಮಗಳಲ್ಲಿ ಅತ್ಯಂತದುಷ್ಟವಾದುದೆಂದು ಜನರಿಗೆ ತಿಳಿಯ ಹೇಳಿದನು. ಎಲ್ಲ ಮಾನವರೂ ಸಮಾನರೆಂಬ ಭಾವವನ್ನು ಬಿಡುವುದರಿಂದ ಬೌದ್ಧಮತವನ್ನು ಮಾತ್ರವಲ್ಲ ಮಾನವೀಯತೆಯನ್ನೇ ಬಿಟ್ಟಂತಾಗುತ್ತದೆ. ಆದುದರಿಂದ ಐಹಿಕವಾದ ಭೋಗವಿಲಾಸಗಳಿಗೆ ಮಾರು ಹೋಗಬೇಡಿರಿ. ಬುದ್ಧ ದೇವನು ಪಡೆದ ಸ್ಫೂರ್ತಿಗೆ ಮೂಲವಾದ ಸಂಸ್ಕೃತ ಭಾಷೆಯನ್ನೂ ಸಂಸ್ಕೃತ ಸಾಹಿತ್ಯವನ್ನೂ ವ್ಯಾಸಂಗ ಮಾಡುವವರೆಗೆ ನಿಮ್ಮ ಬೌದ್ಧಮತದ ತಿಳಿವಳಿಕೆಯೂ ವಿದ್ಯಾಭ್ಯಾಸವೂ ಪೂರ್ಣವಾಗುವುದಿಲ್ಲ. ಪಾಶ್ಚಾತ್ಯರಲ್ಲಿ ಕಾಣಬರುವ ವೈಭವ ಜೀವನದ ಬೆಡಗೂ ನಿಮ್ಮನ್ನು ಮರುಳುಗೊಳಿಸದಿರಲಿ. ಬುದ್ಧದೇವನು ನಿಮ್ಮ ಈ ಐಹಿಕ ಜೀವನದ ವೈಭವ ಬೆಡಗುಗಳು ಅಲ್ಪಕಾಲ ಮಾತ್ರ ಇರುವ ತೋರಿಕೆಗಳಾಗಿವೆ. ಈ ತೋರಿಕೆಯಲ್ಲಿ ಹುರುಳಿಲ್ಲವೆಂಬುದನ್ನು

ಮನಗಂಡರೆ ಇಹದಲ್ಲಿ ಶಾಂತಿ ಸುಖವೂ ಪರದಲ್ಲಿ ಮಾತಿಗೂ ಮನಸ್ಸಿಗೂ ಮೀರಿರುವ ಆನಂದವೂ ದೊರೆಯುವುದರಲ್ಲಿ ಸಂದೇಹವಿಲ್ಲವೆಂದು ನೀವು ಎಂದಿಗೂ ಮರೆಯಲಾಗದ ರೀತಿಯಲ್ಲಿ ಬುದ್ಧದೇವನು ತಿಳಿಸಿರುತ್ತಾನೆ. ಬುದ್ಧದೇವನೂ, ಏಸುಕ್ರಿಸ್ತನೂ, ಇವರು ಮಾಡಿದುದಾದರೂ ಏನು? ಮಹಮ್ಮದನು ತನ್ನ ೫೦ನೆಯ ವರ್ಷದವರೆಗೆ, ಮಕ್ಕಾ ಪಟ್ಟಣವನ್ನು ಬಿಡುವವರೆಗೆ ಹಾಗಿದ್ದನು. ಇವರ ಜೀವನವು ಸ್ವಾರ್ಥತ್ಯಾಗದಿಂದಲೂ ಫಲಾಭಿಲಾಷೆಯಲ್ಲಿ ಸನ್ಯಾಸದಿಂದಲೂ ತುಂಬಿದ್ದಿತಲ್ಲವೇ? ಬುದ್ಧದೇವನ ಜೀವನಕ್ರಮವು ಇಂಡಿಯಾ, ಚೀನಾ, ಜಪಾನ್, ಬರ್ಮಾ, ಸಿಲೋನ್, ಮಲಯ ದೇಶಗಳಲ್ಲಿ ಶಾಶ್ವತವಾದ ಪ್ರಭಾವವನ್ನು ಉಂಟುಮಾಡಿದೆ.'' ಈಚೆಗೆ ಬುದ್ಧದೇವನ ಜೀವನ ಮತ್ತು ಉಪದೇಶಗಳನ್ನು ಪಾಶ್ಚಾತ್ಯ ವಿದ್ವಾಂಸರೂ ವಿಮರ್ಶಕರೂ ಹೆಚ್ಚು ಹೆಚ್ಚಾಗಿ ವ್ಯಾಸಂಗಮಾಡುತ್ತಲೂ ಅಭಿನಂದಿಸಿ ಅನುಸರಿಸುತ್ತಲೂ, ಪ್ರಚಾರ ಮಾಡುತ್ತಲೂ ಇರುವುದು ನ್ಯಾಯವೇ ಆಗಿದೆ. ಅತಿಗಳಿಗೆ ಹೋಗದೆ ಮಧ್ಯಮಮಾರ್ಗವನ್ನು ಅನುಸರಿಸಬೇಕೆಂಬುದು ಅವನ ಸುವರ್ಣೋಪದೇಶವು.

ಜಾತಿಪದ್ಧತಿಯು ದುಷ್ಟವೆಂದೂ ಅದನ್ನು ಎಷ್ಟು ಬೇಗ ನಾಶ ಮಾಡಿದರೆ ಅಷ್ಟು ಒಳ್ಳೆಯದೆಂದೂ, ಇಂಡಿಯಾ ದೇಶಕ್ಕೆಲ್ಲ, ಅಷ್ಟೇ ಏಕೆ, ಇಡಿಯ ಪ್ರಪಂಚದಲ್ಲಿ ಒಂದೇ ಜಾತಿಯು ಇರುವಂತಾಗುವುದೇ ಶ್ರೇಯಸ್ಕರವೆಂದೂ ನಮ್ಮ ನೆಚ್ಚಿನ ನಾಯಕ ಶ್ರೇಷ್ಠರಾದ ಪಂಡಿತ ಜವಹರಲಾಲ್ ನೆಹರುರವರು ಆಗಾಗ್ಗೆ ಹೇಳುತ್ತಿದ್ದಾರೆ. ವಿನೋಬಾ ಭಾವೆಯವರೂ ಜಾತಿಪದ್ಧತಿಯ ಪ್ರಯೋಜನವು ಹಿಂದೆ ಒಂದಾನೊಂದು ಕಾಲದಲ್ಲಿ ಬೇಕಾಗಿತ್ತು. ಈಗಿನ ಸನ್ನಿವೇಶಗಳಿಗೆ ಅದು ಹೊಂದಿ ಬರುತ್ತಿಲ್ಲವಾದುದರಿಂದ ಅದನ್ನು ಮರ್ಯಾದೆಯಿಂದ ಬೀಳ್ಕೊಟ್ಟು ಕಳುಹಿಸಿಬಿಡಬೇಕೆಂದೂ ಹೇಳುತ್ತಾ ಬಂದಿದ್ದಾರೆ. ಡಾಕ್ಟರ್ ಎಸ್. ರಾಧಾಕೃಷ್ಣನ್‌ರವರೂ ಇದೇ ಅಭಿಪ್ರಾಯವನ್ನು ಆಗಾಗ್ಗೆ ತಮ್ಮ ಉಪದೇಶ ಭಾಷಣಗಳ ಮೂಲಕ ಪ್ರಚಾರ ಮಾಡುತ್ತಿದ್ದಾರೆ.

ರಾಜೇಂದ್ರ ಪ್ರಸಾದರು ಚಾತುರ್ವರ್ಣ್ಯ ಪದ್ಧತಿಯಲ್ಲಿ ಒಳಹೊಕ್ಕಿರುವ ದೋಷಗಳನ್ನು ನಿರ್ಮೂಲಮಾಡುತ್ತಿರಬೇಕೆಂದು ಹೇಳುತ್ತಿರುವುದು ಸರಿಎನಿಸುತ್ತದೆ. ಅದು ಗುಣವುಳ್ಳದ್ದಾದರೆ ದೋಷಗಳನ್ನು ಕಳೆದುಕೊಂಡು ಬೇರೊಂದು ರೀತಿಯಲ್ಲಿರುತ್ತದೆಂದು ತೋರುತ್ತದೆ.

———

# ಎರಡನೆಯ ಅಧ್ಯಾಯ

## ಸಾಹಿತ್ಯವು ಸಂಸ್ಕೃತಿಯ ಕನ್ನಡಿ

ಈ ಗ್ರಂಥದಲ್ಲಿನ ಮೊದಲನೆಯ ಭಾಗದಲ್ಲಿ ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯು ಹೇಗೆ ಪ್ರಾರಂಭವಾಗಿ ರೂಪಗೊಂಡು ಬೆಳಿಯಿತೆಂಬುದನ್ನು ಸಂಗ್ರಹವಾಗಿ ನಿರೂಪಿಸಲಾಗಿದೆ. ಋಗ್ವೇದಸಂಹಿತೆಯಲ್ಲಿನ ಕೆಲವು ಮಂತ್ರಗಳನ್ನೂ, ಐತರೇಯ ಬ್ರಾಹ್ಮಣ ಮತ್ತು ಆರಣ್ಯಕಗಳಿಂದ ಕೆಲವು ವಾಕ್ಯಗಳನ್ನೂ, ಯಜುರ್ವೇದ ಸಂಹಿತೆ, ಬ್ರಾಹ್ಮಣ, ಆರಣ್ಯಕಗಳಿಂದ ಕೆಲವು ವಾಕ್ಯಗಳನ್ನೂ, ಎಲ್ಲ ವೇದಗಳಿಗೆ ಸಂಬಂಧಪಟ್ಟಿರುವ ಉಪನಿಷತ್ತುಗಳಿಂದ ಹಲವು ವಾಕ್ಯಗಳನ್ನೂ ಪ್ರಮಾಣಗಳನ್ನಾಗಿ ಉದಾಹರಿಸಲಾಗಿದೆ. ಹಾಗೆಯೇ ಆಪಸ್ತಂಬ ಧರ್ಮಸೂತ್ರ, ಯೋಗಸೂತ್ರ, ವೇದಾಂತಸೂತ್ರಗಳಿಂದಲೂ ಕೆಲವು ವಾಕ್ಯಗಳನ್ನು ಉದ್ಧರಿಸಿಕೊಡಲಾಗಿದೆ. ಇವುಗಳಿಂದ ಭಾರತಾರ್ಯರ ದಿನಗಟ್ಟಲೆಯ ಜೀವನವೂ, ಅವರ ಸಂಸ್ಕೃತಿಯೂ, ಇವೆರಡನ್ನೂ ತಿಳಿಸುವ ಸಾಹಿತ್ಯವೂ, ಹೇಗೆ ಪರಸ್ಪರವಾಗಿ ಪೂರಕಪೋಷಕಗಳಾಗಿರುತ್ತಾ ಮೇಲ್ಮೆಯನ್ನು ಪಡೆಯುತ್ತಾ ಬೆಳೆದುಬಂದಿರುತ್ತವೆ ಎಂಬ ವಿಷಯವನ್ನೂ ಸೂಚಿಸಲು ಪ್ರಯತ್ನಿಸಲಾಗಿದೆ. ಈ ಪ್ರಗತಿಗೆ ಧರ್ಮದ ತಿಳಿವಳಿಕೆ, ಧಾರ್ಮಿಕ ನಡೆವಳಿಕೆ ಇವುಗಳೇ ಕಾರಣವಾಗಿವೆ ಎಂಬುದನ್ನೂ ಸ್ವಲ್ಪಮಟ್ಟಿಗಾದರೂ ವಿವರಿಸಲಾಗಿದೆ. ಈಗ ಈ ಎರಡನೆಯ ಭಾಗದಲ್ಲಿ ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯು ಸ್ಮೃತಿ ಧರ್ಮಶಾಸ್ತ್ರಗಳಿಂದಲೂ, ಅರ್ಥಶಾಸ್ತ್ರ ಇತಿಹಾಸ ಪುರಾಣಗಳಿಂದಲೂ, ಕಲಾ ಕಾವ್ಯ ನಾಟಕಗಳಿಂದಲೂ, ನಿಬಂಧಸ್ಮೃತಿಗಳು ಮತ್ತು ದರ್ಶನಗಳಿಂದಲೂ ಮೇಲ್ಮೆ, ವಿಸ್ತಾರ, ಪರಿಷ್ಕಾರಗಳನ್ನು ಪಡೆಯುತ್ತಾ ಹೇಗೆ

ಮುಂದುವರಿಯುತ್ತಿದೆ ಎನ್ನುವುದನ್ನೂ ಸ್ವಲ್ಪಮಟ್ಟಿಗೆ ನಿರೂಪಿಸಲು ಪ್ರಯತ್ನಿಸಲಾಗುತ್ತದೆ.

ಸಂಸ್ಕೃತಿಯ ಮತ್ತು ಧರ್ಮದ ಸ್ವರೂಪವನ್ನು ಹಿಂದೆ ತಿಳಿಸಿದೆ.

ಸಂಸ್ಕೃತಿಯಿಂದ ಜನಜೀವನ ಹಸನಾಗುತ್ತದೆ.

ಧರ್ಮದ ತಿಳಿವಳಿಕೆ ಧಾರ್ಮಿಕ ನಡೆವಳಿಕೆಗಳಿಂದ ಜನಜೀವನ ಕ್ರಮವು ಹಸನಾಗುತ್ತದೆ, ಸಂಸ್ಕೃತವಾಗುತ್ತದೆ. ಹಸನಾದ ಜೀವನದಿಂದ ಸಂಸ್ಕೃತಿಯೂ ಮೇಲ್ಪಡುತ್ತಾ ಬೆಳೆಯುತ್ತದೆ. ಉಚ್ಚ ಸಂಸ್ಕೃತಿಯಿಂದ ಎಂದರೆ, ಒಳ್ಳೆಯ ನಡೆನುಡಿ ಭಾವಗಳ ಸಂಪತ್ತಿನಿಂದ, ಜನರಲ್ಲಿ ಉದಾತ್ತ ಜೀವನವನ್ನು ನಡೆಸಬೇಕೆಂಬ ಹಂಬಲವು ಬೇರೂರಿ ಬಲಗೊಳ್ಳುತ್ತದೆ. ಸಂಸ್ಕೃತಿ ಮತ್ತು ಭಾವ ಇವುಗಳಿಗೆ ಭಾಷೆಯು ವಾಹನವಾಗಿರುತ್ತದೆ. ಸಮಕಾಲೀನರಾದ ಜನರ ಸಂಸ್ಕೃತಿಯ ಮಟ್ಟವನ್ನು ನೋಡಿಯೂ ತಿಳಿಯಬಹುದಾದರೂ, ಕಾಲಾಂತರ ದೇಶಾಂತರಗಳಲ್ಲಿದ್ದ ಇರುವ ಜನರ ಸಂಸ್ಕೃತಿಯನ್ನು ತಿಳಿಯಬೇಕಾದರೆ ಭಾಷೆಯೇ ಗತಿಯು.

ಸಂಸ್ಕೃತಿಯೂ ಸಾಹಿತ್ಯವೂ.

ಭಾಷೆಯು ಬಾಳಬೇಕಾದರೆ ಶಾಶ್ವತವಾಗಿರಬೇಕಾದರೆ ಲಿಪಿಯೇ ಮುಖ್ಯತಮವಾದ ಸಾಧನವಾಗಿದೆ. ಭಾವಗಳು, ಉದಾತ್ತ ಭಾವಗಳು ಅಮರವಾಗಿರಬೇಕಾದರೆ ಭಾಷೆ ಲಿಪಿಗಳಿಂದಲೇ ಎಂಬುದು ಎಲ್ಲರಿಗೂ ತಿಳಿದಿರುತ್ತದೆ. ಭಾಷೆಯೂ ಉಚ್ಚ ಸಂಸ್ಕೃತಿಯಿಂದ ಮೇಲ್ಪಡುತ್ತಿರುತ್ತದೆ. ವ್ಯಾಕರಣ ನಿಯಮಗಳ ಪಾಲನೆಯಿಂದ ಭಾಷೆಯು ಸಂಸ್ಕೃತವಾಗುತ್ತದೆ. ಕವಿಯ ಹೃದಯವು ಸೌಂದರ್ಯಾನುಭವದಿಂದ ಭಾವಪೂರ್ಣವಾಗಿರುವಾಗ ಭಾವಾವೇಶದಿಂದ ಮಾತು ಕಾವ್ಯವಾಣಿಯು ಹೊರಹೊಮ್ಮುತ್ತದೆ. ಸಂಸ್ಕೃತವಾದ ಭಾಷೆಯಿಂದ ಸಾಹಿತ್ಯವು ರೂಪಗೊಳ್ಳುತ್ತದೆ. ಉತ್ತಮ ಗ್ರಂಥಗಳ ಸಮುದಾಯಕ್ಕೆ ಸಾಹಿತ್ಯವೆಂದು ಹೆಸರಿದೆ. ಸಾಹಿತ್ಯವನ್ನು ಜನಜೀವನದ ಪ್ರತಿಬಿಂಬವೆಂದು ವಿಮರ್ಶಕರು ತಿಳಿಸುತ್ತಾರೆ. ಉದಾತ್ತ

ಜೀವನದಿಂದ, ಭಾವಸಂಪತ್ತಿನಿಂದ ಸಾಹಿತ್ಯವು ಬೆಳೆಯುತ್ತಾ ಉತ್ತಮ ವಾಗುತ್ತಿರುತ್ತದೆ. ಸಾಹಿತ್ಯದಲ್ಲಿರುವ ಭಾವಗಳು ಜನಾನುರಾಗಕ್ಕೆ ಪಾತ್ರವಾಗಿದ್ದರೆ ಅಂತಹ ಸಾಹಿತ್ಯ ಗ್ರಂಥಗಳನ್ನು ಜನರು ಕಾಪಾಡಿ ಕೊಂಡು ಬರುತ್ತಾರೆ. ಆದರದಿಂದ ಓದುತ್ತಾರೆ. ಪ್ರೀತಿಯಿಂದ ವಿವರಿಸುತ್ತಾರೆ. ಉತ್ಸಾಹದಿಂದ ಪ್ರಚಾರ ಕಾರ್ಯಗಳಲ್ಲಿಯೂ ಮುಂದುವರಿಯುತ್ತಾರೆ. ಆದುದರಿಂದ ಹೀಗೆ ಉತ್ತಮ ಗ್ರಂಥಗಳೇ ಮುಂದು ಮುಂದಿನ ತಲೆಮಾರುಗಳ ಜನರಿಂದಲೂ ರಕ್ಷಿತವಾಗಿ ಚಿರಾಯುವಾಗಿರುತ್ತವೆ. ಈ ರೀತಿಯಲ್ಲಿ ಧರ್ಮ, ಸಂಸ್ಕೃತಿ, ಜನ ಜೀವನ, ಭಾಷೆ, ಲಿಪಿ, ಸಾಹಿತ್ಯಗಳು ಪರಸ್ಪರವಾಗಿ ನಿಕಟವಾದ ಸಂಬಂಧವುಳ್ಳವಾಗಿರುತ್ತವೆ. ಮುಂದುವರೆದಿರುವ ಜನರಲ್ಲಿ ಇವೆಲ್ಲವೂ ಮೇಲಿನ ಅಂತಸ್ತಿನಲ್ಲೇ ಇರುತ್ತವೆ. ಜನಜೀವನವು ಉದಾತ್ತವಾಗ ಬೇಕೆಂದು ಎಲ್ಲರೂ ಆಶಿಸುತ್ತಾರೆ. ಇದು ಜೀವನದ ಗುರಿ ಏನೆಂಬು ದರ ತಿಳಿವಳಿಕೆಯನ್ನೂ, ಆ ಗುರಿಯ ಉತ್ತಮತೆಯನ್ನೂ ಅವಲಂಬಿ ಸಿರುತ್ತದೆ.

ಜನಜೀವನದ ಗುರಿಗಳೇ ಪುರುಷಾರ್ಥಗಳು.

ನಮ್ಮ ಜೀವನವು ಸಾರ್ಥಕವಾಗಬೇಕಾದರೆ ನಾವು ಕೃತಕೃತ್ಯ ರಾಗಬೇಕಾದರೆ ಪುರುಷಾರ್ಥಗಳನ್ನು ವಿವೇಚಿಸಿ ತಿಳಿದು ಸಾಧಿಸುತ್ತಿರಬೇಕಾಗಿದೆ. "ಪ್ರಯೋಜನ ಮನುದ್ದಿಶ್ಯ ನಮಂದೋಽಪಿ ಪ್ರವರ್ತತೇ|" ಎಂದರೆ ದಡ್ಡನಾದಮಾನವನೂ ಯಾವುದೊಂದು ಪ್ರಯೋಜನವೂ ಇಲ್ಲದೆ ಕೆಲಸದಲ್ಲಿ ತೊಡಗುವುದಿಲ್ಲವು. ಹೀಗಿರುವುದು ಸ್ವಾಭಾವಿಕವಾಗಿದೆ. ಆದುದರಿಂದ ನಾವು ನಮ್ಮ ಜೀವನದಲ್ಲಿ ಪಡೆಯಲು ಅಪೇಕ್ಷಿಸುತ್ತಿರುವ, ಪಡೆಯುತ್ತಿರುವ ಪಲ ಗಳಿಗೆ ಗುರಿ ಎಂದು ಹೆಸರಿದೆ. ಹಾಗೆಯೇ ಅಪೇಕ್ಷಿಸಬೇಕಾದ, ಪ್ರಯತ್ನಿಸಿ ಪಡೆಯಬೇಕಾದ, ವಿಶೇಷ ಪ್ರಯೋಜನಗಳೂ ಇವೆ. ಇವಕ್ಕೂ ಗುರಿ ಎಂದೇ ಹೇಳಬಹುದು. ಪ್ರಯೋಜನ, ಉದ್ದೇಶ, ಧ್ಯೇಯ, ಫಲ, ಲಕ್ಷ್ಯ, ಗುರಿ ಇವೆಲ್ಲವೂ ಪರ್ಯಾಯ ಪದಗಳು,

ಎಂದರೆ ಒಂದೇ ಅರ್ಥವನ್ನು ತಿಳಿಸುವ ಬೇರೆ ಬೇರೆ ಪದಗಳು. ಇವನ್ನೇ ಪುರುಷಾರ್ಥಗಳೆಂದು ಶಾಸ್ತ್ರಗಳಲ್ಲೂ ಹೇಳಿದೆ. ಜನರು ಅಪೇಕ್ಷಿಸುವ, ದುಡಿದು ಪಡೆಯುತ್ತಿರುವ, ಅಪೇಕ್ಷಿಸಬೇಕಾದ, ಪ್ರಯತ್ನಿಸಿ ಪಡೆಯಬೇಕಾದ, ಜೀವನದ ಧ್ಯೇಯಗಳು ಅಥವಾ ಉದ್ದೇಶಗಳಿಗೆ ಪುರುಷಾರ್ಥಗಳೆಂದು ವ್ಯವಹಾರವಿದೆ.

ಜನರ ಪ್ರವೃತ್ತಿ ಮತ್ತು ಗುರಿಗಳು.

ಈ ಗುರಿಗಳು ಜನರ ಸ್ವಭಾವಕ್ಕೆ ಅನುಸಾರವಾಗಿಯೂ, ಅವರ ತಿಳಿವಳಿಕೆ, ರುಚಿ, ಸಂಸ್ಕೃತಿ ಇವುಗಳಅಂತಸ್ತಿಗೆ ತಕ್ಕಂತೆಯೂ, ಅವರವರ ವಯೋऽನುಗುಣವಾಗಿಯೂ ಭಿನ್ನಭಿನ್ನವಾಗಿರುತ್ತವೆ. ಜನರಲ್ಲಿ ಸಾಮಾನ್ಯವಾಗಿ ಎರಡು ಬಗೆಯುವರನ್ನು ನಾವು ಕಾಣುತ್ತೇವೆ. ಪ್ರತಿನಿತ್ಯವೂ ಬೆಳಗೆದ್ದ ಕೂಡಲೆ ತಮ್ಮ ತಮ್ಮ ಚಾಕರಿ ನೌಕರಿಗಳಿಗೆ ಹೋಗುತ್ತಿರುವವರನ್ನು ನಾವು ನೋಡುತ್ತಿರುತ್ತೇವೆ. ಅವರನ್ನು ಕುರಿತು ನೀವು ದುಡಿಯುವುದು ಏತಕ್ಕೆಂದು ಕೇಳಿದರೆ ದುಡ್ಡಿಗಾಗಿ ಎಂದೂ, ದುಡ್ಡು ಏತಕ್ಕೆ ? ಎಂದರೆ ಅನ್ನ ಬಟ್ಟೆಗಳಿಗಾಗಿ ಎಂದೂ, ಆ ಅನ್ನಬಟ್ಟೆಗಳೂ ಏತಕ್ಕೆ ? ಎಂದರೆ ಊಟಕ್ಕೂ ಹೊದೆದುಕೊಳ್ಳುವುದಕ್ಕೂ ಎಂದೂ, ಊಟವೂ ಹೊದೆದುಕೊಳ್ಳುವುದೂ ಏತಕ್ಕೆ ? ಎಂದರೆ ತೃಪ್ತಿ ಸುಖಕ್ಕೆ ಎಂದೂ ಉತ್ತರಗಳು ಬರುತ್ತವೆ. ತೃಪ್ತಿ ಸುಖವೇತಕ್ಕೆ ? ಎಂದು ಪ್ರಶ್ನೆಯು ಉಂಟಾಗುವುದಿಲ್ಲ. ಆದುದರಿಂದ ಜನಸಾಮಾನ್ಯಕ್ಕೆ ಜೀವನದಲ್ಲಿನ ಗುರಿಯು ಸುಖಪ್ರಾಪ್ತಿಯಾಗಿರುತ್ತದೆಂಬುದು ಗೊತ್ತಾಗುತ್ತದೆ. ಹಾಗೆಯೇ ಶೀಷೆಯನ್ನು ಹಿಡಿದು ಆಸ್ಪತ್ರೆ ಕಡೆಗೆ ಹೋಗುತ್ತಿರುವವರನ್ನೂ ಕೇಳಿದರೆ, ಔಷಧವನ್ನು ತರುವುದಕ್ಕೆಂದೂ, ಔಷಧವು ಏತಕ್ಕೆ ? ಎಂದರೆ ಕುಡಿಯುವುದಕ್ಕೆಂದೂ, ಕುಡಿಯುವುದು ಏತಕ್ಕೆ ಎಂದು ಪ್ರಶ್ನಿಸಿದರೆ ರೋಗವು ವಾಸಿಯಾಗುವುದಕ್ಕೆ ಅಥವಾ ದುಃಖ ನಿವೃತ್ತಿಗೆ ಎಂದೂ ಉತ್ತರಗಳು ದೊರೆಯುತ್ತವೆ. ರೋಗವು ಏಕೆ ಹೋಗಬೇಕೆಂದು ಪ್ರಶ್ನೆಯು ಉದ್ಭವಿಸುವುದಿಲ್ಲ. ಆದುದರಿಂದ ದುಃಖ ನಿವೃತ್ತಿಯೂ ಜನ ಸಾಮಾನ್ಯಕ್ಕೆ ಜೀವನದ ಗುರಿ ಎಂಬುದು ವ್ಯಕ್ತ

ವಾಗುತ್ತದೆ. ಹೀಗೆ ಸುಖಪ್ರಾಪ್ತಿಯೂ ದುಃಖ ನಿವೃತ್ತಿಯೂ ಎಲ್ಲ ಜನರಿಗೂ ಜೀವನದ ಗುರಿಯಾಗಿರುತ್ತವೆ ಎಂಬುದು ಗೊತ್ತಾಗುತ್ತದೆ. ಇವುಗಳಲ್ಲಿ ದುಡ್ಡು, ಅನ್ನ, ಬಟ್ಟೆ, ಊಟಗಳು ಸುಖಸಾಧನಗಳೂ, ಔಷಧವು ದುಃಖ ನಿವೃತ್ತಿ ಸಾಧನವೂ ಆಗಿರುತ್ತದೆ. ಇವಕ್ಕಾಗಿಯೇ ಜನರೆಲ್ಲರೂ ದುಡಿಯುತ್ತಿರುತ್ತಾರೆ. ಇದು ವ್ಯಾಪಕ ತಮವಾದ, ಮೂಲಭೂತವಾದ ಜೀವನದ ಗುರಿಯಾಗಿವೆ. ಆದುದರಿಂದ ಸುಖ ಪ್ರಾಪ್ತಿ, ದುಃಖ ನಿವೃತ್ತಿಗಳೇ ಜನಜೀವನದ ಗುರಿಗಳೆಂಬುದು ಸಿದ್ಧ ವಾಗುತ್ತದೆ.

ಜನರಲ್ಲಿ ನಾಲ್ಕು ಬಗೆ.

ಇನ್ನೊಂದು ದೃಷ್ಟಿಯಿಂದ ನೋಡಿದರೆ ಜನರಲ್ಲಿ ನಾಲ್ಕು ಪಂಗಡ ದವರು ಇರುವ ಹಾಗೆ ಕಾಣಬರುತ್ತದೆ. ೧. ಬಡವರೂ ಅಶಕ್ತರೂ ಅನುತ್ಸಾಹಿಗಳೂ ಆಗಿರುವ ಪಾಮರ ಜನರು. ೨. ಸ್ವಲ್ಪ ಮಟ್ಟಿಗೆ ಅನ್ನ, ಬಟ್ಟೆ, ಮನೆಗಳಿಗೆ, ಹೆಚ್ಚು ಕಡಿಮೆಯಾಗಿ, ಸಾಕು ಸಾಲದಹಾಗೆ ಸಂಪಾದನೆ ಇರುವ ಮಧ್ಯಮವರ್ಗದವರು. ೩. ಶಕ್ತರೂ ಮಹೋತ್ಸಾಹಿಗಳೂ, ಮಹಾಭಿಲಾಷಿಗಳೂ ದಕ್ಷರೂ ಸಾಹಸಿಗಳೂ ಆಗಿರುವ ಶ್ರೀಮಂತರು. ೪. ವಿವೇಕಿಗಳೂ ವಿಮರ್ಶಕರೂ ಮುಂದಾಲೋಚನೆಯುಳ್ಳ ಧಾರ್ಮಿಕರೂ, ಅತ್ಯಾಶೆಗೆ ಅಧೀನರಾಗದಿರುವ ದುರಾಶೆಗಳಿಗೆ ಒಳಗಾಗದಿರುವ ತೃಪ್ತಿ ಸ್ವಭಾವದವರು.

ಸಾಮಾಜಿಕ ಮತ್ತು ವೈಯಕ್ತಿಕ ಗುರಿಗಳು.

ಇವರಲ್ಲಿ ೧ ಮತ್ತು ೨ನೆಯ ವರ್ಗದವರು ಅಪೇಕ್ಷಿಸುತ್ತಿರುವ ಪಡೆಯುತ್ತಿರುವ ಜೀವನದ ಗುರಿಗಳು ಹೀಗಿರುತ್ತವೆ.—

ಅನ್ನಂ ಧಾನ್ಯಂ ವಸು ವಸುಮತೀತ್ಯುತ್ತರೇಣೋತ್ತರೇಣ
ವ್ಯಾಕೃಷ್ಯಂತೇ ಪರಮಕೃಪಣಾಃ ಪಾಮರಾ ಯದ್ವದಿತ್ಥಂ॥

ಇಂತಹ ಪಾಮರ ಜನರು ಮೊದಮೊದಲು ಅನ್ನವನ್ನು ಆಶಿಸುತ್ತಿರುತ್ತಾರೆ. ಅದಕ್ಕಾಗಿ ಊರಿನಲ್ಲಿ ಸುತ್ತಿ ಗೃಹಸ್ಥರ ಮನೆಗಳಲ್ಲಿ ಭಿಕ್ಷೆ

ಯನ್ನು ಬೇಡಿ ಬಂದ ಅನ್ನದಿಂದ ಜೀವಿಸುತ್ತಾರೆ. ಅದು ದೈವಕೃಪೆಯಿಂದ ಸುಲಭವಾಗಿ ದೊರೆಯುತ್ತಿದ್ದರೆ ಅಷ್ಟರಲ್ಲಿ ತೃಪ್ತರಾಗಿರುವುದಿಲ್ಲ. ಅವರು ಅಕ್ಕಿ ಮುಂತಾದ ಧಾನ್ಯವನ್ನು ಆಶಿಸುತ್ತಾರೆ. ಏಕೆಂದರೆ ಖಾಯಿಲೆ, ಅನಾರೋಗ್ಯ, ಮಳೆ, ಬಿಸಿಲು, ಅಶಕ್ತಿಗಳಿಂದ ಹೊರಗೆ ಹೋಗಿ ಸುತ್ತಿಬರಲಾಗದೆ ಹೋದಾಗ ತಮ್ಮ ಮನೆಯಲ್ಲಿಯೇ ಪಾಕಮಾಡಿಕೊಳ್ಳಲು ಅಕ್ಕಿ, ರಾಗಿ, ಜೋಳ ಮುಂತಾದ ದವಸವನ್ನು ಪಡೆಯಲು ಯಾಚಿಸುತ್ತಾರೆ. ಅವೂ ದೇವರ ದಯೆಯಿಂದ ದೊರೆಯುವಂತಾದರೆ ಆಮೇಲೆ ಹಣವನ್ನು ದೊರಕಿಸುವಂತೆ ದೇವರನ್ನು ಪ್ರಾರ್ಥಿಸುತ್ತಾರೆ. ಏಕೆಂದರೆ, ದೇಶಾಟನ, ತೀರ್ಥಸ್ನಾನ, ಕ್ಷೇತ್ರಯಾತ್ರೆ, ದೇವರ ಮೂರ್ತಿ ವಿಶೇಷಗಳ ದರ್ಶನ ಈ ಮುಂತಾದ ಉದ್ದೇಶಗಳನ್ನು ಮುಂದುಮಾಡಿ, ಊರಿಂದೂರಿಗೆ ಸುಲಭವಾಗಿ ತೆಗೆದುಕೊಂಡು ಹೋಗಬಹುದಾದ ಹಣವನ್ನು ದೊರಕಿಸೆಂದು ದೇವರನ್ನು ಬೇಡುತ್ತಾರೆ. ಪರೀಕ್ಷೆಗಾಗಿಯೋ ಎಂಬಂತೆ ಈಶ್ವರಾನುಗ್ರಹದಿಂದ ಅದೂ ದೊರೆಯುವಂತಾದರೆ, ಆ ಮೇಲೆ ಅವರು ಆ ಹಣಕ್ಕೆ ಮತ್ತು ತಮಗೂ ಕಳ್ಳಕಾಕರು ಮುಂತಾದವರಿಂದ ಸಂಭವಿಸಬಹುದಾದ ವಿಪತ್ತುಗಳನ್ನು ವಿಜ್ಞಾಪಿಸುತ್ತಾ, ಅವನ್ನು ನಿವಾರಿಸಿಕೊಳ್ಳಲು ಸ್ಥಿರ ಆಸ್ತಿಗಳಾದ ಮನೆ, ಗದ್ದೆ, ತೋಟ, ಹೊಲ ಮುಂತಾದವುಗಳನ್ನು ಆಶಿಸುತ್ತಾ ದೇವರಲ್ಲಿ ಮೊರೆ ಇಡುತ್ತಾರೆ. ಹೀಗೆ ಆಶೆಗಳು ಸ್ವಲ್ಪ ಸ್ವಲ್ಪವಾಗಿ ಹೆಚ್ಚುತ್ತಲೇ ಇರುತ್ತಾ ಇಂಥವರನ್ನು ಆಕರ್ಷಿಸುತ್ತಿರುತ್ತವೆ. ಈ ಎರಡು ಪಂಗಡದ ಜನರೂ ತಮ್ಮ ದಿನಗಟ್ಟಲೆಯ ಜೀವನಕ್ಕೆ ಅವಶ್ಯಕವಾದ ಪದಾರ್ಥಗಳನ್ನು ಸಂಪಾದಿಸುವುದರಲ್ಲಿ ಬೆಳಗಿನಿಂದ ಸಾಯಂಕಾಲದವರೆಗೂ ದುಡಿಯುತ್ತಾ ಬಳಲುತ್ತಿರುತ್ತಾರೆ. ಮೇಲಾದ ವಿಷಯಗಳನ್ನು ಯೋಚಿಸುವುದಕ್ಕೆ ಮನಶ್ಶಾಂತಿಯಾಗಲಿ ವಿರಾಮವಾಗಲಿ ಇಲ್ಲದೆ, ತಕ್ಕಷ್ಟು ತಿಳಿವಳಿಕೆಯೂ ಇಲ್ಲದೆ ಇಂಥವರು ಹೇಗೋ ಹಾಗೆ ಕಾಲವನ್ನು ದಬ್ಬುತ್ತಿರುತ್ತಾರೆ.

ಆರ್ಥಿಕ ಸಂಪತ್ತೇ ಲೌಕಿಕ ಜೀವನದ ಗುರಿ ಪಾಮರರಿಗೆ.

ಇನ್ನು ಮೂರನೆಯ ಪಂಗಡದ ಜನರು ತಮ್ಮ ಹಣವನ್ನು ಲೇವಾದೇವಿ, ಉದ್ಯೋಗ, ವ್ಯವಸಾಯ, ವ್ಯಾಪಾರ, ವಾಣಿಜ್ಯ ಮುಂತಾದ ವ್ಯವಹಾರಗಳಲ್ಲಿ ಉಪಯೋಗಿಸಿ ತಮ್ಮ ಮುಂದಾಲೋಚನೆ, ಬುದ್ಧಿಕೌಶಲ, ಸಾಹಸಗಳಿಂದ ಹೆಚ್ಚು ಲಾಭವನ್ನು ಸಂಪಾದಿಸುತ್ತಾರೆ. ಇವರ ದೃಷ್ಟಿಯಲ್ಲಿ "ದುಡ್ಡಿದ್ದವನು ದೊಡ್ಡಪ್ಪ" ಎಂಬುದೇ ಜೀವನದ ಗುರಿಯಾಗಿರುತ್ತದೆ. ಅತ್ಯಾಸೆಗೆ ಅಧೀನರಾಗಿ ಇವರು ಅನ್ಯಾಯವಾಗಿಯೂ ಹೆಚ್ಚು ಲಾಭವನ್ನು ಆಶಿಸಿ ಪಡೆಯುತ್ತಾರೆ. ಆವಶ್ಯಕವಾದರೆ, ಸುಸಮಯವು ಒದಗಿದರೆ, ಇವರು ದುರಾಸೆಯಿಂದ ಅಧರ್ಮದಿಂದಲೂ ಹಣವನ್ನು ಸಂಪಾದಿಸಿ ಕೂಡಿಡಲು ಹಿಂಜರಿಯುವುದಿಲ್ಲ. ಇವರಲ್ಲಿ ಅತ್ಯಾಸೆ ದುರಾಸೆಗಳು ಮುಂದಾಗಿರುತ್ತಾ ದಾನಧರ್ಮಗಳಲ್ಲಿ ಆಸಕ್ತಿಯನ್ನಾಗಲಿ, ದೇವರಲ್ಲಿ ನಂಬಿಕೆ, ಪಾಪದಲ್ಲಿ ಭಯ ಇವನ್ನಾಗಲಿ, ತಲೆ ಎತ್ತದಂತೆ ತುಳಿದು ಮೆಟ್ಟುತ್ತಿರುತ್ತವೆ. ಅವನ್ನು ತಮ್ಮ ಜೀವನದ ಗುರಿಯಾದ ಧನ ಸಂಗ್ರಹಕ್ಕೆ ಅಡ್ಡಿ ಎಂದು ತಿಳಿದು ಇಂಥವರು ಅವನ್ನು ಯೋಚಿಸಲೂ ಮನಸ್ಸನ್ನು ಬಿಡುವುದಿಲ್ಲ. ಪೂರ್ವಪುಣ್ಯದಿಂದ ಧನಸಂಗ್ರಹವು ಹೆಚ್ಚುತ್ತಾ ಬಂದಹಾಗೆಲ್ಲಾ, ತಮ್ಮ ಬುದ್ಧಿ ಕೌಶಲ ಪ್ರಯತ್ನಗಳನ್ನು ಹೆಚ್ಚಾಗಿ ಮೆಚ್ಚಿಕೊಳ್ಳುತ್ತಾ, ಧರ್ಮವನ್ನು ಕಡೆಗಣಿಸುತ್ತಾರೆ. ಧಾರ್ಮಿಕರನ್ನೂ ಅವರ ಬುದ್ಧಿವಾದಗಳನ್ನೂ ಹೇಡಿತನವೆಂದು ತೆಗಳುತ್ತಾ ತಿರಸ್ಕರಿಸುತ್ತಾರೆ. ಇಂಥವರ ನಡೆವಳಿಕೆಯನ್ನು ಕವಿಯು

ಭೂಮಿಃ ಖಂ ದ್ಯೌಃ ದ್ರುಹಿಣ ಗೃಹಮಿತ್ಯುತ್ತರೇಣೋತ್ತರೇಣ
ವ್ಯಾಮುಹ್ಯಂತೇ ವಿಪುಲಮತಯೋಽ ಪ್ಯಸ್ಥಿರೇಣ್ಯೈವ ಧಾವಾನ್ನ॥

ಶ್ರೀಮಂತ ಜನರ ಗುರಿಗಳು.

ಇಂಥವರು ಈ ಭೂಲೋಕವೆಲ್ಲವನ್ನೂ ತಮ್ಮ ಸ್ವಂತ ಆಸ್ತಿಯ ಹಾಗೆ ಪಡೆದರೂ ತೃಪ್ತರಾಗುವುದಿಲ್ಲ. ಆಮೇಲೆ ಜಲಲೋಕವೆಲ್ಲವನ್ನೂ ತಮ್ಮದನ್ನಾಗಿ ಮಾಡಿಕೊಳ್ಳಲು ಆಶಿಸುತ್ತಾರೆ. ಆಮೇಲೂ ತೃಪ್ತ

ರಾಗದೆ ವಾಯುಲೋಕವೆಲ್ಲವನ್ನೂ ತಮ್ಮ ಸ್ವಾಧೀನದಲ್ಲಿರುವಂತೆ ಮಾಡಿಕೊಳ್ಳಲು ಹವಣಿಸುತ್ತಿರುತ್ತಾರೆ. ಕಡೆಗೆ ಸತ್ಯಲೋಕವನ್ನೂ ಆಶಿಸಿ ಅದನ್ನೂ ತಮ್ಮದನ್ನಾಗಿ ಮಾಡಿಕೊಂಡರೂ ಇವರ ಆಶೆಯು ತೃಪ್ತಿಯಿಂದ ಶಾಂತವಾಗುವುದಿಲ್ಲ. ಇವರು ವಿದ್ಯಾವಂತರಾದರೂ, ತಿಳಿಯಾದ ತಿಳಿವಳಿಕೆಯುಳ್ಳವರಾದರೂ, ಮೇಲು ಮೇಲಿನ ಸಂಪತ್ತನ್ನು ಪಡೆಯುವ ಆಶೆಯಿಂದ ಮೋಹಗೊಂಡಿರುತ್ತಾರೆ. ಆದರೂ ಇಂಥವರೂ ಪಡೆಯುವ ಸಂಪತ್ತೆಲ್ಲವೂ ಅನಿತ್ಯವೂ, ಅಶಾಶ್ವತವೂ ಆಗಿದ್ದರೂ ಅದರ ಮೋಹಕ್ಕೆ ಸಿಕ್ಕಿ ಅಜ್ಞಾನಿಗಳಂತಿರುತ್ತಾರೆ. ಇಂಥವರಿಗೆ

ನಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿ ವರ್ಧತೇ॥ ನಾ.ಪ. ೩ ೩೭

ಆಶೆಗಳನ್ನು ಪೂರೈಸಿ ಅನುಭವಿಸುತ್ತಿರುವುದರಿಂದ ತೃಪ್ತಿಯುಂಟಾಗುವುದಿಲ್ಲವು. ಆಶೆಯು ಶಾಂತವಾಗುವುದೂ ಇಲ್ಲವು. ಬೆಂಕಿಗೆ ಸೌದೆಯನ್ನು ಹಾಕುತ್ತಿದ್ದರೆ ಅದು ಹೆಚ್ಚಿ ಇನ್ನೂ ಹೆಚ್ಚಿನ ಸೌದೆಯನ್ನೇ ಸುಡುತ್ತಿರುವಂತೆ ಇವರ ಕೆಲವು ಆಶೆಗಳು ನೆರವೇರಿದ ಕೂಡಲೆ ಇನ್ನೂ ಹೆಚ್ಚಿನ ಆಶೆಗಳು ಉಂಟಾಗುತ್ತಾ ಇವರನ್ನು ಪೀಡಿಸುತ್ತಲೇ ಇರುತ್ತವೆ. ಇಂಥವರು ಹಣದ ಮೋಹದಿಂದ

ಆಶಾಪಾಶ ಶತೈರ್ಬದ್ಧಾಃ ಕಾಮಕ್ರೋಧ ಪರಾಯಣಾಃ ।
ಈಹಂತೇ ಕಾಮಭೋಗಾರ್ಥಂ ಅನ್ಯಾಯೇನಾರ್ಥ ಸಂಚಯಾನ್॥
ಭ.ಗೀ.

ಇದಮದ್ಯ ಮಯಾ ಲಬ್ಧಂ ಇದಂ ಪ್ರಾಪ್ಸ್ಯೇ ಮನೋರಥಂ ।
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಂ॥ ಭ.ಗೀ. ೧೬,೧೩.
ಅಸೌ ಮಯಾ ಹತಶ್ಶತ್ರುಃ ಹನಿಷ್ಯೇ ಚಾ ಪರಾನಪಿ॥

ಅನೇಕ ಬಗೆಯ ಆಶೆಗಳ ಬಲೆಗೆ ಸಿಕ್ಕಿ ತಮ್ಮ ಆಶೆಗೆ ಅಡ್ಡಿಯಾದವರ ಮೇಲೆ ಕ್ರೋಧವನ್ನು ಸಾಧಿಸುತ್ತಾರೆ. ತಮ್ಮ ಆಶೆಯನ್ನು ಈಡೇರಿಸಿಕೊಳ್ಳಲು ಅನ್ಯಾಯದಿಂದಲೂ ಧನಾರ್ಜನೆಗೆ ತೊಡಗುತ್ತಾರೆ. ಹಾಗೆಯೇ ಈ ಇಷ್ಟಾರ್ಥವು ಈಗ

ಆಶೆಯನ್ನು ತಣಿಸುವುದು ಅತ್ಯಾಶೆದುರಾಶೆ ದುರಂತಗಳಿಗೆ ದಾರಿ.

ನನಗೆ ದೊರೆತಿದೆ. ಇನ್ನೊಂದನ್ನೂ ಪಡೆಯುವೆನು. ಇಷ್ಟು ಹಣವು ನನ್ನದಾಗಿದೆ. ಇನ್ನಷ್ಟು ಹಣವೂ ನನ್ನದಾಗುವುದು. ಈ ಶತ್ರು ವನ್ನು ಸಂಹರಿಸಿರುತ್ತೇನೆ, ಇತರ ಶತ್ರುಗಳನ್ನೂ ಸಂಹರಿಸುವೆನು. ಹೀಗೆ ಇಂಥವರ ಮನಸ್ಸಿನಲ್ಲಿ ಆಶೆಗಳು ಮುಗಿಯುವುದೇ ಇಲ್ಲ, ಈ ರೀತಿಯಲ್ಲಿ ಲೌಕಿಕ ಜೀವನದಲ್ಲಿ ಮುಳುಗಿರುವವರ ಜೀವನದ ಗುರಿ ಗಳು ಅನ್ನ, ಬಟ್ಟೆ, ಮನೆ, ಅಧಿಕಾರ, ಐಶ್ವರ್ಯ, ರಾಜ್ಯ, ಚಕ್ರಾಧಿ ಪತ್ಯ ಮುಂತಾಗಿ ಹೆಚ್ಚುತ್ತಲೇ ಇರುತ್ತವೆ. ಇವುಗಳ ಜೊತೆಯಲ್ಲೇ ಅನಿವಾರ್ಯವಾಗಿ ಹೆಚ್ಚುತ್ತಿರುವ ಆತಂಕ, ಕ್ಲೇಶಗಳನ್ನೂ ಇವರು ಈ ಧನ ಮದದಿಂದ, ಆಶಾಮೋಹದಿಂದ ಗಮನಿಸದೆ ಇರುವುದೂ ಉಂಟು. ತೃಪ್ತಿ, ಶಾಂತಿ, ನೆಮ್ಮದಿ, ಸುಖಗಳಂತೂ ಇವರಿಗೆ ದೂರವೇ ಆಗುತ್ತಿರುತ್ತವೆ. ಅಲ್ಲದೆ ಇವರಲ್ಲಿ ಅಧಿಕಾರ, ಐಶ್ವರ್ಯದ ಸ್ಪರ್ಶದಿಂದ ಮಾನವತ್ವದ ಸ್ಪರ್ಶವೂ ದೂರವೇ ಆಗುತ್ತಾ ಬರುತ್ತ ದೆಂಬುದನ್ನೂ ಇವರು ಗಮನಿಸದೆ ಇರುತ್ತಾರೆ. ಧರ್ಮವನ್ನು ಕಡೆ ಗಣಿಸಿ ಅದಕ್ಕೆ ತಕ್ಕ ಸ್ಥಾನವನ್ನು ಇವರು ತಮ್ಮ ಮನಸ್ಸಿನಲ್ಲಿ ಕೊಡದೆ ಇರುವುದರ ಫಲವಿದು ಎಂಬುದು ಇವರಿಗೆ ತಿಳಿಯದೆ ಇದೆ.

ರಾಜಕೀಯ ಗುರಿಗಳು.

ರಾಜಕೀಯದಲ್ಲೂ ಲೌಕಿಕ ರೀತಿಯಲ್ಲೇ ಆಡಳಿತವನ್ನು ನೆರವೇ ರಿಸಬೇಕೆಂದೂ, ಧರ್ಮ, ಮತ, ಇವುಗಳನ್ನು ಸರ್ಕಾರದ ರೀತಿ ನೀತಿಗಳಲ್ಲಿ ಸೇರಿಸಬಾರ ದೆಂದೂ ನಮ್ಮ ನೆಚ್ಚಿನ ರಾಜಕೀಯ ಮುಖಂ ಡರೂ ಹೇಳುತ್ತಿದ್ದಾರೆ. ನಮ್ಮ ವಿಶ್ವಾಸ ಗೌರವಗಳಿಗೆ ಪಾತ್ರರಾ ಗಿರುವ ದೇಶದಲ್ಲಿ ಪ್ರಮುಖ ನಾಯಕರಾಗಿರುವ ಪಂಡಿತ ನೆಹರೂ ರವರೂ ಜನಸಾಮಾನ್ಯಕ್ಕೆ ಸರ್ಕಾರವು ಒದಗಿಸಬೇಕಾದ ಗುರಿಗಳು ಆರು "The essential needs of people to be supplied by the first and second five-year plans are six" ಎಂದು ಘೋಷಿಸಿರುತ್ತಾರೆ. ಅವು ಯಾವುವೆಂದರೆ ಆಹಾರ, ಬಟ್ಟೆ, ಮನೆ, ಆರೋಗ್ಯ, ಉದ್ಯೋಗ, ವಿದ್ಯಾಭ್ಯಾಸ ಇವೇ

ಅವರ ಗುರಿಗಳೆಂದು ಸಾರುತ್ತಿದ್ದಾರೆ. ಈ ವಿದ್ಯಾಭ್ಯಾಸದಲ್ಲೂ ದುಡಿದು ದುಡ್ಡನ್ನು ಗಳಿಸುವ ನೌಕರಿ, ಚಾಕರಿಗಳನ್ನು ನಿರ್ವಹಿಸುವ ಕಾರ್ಖಾನೆಗಳಲ್ಲೂ ಗ್ರಾಮೋದ್ಯೋಗಗಳಲ್ಲೂ, ವ್ಯವಸಾಯದಲ್ಲೂ ತಿಳಿವಳಿಕೆಯನ್ನು ಉಂಟುಮಾಡುವುದೇ ಸರ್ಕಾರದವರ ಗುರಿ ಎಂದಿದ್ದಾರೆ. ಅಲ್ಲದೆ, ವಿದ್ಯಾಭ್ಯಾಸ ಕಾಲದಲ್ಲೂ ವಿದ್ಯಾರ್ಥಿಗಳು ದುಡಿದು ಹಣ ಗಳಿಸಬಲ್ಲ ವಿದ್ಯಾ ಪದ್ಧತಿಯನ್ನೇ ಆದರಿಸಬೇಕೆಂದೂ ಹೇಳುತ್ತಿದ್ದಾರೆ.

ಐಹಿಕ ಗುರಿಗಳ ಲೋಪಗಳು.

ರಾಜಕೀಯ, ಅಧಿಕಾರ, ಐಶ್ವರ್ಯಗಳಲ್ಲೂ ಆರ್ಥಿಕ ಸಂಪತ್ತಿನಲ್ಲೂ ಇತರ ಜನಾಂಗಗಳಿಗಿಂತ ತುಂಬ ಮುಂದುವರೆದಿದ್ದ ಬ್ರಿಟಿಷ್ ಜನರು ದೇಶವನ್ನು ಹೆಚ್ಚಿಸುತ್ತಲೂ, ವಸಾಹತುಗಳನ್ನು ಸಂಪಾದಿಸುತ್ತಲೂ, ಚಕ್ರಾಧಿಪತ್ಯವನ್ನು ಸ್ಥಾಪಿಸಿ ಪ್ರಪಂಚದ ಜನಾಂಗಗಳಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿದ್ದರು. ಅವರು "The sun never sets upon our empire!" ಎಂದರೆ ನಮ್ಮ ಚಕ್ರಾಧಿಪತ್ಯದಲ್ಲಿ ಸೂರ್ಯನು ಅಸ್ತನಾಗುವುದೇ ಇಲ್ಲ. ಎಂದು ಸಂತೋಷದಿಂದ ಘೋಷಿಸುತ್ತಾ ಹೆಮ್ಮೆ ಪಡುತ್ತಿದ್ದರು. ಈಗ ಅವರು ಆ ಸ್ಥಾನವನ್ನು ಕಳೆದುಕೊಂಡಿರುವುದು ಎಲ್ಲರಿಗೂ ಗೊತ್ತಿದೆ. ಅವರ ವಿಷಯದಲ್ಲಿ ನಮ್ಮ ನಾಯಕರು "This is the first time in history when people have begun to say that we do not want extension of our state or territories." ಎಂದರೆ "ಪ್ರಪಂಚದ ಚರಿತ್ರೆಯಲ್ಲಿ ತುಂಬ ಮುಂದುವರಿದವರೆನ್ನಿಸಿಕೊಂಡಿರುವ ಒಂದು ಜನಾಂಗದವರು ನಮ್ಮ ದೇಶವನ್ನು ವಿಸ್ತರಿಸುವುದಕ್ಕಾಗಲಿ ರಾಜ್ಯವನ್ನು ಹೆಚ್ಚಿಸುವುದಕ್ಕಾಗಲಿ ನಾವು ಆಶಿಸುವುದಿಲ್ಲವೆಂದು ಹೇಳಲು ಪ್ರಾರಂಭಿಸಿರುವುದು ಇದೇ ಮೊದಲಾಗಿದೆ" ಎಂದು ಹೇಳಿರುತ್ತಾರೆ. ಇದರಿಂದ ಜನರೂ ಜನಾಂಗಗಳೂ ಆಶಿಸಿದ

ಗುರಿಯೂ ಪಡೆದ ಫಲವೂ ಅವರ ನಿರೀಕ್ಷಣೆಯನ್ನು ಭಂಗಗೊಳಿಸಿದ ವೆಂಬುದು ಗಮನಾರ್ಹವಾಗಿದೆ. ಧರ್ಮವನ್ನು ಬದಿಗೊತ್ತಿ ದುಡಿದರೆ ಸುಖವು ಬಾರದು ಎಂದು ಹೇಳಬಹುದು. ಈ ಅಂಶವು ರಾಜಕೀಯ ಮುಖಂಡರ ಮನಸ್ಸಿಗೆ ಒಲಿದುಬಂದಿಲ್ಲವು. ಇಂದಲ್ಲದಿದ್ದರೆ ಮುಂದಾದರೂ ಅದು ಅವರ ಮನಸ್ಸಿಗೆ ಒಪ್ಪಿಬರುತ್ತದೆಂದು ನಂಬಿ ನಿರೀಕ್ಷಿಸೋಣ.

ಕೇವಲ ಲೌಕಿಕ ಗುರಿಗಳು, ಪ್ರೇಯೋ ಜೀವನವು ಕಡೆಗಾದರೂ ಅತೃಪ್ತಿಕರವಾಗಿರುತ್ತದೆ.

ಸಾಮ್ರಾಜ್ಯದ ವೈಭವದಲ್ಲೂ, ಆರ್ಥಿಕ ಸಂಪತ್ತಿನ ಹೆಚ್ಚಿಗೆಯಲ್ಲೂ ಆಡಳಿತ ಅಧಿಕಾರಗಳ ವಿಸ್ತಾರದಲ್ಲೂ, ವ್ಯಾಪಾರ ವಾಣಿಜ್ಯಗಳ ಕೌಶಲ್ಯದಲ್ಲೂ, ಯಂತ್ರ ತಯಾರಿಕೆಗಳ ಸಾಮರ್ಥ್ಯದಲ್ಲೂ ಮುಂದುವರಿಯುವುದು ಮಾನವ ಜೀವನದ ಗುರಿ ಎಂದು ತಿಳಿದಿರುವ ಪಾಶ್ಚಾತ್ಯ ರಾಷ್ಟ್ರಗಳು ಎಂದರೆ ಇಂಗ್ಲೆಂಡ್, ಅಮೆರಿಕಾ, ರಷ್ಯಾ, ಫ್ರಾನ್ಸ್, ಜರ್ಮನಿ ಮುಂತಾದವು ತಮ್ಮ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಬೇಕಾಗಿ ಬಂದಿದೆ. ಅವರ ಈ ಲೌಕಿಕ ಅಭ್ಯುದಯಗಳು ಅವರಿಗೆ ಶಾಂತಿ ಸುಖಗಳನ್ನು ಉಂಟುಮಾಡಿಲ್ಲವೆಂಬುದಷ್ಟೇ ಅಲ್ಲವು. ಜನರು ಈಗ ಕೇವಲ ಲೌಕಿಕ ಜೀವನವು ತೃಪ್ತಿಕರವಲ್ಲ. ಶಾಂತಿ ಸುಖಗಳು ದೂರವಾಗುತ್ತಿವೆ ಎಂಬುದನ್ನು ಗಮನಿಸುತ್ತಿದ್ದಾರೆ. ಇದನ್ನು ನಾವೂ ಗಮನಿಸಬೇಕು. ಈ ಲೌಕಿಕ ಜೀವನದಲ್ಲಿ ಸಂಪಾದಿಸಬಹುದಾದ ಸಂಪತ್ತುಗಳು ಎಷ್ಟೇ ಹೆಚ್ಚಿನವಾದರೂ, ಜೀವನದ ಸುಖ ಸೌಕರ್ಯಗಳನ್ನು ಎಷ್ಟೇ ಹೆಚ್ಚಿಸಿದರೂ, ಅದರಿಂದ ನಿಜವಾದ ಶಾಂತಿ ಸುಖಗಳು ದೊರೆಯುವುದಿಲ್ಲವೆಂಬುದನ್ನು ಗಮನಿಸಬೇಕು. ಸ್ವದೇಶಾಭಿಮಾನ patriotism, ಕುಲಾಭಿಮಾನ ಅಥವಾ ಸ್ವಜನಾಭಿಮಾನ nationalism, ಇವುಗಳಲ್ಲಿ ಪರಾಕಾಷ್ಠೆಯನ್ನು ಪಡೆದಿರುವ ಪಾಶ್ಚಾತ್ಯ ರಾಷ್ಟ್ರಗಳು ಪರಸ್ಪರವಾಗಿ ಅಧಾರ್ಮಿಕವಾದ ಸ್ಪರ್ಧೆ, ಅಸೂಯೆ, ಅಪನಂಬಿಕೆಗಳಿಂದ ಶಾಂತಿ, ನೆಮ್ಮದಿ, ಸುಖಗಳನ್ನು ಪಡೆಯಲಾರದೆ

ಇವೆ ಎಂಬುದನ್ನು ಗಮನಿಸಬೇಕು. "Earn more, spend more, enjoy more, raise the standard of life." ಎಂದರೆ "ಹೆಚ್ಚಾಗಿ ಸಂಪಾದಿಸಿ, ಹೆಚ್ಚಾಗಿ ವೆಚ್ಚಮಾಡಿ, ಹೆಚ್ಚಾಗಿ ಸುಖಪಡಿ, ಜೀವನ ಕ್ರಮದ ಅಂತಸ್ತನ್ನು ಏರಿಸಿರಿ" ಎಂಬ ರೀತಿ ನೀತಿಯನ್ನು ಅನುಸರಿಸುವುದರಿಂದಲೂ ಶಾಂತಿ ನೆಮ್ಮದಿ ಸುಖಗಳು ದೂರದೂರವೇ ಆಗುತ್ತಿರುತ್ತವೆಂಬುದನ್ನು ಪಾಶ್ಚಾತ್ಯರೂ ಮನಗಂಡ್ಡು ಹೇಳುತ್ತಿದ್ದಾರೆ. ನಾವೂ ಅದನ್ನು ಗಮನಿಸಬೇಕು. ಇದೆಲ್ಲವೂ ಧಾರ್ಮಿಕ ವಿದ್ಯಾಭ್ಯಾಸವನ್ನು ಉದಾಸೀನಮಾಡಿ ಕೈಬಿಟ್ಟು ಕೇವಲ ಲೌಕಿಕ ವಿದ್ಯಾಭ್ಯಾಸವನ್ನೇ ಜನರು ಪಡೆದುದರ ಮತ್ತು ಅದನ್ನೇ ಮುಂದಿನ ತಲೆಮಾರಿನವರಿಗೂ ಕೊಟ್ಟು ಕೊಡುತ್ತಿರುವುದರ ಫಲವೆನ್ನ ಬೇಕು. ಹಾಗೆಯೇ ಧಾರ್ಮಿಕ, ಆಧ್ಯಾತ್ಮಿಕ ಜೀವನದ ಗುರಿಯನ್ನು ಬದಿಗೊತ್ತಿ, ಲೌಕಿಕ ಜೀವನದ ಗುರಿಯನ್ನೇ ಮುಂದುಮಾಡಿಕೊಂಡು ದರ ಪರಿಣಾಮವೆನ್ನದೆ ಗತ್ಯಂತರವಿಲ್ಲವು. ಇದನ್ನು ದುಡಿಯಲಾರದ ಅಲಸಿಗರ ಆತ್ಮಪ್ರತ್ಯಯಹೀನರಾದ ಸೋಮಾರಿಗಳ, ಮೇಲಾದ ಜೀವನಕ್ರಮವನ್ನು ಅರಿಯಲಾರದ ಅವಿವೇಕಿಗಳ, ಹೇಡಿಗಳ ಮಾತು ಎಂದು ತಿರಸ್ಕರಿಸಬಾರದು. ಇದು ವಸ್ತುಸ್ಥಿತಿಯ ಕಥನವೆಂಬುದನ್ನು ತಿಳಿಯಬೇಕು (statement of facts).

ಪ್ರೇಯೋ ಜೀವನಕ್ಕಿಂತ ಶ್ರೇಯೋ ಜೀವನವು ಮೇಲಾದುದು.

ಆದುದರಿಂದಲೇ ಜೀವನವು ಲೌಕಿಕವಾಗಿರುವಂತೆ ಪಾರಮಾರ್ಥಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಇರುತ್ತದೆ ಎಂಬ ಸತ್ಯಾಂಶವನ್ನು ಭಾರತಾರ್ಯರು ಮೊದಲು ಮನಗಂಡರು. ಅದನ್ನು ಅನುಸರಿಸಿ ಜೀವನದ ಗುರಿಗಳನ್ನೂ ಲೌಕಿಕ ಅಥವಾ ಐಹಿಕ ಮತ್ತು ಆಮುಷ್ಮಿಕಗಳೆಂದೂ, ಪಾರಮಾರ್ಥಿಕ ಅಥವಾ ಆಧ್ಯಾತ್ಮಿಕಗಳೆಂದೂ, ವಿವೇಚನೆ ಅನುಭವಗಳಿಂದ ವಿಂಗಡಿಸಿ ತಿಳಿಯ ಹೇಳಿದ್ದಾರೆ. ಲೌಕಿಕ ಜೀವನದ ಗುರಿಗಳನ್ನು ಅರ್ಥ ಕಾಮಗಳಿಂದ ಪುರುಷಾರ್ಥಗಳಲ್ಲಿ ಸಂಗ್ರಹಿಸಿ ಹೇಳಿದರು. ಅಲ್ಲದೆ ಅರ್ಥ, ಕಾಮಗ

ಳನ್ನು ಧರ್ಮದಿಂದಲೇ ಸಂಪಾದಿಸಬೇಕೆಂದೂ, ಹಾಗೆ ಸಂಪಾದಿಸಿದ ಅರ್ಥಕಾಮಗಳನ್ನು ಧರ್ಮಕ್ಕಾಗಿಯೇ ವಿನಿಯೋಗಿಸಬೇಕೆಂದೂ, ಹಾಗಾದರೆ ಮಾತ್ರ ಅವು ಪುರುಷಾರ್ಥಗಳಾದಾವೆಂದೂ ಎಂದರೆ ಅಪೇಕ್ಷಿಸಬೇಕಾದ ಪ್ರಯತ್ನಸಿ ಪಡೆಯಬೇಕಾದ ಜೀವನದ ಗುರಿಗಳೆನ್ನಿಸಿಕೊಳ್ಳಲು ಅರ್ಹಗಳಾಗುತ್ತವೆಂದೂ ಮನಗಂಡು ವಿವರಿಸಿ ಬೋಧಿಸಿದರು. ಧರ್ಮವನ್ನು ಬಿಟ್ಟು ಸಂಪಾದಿಸಿದ ಸಂಪತ್ತೂ, ಸೌಕರ್ಯಗಳೂ, ಶಾಂತಿ, ಸುಖಗಳನ್ನು ಕೊಡಲಾರವೆಂದೂ ಅವುಗಳಿಂದ ನಮ್ಮ ಜೀವನವು ಅತೃಪ್ತಿ, ಅಶಾಂತಿ, ಆತಂಕ, ಅಸೂಯೆ, ಅಪಕಾರ, ಪ್ರತೀಕಾರ, ಅಧೈರ್ಯಗಳಿಂದ ತುಂಬಿರುತ್ತಾ ದುಃಖವನ್ನೇ ಉಂಟುಮಾಡುತ್ತಿರುವುವೆಂದೂ ತಿಳಿಯಹೇಳಿದರು.

ಪ್ರಾಪ್ತಾಃ ಶ್ರಿಯಃ ಸಕಲ ಕಾಮದುಘಾಸ್ತತಃ ಕಿಂ
ದತ್ತಂ ಪದಂ ಶಿರಸಿ ವಿದ್ವಿಷತಾಂ ತತಃ ಕಿಂ ।
ಸಂಪ್ರೀಣಿತಾಶ್ಚ ವಿಭವೈಃ ಸ್ವಜನಾಸ್ತತಃ ಕಿಂ
ಕಲ್ಪಂ ಸ್ಥಿತಂ ತನುಭೃತಾಂ ತನುಭಿಸ್ತತಃ ಕಿಂ ॥

ವೇದಾಭ್ಯಾಸವ್ಯಸನ ರಸಿಕೈಃ ಸ್ಥೀಯತೇ ತಾವತಾ ಕಿಂ
ಸೂಕ್ಷ್ಮಾಬುದ್ಧಿಃ ಶ್ರುತಮಿವ ವಿಶತ್ಯಶ್ರುತಂ ತಾವತಾ ಕಿಂ ।
ವಾದಾರಂಭೇ ಜಯತಿ ನಿಯತಂ ವಾದಿನಸ್ತಾವತಾ ಕಿಂ
ನಿರ್ವೇದಾರ್ತಂ ನಯದಿ ಹೃದಯಂ ಶಾಂತಿಮಭ್ಯೇತಿ ಪುಂಸಃ ॥

ತೃಪ್ತಿಕರವಾಗಲಾರದ ಸಂಪತ್ತು ಪುರುಷಾರ್ಥವಾಗಲಾರದು.

ಎಂದರೆ ನಮ್ಮ ಎಲ್ಲ ಬಗೆಯ ಆಶೆಗಳನ್ನೂ ನೆರವೇರಿಸಿಕೊಳ್ಳಲು ಸಂಪತ್ತುಗಳನ್ನು ಸಂಪಾದಿಸಿದುದಾಯಿತು. ಅದರಿಂದ ದೊರೆತಿರುವ ಫಲವಾದರೂ ಏನು ? ಅದರಿಂದ ತೃಪ್ತಿ ಸುಖಗಳು ದೊರೆತಿಲ್ಲವಲ್ಲ! ಅದಕ್ಕಾಗಿ ಇನ್ನೇನನ್ನಾದರೂ ಮಾಡಬೇಕಾದುದು ಉಳಿದಿದೆಯೇ ? ಎಂಬ ಪ್ರಶ್ನೆಯು ಏಳುತ್ತಲೇ ಇರುತ್ತದೆ. ಹಾಗೆಯೇ ನಮ್ಮ ಶತ್ರುಗಳ ತಲೆಯ ಮೇಲೆ ಕಾಲಿಟ್ಟು ಗೆದ್ದುದೂ ಆಯಿತು. ಅದರಿಂದಲಾದರೂ ಏನು ? ಆಮೇಲೆ ಏನು ? ಅದರಂತೆಯೇ ನಮ್ಮ ಜನಾಂಗದವರನ್ನು ನಾನಾ ಬಗೆಯ ವೈಭವಗಳಿಂದ ಸಂತೋ

ಷಗೊಳಿಸಿದುದೂ ಆಯಿತು. ಆದರಿಂದ ತಾನೆ ಏನು ? ಆವೋಲಾದರೂ ಏನು ? ಅದೇ ರೀತಿಯಲ್ಲಿ ಆರೋಗ್ಯವನ್ನು ಗಳಿಸಿ ಕಾಪಾಡಿ ನಮ್ಮ ಶರೀರವೂ ಬಹು ದೀರ್ಘಕಾಲದವರೆಗೆ ಶಕ್ತಿಯುಳ್ಳದ್ದಾಗಿ ಬದುಕಿರುವಂತೆ ಮಾಡಿಕೊಂಡಿರಲಾಗಿದೆ. ಅದರಿಂದಲೂ ಏನು ? ಆವೋಲೂ ಏನು ? "ಆವುದೋ ಬೇಕಿಹುದು, ಮನಮಿಹುದು ತವಕದಲಿ, ಪಾಡಲರಿಯೆ ಪದದಿ ಬೇಡಲರಿಯೆ," ಎನ್ನುವಹಾಗಿದೆಯಲ್ಲ! ಎಂದರೆ ಐಹಲೌಕಿಕವಾದ ಅಭ್ಯುದಯಗಳನ್ನು ಎಷ್ಟು ಹೆಚ್ಚುಹೆಚ್ಚಾಗಿ ಪಡೆಯುತ್ತಿದ್ದರೂ ಅವುಗಳಿಂದ ನಮಗೆ ತೃಪ್ತಿ, ಅಲಂಭಾವ, ನೆಮ್ಮದಿ, ಸುಖ ಶಾಂತಿಗಳು ಉಂಟಾಗುತ್ತಿಲ್ಲವಲ್ಲ! ಅದಕ್ಕೆ ಏನನ್ನು ಮಾಡಬೇಕು ? ಹೇಗೆ ಮಾಡಬೇಕು ? ಎಂಬುದು ಗೊತ್ತಾಗುತ್ತಿಲ್ಲವಲ್ಲ! ಎಂದು ಹಂಬಲಿಸುತ್ತಾರೆ.

ಕಿರಿಯರು, ಹಿರಿಯರಿಗೆ ನಮಸ್ಕಾರವನ್ನು ಮಾಡಿದರೆ ಆ ಹಿರಿಯರು ಕಿರಿಯರನ್ನು ಉದ್ದೇಶಿಸಿ "ಆಯುರಾರೋಗ್ಯೈಶ್ವರ್ಯಾಭಿವೃದ್ಧಿರಸ್ತು" ಎಂದು ಹರಸುತ್ತಾರೆ. ಎಂದರೆ, ಆಯುಸ್ಸೂ, ಆರೋಗ್ಯವೂ, ಐಶ್ವರ್ಯವೂ ನಿನಗೆ ಹೆಚ್ಚುತ್ತಿರಲಿ. ಎಂದು ಅರ್ಥವಿದೆ. ಲೌಕಿಕರಾದ ಜನರು ಇದನ್ನೇ ಅಪೇಕ್ಷಿಸುತ್ತಾರೆ. ಲೋಕದೃಷ್ಟಿಯಿಂದ ಇದು ಉಚಿತವೂ ಆಗಿದೆ ಎಂಬುದು ನಿಜ. ಆದರೆ ಪರಮಾರ್ಥ ದೃಷ್ಟಿಯಿಂದ ನೋಡಿದರೆ ಇದರ ಟೊಳ್ಳುತನವು ಎದ್ದು ಕಾಣುತ್ತದೆ. ಮಹಾಭಾರತದಲ್ಲಿ ಹೀಗೆ ಹೇಳಿದೆ :

ಆರೋಗ್ಯಂ ಇಂದ್ರಿಯಾಶ್ಲಾಘ್ಯಂ ಐಶ್ವರ್ಯಂ ಶತ್ರುಶಾಲತಾ |
ವಿಯೋಗೋ ಬಾಂಧವೈರಾಯುಃ ಕಿಂತತ್‌ಯೇನ ಸುಖಂ ಭವೇತ್ ||

ಆರೋಗ್ಯವು ತುಂಬ ಹೆಚ್ಚಿದರೆ, ಶರೀರವು ಕೊಬ್ಬಿ ನಮ್ಮ ಹತೋಟಿಯನ್ನು ಮೀರುತ್ತದೆ. ಇಂದ್ರಿಯಗಳು ನಮ್ಮ ಅಧೀನದಲ್ಲಿರದೆ ನಮ್ಮನ್ನು ಅತಿಯಾಗಿ ವಿಷಯಾನುಭವದ ಕಡೆಗೆ ಎಳೆಯುತ್ತವೆ. ಹಾಗೆಯೇ ಐಶ್ವರ್ಯವೂ ಅಧಿಕಾರವೂ ಹೆಚ್ಚಿದರೆ ನಮ್ಮ ಧನಮದ,

ಅಧಿಕಾರಮದಗಳಿಂದ ಶತ್ರುಗಳು ಹೆಚ್ಚುತ್ತಾರೆ. ಅಸೂಯೆಯಿಂದಲೂ ಶತ್ರುಗಳ ಸಂಖ್ಯೆಯೂ ಹೆಚ್ಚುತ್ತದೆ. ನಮ್ಮ ಆಯುಸ್ಸು ತುಂಬ ಹೆಚ್ಚಾದರೆ ನಮಗಿಂತ ಕಿರಿಯರಾದ ನಮ್ಮ ಬಂಧುಮಿತ್ರರು ನಮ್ಮೆದುರಿಗೆ ಮೃತರಾಗುತ್ತಾರೆ ಅಥವಾ ಅವರ ಮರಣವನ್ನು ಕೇಳಿ ನಾವು ದುಃಖಿತರೇ ಆಗುತ್ತೇವೆ. ಹೀಗಿರುವಲ್ಲಿ ಈ ಆಯುಸ್ಸು ಆರೋಗ್ಯ, ಐಶ್ವರ್ಯಗಳಲ್ಲಿ ಯಾವುದು ನಿಮಗೆ ನಿಜವಾಗಿ ಸುಖವನ್ನು ಕೊಡಬಲ್ಲುದು ? ಎಂದು ವಿಮರ್ಶಿಸಿದರೆ ಇವೆಲ್ಲವೂ ಹೆಚ್ಚಿದರೆ ನಿಜವಾಗಿಯೂ ಆತಂಕ ದುಃಖಕ್ಕೇ ಕಾರಣವಾಗುತ್ತದೆಂಬುದು ಮನವರಿಕೆಯಾಗುತ್ತದೆ. ಇದು ನಿರಾಶಾಭಾವದ ಹೇಡಿತನದ ಆಲಸ್ಯದ ಉದ್ಗಾರ ವಚನಗಳಲ್ಲವು. ಇವಲ್ಲಿ ಯಾವುದನ್ನೂ ಸರಿಯಲ್ಲವೆಂದು ತೋರಿಸಲಾಗುವುದಿಲ್ಲ. This is nothing but a statement of facts. ಎಂದರೆ ನಿಜವಾದ ಅನುಭವದ ಮಾತುಗಳಿವು. ಇದು ಕೇವಲ ವಸ್ತುಸ್ಥಿತಿಯ ಕಥನ ಮಾತ್ರವಾಗಿ ನಿಜವಾಗಿದೆ. "Uneasy lies the head that wears a crown." ಎಂದರೆ ಚಕ್ರವರ್ತಿಯ ತಲೆಯು ಐಶ್ವರ್ಯ ಅಧಿಕಾರಗಳ ಗುರುತಾದ ಕಿರೀಟವನ್ನು ಧರಿಸಿ ಬೆಳಗುತ್ತಿದ್ದರೂ ಅವನ ಮನಸ್ಸು ಆತಂಕಗಳಿಂದ ತಲ್ಲಣಿಸುತ್ತಿರುತ್ತದೆ. ಧರ್ಮದ ಹಿನ್ನೆಲೆ ಬೆಂಬಲ ಪ್ರೇರಣೆಗಳಿಲ್ಲದೆ ಇವನ್ನು ಹೆಚ್ಚಾಗಿ ಸಂಪಾದಿಸಿದರೆ ಇವು ಸುಖಕಾರಣಗಳಾಗದೆ ದುಃಖಕ್ಕೇ ಕಾರಣಗಳಾಗುತ್ತವೆಂಬುದನ್ನು ತಿಳಿಯಬಹುದು. ಇವನ್ನು ಧರ್ಮದಿಂದಲೇ ಸಂಪಾದಿಸಿ ಧರ್ಮಕ್ಕಾಗಿಯೇ ವಿನಿಯೋಗಿಸುತ್ತಿದ್ದರೆ ಮಾತ್ರ ಇವೂ ಆತಂಕ, ಅಸೂಯೆಗಳಿಗೆ ಕಾರಣವಾಗದೆಇರುತ್ತವೆ.

ಧರ್ಮದಿಂದ ಸುಖ,
ಅಧರ್ಮದಿಂದ ದುಃಖ.

ಇಂತಹ ಅಸಹಾಯ ಸ್ಥಿತಿಯು ಬಂದೊದಗದಿರಲೆಂದೇ ನಮ್ಮ ಪೂರ್ವಜರಾದ ಮಹಾಪುರುಷರು ಪುರುಷಾರ್ಥಗಳನ್ನೂ ಅವುಗಳನ್ನು ಪಡೆಯುವ ರೀತಿ ನೀತಿಗಳನ್ನೂ ಇತಿ ಮಿತಿಗಳನ್ನೂ ಹೀಗೆ ವಿವರಿಸಿರುತ್ತಾರೆ. ಧರ್ಮವನ್ನು ಬಿಟ್ಟು ಎಷ್ಟೇ ದುಡಿದರೂ

ಎಷ್ಟನ್ನೇ ಸಂಪಾದಿಸಿದರೂ ಅದರಿಂದ ನಿಜವಾದ ಸುಖವು ದೊರೆಯು ವುದಿಲ್ಲ. * ಆದುದರಿಂದ ಪುರುಷಾರ್ಥಗಳನ್ನು ಹೀಗೆ ತಿಳಿದು ಪಡೆಯ ಬೇಕು. ಹೇಗೆಂದರೆ—ಧರ್ಮ ಅರ್ಥ ಕಾಮ ಮೋಕ್ಷಗಳೆಂದು ನಾಲ್ಕು ಪುರುಷಾರ್ಥಗಳಿವೆ. ಅವುಗಳಲ್ಲಿ ಅರ್ಥ ಕಾಮಗಳನ್ನು ಬಿಡಬೇಕಾದುದಿಲ್ಲ. ಸಂಪಾದಿಸುವುದು ಕಷ್ಟವೆಂದು ಬಿಟ್ಟರೆ ಅದು ಹೇಡಿತನವಾಗುತ್ತದೆ. ಅಲ್ಲದೆ ಅವನ್ನು ಬಿಡಲಾಗುವುದೂ ಇಲ್ಲ. ಅವನ್ನು ಪಡೆಯುವವರೆಗೆ ಆಸೆಯು ನಮ್ಮನ್ನೂ ಪೀಡಿಸುತ್ತಲೇ ಇರುತ್ತದೆ. ಆದರೆ ಅವನ್ನು ಧರ್ಮದಿಂದಲೇ ಸಂಪಾದಿಸಬೇಕು. ಧರ್ಮಕ್ಕಾಗಿಯೇ ಅವನ್ನು ವಿನಿಯೋಗಿಸಬೇಕು. ಹೀಗಾದರೆ ಅವು ದುಃಖಕರವಾಗುವುದಿಲ್ಲ. ಹಾಗಲ್ಲದೆ ಅಧರ್ಮದಿಂದ ಅರ್ಥ ಕಾಮ ಗಳನ್ನು ಸಂಪಾದಿಸಿದರೆ ಅದರಿಂದ ಇತರರಿಗೆ ಸಂಕಟವಾಗುತ್ತದೆ.

"ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ |"
"ಧರ್ಮಏವ ಹತೋಹಂತಿ ಧರ್ಮೋರಕ್ಷತಿ ರಕ್ಷಿತಃ |"

ಧರ್ಮದ ಸರಳ ಪ್ರಥಮರೂಪ.

ನಾವು ಇತರರಿಗೆ ಉಪಕಾರವನ್ನು ಮಾಡಿದರೆ ಅದರಿಂದ ನಮಗೆ ಪುಣ್ಯವು ಬರುತ್ತದೆ. ಹಾಗೆಯೇ ನಾವು ಪರ ರಿಗೆ ಸಂಕಟವನ್ನುಟುಂಮಾಡಿದರೆ ಅದರಿಂದ ನಮಗೆ ಪಾಪವು ಗಂಟುಬೀಳುತ್ತದೆ. ಪುಣ್ಯ ದಿಂದ ಸುಖವೂ ಪಾಪದಿಂದ ದುಃಖವೂ ತಪ್ಪದೆ ಉಂಟಾಗುತ್ತದೆ. ಅದರಂತೆಯೇ ನಾವು ಧರ್ಮವನ್ನು ಕೈಬಿಟ್ಟು ತುಳಿದರೆ ಅದು ನಮ್ಮನ್ನು ದುಃಖಕ್ಕೆ ಈಡುಮಾಡುತ್ತದೆ. ಹಾಗಲ್ಲದೆ ಧರ್ಮವನ್ನು ನಾವು ಪಾಲಿಸಿದರೆ ಆಚರಿಸಿದರೆ ಅದು ನಮ್ಮನ್ನು ಕಾಪಾಡುತ್ತದೆ. ಪಾಪವು ನಮ್ಮನ್ನು ಪಶ್ಚಾತ್ತಾಪದಿಂದ ಆತಂಕ ದಿಂದ ಚುಚ್ಚುತ್ತಲೇ ಇರುತ್ತದೆ. ದುಃಖವಂತು ತಪ್ಪುವುದೇ ಇಲ್ಲವು. ಆದುದರಿಂದ ಧರ್ಮವು ಮುಖ್ಯತರವಾದ ಪುರುಷಾರ್ಥವು. ಅದು ಪ್ರೇರಕವಾಗಿಯೂ ಇರಬೇಕು. ಫಲವಾಗಿಯೂ ಇರಬೇಕು. ಆದು

ದರಿಂದಲೇ ಅದನ್ನು ಪುರುಷಾರ್ಥಗಳ ಸಾಲಿನಲ್ಲಿ ಮೊದಲು ಹೇಳಿದಾರೆ. ಇದೂ ಧಾರ್ಮಿಕ ಸಂಸ್ಕೃತಿಯ ಒಂದು ಗುರುತಾಗಿದೆ.

ನಮ್ಮಂತೆಯೇ ಇತರರೂ ಎಂಬ ಭಾವನೆಯೇ ಧರ್ಮ.

ಅಲ್ಲದೆ ನಾವು ಹೇಗೆ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಿಕೊಳ್ಳಬೇಕೆಂದೂ, ಅದಕ್ಕೆ ಯಾರೂ ಅಡ್ಡಿ ಬರಬಾರದೆಂದೂ, ಅನಿಷ್ಟವನ್ನು ಪರಿಹರಿಸಿಕೊಳ್ಳಬೇಕೆಂದೂ ಆಶಿಸುತ್ತೇವೋ ಇತರರೂ ಹಾಗೆಯೇ ಆಶಿಸುತ್ತಾರೆ. ಅಲ್ಲದೆ ಅದರಲ್ಲಿ ನಮಗೆ ಹೇಗೆ ಹಕ್ಕುಬಾಧ್ಯತೆಗಳಿವೆಯೋ ಇತರರಿಗೂ ಹಾಗೆಯೇ ಇರುತ್ತವೆ. ನಮ್ಮಂತೆಯೇ ಇತರರೂ ಎಂದು ಭಾವಿಸುತ್ತಾ ನಮ್ಮ ನಡೆವಳಿಕೆಯನ್ನು ಅದಕ್ಕೆ ಅನುಸಾರವಾಗಿರುವಂತೆ ತಿದ್ದಿಕೊಳ್ಳುತ್ತಿರಬೇಕು. ಇತರರು ನಮಗೆ ಸಹಾಯ ಉಪಕಾರಗಳನ್ನು ಮಾಡಿದರೆ ಅದರಿಂದ ನಮಗೆ ಸಂತೋಷವಾಗುತ್ತದೆ. ಇದು ಇತರರಿಗೂ ಹಾಗೆಯೇ ಎಂದು ತಿಳಿದು ನಾವು ಪರೋಪಕಾರದಲ್ಲಿ ನಿರತರಾಗಿರಬೇಕು.

ವಿಶ್ವಧರ್ಮದ ಮೂಲ ಸ್ವರೂಪ.

"ಆತ್ಮವತ್ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ ।" ಎಂದರೆ ತನ್ನಂತೆಯೇ ಇತರರು ಎಂದು ಯಾರು ಮನಗಂಡು ನಡೆಯುತ್ತಾರೋ ಅಂಥವರೇ ಸರಿಯಾಗಿ ನೋಡುತ್ತಾರೆ. ಈ ತತ್ವವೇ ಧರ್ಮದ ಸಾಮಾನ್ಯ ಧರ್ಮದ, ವಿಶ್ವಧರ್ಮದ ಮೂಲಭೂತವೂ ಮುಖ್ಯವೂ ಆಗಿರುವ ಸ್ವರೂಪವಾಗಿದೆ.

ಜೀವನದ ಗುರಿಗಳನ್ನೇ ಶಾಸ್ತ್ರದಲ್ಲಿ ಪುರುಷಾರ್ಥಗಳೆಂದು ಹೇಳಿದೆ. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಈ ನಾಲ್ಕು ಪುರುಷಾರ್ಥಗಳು. ಈ ಹೆಸರಿಸಿರುವ ಕ್ರಮದಲ್ಲೂ ತಾತ್ಪರ್ಯವಿಶೇಷವು ತೋರುತ್ತದೆ. ಜನರು ಸ್ವಾಭಾವಿಕವಾಗಿ ಎಂದರೆ ವಿಚಾರಮಾಡದೆ ಇರುವಾಗ, ಸೂಕ್ಷ್ಮವಾಗಿ ಪರಿಶೀಲಿಸದೆ ಇರುವಾಗ, ತಕ್ಕಷ್ಟು ಅನುಭವವು ಉಂಟಾಗದೆ ಇರುವಾಗ, ಅರ್ಥ ಕಾಮಗಳ ಸಂಪಾದನೆ

ಯಲ್ಲೇ ಇರುತ್ತಾರೆ. ಅನುಭವವು ಹೆಚ್ಚಿದಮೇಲೆ, ಪರಿಣಾಮಗಳನ್ನು ಪರಿಶೀಲಿಸಿದಾಗ, ಸತ್ಪುರುಷರ ಸಹವಾಸವು ದೊರೆತು ವಿಮರ್ಶೆಯು ಮುಂದುವರಿದರೆ, ಜನರ ಮನಸ್ಸು ಧರ್ಮದಕಡೆಗೆ ಒಲಿದುಬರುತ್ತದೆ. ಆಗ ಜನರು ಅರ್ಥ ಕಾಮಗಳನ್ನು ಧರ್ಮದಿಂದಲೇ ಪಡೆಯಬೇಕೆಂದೂ, ಪಡೆದ ಅರ್ಥಕಾಮಗಳನ್ನು ಧರ್ಮಕ್ಕಾಗಿಯೇ ವಿನಿಯೋಗಿಸುತ್ತಿರಬೇಕೆಂದೂ ವಿವೇಚಿಸಿ ಮನಗಾಣುತ್ತಾರೆ. ಅದರಿಂದಲೇ ದೇಶದಲ್ಲಿ ಶಾಂತಿ ನೆಮ್ಮದಿ ಸುಖಗಳು ನೆಲೆಸುತ್ತವೆಂಬುದೂ ಜನರಿಗೆ ಮನವರಿಕೆಯಾಗುತ್ತದೆ. ಆಗ ಜೀವನದ ಗುರಿಗಳು ದರ್ಮ, ಅರ್ಥ, ಕಾಮ ಎಂಬ ಮೂರೇ ಆಗಿರುತ್ತವೆ. ಅನುಭವವೂ ವಿಮರ್ಶೆಯೂ ಇನ್ನೂ ಸೂಕ್ಷ್ಮವಾಗಿ ಮುಂದುವರಿದರೆ ಈ ತ್ರಿವರ್ಗ ಸಾಧನೆಯಿಂದ ದೊರೆಯುವ ಸುಖವು ತ್ರಿದೋಷವುಳ್ಳದ್ದೆಂಬುದನ್ನೂ ಕೆಲವರಾದರೂ ಮನಗಾಣುತ್ತಾರೆ. ಆಗ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು ಎಂದು ಗೊತ್ತಾಗುತ್ತದೆ. ಈ ಅಂಶವನ್ನು—

"ತ್ರಿವರ್ಗೋ ಧರ್ಮಕಾಮಾರ್ಥೈಃ ಚತುರ್ವರ್ಗಸ್ಸಮೋಕ್ಷಕೈಃ।"

ಪುರುಷಾರ್ಥಗಳು ಮೂರು, ಸಾಮಾನ್ಯ ಜನರಿಗೆ.

ಎಂಬ ಸೂಕ್ತಿಯೂ ತಿಳಿಸುತ್ತದೆ. ಮಾನವನ ಮನಸ್ಸಿನಲ್ಲಿ ಆಸ್ತಿಕತೆಯು ಬೇರೂರುವುದಕ್ಕಿಂತ ಮುಂಚೆ ಅವನೂ ಪಶು ಪಕ್ಷಿಗಳಂತೆ ಅರ್ಥ ಕಾಮಪರನಾಗಿರುತ್ತಾನೆ. ಆಸ್ತಿಕತೆಯು ಮನುಷ್ಯನ ಹೃದಯದಲ್ಲಿ ಬೇರೂರಿ ಬಲಗೊಂಡಬಳಿಕ ಅವನು ಧರ್ಮಪರನಾಗುತ್ತಾನೆ. ಕಾಮ್ಯ ಕರ್ಮಗಳನ್ನು ಆಚರಿಸುತ್ತಾ ಪ್ರವೃತ್ತಿ ಧರ್ಮನಿಷ್ಠನಾಗಿ ಅವುಗಳ ಫಲಗಳನ್ನು ಇಹಪರಗಳಲ್ಲಿ ಅನುಭವಿಸುತ್ತಾ ಸಂಸಾರಿಯಾಗಿರುತ್ತಾನೆ. ಇಷ್ಟುಮಾತ್ರ ಮಾನವನಿಗೂ ಪಶುಗಳಿಗೂ ಸಮಾನವಾಗಿರುತ್ತದೆ. ಕಡೆಗೆ ಅನುಭವವೂ, ಸೂಕ್ಷ್ಮವೂ ಆಳವೂ ಆದ ವಿಮರ್ಶೆಯೂ ಮುಂದುವರಿದಮೇಲೆ ಕರ್ಮಫಲಗಳಲ್ಲಿ ಆಶೆಯನ್ನು ತ್ಯಜಿಸಿ ನಿಷ್ಕಾಮಕರ್ಮಾಚರಣೆಯಲ್ಲಿ ಆಸಕ್ತನಾಗಿ

ನಿವೃತ್ತಿ ಧರ್ಮನಿಷ್ಠನಾಗಿ ಚಿತ್ತಶುದ್ಧಿ ಜ್ಞಾನಪ್ರಾಪ್ತಿಗಳ ಮೂಲಕ ಮೋಕ್ಷವನ್ನು ಎಂದರೆ, ಸಂಸಾರ ನಿರ್ಬಂಧ ದುಃಖದಿಂದ ಬಿಡುಗಡೆಯನ್ನು ಹೊಂದಿ ಆತ್ಮನ ವಾಸ್ತವ ಸ್ವರೂಪವಾದ ಸಚ್ಚಿದಾನಂದ ತತ್ವದ ಅಪರೋಕ್ಷಾನುಭವವೆಂಬ ನಿತ್ಯಾನಂದ ಸ್ಥಿತಿಯಲ್ಲಿರುತ್ತಾನೆ. [ಪುಟ ೫೩ ನೋಡಿ] ಅರ್ಥ ಕಾಮಪರನಾದ ಮಾನವನ ನಡೆವಳಿಕೆಯು ಹೀಗಿರುತ್ತದೆ. ಎಂದು ಕವಿಯು ಹೇಳುತ್ತಾನೆ.

ಕಾಲೇ ಕಾಲೇ ನ ಕಿಮುಪನತಂ ಭುಂಜತೇ ಭೋಗ್ಯಜಾತಂ ।
ಗೃಹ್ಣಂತ್ಯಂಭೋ ನ ಕಿಮುಧನಕಿಂ ಸಂವಿಶಂತಿ ಕ್ಷಪಾಸು ॥

ಪುಷ್ಣಂತಿಸ್ವಾನ್ನಕಿಮುಪೃಥುಕಾನ್ ಸ್ತ್ರೀಷುಕಿಂ ನೋರಮಂತೇ ।
ಕೃತ್ಯಾಕೃತ್ಯ ವ್ಯಪಗತಧಿಯಾಂಕಸ್ತಿರಶ್ಚಾಂ ಚ ಭೇದಃ ॥

ಎಂದರೆ, ತಿರ್ಯಕ್ ಪ್ರಾಣಿಗಳು ಹಸಿವಾದ ಕಾಲಗಳಲ್ಲಿ ಆಹಾರಳನ್ನು ಭುಜಿಸುವುದಿಲ್ಲವೇ? ಬಾಯಾರಿದಾಗ ನೀರನ್ನು ಕುಡಿಯುವುದಿಲ್ಲವೇ? ರಾತ್ರಿಗಳಲ್ಲಿ ನಿದ್ರಿಸುವುದಿಲ್ಲವೇ? ಹೆಣ್ಣು ಮೃಗಗಳಲ್ಲಿ ರಮಿಸುವುದಿಲ್ಲವೇ? ಮಕ್ಕಳು ಮರಿಗಳನ್ನು ಕಾಪಾಡಿ ಪೋಷಿಸುವುದಿಲ್ಲವೇ? ಮಾನವನಹಾಗೆ ಪಶುಪಕ್ಷಿಗಳೂ ಈ ಎಲ್ಲ ಕಾರ್ಯಗಳನ್ನೂ ನೆರವೇರಿಸುತ್ತವೆ. ಮಾನವನೂ ಇಷ್ಟನ್ನೇ ಮಾಡುವುದಾದರೆ ಮೃಗ ಪಕ್ಷಿಗಳಿಗೂ ಮಾನವನಿಗೂ ವ್ಯತ್ಯಾಸವೇನು? ಆದರೆ ಕೃತ್ಯವಾವುದು ಅಕೃತ್ಯವಾವುದು, ಧರ್ಮ, ಅಧರ್ಮ, ಪುಣ್ಯ, ಪಾಪ–ಇವುಗಳನ್ನು ವಿವೇಚಿಸಿ ತಿಳಿಯುವ ಬುದ್ಧಿಯು ಮಾನವನ ವಿಶೇಷ ಗುಣವಾಗಿದೆ.

**ಪುರುಷಾರ್ಥಗಳಲ್ಲಿ ಧರ್ಮ ಮೊದಲು ಏಕೆ?**

ಜೀವನದಲ್ಲಿ ಮಾನವನು ಸಾಧಿಸಬೇಕಾದ ಧ್ಯೇಯ ಅಥವಾ ಗುರಿಗಳನ್ನೇ ಪುರುಷಾರ್ಥಗಳೆಂದು ಶಾಸ್ತ್ರಗಳಲ್ಲಿ ಹೇಳಿದಾರೆ. ಧರ್ಮ, ಅರ್ಥ, ಕಾಮ, ಮೋಕ್ಷಗಳೇ ಆ ಗುರಿಗಳು. ಈ ಕ್ರಮದಲ್ಲೂ ಒಂದು ತಾತ್ಪರ್ಯ ವಿಶೇಷವಿದೆ. ಏನೆಂದರೆ— ಜನರ ಮನಸ್ಸು ಸ್ವಾಭಾವಿಕವಾಗಿ ಅನುಭವ ವಿಮರ್ಶ ವಿವೇಕಗಳಿಲ್ಲ

ದಿರುವಾಗ ಅರ್ಥ ಕಾಮಗಳಲ್ಲಿಯೇ ಲಾಲಸೆಯುಳ್ಳದ್ದಾಗಿರುತ್ತದೆ. ಅಂಥವರ ಮನಸ್ಸು ಕಾಡಾನೆಯಂತೆ ಮದ್ದಾನೆಯಂತೆ ಅವರ ಹತೋಟಿಗೆ ಬರದೆ ಇರುತ್ತದೆ. ಅದನ್ನು ಹಾಗೆಯೇ ಬಿಟ್ಟು ಅನುಸರಿಸಿದರೆ ಕಷ್ಟ ದುಃಖಗಳು ತಪ್ಪುವುದಿಲ್ಲವೆಂಬುದು ಎಲ್ಲರಿಗೂ ಗೊತ್ತಿರುವ ವಿಷಯವಾಗಿದೆ. ಕಾಡಾನೆಯನ್ನು ಹಿಡಿದು ಪಳಗಿಸುವುದಕ್ಕೋಸ್ಕರ ಅದನ್ನು ಕಟ್ಟಿ ಆಹಾರವನ್ನು ಕೊಡದೆ ಅದರ ಶಕ್ತಿಯನ್ನು ಕುಗ್ಗಿಸಿ, ಕಾಲುಗಳಲ್ಲಿ ಗಾಯವನ್ನು ಮಾಡಿ ಸಂಕಟವನ್ನು ಹೆಚ್ಚಿಸಿ, ಕಡೆಗೆ ಎರಡು ಕುಮ್ಕಿ ಆನೆಗಳನ್ನು ಎಂದರೆ, ಸಾಕಿದ, ಪಳಗಿಸಿದ ಆನೆಗಳನ್ನು ಉಪಯೋಗಿಸುತ್ತಾರೆ. ಅವು ಆ ಕಾಡಾನೆಯ ಎರಡು ಪಾರ್ಶ್ವಗಳಲ್ಲಿಯೂ ಒತ್ತರಿಸಿ ಅದುಮಿ ಅದನ್ನು ಮಾವಟಿಗನ ಹತೋಟಿಗೆ ಬರುವಂತೆ ಮಾಡಲು ಸಹಾಯಮಾಡುತ್ತವೆ. ಅದರಂತೆಯೇ ಅರ್ಥ ಕಾಮಪರವಾದ ಮನಸ್ಸನ್ನು ಧರ್ಮ ಮೋಕ್ಷಗಳ ಕಡೆಗೆ ಎಳೆದು ಪಳಗಿಸಿ ಉಪಯೋಗಿಸಿಕೊಳ್ಳಬೇಕು. ಧರ್ಮದಿಂದಲೇ ಅರ್ಥ ಕಾಮಗಳನ್ನು ಸಂಪಾದಿಸಬೇಕೆಂದು ನಿರ್ಬಂಧವನ್ನು ನಮಗೆ ನಾವೇ ಹಾಕಿಕೊಳ್ಳಬೇಕು. ಅದರಂತೆಯೇ ಪಡೆದ ಅರ್ಥ ಕಾಮಗಳನ್ನು ಧರ್ಮಾಚರಣೆಯಲ್ಲಿಯೇ ವಿನಿಯೋಗಿಸಬೇಕೆಂದು ನಿಯಮವನ್ನೂ ನಾವಾಗಿಯೇ ಅನುಸರಿಸಬೇಕು. ಅನುಭವ ವಿವೇಚನೆ ಸತ್ಸಹವಾಸಗಳಿಂದ ಹಾಗೆ ಮಾಡಲು ಸಾಧ್ಯವಾಗುತ್ತದೆ. ಹಾಗೆ ಮಾಡಿದರೆ ಆ ಮನಸ್ಸು ಹತೋಟಿಯನ್ನು ಮೀರದೆ ಹದ್ದುಬಸ್ತಿನಲ್ಲಿರುತ್ತದೆ. ಈ ಅಭಿಪ್ರಾಯವನ್ನು ಸೂಚಿಸುವುದಕ್ಕಾಗಿಯೇ ಪುರುಷಾರ್ಥಗಳ ಸಾಲಿನಲ್ಲಿ ಅರ್ಥ ಕಾಮಗಳನ್ನು ಮಧ್ಯದಲ್ಲಿಟ್ಟು ಧರ್ಮವನ್ನು ಮೊದಲಿನಲ್ಲಿಯೂ ಮೋಕ್ಷವನ್ನು ಕಡೆಯಲ್ಲಿಯೂ ಇಟ್ಟು ತಿಳಿಸಿದಾರೆಂದರೆ ತಪ್ಪಾಗುವುದಿಲ್ಲ. ಅಲ್ಲದೆ ಧರ್ಮವು ಎಲ್ಲ ಪುರುಷಾರ್ಥಗಳಿಗೂ ಮೂಲವಾದುದರಿಂದ ಅದನ್ನು ಮೊದಲಿನಲ್ಲಿಟ್ಟು ತಿಳಿಸಿರುತ್ತಾರೆಂದರೆ ಒಪ್ಪುತ್ತದೆ.

ಮೇಲೆ ೧೫೭ನೆಯ ಪುಟದಲ್ಲಿ ಹೇಳಿದ ಮೊದಲಿನ ಎರಡು ಪಂಗಡಗಳ ಜನರು ಜೀವನಕ್ಕಾಗಿ ದುಡಿಯುವುದರಲ್ಲಿಯೇ ಅವರ ಕಾಲ ಪ್ರಯತ್ನಗಳು ವೆಚ್ಚವಾಗಿ ದುಡಿದು ಬಳಲಿ ಬೆಂಡಾಗಿರುತ್ತಾರೆ. ಚಾಕರಿ ನೌಕರಿಗಳಿಂದ ಮನೆಗೆ ಹಿಂತಿರುಗಿ ಬಂದಾಗ ವಿಶ್ರಾಂತಿಯನ್ನೇ ಬಯಸುತ್ತಿರುವುದು ಸ್ವಾಭಾವಿಕವಾಗಿರುತ್ತದೆ. ಇರಬಹುದಾದ ಸ್ವಲ್ಪ ವಿರಾಮ ಕಾಲವನ್ನೂ ವಿನೋದದಲ್ಲಿಯೇ ಕಳೆಯಲು ಆಶಿಸುವುದೂ ನ್ಯಾಯವಾಗಿರುತ್ತದೆ. ಜೊತೆಗೆ ಸೋಮಾರಿತನವೂ ಇರುತ್ತದೆ. ತಕ್ಕಷ್ಟು ತಿಳಿವಳಿಕೆಯೂ ಇಲ್ಲದಿರುವುದರಿಂದ ಅವರು ಸೂಕ್ಷ್ಮವಾಗಿ ಆಳವಾಗಿ ವಿಮರ್ಶಿಸಲೂ ವಿವೇಚಿಸಲೂ ಅಶಕ್ತರಾಗಿಯೂ ಇರುತ್ತಾರೆ. ದೇಹವು ಬಳಲಿರುವಾಗ ಮನಶ್ಶಾಂತಿಯೂ ಶಕ್ತಿಯೂ ಇಲ್ಲದೆ ಮೇಲಾದ ಜೀವನದ ಗುರಿಗಳನ್ನು ಕುರಿತು ಆಲೋಚಿಸುವುದರಲ್ಲಾಗಲಿ ಸೂಕ್ಷ್ಮ ಗಹನ ವಿಚಾರಗಳಲ್ಲಾಗಲಿ ಆಸಕ್ತಿಯನ್ನೂ ತೋರಿಸಲಾರದೆ ಇರುತ್ತಾರೆ. ಆದುದರಿಂದ ಅಂಥವರು ಧರ್ಮಮೋಕ್ಷಗಳ ವಿಷಯದಲ್ಲಿ ಆಲೋಚಿಸದೆ ಇರುತ್ತಾರೆ.

ಧನಮದವು ದುಃಖ ಕ್ಲೇಶಗಳನ್ನು ಮರೆಮಾಡಿರುತ್ತದೆ.

ಮೇಲೆ ಹೇಳಿದ ಮೂರನೆಯ ಪಂಗಡದ ಜನರು ಧನಸಂಗ್ರಹದಲ್ಲಿ ಅತ್ಯಾಸೆ ದುರಾಸೆಗಳಿಂದ ಮಾರುಹೋಗಿರುತ್ತಾರೆ. ಅಂಥವರಲ್ಲಿ ಹಣದ ಸ್ಪರ್ಶದಿಂದ ಮಾನವತ್ವದ ಸ್ಪರ್ಶವೇ ದೂರ ದೂರವಾಗುತ್ತಿರುತ್ತದೆ. ಅವರ ಮನಸ್ಸು ಅವರ ಹತೋಟಿಯಲ್ಲಿರುವುದೂ ಇಲ್ಲ. ಅಂಥವರಲ್ಲಿ ಹಣವು ತಾನೇ ಬೆಳೆಯುವಂತಿರುತ್ತದೆ. "Money breeds itself with the rich." ಅವರ ಪ್ರಯತ್ನಗಳಲ್ಲಿ ದೊರೆಯುತ್ತಿರುವ ಜಯಲಾಭ ಧನಲಾಭಗಳೂ ಅವರಿಗೆ ಧರ್ಮ ಮೋಕ್ಷಗಳಲ್ಲಿ ಆಸಕ್ತಿಯುಂಟಾಗದಂತೆ ಮಾಡಿರುತ್ತವೆ. ಅಂತಹ ಧನಿಕರು ಉತ್ತಮ ಪುರುಷಾರ್ಥಗಳಾದ ಧರ್ಮ ಮೋಕ್ಷಗಳನ್ನು ಕುರಿತು ಆಲೋಚಿಸುವುದೇ ಹೇಡಿತನವೆಂದೂ ಸೋಮಾರಿತನವೆಂದೂ ಭಾವಿಸುತ್ತಿರುತ್ತಾರೆ. ಅಂತಹ ಶ್ರೀಮಂತರು ಧನಮದದಲ್ಲಿ ಐಶ್ವರ್ಯದ ಅಮಲಿನಲ್ಲಿರುತ್ತಾರೆ.

ವಿತ್ತಾನಾಮರ್ಜನೇ ದುಃಖಂ ಆರ್ಜಿತಾನಾಂ ಚ ರಕ್ಷಣೇ ।
ನಾಶೇ ದುಃಖಂ ವ್ಯಯೇ ದುಃಖಂ ವಿತ್ತಂ ದುಃಖಮಯಂ ಸದಾ ॥

ಎಂದು ಮುಂತಾದ ಹಿತೋಕ್ತಿಗಳನ್ನು ಹೇಡಿತನದ ಉದ್ಗಾರಗಳೆಂದೂ, ಸೋಮಾರಿತನದ ಹರಟೆಗಳೆಂದೂ ಹೇಳಿ ನಕ್ಕು ಹೀಯಾಳಿಸಿಬಿಡುತ್ತಾರೆ. ಈ ಶ್ಲೋಕದ ತಾತ್ಪರ್ಯವು ಹೀಗಿದೆ: "ಧನವನ್ನು ಸಂಪಾದಿಸುವಾಗ ತುಂಬ ಕಷ್ಟಪಡಬೇಕಾಗುತ್ತದೆ. ಸಂಪಾದಿಸಿ ಕೂಡಿಟ್ಟ ಹಣವನ್ನು ಕಾಪಾಡುವುದು ಇನ್ನೂ ಹೆಚ್ಚಿನ ಕಷ್ಟದುಃಖಗಳನ್ನು ಉಂಟುಮಾಡುತ್ತದೆ. ಧನವು ನಷ್ಟವಾದರಂತೂ ಹೆಚ್ಚಾಗಿಯೇ ದುಃಖವಾಗುತ್ತದೆ. ಧನವು ವೆಚ್ಚವಾದರೂ ಕಷ್ಟ ಸಂಕಟಗಳನ್ನುಂಟುಮಾಡುತ್ತದೆ. ಆದುದರಿಂದ ಹಣವು ಯಾವಾಗಲೂ ದುಃಖಸ್ವರೂಪವುಳ್ಳದ್ದಾಗಿರುತ್ತದೆ." ಈ ನಿಜವಾದ ಅನುಭವದ ಮಾತನ್ನು ಹಣವಂತರು ಧನಮದದಲ್ಲಿ ಲಕ್ಷಿಸದೆ ಇರುತ್ತಾರೆ. ಇಂಥವರು ಧರ್ಮಮೋಕ್ಷಗಳ ವಿಷಯದಲ್ಲಿ ಪರಿಶೀಲನೆಯನ್ನು ಮಾಡುವುದಾಗಲಿ ಮುಂದುವರಿಯುವುದಾಗಲಿ ಅಸಂಭವವೆನಿಸಿರುತ್ತದೆ.

ಆದುದರಿಂದ ಮೇಲೆ ಹೇಳಿದ ನಾಲ್ಕನೆಯ ಪಂಗಡದ ಜನರೇ ನಿಜವಾದ ಪುರುಷಾರ್ಥಗಳು ಯಾವುವು? ಅವುಗಳಲ್ಲೂ ಉತ್ತಮೋತ್ತಮವಾದುದು ಯಾವುದು? ಎಂದು ವಿಮರ್ಶಿಸುತ್ತಾ ವಿವೇಚಿಸುತ್ತಿರುತ್ತಾರೆ. ಭಾರತಾರ್ಯರ ವಿಮರ್ಶೆಯಲ್ಲಿ ಮಾತ್ರ ಕಾಣಬಹುದಾದ ವಿಶೇಷ ಗುಣವು ಒಂದಿದೆ. ಅದೇನೆಂದರೆ—ಅವರ ಜೀವನಕ್ರಮವೂ, ಆದರಿಂದ ಅವರಿಗೆ ಉಂಟಾದ, ಆಗುತ್ತಿರುವ, ಸುಖದುಃಖಗಳ ಅನುಭವಗಳೂ, ಅವುಗಳ ಆಧಾರದ ಮೇಲೆ ಅವರು ಮಾಡಿರುವ ವಿಚಾರ ವಿಮರ್ಶೆಗಳೂ, ಅವುಗಳಿಂದ ಏರ್ಪಟ್ಟಿರುವ ಸಿದ್ಧಾಂತಗಳೂ, ಇವೆಲ್ಲವೂ ಧರ್ಮದ ಅಸ್ತಿಭಾರವನ್ನು ಅವಲಂಬಿಸಿ, ಧರ್ಮದ ತಳಹದಿಯ ಆಧಾರದ ಶಕ್ತಿಯನ್ನು ಆಶ್ರಯಿಸಿ ಉಂಟಾಗಿವೆ. ಹಾಗೆಯೇ ಬೆಳೆದೂ ಬೆಳೆಯುತ್ತಲೇ ಇರುತ್ತವೆ. ಎಂಬುದಾಗಿದೆ.

ಜನರಲ್ಲಿ ಮೂರು ಬಗೆ.

ಇನ್ನೊಂದು ದೃಷ್ಟಿಯಿಂದ ಈ ಲೋಕದ ಜನರನ್ನು ಮೂರು ಬಗೆಯಾಗಿ ವಿಂಗಡಿಸಬಹುದು. ೧. ನಾಸ್ತಿಕರು, ೨. ಸಂಶಯವಾದಿಗಳು, ೩. ಆಸ್ತಿಕರು.

ನಾಸ್ತಿಕರು.

ಇವರಲ್ಲಿ ನಾಸ್ತಿಕರು ಅಂದರೆ "ನ ಅಸ್ತಿ" ಇಲ್ಲ ಎಂದು ಹೇಳುವವರು. ಇವರು ದೇವರು ಇಲ್ಲವೆಂದೂ ಸ್ವರ್ಗ ನರಕಗಳೂ ಪುಣ್ಯ ಪಾಪಗಳೂ ಹೇಡಿಗಳು ಕಲ್ಪಿಸಿರುವ ಕಟ್ಟುಕತೆಗಳೆಂದೂ, ಪುನರ್ಜನ್ಮವೂ ಸದ್ಗತಿ ದುರ್ಗತಿಗಳೂ ಮೂಢ ನಂಬಿಕೆಯೆಂದೂ ಹೇಳುತ್ತಾ ಅವನ್ನು ಒಪ್ಪುವುದಿಲ್ಲ. ಇದು ಒಂದೇ ಜನ್ಮವು. ಈ ಜನ್ಮದಲ್ಲಿ ಎಷ್ಟು ಸುಖವನ್ನು ಅನುಭವಿಸಿದರೆ ಅದೇ ನಮ್ಮ ಜೀವನದ ಗುರಿಯು, ಲಾಭವು, ಅಷ್ಟೇ ಸುಖವು ಎಂದು ಹೇಳುತ್ತಾರೆ. ಸತ್ತಮೇಲೆ ಮಣ್ಣಾಗುವ ಅಥವಾ ಸುಟ್ಟು ಬೂದಿಯಾಗುವ ಈ ಶರೀರವು ಪುನಃ ದೊರೆಯುವುದಿಲ್ಲ. ಆದುದರಿಂದ ಹೇಗಾದರೂ ಮಾಡಿ ಆದಷ್ಟು ಹೆಚ್ಚಿನ ಸುಖವನ್ನು ಈಗಲೇ ಅನುಭವಿಸಿಬಿಡಬೇಕು. ಅಧರ್ಮ, ಪಾಪ, ದುರ್ಗತಿಗಳಿಗೆ ಹೆದರಬೇಕಾಗಿಲ್ಲ. ಸಾಲವನ್ನಾದರೂ ಮಾಡಿ ತುಪ್ಪವನ್ನುಂಡು ಸುಖಪಡಬೇಕು. ಕಡೆಗೆ ದೇಹಾತಿರಿಕ್ತನಾದ ಜೀವನೂ ಇಲ್ಲ. ಜೀವನದಲ್ಲಿ ನೀತಿ ಧರ್ಮಗಳನ್ನೂ ಅನುಸರಿಸಬೇಕಾಗಿಲ್ಲ. ಎಂದು ಇವರು ಹೇಳುತ್ತಾರೆ. ಸುಟ್ಟುಹೋದ ಶರೀರವು ಪುನಃ ಬರುವುದಿಲ್ಲ. ಹೀಗೆಂದು ನಂಬಿ ಅರ್ಥ ಕಾಮಪರರಾಗಿರುವವರೇ ನಾಸ್ತಿಕರು. ಆದರೆ ಸುದೈವದಿಂದ ಮಾನವನು ಪರಿಶೀಲಿಸುವ, ಯೋಚಿಸುವ, ವಿವೇಚಿಸುವ ಸ್ವಭಾವವುಳ್ಳವನಾಗಿರುವುದರಿಂದಲೂ, ಸಮಾಜದಲ್ಲಿರಲು ಬಯಸುವವನಾಗಿರುವುದರಿಂದಲೂ ಇಂತಹ ನಾಸ್ತಿಕರು ತುಂಬ ಕಡಿಮೆಯಾಗಿರುತ್ತಾರೆ, ಇನ್ನೂ ಕಡಿಮೆಯಾಗುತ್ತಿದ್ದಾರೆ. ಇವರ ವಾದಕ್ಕೆ ಬೆಲೆ ಕೊಡುವ, ಇವರನ್ನು ಅನುಸರಿಸುವ ಜನರು ಇಲ್ಲವಾಗುತ್ತಿರುವುದರಿಂದ ಈ ಪಂಗಡದವರ ಹೇಳಿಕೆಗಳನ್ನು ನಾವು ತೀವ್ರವಾಗಿ ಪರ್ಯಾಲೋಚಿಸಬೇಕಾಗಿಲ್ಲ. ಅವು ವಿವೇಕಿಗಳಾಗಿರುವ ಎಲ್ಲರಿಗೂ ಗೊತ್ತಿವೆ.

ಸಂಶಯವಾದಿಗಳು.

ಎರಡನೆಯ ಪಂಗಡದವರಾದ ಸಂಶಯವಾದಿಗಳಲ್ಲಿ ಅಭಿಪ್ರಾಯವು ಹೀಗಿರುತ್ತದೆ. ಏನೆಂದರೆ—ಮಾನವನು ಸಮಾಜದಲ್ಲಿ ಜೀವಿಸಬೇಕಾದ, ಜೀವಿಸಲು ಬಯಸುವ ಪ್ರಾಣಿಯು ; ಸಮಾಜವನ್ನು ಬಿಟ್ಟಿರಲು ಅವನು ಒಪ್ಪುವುದಿಲ್ಲ. ಮನುಷ್ಯನು ತಾನೊಬ್ಬನೇ ಇರುವಾಗ "ತಾನುಂಟೋ ಮೂರು ಲೋಕವುಂಟೋ" ಎನ್ನುವಷ್ಟು ಸ್ವಾರ್ಥಪರನಾಗಿರುತ್ತಾನೆ. ಆದರೂ ತನ್ನ ಯೋಗಕ್ಷೇಮಗಳ ಸಾಧನೆಗಾಗಿ ಎಂದರೆ ಅನ್ನ, ಬಟ್ಟೆ, ಮನೆ ಇವುಗಳಿಗಾಗಿ ಇತರರ ಸಹಾಯವನ್ನೂ ಅಪೇಕ್ಷಿಸಬೇಕಾಗುತ್ತದೆ. ಅಲ್ಲದೆ, ದೊಡ್ಡವನಾದ ಮೇಲೆ ಗಂಡಸು ಹೆಂಗುಸನ್ನೂ ಹೆಂಗುಸು ಗಂಡಸನ್ನೂ ಕಾಮಿಸುವುದೂ ಅನಿವಾರ್ಯವಾಗುತ್ತದೆ. ಆಗ ಸಮಾಜ ಜೀವನವೂ, ಆವಶ್ಯಕವೂ ಅನಿವಾರ್ಯವೂ ಆಗುತ್ತದೆ. ವಯಸ್ಸು ಮುಂದುವರಿದ ಹಾಗೆ, ಅನುಭವಗಳು ಹೆಚ್ಚಾದ ಹಾಗೆ ವಿವೇಚನೆಯು ಮುಂದಾಗುತ್ತದೆ. ತನ್ನ ಜವಾಬುದಾರಿಯ ಅರಿವೂ ಆಗುತ್ತದೆ. ಧರ್ಮದ ಅರಿವೂ, ತನ್ನಂತಯೇ ಇತರರೂ ಎಂಬ ಭಾವನೆಯು ಅವನ ಹೃದಯದಲ್ಲಿ ಬೇರೂರಿ ಬಲಗೊಳ್ಳುತ್ತಿರುತ್ತದೆ. ಆಗ ಧರ್ಮಾಚರಣೆಯ ಧಾರ್ಮಿಕಜೀವನದ ಆವಶ್ಯಕತೆಯೂ ಇತರರೊಡನೆ ಸಹಾನುಭೂತಿಯಿಂದ ವರ್ತಿಸಬೇಕಾದುದರ ಸುಫಲದ ಅನುಭವವೂ ಆಗುತ್ತದೆ. ತನ್ನ ಯೋಗಕ್ಷೇಮ ಸಾಧನೆಯಲ್ಲಿ ಹೇಗೋ ಹಾಗೆ ಇತರರ ಯೋಗಕ್ಷೇಮಗಳ ಸಾಧನೆಯಲ್ಲಿಯೂ ಸಹಾನುಭೂತಿ ಸಹಕಾರಗಳಿಂದ ವರ್ತಿಸಬೇಕಾಗಿರುತ್ತದೆ. ಹೀಗೆ ಧರ್ಮವು ಪುರುಷಾರ್ಥವು ಅಥವಾ ಜೀವನದ ಗುರಿಯು ಎಂಬುದರ ಅರಿವಾಗುತ್ತದೆ. ಅನುಭವಗಳು ಹೆಚ್ಚಿದಂತೆ ತನ್ನ ಸಂಸಾರದವರ ಸಂಖ್ಯೆಯು ಹೆಚ್ಚಿದಂತೆ, ತನ್ನ ಜವಾಬುದಾರಿಗಳೂ ಹೆಚ್ಚುತ್ತವೆ. ಈಗ ವೈಯಕ್ತಿಕವಾದ ಧರ್ಮದ ಅರಿವಿನ ಜತೆಗೆ ಸಾಮಾಜಿಕವಾದ ಧರ್ಮದ ಅರಿವುಂಟಾಗಿ ಬೆಳೆಯುತ್ತದೆ. ಕೇವಲ ಧರ್ಮಾರ್ಥವಾಗಿ ಅಲ್ಲದಿದ್ದರೂ ಇತರರ ಸುಖಸಾಧನೆ ದುಃಖ ನಿವಾರಣೆಗಳಿಗಾಗಿಯೇ ಅಲ್ಲದಿದ್ದರೂ, ತನ್ನ

ಮತ್ತು ತನ್ನವರ ಯೋಗಕ್ಷೇಮಗಳ ಸಂಪಾದನೆಗಾದರೂ ಧರ್ಮಗಳಲ್ಲಿ ಮಾನವನು ಆಸಕ್ತನಾಗುತ್ತಾನೆ. ಅದಕ್ಕಾಗಿ ದುಡಿಯಬೇಕಾದುದರ ಆವಶ್ಯಕತೆಯನ್ನೂ ಮನಗಾಣುತ್ತಾನೆ. ಈ ಪಂಗಡದ ಜನರಲ್ಲಿ ವೈಜ್ಞಾನಿಕರೂ ಸೇರುತ್ತಾರೆ.

ವೈಜ್ಞಾನಿಕರು ಸಂಶಯವಾದಿಗಳಾದರೂ ಜೀವನದಲ್ಲಿ ನೀತಿ ಧರ್ಮಗಳನ್ನು ಬಿಡಬಾರದೆನ್ನುತ್ತಾರ.

ಹೀಗೆ ತಿಳಿವಳಿಕೆ, ಅದಕ್ಕನುಸಾರವಾದ ನಡೆವಳಿಕೆ, ಅದರಲ್ಲಿ ಆದರದಿಂದ ಕೂಡಿದ ಚಟುವಟಿಕೆ–ಇವುಗಳು ಮೇಲ್ಪಡುತ್ತಾ, ಸ್ವಾರ್ಥಪರತೆಯೊಡನೆ ಪರಾರ್ಥಪರತೆಯೂ ಹೆಚ್ಚುತ್ತಾ ಬರುತ್ತವೆ. ಈ ಅಂತಸ್ತಿನಲ್ಲಿ ಮಾನವನ ಆಲೋಚನೆ, ವಿಮರ್ಶೆ ವಿವೇಚನೆಗಳೂ, ಮೇಲ್ಪಡುತ್ತಾ ಮುಂದುವರಿಯುತ್ತವೆ. ವೈಜ್ಞಾನಿಕರೂ, ಪ್ರಜಾಸೇವಕರೂ ಪರೋಪಕಾರಿಗಳಾಗುತ್ತಾ ಜನಜೀವನದಲ್ಲಿ ಸುಖಸೌಕರ್ಯಗಳನ್ನು ಆದಷ್ಟು ಹೆಚ್ಚಿಸುವ ಹೊಸ ಹೊಸ ತಿಳಿವಳಿಕೆ, ವಿಧಾನಗಳನ್ನು ತಮ್ಮ ಶಾಸ್ತ್ರಗಳಲ್ಲಿ ಹೊಸ ಸಂಶೋಧನೆಗಳಿಂದಲೂ, ಅನುಭವಗಳಿಂದಲೂ ಕಂಡುಹಿಡಿದು ಮುಂದುವರಿಯಿಸುತ್ತಿರುತ್ತಾರೆ. ವೈಜ್ಞಾನಿಕರೂ ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ, ಜ್ಯೋತಿಷಶಾಸ್ತ್ರ, ವೈದ್ಯಶಾಸ್ತ್ರ, ಪ್ರಾಣಿಶಾಸ್ತ್ರಗಳಲ್ಲಿಯೂ, ಪ್ರಜಾಸೇವಕರು ಸಮಾಜಶಾಸ್ತ್ರ, ಅರ್ಥಶಾಸ್ತ್ರ, ವಾಣಿಜ್ಯಶಾಸ್ತ್ರಗಳಲ್ಲಿಯೂ, ಗ್ರಂಥ ಲೇಖಕರೂ ಕವಿಗಳೂ ಕಲಾಕಾವ್ಯನಾಟಕ, ವಿಮರ್ಶ ಧರ್ಮಶಾಸ್ತ್ರಗಳಲ್ಲಿಯೂ ಜನರಿಗೆ ಬೇಕಾದ ತಿಳಿವಳಿಕೆಯನ್ನು ಹರಡುತ್ತಾ ಜನತೆಗೆ ಸಹಾಯಮಾಡುತ್ತಿರುತ್ತಾರೆ.

ವೈಜ್ಞಾನಿಕರ ಜೀವನದ ದೃಷ್ಟಿ.

ಈ ವೈಜ್ಞಾನಿಕರು ಭೌತಪದಾರ್ಥಗಳಲ್ಲಿ ವಿಶ್ಲೇಷಣ, ಸಂಯೋಜನ, ನಿರೀಕ್ಷಣ, ಸಂವಾದೀಕರಣ ಮುಂತಾದ ರೀತಿಗಳಿಂದ ಪ್ರಯೋಗಗಳನ್ನು ಮುಂದುವರಿಯಿಸುತ್ತಾರೆ. ಇವರ ವ್ಯಾಸಂಗ ಕ್ಷೇತ್ರಗಳಲ್ಲಿ ದೇವರು, ಜೀವರು, ಧರ್ಮ,

ಸದ್ಗತಿ ಮುಂತಾದ ವಿಷಯಗಳು ಸೇರದಿರುವುದು ಸಹಜವಾಗಿದೆ. ಏಕೆಂದರೆ ಇವು ಅವಯುವಗಳುಳ್ಳ ಪ್ರಾಕೃತ ಪದಾರ್ಥಗಳಲ್ಲವು. ಆದುದರಿಂದ ಇಂತಹ ವಿಷಯುಗಳಲ್ಲಿ ಪ್ರಯೋಗಗಳನ್ನು ನಡೆಯಿಸಲಾಗುವುದಿಲ್ಲ. ಆದರೂ ವೈಜ್ಞಾನಿಕರಿಗೆ ತಮ್ಮ ಪ್ರಯೋಗಗಳಲ್ಲಿ ಪರಿಣಾಮಗಳ ಪಾರ್ಯಂತಿಕ ಸ್ಥಿತಿಯಲ್ಲಿಯೂ ಕೆಲವು ಇಂತಹ ಸಂದರ್ಭಗಳೇ ಬರುತ್ತವೆ. ಆಗ ಪ್ರಯೋಗಗಳನ್ನು ಮುಂದುವರಿಸಲಾಗದೆ ಅದುವರೆಗಿನ ತಮ್ಮ ಅನುಭವಗಳ ಆಧಾರದ ಮೇಲೆ ಕೆಲವು ಊಹೆಗಳನ್ನು ಮಾಡಬೇಕಾಗುತ್ತದೆ. ಅದರಿಂದ ದೇವರು ಇದ್ದಾನೆಯೋ ಇಲ್ಲವೇ ಎಂಬ ಅಂಶದಲ್ಲಿ ದೇವರು ಇದ್ದಾನೆಂದು ಸ್ಥಾಪಿಸುವುದು ಎಷ್ಟು ಕಷ್ಟವೋ, ದೇವರು ಇಲ್ಲವೆಂದು ಸ್ಥಾಪಿಸುವುದೂ ಅಷ್ಟೇ ಕಷ್ಟಕರವಾದುದೆಂದು ಹೇಳುತ್ತಿದ್ದಾರೆ. ಆದರೂ ಈ ವೈಜ್ಞಾನಿಕರು ಇಹಜೀವನವನ್ನು ನೀತಿಯುತವಾದ, ಧರ್ಮವನ್ನು ಮೀರದರೀತಿಯಲ್ಲಿಯೇ ನಡೆಸಬೇಕೆಂದು ತಿಳಿದು ಹಾಗೆ ಮಾಡುತ್ತಾರೆ. ನೀತಿ, ಧರ್ಮಗಳನ್ನು ಕಡೆಗಣಿಸಿಬಿಡಲು ಇವರ ಹೃದಯವೂ ಒಪ್ಪದೆ ಇದೆ. ಇದರಿಂದ ಪ್ರಾಕೃತ ಪ್ರಪಂಚಕ್ಕಿಂತ ಬೇರೆಯಾಗಿರುವಂತೆ ತೋರುವ ಇನ್ನೂ ಒಂದು ಆಂತರ ಪ್ರಪಂಚವಿರಬೇಕೆಂದು ಊಹಿಸುವವರೂ ಇದ್ದಾರೆ. ಆದುದರಿಂದ ಇವರನ್ನು ಸಂಶಯುವಾದಿಗಳ ಪಂಗಡದಲ್ಲಿ ಸೇರಿಸಿ ವಿಮರ್ಶಿಸಲಾಗುತ್ತಿದೆ. ಇವರ ದೃಷ್ಟಿಯಲ್ಲೂ ಜೀವನದ ಗುರಿಯು ಸಾಧ್ಯವಾದಷ್ಟು ಹೆಚ್ಚಿನ ಸುಖ ಸೌಕರ್ಯಗಳನ್ನು ಸಾಧ್ಯವಾದಷ್ಟು ಹೆಚ್ಚು ಜನರಿಗೆ ಒದಗಿಸಬೇಕಾದುದು ಎಲ್ಲರ, ಅದರಲ್ಲೂ ತಿಳಿವಳಿಕೆಯಲ್ಲಿ ಮುಂದುವರಿದಿರುವವರ, ಕರ್ತವ್ಯ ಧರ್ಮವಾಗಿದೆ ಎಂಬುದನ್ನು ಒಪ್ಪಿ ಹಾಗೆ ಮಾಡುತ್ತಿದ್ದಾರೆ. ಇವರ ಪರಿಶ್ರಮದ ಫಲವಾಗಿ ಬೈಸಿಕಲ್ಲು, ರೈಲು, ಹಡಗು, ವಿಮಾನ, ವಿದ್ಯುದ್ದೀಪ, ಮೋಟಾರು ವಾಹನಗಳು, ಸಿನೆಮಾ, ರೇಡಿಯೋ, ಟೆಲಿಗ್ರಾಫ್, ಟೆಲಿಫೋನ್, ಟೆಲಿವಿಷನ್, ಎಕ್ಸ್‌ರೇ ಮುಂತಾದ ಜೀವನದ ಸುಖ ಸೌಕರ್ಯಗಳು ಜನಸಾಮಾನ್ಯಕ್ಕೂ ದೊರೆಯುವಂತಾಗಿದೆ. ಇದು ಇವರ ತಪಸ್ಸಿನ ಫಲವು.

ಇವರ ತಪಸ್ಸಿಗೆ ಮೆಚ್ಚಿಯೋ ಎಂಬಂತೆ ಪ್ರಕೃತಿ ಮಾತೆಯೂ ಇವರಿಗೆ ಕ್ರಮವಾಗಿ ತನ್ನಲ್ಲಿ ಅಡಗಿರುವ ಅನಂತ ಶಕ್ತಿಯ ರಹಸ್ಯಗಳನ್ನು ಆಗಾಗ್ಗೆ ಇವರಿಗೆ ತಿಳಿಯುವಂತೆ ಅನುಗ್ರಹಿಸುತ್ತಾಳೆಂದು ಧಾರ್ಮಿಕರು ತಿಳಿಯುತ್ತಾರೆ. ಮಾನವನ ಹುಟ್ಟುಗುಣವಾದ ಜಿಜ್ಞಾಸೆಯು, ಎಂದರೆ ಹೊಸ ಹೊಸ ವಿಷಯಗಳನ್ನು ತಿಳಿಯಬೇಕೆಂಬ ಆಸೆಯು, ಇವರನ್ನೂ ಅನಿರೀಕ್ಷಿತವಾದ ವಿಷಯಗಳ ಕಡೆಗೆ ತಲಪಿಸುವುದುಂಟು.

ವಿಜ್ಞಾನವು ಏಕತತ್ವಕ್ಕೆ ತಲಪುತ್ತಿದೆ.

ವೈಜ್ಞಾನಿಕರು ಈ ಪ್ರಪಂಚದ ಮೂಲವಸ್ತುಗಳು ಅನೇಕವಾಗಿವೆ ಎಂದು ಒಪ್ಪಿದ್ದರು. ಈಚೆಗೆ ನಡೆಸುತ್ತಾ ಬಂದ ಪ್ರಯೋಗಗಳ ಫಲವಾಗಿ ಮೂಲವಸ್ತುಗಳು ಎರಡೇ ಎಂದು ಸಾರಿದರು. ಇದರಂತೆ matter ದ್ರವ್ಯ energy ಶಕ್ತಿ, ಇವೆರಡಗಿಂದಲೇ ಈ ಜಗತ್ತು ಉಂಟಾಗಿ ಮುಂದುವರಿಯುತ್ತಿದೆ ಎಂದು ವಿವರಿಸಿ ತಿಳಿಸಿದ್ದರು. ಆದರೆ ಇತ್ತೀಚಿನ ಸೂಕ್ಷ್ಮ ಪ್ರಯೋಗಗಳ ಮತ್ತು ಪರಿಶೀಲನೆಯ ಫಲವಾಗಿ ದ್ರವ್ಯವೂ ಶಕ್ತಿಯ ರೂಪಾಂತರವಾಗಿದೆ ಎಂದು ಕಂಡುಹಿಡಿದಿರುತ್ತಾರೆ. ಈ ಪ್ರಪಂಚವೆಲ್ಲವೂ ಸ್ಪಂದ vibration, ಶಕ್ತಿ energy ಇವುಗಳ ರೂಪ ವಿಶೇಷಗಳೆಂದೂ ಪರಿಣಾಮವೆಂತಲೂ ತಿಳಿಸುತ್ತಿದ್ದಾರೆ. ಎಲ್ಲವೂ ತರಂಗ wave ರೂಪದಲ್ಲಿ ಚಲಿಸುತ್ತಿದೆ ಎಂದೂ, ಈ ತರಂಗಗಳ ಒತ್ತಡ ಘನೀಭಾವಗಳಿಂದ ಜಗತ್ತಿನ ಪದಾರ್ಥಗಳು ಉಂಟಾಗಿವೆ ಎಂದೂ ವಿವರಿಸುತ್ತಿದ್ದಾರೆ. ಭೌತ ಸೂಕ್ಷ್ಮಭಾಗ particle, ತರಂಗ wave, ಎರಡನ್ನೂ ಸೇರಿಸಿಯೋ ಎನ್ನುವಹಾಗೆ wavicle ಎಂಬ ಪದವು ಪ್ರಯೋಗದಲ್ಲಿ ಬರುತ್ತಿದೆ. ಅತ್ಯಾಧುನಿಕವಾದ ವೈಜ್ಞಾನಿಕ ವಿಮರ್ಶೆಯಿಂದ ಈ wavicle ಎಂಬ ಏಕ ಮೂಲವಸ್ತುವನ್ನು ಈ ಜಗತ್ತಿನ ಸೂಕ್ಷ್ಮತಮ ಮೂಲಕಾರಣವೆಂದು ಗೊತ್ತುಮಾಡಿರುತ್ತಾರೆ. ಇದನ್ನು ಪ್ರಾಕೃತಾದ್ವೈತ ಎನ್ನಬಹುದೆಂದು ಧಾರ್ಮಿಕರು ಭಾವಿಸುತ್ತಿದ್ದಾರೆ.

ಭಾರತೀಯ ದರ್ಶನಗಳ ಗುರಿ.

ಈ ವೈಜ್ಞಾನಿಕರಂತೆಯೇ ಭಾರತಾರ್ಯರೂ ಮೊದಲು ಬಾಹ್ಯ ಪ್ರಪಂಚದ ಸ್ವರೂಪವನ್ನು ಅದರ ಕಾರಣವನ್ನೂ ಪರಿಶೀಲಿಸಿದರು. ಇವರಲ್ಲಿ ನೈಯಾಯಿಕರೂ ವೈಶೇಷಿಕರೂ ಈ ಜಗತ್ತಿನಲ್ಲಿರುವ ಪದಾರ್ಥಗಳು ಐದು ಬಗೆಯ, ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ ಎಂಬ ಪಂಚಭೂತಗಳ, ಪರಮಾಣುಗಳಿಂದ ಏರ್ಪಟ್ಟಿವೆ ಎಂದು ತಿಳಿದರು. ಮಾನವನಿಗೆ ಇರುವ ಐದು ಜ್ಞಾನೇಂದ್ರಿಯಗಳಿಂದ ಅವನಿಗೆ ಉಂಟಾಗುವ ಅನುಭವಗಳ ಆಧಾರದ ಮೇಲೆ ಈ ಪ್ರಪಂಚವು ಪಾಂಚಭೌತಿಕವಾದುದೆಂದು ನಿರ್ಧರಿಸಿದರು. ಸಾಂಖ್ಯಶಾಸ್ತ್ರ ಪ್ರವರ್ತಕರು ಇನ್ನೂ ಮುಂದೆ ಹೋಗಿ ಈ ಐದು ಬಗೆಯ ಪರಮಾಣುಗಳಿಗೆ ಕಾರಣವಾದುದು ಮಹತ್ತತ್ತ್ವವೆಂದೂ, ಅದೇ ಮೂಲಕಾರಣವಾದ ಪ್ರಕೃತಿ ತತ್ವದ ಪ್ರಥಮಕಾರ್ಯವೆಂದೂ ಹೇಳಿದರು. ಈ ಜಗತ್ತಿನಲ್ಲಿ ಚರ, ಅಚರ, ಜಡ, ಚೇತನ, ಜೀವ, ಅಜೀವ ಎಂದು ಮುಂತಾಗಿ ಎರಡು ಬಗೆಯ ವಸ್ತುಗಳಿವೆ. ಇವುಗಳಲ್ಲಿ ಜಡ ವಸ್ತುಗಳಿಗೆ ಪ್ರಕೃತಿಯೇ ಮೂಲಪ್ರಥಮ ಕಾರಣವು. ಚೇತನ ವಸ್ತುವೇ ಜೀವನು. ಈ ಪ್ರಪಂಚವನ್ನು ಉಂಟುಮಾಡಿ ರಕ್ಷಿಸುತ್ತಿದ್ದು ಕಡೆಗೆ ಅದರ ಕೆಲಸವಾದ ಮೇಲೆ ಅದನ್ನು ಉಪಸಂಹರಿಸುವವನೇ ದೇವನು. ಹೀಗೆ ದೇವರು, ಜೀವರು, ಪ್ರಪಂಚ ಈ ಮೂರಕ್ಕೂ ಇರುವ ಸಂಬಂಧ ಈ ನಾಲ್ಕು ಅಂಶಗಳನ್ನು ನಮ್ಮ ಪೂರ್ವೀಕರಾದ ಆರ್ಯರು ತಮ್ಮ ಧ್ಯಾನಯೋಗದಿಂದ ಪಡೆದ ತಿಳಿವಳಿಕೆಗಳನ್ನು ಷಡ್ದರ್ಶನಗಳು, ಎಂದರೆ, ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸಾ, ವೇದಾಂತ ಎಂಬ ಆರು ದರ್ಶನಗಳಲ್ಲಿ ವಿವರಿಸಿರುತ್ತಾರೆ. ಇದಕ್ಕೆ ಮೂಲಭೂತವಾದ ಅವರ ಅನುಭವದ ಮಾತುಗಳಂತಿರುವ ವಾಕ್ಯಗಳನ್ನು ಮೇಲೆ ೭೮ನೆಯ ಪುಟದಲ್ಲಿ ಉದಾಹರಿಸಿ ವಿವರಿಸಲಾಗಿದೆ. ಆಗಿನ ಕಾಲದ ಆರ್ಯರು ತತ್ವಗಳನ್ನು ತಿಳಿದ ಬಗೆಯು ಹೀಗಿದೆ.

"ತೇಧ್ಯಾನ ಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂಸ್ವ ಗುಣೈರ್ನಿಗೂಢಾಂ" ಎಂದರೆ, "ಆಸ್ತಿಕರು. ಆಸ್ತಿಕರು. ಋಷಿಗಳು, ಆ ಯೋಗನಿಷ್ಠರಾದ ಉಪಾಸಕರು, ಧ್ಯಾನಯೋಗ ಎಂದರೆ, ಮನಸ್ಸಿನ ಏಕಾಗ್ರತೆಯನ್ನು ಧಾರಣದಿಂದ ಪಡೆದು ಒಂದೇ ತತ್ವವನ್ನೇ ಸಂತತವಾಗಿ ಎಡೆಬಿಡದೆ ಯೋಚಿಸುತ್ತಿರುವಿಕೆ ಎಂಬ ಉಪಾಯವನ್ನು, ಸಾಧನ ಯೋಗವನ್ನು ಅನುಸರಿಸಿದವರಾಗಿ, ದೇವಾತ್ಮಶಕ್ತಿಯನ್ನು ಎಂದರೆ, ಸ್ವಪ್ರಕಾಶ ಸ್ವರೂಪನಾದ ಪರಮಾತ್ಮನ ಉಪಾಧಿ ಶಕ್ತಿಯನ್ನು ಅವಿನಾಭಾವದಿಂದ ಆತ್ಮಸ್ವರೂಪವಾಗಿರುವ ಮಾಯಾ ಶಕ್ತಿಯನ್ನು ಈ ಎಲ್ಲ ಪ್ರಪಂಚಕ್ಕೂ ಕಾರಣವಾದ ತತ್ವವೆಂದೂ, ಕಾರ್ಯದ ರೂಪದಿಂದ ಕಾರಣದ ರೂಪವು ಕಣ್ಣಿಗೆ ಮರೆಯಾಗಿರುವಂತೆ, ಈ ಆತ್ಮ ಶಕ್ತಿಯೂ ಇಪ್ಪತ್ತುನಾಲ್ಕು ಬಗೆಯಾಗಿ ಪರಿಣಮಿಸಿರುವ ಮಾಯೆಯು ಅಥವಾ ಪ್ರಕೃತಿಯ ಕಾರ್ಯಗಳಿಂದ ಮರೆಯಾಗಿರುತ್ತದೆ ಎಂದೂ ಮನಗಂಡರು" ಎಂದು ಅರ್ಥವು. ಇದನ್ನು ಆರ್ಯರು ತಮ್ಮ ಧ್ಯಾನದೃಷ್ಟಿಯಿಂದ ತಿಳಿದುಕೊಂಡರು. ಈ ಒಂದೇ ಶಕ್ತಿ ತತ್ವವನ್ನು ಸಾಂಖ್ಯ ದರ್ಶನದಲ್ಲಿ ಪ್ರಕೃತಿ ಎಂದೂ, ವೇದಾಂತ ದರ್ಶನದಲ್ಲಿ ಮಾಯೆ ಎಂದೂ, ತಾಂತ್ರಿಕರು ತಂತ್ರಶಾಸ್ತ್ರದಲ್ಲಿ ಆದಿಶಕ್ತಿ ಪರಾಶಕ್ತಿ ಎಂದೂ, ಪುರಾಣಗಳಲ್ಲಿ ದೇವೀ, ತ್ರಿಪುರಸುಂದರೀ, ರಾಜರಾಜೇಶ್ವರೀ ಎಂದು ನಾಮಭೇದಗಳಿಂದ ವರ್ಣಿಸಲಾಗಿದೆ. ಉಪನಿಷತ್ತುಗಳು ತತ್ವವನ್ನು ಸ್ಫುರಣಾತ್ಮಕ (intuitional) ರೀತಿಯಿಂದ ಮನಗಂಡು ವಿವರಿಸುತ್ತವೆ. ಆದರೆ ದರ್ಶನಗಳು ತರ್ಕಾತ್ಮಕ (intellectual) ರೀತಿಯಿಂದ ತತ್ವವನ್ನು ತಿಳಿದು ಬೋಧಿಸುತ್ತವೆ. ಋಷಿಗಳು ಅನುಸರಿಸಿದ ಸ್ಫುರಣಾತ್ಮಕ ರೀತಿಯಲ್ಲಿ ತರ್ಕಾತ್ಮಕ ರೀತಿಯು ಅವಿರೋಧವಾಗಿ ಅಳವಡುತ್ತದೆ ಎಂಬುದನ್ನು ನಾವು ಗಮನಿಸಬಹುದು. ಉಪನಿಷತ್ತುಗಳಲ್ಲಿ ಶುದ್ಧಾದ್ವೈತ (Absolute monism) ವಾದ, ಸಗುಣ ನಿರ್ಗುಣ (Personalistic Idealism) ವಾದ. ಅನೇ

ಕತ್ವ (Pluralism) ವಾದ. ಆತ್ಮೈಕಾಕಿತ್ವ (solipsism) ವಾದ, ಆತ್ಮಸಾಕ್ಷಾತ್ಕಾರ (self realisation) ವಾದ, ಬುದ್ಧಿ, (intellect), ಶುದ್ಧ ಜ್ಞಾನಶಕ್ತಿ (intuition) ಇವುಗಳ ಬಗ್ಗೆ ಉಪನಿಷತ್ತುಗಳಲ್ಲಿ ಉಲ್ಲೇಖವಿವೆ. ಈಶೋಪನಿಷತ್ತಿನಲ್ಲಿ "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ" ಎಂದು ನಿರಾಶಾ (pessimism) ವಾದವನ್ನು ನಿರಾಕರಿಸಿದೆ. ರವೀಂದ್ರನಾಥ ಟಾಗೂರ ಕವಿಯು ಪಾಶ್ಚಾತ್ಯ ಸಾಹಿತ್ಯದಿಂದ ಆನಂದ ಸಂದೇಶವನ್ನು ಇಲ್ಲಿಗೆ ತಂದು ಬೀರಿದನೆಂಬುದು ಅಜ್ಞಾನದ ಮಾತು. ಉಪನಿಷತ್ತುಗಳಲ್ಲಿ ಉಪದಿಷ್ಟವಾದ ಸ್ವಾನಂದ ಸಾಗರದಲ್ಲಿ ಏಳುವ ತೆರೆಗಳ ಉದ್ಗಮವೇ ಉಕ್ಕುವಿಕೆಯೇ ಟಾಗೋರರನ ತತ್ವಜ್ಞಾನ ರೂಪದಿಂದ ಈಗ ಹಿಂದೂಸ್ಥಾನವನ್ನು ಮಿಕ್ಕಿ ಹೊರಸೂಸಿ ಹೊರದೇಶಗಳಿಗೆ ಹರಿಯುತ್ತಿರುವುದು. ಭಾರತೀಯ ತತ್ವಜ್ಞಾನವನ್ನು ಈಗಿನ ಹೊಸ ಪದ್ಧತಿಯಿಂದ ಹೇಗೆ ವಿವೇಚಿಸಿ ವಿಮರ್ಶಿಸಬಹುದು? ಅಧ್ಯಾತ್ಮದ ಅರಿವನ್ನು ಜನರಿಗೆ ಹೇಗೆ ತಲಪಿಸುವುದು? ಇದೇ ಮುಂತಾದ ಅಂಶಗಳನ್ನು ಉಪನಿಷತ್ತುಗಳಲ್ಲಿ ನಾವು ಕಾಣಬಹುದು. ರಾಯನಿರಲಿ ರೈತನಿರಲಿ ನಿಜವಾದ ಧಾರ್ಮಿಕ ಬಲವಿದ್ದ ಪ್ರತಿಯೊಬ್ಬನೂ ಅಧ್ರುವಗಳಲ್ಲಿ ಧ್ರುವವನ್ನು (ಅಸ್ಥಿರಗಳಲ್ಲಿ ಸ್ಥಿರವನ್ನು) ವಿಶೇಷಗಳಲ್ಲಿ ಸಾಮಾನ್ಯವನ್ನು ಗೊತ್ತುಹಿಡಿಯುವ ಮಾರ್ಗವನ್ನು ಇಲ್ಲಿ ತಿಳಿಯಬಹುದು. ಉದಾಹರಣಾರ್ಥವಾಗಿ ತತ್ವಜ್ಞಾನಿಗಳಲ್ಲಿ ಶಂಕರಾಚಾರ್ಯ ಮತ್ತು ಪ್ಲೇಟೋ, ಅರಸರಲ್ಲಿ ಅಶೋಕ ಮತ್ತು ಅಕ್ಬರ್, ಇವರು ವಿಶ್ವಧರ್ಮದರ್ಶನಕ್ಕಾಗಿ ಹೇಗೆ ಹೆಣಗಿದರೆಂಬುದನ್ನು ಸ್ಪಷ್ಟವಾಗಿ ತಿಳಿಯಬಹುದು. ವಿಶೇಷಗಳಲ್ಲಿ ಸಾಮಾನ್ಯದರ್ಶನವೇ ಪ್ಲೇಟೋನಲ್ಲಿ ಕಾಣಬರುವ ಮುಖ್ಯ ಶ್ರೇಷ್ಠ ಗುಣ. ಯಾವುದನ್ನರಿಯುವುದರಿಂದ ಎಲ್ಲವನ್ನೂ ಅರಿತಂತಾಗುವುದೋ ಅದನ್ನು ಅರಿತುಕೊಳ್ಳುವುದಕ್ಕಾಗಿಯೇ ಶಂಕರಾಚಾರ್ಯರು ತಮ್ಮ ಜೀವನ ಸರ್ವಸ್ವವನ್ನು ಅರ್ಪಿಸಿದರು. ಪರರ ಧರ್ಮಗಳನ್ನು ಹಳಿಯಬೇಡಿರಿ. ಹಾಗೆ ಮಾಡುವುದೆಂದರೆ ನಮ್ಮ ಧರ್ಮವನ್ನೇ

ನಾವು ಕೆಡಿಸಿದಂತೆ ಎಂದು ಅಶೋಕ ಮಹಾರಾಜನು ತನ್ನ ಒಂದು ಶಿಲಾಶಾಸನದಲ್ಲಿ ಬರೆಯಿಸಿ ಸಮಭಾವ ಸಮನ್ವಯ ಗುಣವನ್ನು ಉಪದೇಶಿಸಿದನು. ಸರ್ವ ಧರ್ಮಗಳ ಪರಿಷತ್ತೊಂದನ್ನು ಕರೆದು ಯಾವುದರಿಂದ ಅಂತರಂಗದ ಕದವು ತೆರೆಯುವುದೋ ಆ ತತ್ವ ದರ್ಶನಕ್ಕಾಗಿ ಅಕ್ಬರನು ಹಂಬಲಿಸಿದನು. ಈ ಮಹಾನುಭಾವರ ಕಾಲಕ್ಕೂ, ಈಗಿನ ಕಾಲಕ್ಕೂ ಮಹದಂತರವಿದೆ. ಕಾಲಗತಿಗನುಸರಿಸಿ ಹೆಚ್ಚಾಗಿ ಜ್ಞಾನದ ಪ್ರಗತಿಯಾಗಿದೆ. ಅನೇಕ ಶಾಸ್ತ್ರೀಯ ಶೋಧನ ಗಳಿಂದ ಮಾನವನ ಜ್ಞಾನ ಬಂಡಾರವು ಬೆಳೆದಿದೆ. ಹಳೆಯದು ಹೋಗಿ ಮೇಲ್ಪಟ್ಟು ಹೊಸದು ಹುಟ್ಟಿ ಮುಂದುವರಿಯುತ್ತಿದೆ. ಹೀಗಿ ದ್ದರೂ ಮಾನವನ ಧ್ಯೇಯ ಅದನ್ನು ಸಾಧಿಸುವ ಮಾರ್ಗಗಳು ಅಚ್ಚಳಿ ಯದೆ ಮೊದಲಿನಂತೆಯೇ ಇವೆ. ಈಗಲೂ ಪರಮಾತ್ಮ ಜ್ಞಾನವೇ ಏಕ ಸತ್ಯತತ್ವವೇ ಎಲ್ಲಕ್ಕೂ ಶ್ರೇಷ್ಠವಾದ ಧ್ಯೇಯ ಅಥವಾ ಗುರಿ ಯಾಗಿದೆ. ಹಾಗೆಯೇ ಆಧ್ಯಾತ್ಮಿಕ ಜೀವನದ ತಾತ್ವಿಕ ಸಮರ್ಥನವು ಮೊದಲಿನಂತೆ ಈಗಲೂ ಆವಶ್ಯಕವಾಗಿದೆ. ಐಹಿಕ ಜೀವನಕ್ಕಿಂತಆಧ್ಯಾ ತ್ಮಿಕ ಜೀವನವು ಮಿಗಿಲೆನಿಸಿದೆ.

ವೇದವೆಂದರೇನು ? ಋಗ್ವೇದ ಮಂತ್ರಗಳು ನಿಸರ್ಗ ಶಕ್ತಿಗಳಿಗೆ ಅಭಿಮಾನ ದೇವತಾ ರೂಪಗಳನ್ನುಕಲ್ಪಿಸಿ ಸ್ತೋತ್ರಮಾಡಿದ ಸೂಕ್ತಿ ಸಂಗ್ರಹವು. ಅವು ಮಾನವನ ಹೃದಯದಲ್ಲಿ ಬೆಳೆಯುವ ಧರ್ಮಜಾಗೃತಿಯ ಮೊದಲನೆಯ ಮೊಳಕೆಗಳಾಗಿವೆ. ಅವು ಬಾಹ್ಯದಲ್ಲಿ ತತ್ವವನ್ನು ಕಾಣುವ ಪ್ರಯತ್ನದ ಫಲಗಳಾಗಿವೆ. ಉಪನಿಷತ್ತುಗಳು ಅಂತರ್ವಸ್ತುವನ್ನು ಎಂದರೆ ಆತ್ಮವನ್ನು ಮನಗಾಣಿಸುವ ಧರ್ಮಗ್ರಂಥಗಳಾಗಿವೆ. ಸೃಷ್ಟಿಶಕ್ತಿಗಳಿಗೆ ಮೂಲಭೂತವಾಗಿರುವ ಆದಿತತ್ವವನ್ನೇ ಶಾಸ್ತ್ರೀಯ ಪದ್ಧತಿಯಿಂದ ಕಂಡುಹಿಡಿಯುವುದೇ ಉಪನಿಷತ್ತುಗಳ ಧ್ಯೇಯವಾಗಿದೆ. ಮನುಷ್ಯನ ಮನಸ್ಸು ದೇವಕಲ್ಪನೆಯಿಂದ ಆತ್ಮಕಲ್ಪನೆಯ ಕಡೆಗೆ ಸಾಗಿದೆ. ಜೀವಾತ್ಮನು ವಿಶ್ವಾತ್ಮನಾದನೆಂದರೆ ಅಥವಾ ಅವನಿಗೆ ಅಪರೋಕ್ಷ

ಜ್ಞಾನವಾಯಿತೆಂದರೆ ಯಾರು ಯಾರಿಗೆ ಅಂಜಬೇಕು ? ಯಾರು ಯಾರಿಗೆ ಆಹುತಿ ಕೊಡಬೇಕು ? ಯಾರಿಗೋಸ್ಕರ ಏತಕ್ಕೆಂದು ಪ್ರಾರ್ಥಿಸಬೇಕು ? ಒಟ್ಟಿನಲ್ಲಿ ನೋಡಿದರೆ ನಮ್ಮ ಭಾರತೀಯರ ಮನಸ್ಸು ಪ್ರಾರ್ಥನೆಯಿಂದ ತತ್ತ್ವವಿಚಾರದ ಕಡೆಗೂ, ಸೂಕ್ತಿಗಳಿಂದ ಆಂತರ್ ಜ್ಞಾನದ ಕಡೆಗೂ, ಏಕದೇವತಾ ಪ್ರಧಾನ ಅನೇಕ ದೇವತಾ ವಾದದಿಂದ ಅನುಭವಸಿದ್ಧ ಏಕದೇವ ತತ್ತ್ವದ ಕಡೆಗೂ ತಿರುಗಿ ವಿಕಾಸ ಹೊಂದುತ್ತಿದೆ ಎಂಬುದು ಗೊತ್ತಾಗುತ್ತದೆ. ಅಲ್ಲದೆ, ವಿಶ್ವೋತ್ಪತ್ತಿ ವಿಚಾರಗಳೂ ಕಾಣಬರುತ್ತವೆ ಪ್ರಪಂಚದ ಮೂಲತತ್ತ್ವವು ಸತ್ ಅಸತ್ ಎಂಬ ವಾದಕ್ಕಿಂತ ಮೀರಿ ಶ್ರೇಷ್ಠವಾದುದೆಂದೂ ತತ್ತ್ವ ಸ್ಫೂರ್ತಿಯುಂಟಾಗಲು ಪ್ರಾರಂಭವಾಗಿತ್ತೆಂದೂ ತೋರುತ್ತದೆ. ಅಷ್ಟೇ ಅಲ್ಲದೆ ಮಾನಸಶಾಸ್ತ್ರದ ದೃಷ್ಟಿಯಿಂದ ಋಗ್ವೇದವು ಕಲ್ಪನಾ ಶಕ್ತಿ ಮತ್ತು ಭಾವನಾಶಕ್ತಿ ಪ್ರಧಾನವಾಗಿದೆ. ಉಪನಿಷತ್ತುಗಳು ಬುದ್ಧಿ ಪ್ರಧಾನ, ತರ್ಕಪ್ರಧಾನವೂ ಆಗಿವೆ. ಭಾಷೆ ಭಾವನೆಗಳ ದೃಷ್ಟಿಯಿಂದ ಋಗ್ವೇದವು ಭಕ್ತಿಗೀತೆಗಳನ್ನು ಪಡೆದಿದೆ. ಉಪನಿಷತ್ತುಗಳಲ್ಲಿ ಅವು ವಿರಳವಾಗಿವೆ. ಆದರೆ ತತ್ತ್ವವನ್ನು ಶೋಧಿಸುವ ಶಾಂತ ವಾತಾವರಣವಿದೆ. ಹೆದರಿಕೆಯಿಂದ ಆಶೆಯಿಂದ ದೇವತಾಸ್ತುತಿ ಇಲ್ಲ. ಇಂಥ ದೇವತೆಗಳಿಂದ ಯಾವ ಅನುಗ್ರಹವನ್ನೂ ಯಾಚಿಸ ಬೇಕಾಗಿಲ್ಲ. "ನೇದಂಯದಿದ ಮುಪಾಸತೇ" – ಕೇನ. ಉ. ಎಂದರೆ, "ನೀನು ಪೂಜಿಸುತ್ತಿರುವುದು ನಿಜವಾದ ದೇವತೆಯಲ್ಲ." "ಈ ವಿಶ್ವದ ಸ್ಥಿತಿಯನ್ನು ಸ್ಥಿರವಾಗಿಡುವವನು ವಿಶ್ವದ ಹೊರಗಿಲ್ಲ. ಸ್ವಾಭಾವಿಕ ಮತ್ತು ನೈತಿಕ ವ್ಯವಸ್ಥೆಯ ಉದ್ಗಮವು ನಿನ್ನ ಹೊರ ಗಿಲ್ಲ. ಅಂತರ್ಬಾಹ್ಯಗಳ ಸಮನ್ವಯವಾದ ಆತ್ಮನಲ್ಲಿಯೇ ಎಲ್ಲದರ ಉದ್ಗಮವೂ ಸ್ಥಿತಿಯೂ ಉಪಸಂಹಾರವೂ, ತೂಕವೂ ತಪ್ಪದೆ ಇದೆ. ಸೃಷ್ಟಿಯನ್ನು ಅವನೇ ಧರಿಸುವವನು. ಅವನೇ ಧರ್ಮಸ್ವರೂಪನು. ಈ ಸ್ವೈರ ಪ್ರಪಂಚವೆಲ್ಲವನ್ನು ಮೇರೆ ತಪ್ಪದಂತೆ ಒಡ್ಡುಹಾಕಿ ಅಡ್ಡಗಟ್ಟಿ ನಿಯಮಿಸುತ್ತಿರುವವನೂ ಅವನೇ."

“ ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ ” ಮ ನಾ. ಉಪ.

ಧರ್ಮವು ಇಡೀ ಜಗತ್ತಿಗೆ ಆಧಾರ. ಮಾನವಜನ್ಮದ ತಾತ್ವಿಕ ಗುರಿಯನ್ನು ಗೊತ್ತುಹಚ್ಚುವುದೇ ಉಪನಿಷತ್ತುಗಳ ಮುಖ್ಯ ಧೋರಣವಾಗಿದೆ. ಪ್ರಾಚೀನತಮವಾದ ಛಾಂದೋಗ್ಯೋಪನಿಷತ್ತಿನ ಕಾಲದಲ್ಲಿ ಸಹ ಅಂತರ್‌ಯಜ್ಞದ ಮಹತ್ತ್ವವನ್ನು ಋಷಿಗಳು ಸ್ಪಷ್ಟವಾಗಿ ಕಂಡುಹಿಡಿದಿದ್ದರು. ಛಾಂ.ಅ. ೫. ಖಂ. ೧೯.೨೪ “ನಮ್ಮೊಳಗಣ ಪ್ರಾಣಕ್ಕೆ ಆಹುತಿಗಳನ್ನು ಕೊಡುವುದೇ ನಿಜವಾದ ಯಜ್ಞವು ...” “ಒಟ್ಟಿನಲ್ಲಿ ಬ್ರಾಹ್ಮಣ ಕಾಲದ ಕರ್ಮಕಾಂಡದ ಬದಲು ಜ್ಞಾನಕಾಂಡವನ್ನು ಪ್ರಸ್ಥಾಪಿಸಿದ ಉಪನಿಷತ್ಕಾಲದಲ್ಲಿ ಕರ್ಮಕಾಂಡದ ಪೊಳ್ಳುತನವನ್ನು ಎಲ್ಲರೂ ಮನಗಂಡಿದ್ದರು.”

ಭೀಷಾಽಸ್ಮಾತ್ ವಾತಃ ಪವತೇ ಭೀಷೋದೇತಿ ಸೂರ್ಯಃ ।
ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮಃ ॥

ಕರ್ಮಕಾಂಡದಲ್ಲಿ ಪ್ರವೃತ್ತಿ ಧರ್ಮದ ತೆಗಳಿಕೆ.

ಸೂರ್ಯದ್ವಾರೇಣ ಎಂದರೆ ತೇಜೋಮಯವಾದ ಜ್ಞಾನಮಾರ್ಗದಿಂದ ಛಾಂದೋಗ್ಯೋಪನಿಷತ್ತಿನ ಒಂದನೆಯ ಅಧ್ಯಾಯದಲ್ಲಿ ಕೊನೆಗೆ ಮಾತ್ರ ವಿಷಯಸುಖಗಳನ್ನೇ ಧ್ಯೇಯವಾಗಿಟ್ಟುಕೊಂಡು ಮಂತ್ರಾನುಷ್ಠಾನಮಾಡುವವರ ಬಗ್ಗೆ ಒಂದು ಆಕರ್ಷಕವಾದ ರೂಪಕ ಕಥೆ ಇದೆ. ಬಕದಾಲ್ಭ್ಯ ಅಥವಾ ಗ್ಲಾವ ಮೈತ್ರೇಯನೆಂಬುವನು ಒಮ್ಮೆ ವೇದ ಪಠನಕ್ಕಾಗಿ ನಿರ್ಜನ ಪ್ರದೇಶ ಒಂದಕ್ಕೆ ಹೋದನು. ಒಂದು ಬಿಳಿಯ ನಾಯಿಯು ಮುಂದೆ ಬಂದು ನಿಂತಿತು. ಅದರ ಸುತ್ತಲೂ ಹಸಿದು ಹಂಬಲಿಸುತ್ತಿರುವ ನಾಯಿಗಳ ಒಂದು ತಂಡವು ಬಂದು ಸೇರಿತು. ಆ ಬಿಳಿಯ ನಾಯಿಯು ಕೆಲವು ವಿಶಿಷ್ಟವಾದ ಮಂತ್ರಪಠಣದಿಂದ ತಮಗೆ ಅನ್ನವನ್ನು ದೊರಕಿಸಿ ಕೊಡಬೇಕೆಂಬ ಉದ್ದೇಶದಿಂದ ಆ ಮಂತ್ರಗಳನ್ನು ಪಠಿಸು. ಎಂದು ಅದಕ್ಕೆ ಆ ತಂಡವು ಹೇಳತೊಡಗಿತು. ನಾಳೆ ಬೆಳಿಗ್ಗೆ ಬನ್ನಿ ಎಂದು

ಅದು ತಂಡಕ್ಕೆ ಹೇಳಿತು. ಮಾರನೆಯ ದಿನ ಆ ನಾಯಿಗಳು ಮಂತ್ರವನ್ನು ಹೇಗೆ ಉಚ್ಚರಿಸುವುವೋ ನೋಡೋಣವೆಂದು ಬಕದಾಲ್ಭ್ಯನೂ ನಿರೀಕ್ಷಿಸುತ್ತಿದ್ದನು. ಮೊದಲು ಗೊತ್ತಾಗಿದ್ದಂತೆ ಎಲ್ಲ ನಾಯಿಗಳೂ ಕೂಡಿದುವು. ಯಜ್ಞಕಾಲದಲ್ಲಿ ಒಬ್ಬನ ವಲ್ಲಿಯನ್ನು ಇನ್ನೊಬ್ಬನು ಹಿಡಿದು ಮೆರವಣಿಗೆ ಹೊರಡಿಸುವ ಪುರೋಹಿತರ ತಂಡದಂತೆ, ಆ ನಾಯಿಗಳು ಒಂದರ ಬಾಲವನ್ನು ಇನ್ನೊಂದು ಹಿಡಿದು ಸುತ್ತಾಡಿದುವು. ಆಮೇಲೆ ಅವು ಕುಳಿತು, " ಓಂ ಓಂ ನಾವು ಊಟವನ್ನು ಮಾಡೋಣ! ಓಂ ನಾವು ಕುಡಿಯೋಣ! ಓಂ ದೇವತೆಗಳು ನಮಗೆ ಅನ್ನವನ್ನು ಕೊಡಲಿ! ಅನ್ನದಾತನಾದ ದೇವರೇ, ನಮಗೆ ಅನ್ನವನ್ನು ಕೊಡು! ನಮಗೆ ಅನ್ನವನ್ನು ಕೊಡುವಂಥವನಾಗು!" ಎಂದು ಕೂಗಿಟ್ಟವು. ಇದರಿಂದ ಹೀಗೆ ವ್ಯಕ್ತವಾಗುತ್ತದೆ. ಏನೆಂದರೆ, ಬರಿಯ ಐಹಿಕ ಸುಖೋಪಭೋಗಗಳ ಆಶೆಯಿಂದ ಮಂತ್ರೋಚ್ಚಾರಣ ಮಾಡುವ ಕ್ಷುದ್ರ ಜನರನ್ನು ಹೀಯಾಳಿಸುವುದೇ ಇದರ ಉದ್ದೇಶವೆಂದು ಸ್ಪಷ್ಟವಾಗುತ್ತದೆ. ಬಾಹ್ಯವಿಧಿ ವಿಧಾನಗಳ ಆಡಂಬರವೆಲ್ಲವೂ ಪೊಳ್ಳು ಸೋಗು, ಐಂದ್ರಿಯಿಕ ಸುಖವು ಆಧ್ಯಾತ್ಮಿಕ ಸುಖಕ್ಕಿಂತ ಹೀನತರವು. ಎಂದು ವ್ಯಕ್ತವಾಗುತ್ತದೆ.

ಶ್ರುತಿ ಎಂದರೇನೆಂದು ಸಾಮಾನ್ಯವಾಗಿ ವಿಚಾರಿಸುವುದು ಒಳ್ಳೆಯದು. ಎಲ್ಲ ಮತಗಳ ಅನುಯಾಯಿಗಳು ತಮ್ಮ ಪವಿತ್ರ ವೇದ ಗ್ರಂಥಗಳನ್ನು ದೇವರೇ ಅನುಗ್ರಹಿಸಿದನೆಂದು ನಂಬುತ್ತಾರೆ. ಶ್ರುತಿ ಎಂದರೆ ಹೊರಗಿನಿಂದ ಯಾರೋ ಒಬ್ಬರು ಕೊಟ್ಟ ಸಂದೇಶವಲ್ಲ. ಆದರೆ ಅದು ದೇವೋನ್ಮಾದದ ಸ್ಫೂರ್ತಿಯ ಮೂಲಕ ಒಳಗಿನಿಂದ ಹೊರಹೊಮ್ಮಿದ ದೈವೀವಾಣಿಯಾಗಿರುತ್ತದೆ. ಆದುದರಿಂದಲೇ " ಮಾತಾಡುವವನು ತಾನಲ್ಲ. ತನ್ನ ಮುಖಾಂತರ ದೇವರೇ ಮಾತಾಡುವವನು." ಎಂದು ಸೆಂಟ್ ಪಾಲನು ಹೇಳಿದನು. " ನೀವು ಏನು ಮಾತಾಡಬೇಕೆಂಬುದನ್ನು ಮುಂಗಡವಾಗಿ ವಿಚಾರಿಸುತ್ತಾ ಕೂಡದೆ, ಸರಳವಾಗಿ ಶುದ್ಧ ವಾಣಿಯಿಂದ ನುಡಿಯಿರಿ. ಹಾಗೆ

ಮಾಡಿದರೆ ದೇವರೇ ನಿಮ್ಮ ಮುಖಾಂತರ ಮಾತನಾಡುವನು" ಎಂದು ಕ್ರಿಸ್ತನೂ ಶಿಷ್ಯರಿಗೆ ಹೇಳುತ್ತಿದ್ದನು. ಆದುದರಿಂದಲೇ ಬೈಬಲ್ ಕುರಾನ್ ಮುಂತಾದುವು ದೇವದತ್ತವೆಂದು ಆಯಾ ಜನರು ನಂಬುತ್ತಾರೆ. ಪ್ಲೇಟೋನೂ ಆಯೋನ ಗ್ರಂಥದಲ್ಲಿ "ದೇವೋನ್ಮಾದವೇ ಪದ್ಯಪ್ರಬಂಧಗಳ ರಚನೆಯ ಆದಿಕಾರಣವು. ಎಂದರೆ ಶ್ರೇಷ್ಠಕವಿಗಳು ಯಾವುದಾದರೊಂದು ಕಲೆಯನ್ನು ಅಭ್ಯಾಸಮಾಡಿ ಶ್ರೇಷ್ಠತೆಯನ್ನು ಹೊಂದುವುದಿಲ್ಲ. ಆದರೆ ಸ್ಫೂರ್ತಿಯುಕ್ತರಾದಾಗ ಯಾವದೋ ಒಂದು ನವಚೈತನ್ಯದಿಂದ ಪ್ರೇರಿತರಾದಂತಾಗಿ ಸುಂದರ ಕವನಗಳನ್ನು ಹಾಡುವರು. ಎಂದರೆ ಪ್ರಯತ್ನವಿಶೇಷವಿಲ್ಲದೆ ಸರಳವಾಗಿ ರಚಿಸುವರು.

ವೇದಗಳು ಅನಂತ ಅಪೌರುಷೇಯ ಎಂದರೇನು?

ವೇದೋಪನಿಷತ್ತುಗಳು ಅಪೌರುಷೇಯ ಎಂದರೆ ದೇವಕೃತವೆಂದು ನೈಯಾಯಿಕರು ಹೇಳುತ್ತಾರೆ. ಧ್ವನಿಯ ಅನಾದಿತ್ವವನ್ನು ನಂಬುವ ಮೀಮಾಂಸಕರು "ಅವು ದೇವಕೃತವೂ ಅಲ್ಲ ಮಾನವ ಕೃತವೂ ಅಲ್ಲ. ಆದರೆ ಧ್ವನಿರೂಪದಿಂದ ಅವು ಅನಾದಿಯಾಗಿರುವುವು" ಎನ್ನುತ್ತಾರೆ. ವೇದಾಂತಿಗಳು "ಪುರುಷಪ್ರಯತ್ನ ವಿಶೇಷವಿಲ್ಲದೆ, ದೈವೀಪ್ರೇರಣೆಯಿಂದ ಅವು ಹೊರಹೊಮ್ಮಿದವು ಇತರ ಧರ್ಮಗ್ರಂಥಗಳಂತೆಯೇ, ಇವನ್ನು ದ್ರಷ್ಟೃಗಳು ದೈವೀಸ್ಫೂರ್ತಿಯಿಂದ ತಲ್ಲೀನರಾದಾಗ ಮನಗಂಡು ಪ್ರಕಟಿಸಿದರು" ಎನ್ನುವುದೇ ಸರಿ. ಬೃ ಉ.ಅ. ೨. ಬ್ರಾಂ. ೪. ಮಂ ೧೦ "ಅಸ್ಯಮಹತೋ ಭೂತಸ್ಯ ನಿಶ್ವಸಿತಂ ಏತತ್ ಯದೃಗ್ವೇದೋ ಯಜುರ್ವೇದಸ್ಸಾಮವೇದೋಽಥರ್ವಾಂಗಿರಸಃ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣಿ ಅನುವ್ಯಾಖ್ಯಾನಾನಿ ವ್ಯಾಖ್ಯಾನಾನಿ ಅಸ್ಯೈವೈತಾನಿ ನಿಶ್ವಸಿತಾನಿ." ಶ್ರುತಿ ಎಂದರೆ ದೈವೀಸ್ಫೂರ್ತಿಯ ಪ್ರಕಟನೆ, ಮನುಷ್ಯನ ಮನೋ ಭೂಮಿಕೆಯಲ್ಲಿ ಅವತರಿಸಿದ ದೈವೀಸ್ಫೂರ್ತಿಯ ಶಬ್ದಮಯುವಾದ ವ್ಯಕ್ತಸ್ವರೂಪವು. ಪುಟ ೨೯ನೋಡಿ.

ನಾಲ್ಕು ವರ್ಣಗಳೂ ನಾಲ್ಕು ಆಶ್ರಮಗಳು.

ಆಗಿನ ಸಾಮಾಜಿಕ ಸ್ಥಿತಿಯಲ್ಲಿ ಚತುರ್ವರ್ಣಗಳೂ, ಚತುರಾಶ್ರಮಗಳೂ ಪ್ರಾಮುಖ್ಯವನ್ನು ಪಡೆದಿದ್ದುವು. ಆದರೆ ಭಗವದ್ಗೀತೆಯಲ್ಲಿ ಹೇಳಿರುವಂತೆ ಗುಣ ಕರ್ಮಾನುಸಾರವಾಗಿ ಚಾತುರ್ವರ್ಣ್ಯವನ್ನು ಸೃಜಿಸಲಿಲ್ಲ. ಮೊದಲು ಬ್ರಹ್ಮನು ಒಬ್ಬನೇ ಇದ್ದು ಅಸಂತುಷ್ಟನಾಗಿ ಕ್ಷತ್ರಿಯರನ್ನೂ ಎಂದರೆ ಇಂದ್ರ, ವರುಣ, ಸೋಮ, ಪರ್ಜನ್ಯ, ಯಮ, ಮೃತ್ಯು, ಈಶ ಮುಂತಾದ ಸ್ವರ್ಗದ ಕ್ಷತ್ರಿಯರನ್ನು ನಿರ್ಮಿಸಿದನು. ಅದರಿಂದಲೂ ತೃಪ್ತನಾಗದೆ ವಸುಗಳು, ಆದಿತ್ಯರು, ಮರುತ್ತರು, ವಿಶ್ವೇದೇವತೆಗಳೆಂಬ ವೈಶ್ಯರನ್ನು ಸೃಜಿಸಿದನು. ಅದರಿಂದಲೂ ಪೂರ್ಣತೆಯನ್ನು ಅನುಭವಿಸದೆ ಪೂಷನ್ ಮುಂತಾದ ಶೂದ್ರರನ್ನು ನಿರ್ಮಿಸಿದನು. ಅಷ್ಟರಿಂದಲೂ ಸಮಾಧಾನವಾಗದೆ ಕಡೆಗೆ ಎಲ್ಲ ವರ್ಣಗಳನ್ನೂ ಒಂದೇ ಸೂತ್ರದಿಂದ ನಿಯಮಿಸುವುದಕ್ಕಾಗಿ ಧರ್ಮವನ್ನು ನಿರ್ಮಿಸಿದನು. ಆಮೇಲೆ ದೇವತೆಗಳ ಬ್ರಾಹ್ಮಣನಾದ ಅಗ್ನಿರೂಪವನ್ನು ಧರಿಸಿ ಸ್ವರ್ಗದಲ್ಲಿದ್ದ ವರ್ಣಗಳಂತೆ ಈ ಲೋಕದಲ್ಲಿಯೂ ಚಾತುರ್ವರ್ಣ್ಯವನ್ನು ಏರ್ಪಡಿಸಿದನು. ಇನ್ನು ಆಶ್ರಮಗಳಲ್ಲಿ ಮೊದಲು ಬ್ರಹಚರ್ಯ ಗೃಹಸ್ಥಾಶ್ರಮಗಳಿದ್ದುವು ವೈರಾಗ್ಯವುಂಟಾದ ಕೂಡಲೆ ಜಗತ್ತನ್ನು ತ್ಯಜಿಸಬೇಕೆಂಬ ಉಪದೇಶದಿಂದ ವಾನಪ್ರಸ್ಥಾಶ್ರಮವು ಉಂಟಾಯಿತು ಮುಂ.ಉ.ನಲ್ಲಿರುವ ಸನ್ಯಾಸದ ಉಲ್ಲೇಖದಿಂದ ಸನ್ಯಾಸಾಶ್ರಮವೂ ರೂಢಿಗೆ ಬಂದಿತೆಂದು ತಿಳಿಯಬಹುದು. ಛಾಂ. ಉ.ನಲ್ಲಿ ನಾಲ್ಕು ಆಶ್ರಮಗಳ ಉಲ್ಲೇಖವೂ ಇದೆ. ಗೃಹಸ್ಥನು ಯಜ್ಞದಾನನಿರತನಾಗಿರಬೇಕೆಂದೂ, ವಾನಪ್ರಸ್ಥನು ತಪೋನಿರತನಾಗಿರಬೇಕೆಂದೂ, ಬ್ರಹ್ಮಚಾರಿಯು ಗುರುಸೇವೆಯಿಂದ ವಿದ್ಯಾಭ್ಯಾಸಮಾಡುತ್ತಿರಬೇಕೆಂದೂ, ಇವರೆಲ್ಲರಿಗೂ ಮರಣಾನಂತರ ಶ್ರೇಷ್ಠಲೋಕಗಳ ಪ್ರಾಪ್ತಿಯಾಗುವುದೆಂದೂ ಹೇಳಿದೆ. ಬ್ರಹ್ಮಸಂಸ್ಥನೊಬ್ಬನೇ, ಎಂದರೆ ಸನ್ಯಾಸದಿಂದ ಬ್ರಹ್ಮಚಿಂತನದಲ್ಲಿ ನಿಮಗ್ನನಾಗಿರುವವನೊಬ್ಬನೇ ಅಮೃತತ್ವವನ್ನು ಪಡೆಯುವನು

ಛಾಂ.ಅ. ೨.ಖಂ. ೨೩. ಮಂ. ೧ ಆದುದರಿಂದ ಇದು ಪ್ರಾಚೀನವಾದ ಪದ್ಧತಿಯೇ ಆಗಿತ್ತು.

ಉಪನಿಷತ್ತುಗಳ ಕಾಲದಲ್ಲಿ ರೂಪಗೊಂಡಿದ್ದ ಸಮಾಜದಲ್ಲಿ ಸ್ತ್ರೀಯರ ಸ್ಥಾನವು ಗಮನಾರ್ಹವಾಗಿದೆ. ಉಪನಿಷತ್ತುಗಳಲ್ಲಿ ಮೂರು ಬಗೆಯ ಸ್ತ್ರೀಯರ ವರ್ಣನೆ ಇದೆ. ಯಾಜ್ಞವಲ್ಕ್ಯನ ಧರ್ಮಪತ್ನಿಯಾದ ಕಾತ್ಯಾಯನಿಯು ಸಾಮಾನ್ಯ ಗೃಹಿಣೀ ವರ್ಗಕ್ಕೆ ಸೇರಿದವಳು, ತತ್ತ್ವವಿಷಯ ವಿಚಾರವಿನಿಮಯದಲ್ಲಿ ಪತಿಯ ಅಂತಸ್ತಿಗೆ ಏರಲಾರದವಳಾದರೂ ತನ್ನ ಧಾರ್ಮಿಕ ಅಂತಸ್ತಿನಲ್ಲಿ ತೃಪ್ತಳಾಗಿದ್ದಾಳೆ. ಬ್ರಹ್ಮರ್ಷಿಯಾದ ಯಾಜ್ಞವಲ್ಕ್ಯನಿಗೆ ಮೈತ್ರೇಯಿಯು ಸರಿದೊರೆಯಾಗಿ ಸಹಕರಿಸಬಲ್ಲ ಯೋಗ್ಯಸಹಧರ್ಮಚಾರಿಣಿಯಾಗಿದಾಳೆ. ಇವರಿಬ್ಬರ ಉಲ್ಲೇಖವೂ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬಂದಿದೆ ಇದನ್ನು ಹಿಂದೆ ೧೩೧-೬ ಪುಟಗಳಲ್ಲಿ ಸ್ವಲ್ಪಮಟ್ಟಿಗೆ ವರ್ಣಿಸಲಾಗಿದೆ. "ವಾಗ್ಯುದ್ಧದಲ್ಲಿ ನಿಷ್ಣಾತಳಾದ ಗಾರ್ಗಿಯು ಸ್ತ್ರೀಯರ ಅಧಿಕಾರಗಳಿಗಾಗಿ ಹೆಣಗಾಡುವ ಉಪನಿಷತ್ಕಾಲದ ಹೆಣ್ಣುಗಲಿಯಾಗಿದಾಳೆ." ಅನೇಕ ತತ್ತ್ವಜ್ಞರಿಂದ ಮಂಡಿತವಾಗಿದ್ದ ಪ್ರೌಢವಿದ್ವತ್ಸಭೆಯಲ್ಲಿ ಜನಕ ಚಕ್ರವರ್ತಿಯ ಆಸ್ಥಾನದಲ್ಲಿ ಆಕೆಯು ಯಾಜ್ಞವಲ್ಕ್ಯನಿಗೆ ಪ್ರಶ್ನೆಗಳನ್ನು ಹಾಕಿ ಸೂಕ್ಷ್ಮ ತಾರತಮ ಕ್ರಮದಿಂದಲೂ ನಿಯಂತೃ ನಿಯಂತವ್ಯಭಾವ ನಿರೂಪಣದಿಂದ ನಿರುಪಾಧಿಕ ಬ್ರಹ್ಮ ಸ್ವರೂಪವನ್ನು ವಿವರಿಸುವಂತೆ ಮಾಡಿದಳು.

ವೈದಿಕ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು.

ತತ್ತ್ವಜ್ಞಾನದ ಸಂಪಾದನೆ ಪ್ರಚಾರಣ ಕಾರ್ಯಗಳ ದೃಷ್ಟಿಯಿಂದ ನೋಡಿದರೆ ಬ್ರಾಹ್ಮಣರೂ, ಕ್ಷತ್ರಿಯರೂ ಸರಿ ದೊರೆಯಾಗಿ ವಿಚಾರವಿಮರ್ಶೆಗಳನ್ನು ಮುಂದುವರಿಯಿಸುತ್ತಿದ್ದರು. ಛಾಂದೋಗ್ಯೋಪನಿಷತ್ತಿನಲ್ಲಿ ಆರುಣಿಯೇ ಬ್ರಹ್ಮಜ್ಞಾನವನ್ನು ಪಡೆದವರಲ್ಲಿ ಅಗ್ರಗಣ್ಯನೆಂದು

ವರ್ಣಾಶ್ರಮ ಧರ್ಮಗಳಲ್ಲಿ ಮೇಲು ಕೀಳು ಭಾವವಿರಲಿಲ್ಲ.

ಜೈಮಿನಿಯು ಹೇಳುತ್ತಾನೆ. ಕೆಲವು ಸಂದರ್ಭಗಳಲ್ಲಿ ಬ್ರಾಹ್ಮಣರಿಗಿಂತ ಕ್ಷತ್ರಿಯರೇ ಮೇಲಾಗಿದ್ದರೆಂದೂ ಉಲ್ಲೇಖವನ್ನು ಕೌಷೀತಕೀ ಉಪನಿಷತ್ತಿನಲ್ಲಿ ನೋಡಬಹುದು. ಬ್ರಾಹ್ಮಣರಿಂದ ಕ್ಷತ್ರಿಯರೂ, ಕ್ಷತ್ರಿಯರಿಂದ ಬ್ರಾಹ್ಮಣರೂ ಉಪದೇಶವನ್ನು ಪಡೆಯುತ್ತಿದ್ದರು. ಎರಡು ಪಂಗಡಗಳವರೂ ವೇದಾಂತ ವಿದ್ಯಾಪ್ರಸಾರ ಕಾರ್ಯದಲ್ಲಿ ಸಹಕರಿಸುತ್ತಾ ಮುಂದುವರಿಸುತ್ತಿದ್ದರು. ಯಾಜ್ಞವಲ್ಕ್ಯನ ಅದ್ವಿತೀಯವಾದ ಬುದ್ಧಿ ಸಾಮರ್ಥ್ಯವನ್ನೂ ಅನ್ಯಾದೃಶವಾದ ಆತ್ಮಜ್ಞಾನವನ್ನೂ ಮನಗಂಡು ಬೆರಗಾಗಿ ಜನಕರಾಜನು ತನ್ನ ಸಾಮ್ರಾಜ್ಯವನ್ನೇ ಆ ಬ್ರಹ್ಮರ್ಷಿಗೆ ಸಮರ್ಪಿಸಿ ಅವನ ಸೇವೆ ಮಾಡಲು ಸಿದ್ಧನಿರುವೆನೆನ್ನಲು ಆಪ್ತಕಾಮನಾದ, ಆತ್ಮಕಾಮನಾದ ಆ ಬ್ರಹ್ಮರ್ಷಿಯು ರಾಜ್ಯದಿಂದ ನನಗೇನೂ ಆಗಬೇಕಾದುದಿಲ್ಲವೆಂದು ತನ್ನ ಜ್ಞಾನ ವೈರಾಗ್ಯಗಳನ್ನು ಮೆರೆದನು. ಬೃಹದ್ರಥ ರಾಜನು ಶಾಕಾಯನ್ಯ ಮುನಿಯ ಸಮೀಪಕ್ಕೆ ಹೋಗಿ ತತ್ತ್ವೋಪದೇಶವನ್ನು ಪಡೆದು ಕೃತಾರ್ಥನಾದನೆಂದು ಮೈತ್ರೇಯಿ ಉ.ನಲ್ಲಿ ಹೇಳಿದೆ. ಜ್ಞಾನಾಧಿಕರಾದವರಿಗೇ ಮರ್ಯಾದೆ ಗೌರವಗಳು ಸಲ್ಲುತ್ತಿದ್ದುವು.

ಬಾಹ್ಯ ಪ್ರಪಂಚ ಪರಿಶೀಲನೆಯಿಂದ ಏಕ ತತ್ತ್ವದರ್ಶನ.

ಉಪನಿಷತ್ಕಾಲದಲ್ಲಿ ಬಾಹ್ಯಪ್ರಪಂಚದ ಪರಿಶೀಲನೆಯಿಂದ ನಿಸರ್ಗಶಕ್ತಿಗಳ ಅಭಿಮಾನಿ ದೇವತೆಗಳ ಅರಿವಾಗಿ, ಅವುಗಳ ಮೂಲವಾದ ಏಕದೇವತತ್ತ್ವದ ಜ್ಞಾನವಾಯಿತು. ಜಗತ್ತಿನ ಅನಂತ್ಯವನ್ನು ಮನಗಂಡು ಅದೆಲ್ಲವನ್ನೂ ಪರಿಶೀಲಿಸಿ ಮುಗಿಸುವುದು ಅನಾವಶ್ಯಕ ಅಸಾಧ್ಯವೆಂದು ತಿಳಿದು ಹಿಂತಿರುಗಿ ಆಂತರ ಪ್ರಪಂಚದ ಪರಿಶೀಲನೆಯು ಮುಂದುವರಿಯಿತು. ದೇವತಾ ತತ್ತ್ವವಿಚಾರವೂ ಆತ್ಮತತ್ತ್ವದ ವಿಚಾರದಲ್ಲಿ ಪರ್ಯವಸಾನವನ್ನು ಪಡೆಯಿತು. ಯಾವ ಒಂದು ತತ್ತ್ವವನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವುದೋ ಅಂತಹ ಆತ್ಮತತ್ತ್ವಜ್ಞಾನದಲ್ಲಿ ನೆಲೆನಿಂತಿತೆಂದು ಹೇಳಬಹುದು. ಅನುಭವವೇ, ಆತ್ಮಾನುಭೂತಿಯೇ ಎಲ್ಲ ತತ್ತ್ವಜ್ಞಾನದ ಅಂತಿಮ ಧ್ಯೇಯವು.

---

# ನೂರನೆಯ ಅಧ್ಯಾಯ

## ಸಂಸ್ಕೃತಿ ಮತ್ತು ಇತಿಹಾಸ ಪುರಾಣಗಳು

ವೈದಿಕ ಕಾಲದಲ್ಲಿ ಎಂದರೆ ವೇದಗಳು ಬ್ರಾಹ್ಮಣಗಳು ಅರಣ್ಯಕಗಳು ಮತ್ತು ಉಪನಿಷತ್ತುಗಳು, ಇವುಗಳು ಭಾರತಾರ್ಯರಿಂದ ಮನಗಂಡು ಪ್ರಕಟಿಸಲ್ಪಟ್ಟ ಕಾಲದಲ್ಲಿ ಎಂದರೆ ಕ್ರಿ.ಪೂ 2,500ರಿಂದ ಕ್ರಿ.ಪೂ. ೫೦೦ರ ವರೆಗೆ, ಆರ್ಯರ ಸಂಸ್ಕೃತಿಯು ಧರ್ಮಮೂಲವಾಗಿ ಎಂದರೆ ಧರ್ಮದ ತಿಳಿವಳಿಕೆ ಆಚರಣೆಗಳಿಗೆ ಕಾರಣವಾಗಿ ಮತ್ತು ಅದರ ಪರಿಣಾಮವಾಗಿ ಹೇಗೆ ಬೆಳೆಯಿತೆಂಬುದನ್ನು ಆಯಾ ಕಾಲದ ಗ್ರಂಥಗಳಲ್ಲಿ ದೊರೆಯುವ ವಾಕ್ಯಗಳ ಆಧಾರದ ಮೇಲೆ ಸಂಗ್ರಹವಾಗಿ ತಿಳಿಸಲು ಪ್ರಯತ್ನಿಸಲಾಗಿದೆ. ಈಗ ಪುರಾಣೇತಿಹಾಸಗಳ ಕಾಲದಲ್ಲೂ ಸ್ಮೃತಿದರ್ಶನಗಳ ಕಾಲದಲ್ಲೂ ಕಲಾ ಕಾವ್ಯ ನಾಟಕ ವಿಮರ್ಶೆಗಳ ಕಾಲದಲ್ಲೂ ಎಂದರೆ ಕ್ರಿ.ಪೂ. 500ರಿಂದ ಈಗಿನವರೆಗೆ ಆ ಧಾರ್ಮಿಕ ಸಂಸ್ಕೃತಿಯು ಹೇಗೆ ಇತರ ಸಂಸ್ಕೃತಿಗಳ ಸಂಪರ್ಕ ಆಘಾತಗಳನ್ನು ಎದುರಿಸಿ ಅವುಗಳಿಂದ ನಷ್ಟವಾಗದೆ ಉಳಿದು ಊರ್ಜಿತವಾಗಿದೆ ಎಂಬುದನ್ನು ಸಂಗ್ರಹವಾಗಿ ನಿರೂಪಿಸಲು ಪ್ರಯತ್ನಿಸಲಾಗುತ್ತದೆ.

'' ಇತಿಹಾಸ ಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ॥ ''

ಎಂದರೆ—ಇತಿಹಾಸ ಪುರಾಣಗಳ ವ್ಯಾಸಂಗ ಸಹಾಯಗಳಿಂದ ವೇದಾರ್ಥಗಳನ್ನು ವಿಸ್ತಾರವಾಗಿ ತಿಳಿಯಬೇಕು. ಇತಿಹಾಸ ಪುರಾಣಾದಿ ಸಾಹಿತ್ಯ ಗ್ರಂಥಗಳಲ್ಲಿ ವಿವರಗಳೊಡನೆ ವಿಸ್ತಾರವಾಗಿ ವೈದಿಕ ಸಾಹಿತ್ಯದಲ್ಲಿ ಸೂಚಿಸಲ್ಪಟ್ಟಿರುವ ವಿಷಯಗಳು ನಿರೂಪಿಸಲ್ಪಟ್ಟಿವೆ. ಆದುದರಿಂದ ಸ್ಮೃತ್ಯಾದಿಗಳ

ಸಂಸ್ಕೃತಿಯಲ್ಲಿ ಇತಿಹಾದ ಸ್ಥಾನಮಾನಗಳು.

ವ್ಯಾಸಂಗವು ಶ್ರುತ್ಯಾದಿಗಳನ್ನು ಚೆನ್ನಾಗಿ ತಿಳಿಯಲು ಸಹಾಯ ಮಾಡುತ್ತದೆ. ಧಾರ್ಮಿಕ ಸಂಸ್ಕೃತಿಯ ಸರ್ವತೋಮುಖವಾದ ಬೆಳವಳಿಗೆಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಸಂಸ್ಕೃತಿಯಲ್ಲಿ ಜಗತ್, ಜೀವರು, ದೇವರು ಮತ್ತು ಧರ್ಮ ಈ ವಿಷಯಗಳು ಪ್ರಮುಖವಾಗಿರುತ್ತವೆ. ಜನರ ದಿನಗಟ್ಟಲೆಯ ಜೀವನಕ್ರಮದಲ್ಲಿ ಕಾಣಬರುವ ಉತ್ತಮವಾದ ನಡೆ ನುಡಿ ಭಾವಗಳ ಒಟ್ಟಿಗೆ ಸಂಸ್ಕೃತಿ ಎಂದು ಹೆಸರಿದೆ. ಇದನ್ನು ಹಿಂದೆ ತಿಳಿಸಿದೆ. ನಮ್ಮ ಜೀವನದಲ್ಲಿ ನಮಗೂ ಸಂಭವಿಸುವ ಸುಖದುಃಖಗಳಲ್ಲಿ ನಾವು ಹೇಗಿರಬೇಕು ? ನಮ್ಮ ಸಮಸ್ಯೆಗಳನ್ನು ನಾವು ಹೇಗೆ ಬಿಡಿಸಬೇಕು ? ನಮ್ಮ ಧರ್ಮಸಂಕಟಗಳಿಂದ ನಾವು ಹೇಗೆ ಪಾರಾಗಬೇಕು ? ಇತ್ಯಾದಿ ವಿಷಯಗಳಲ್ಲಿ ಒಳ್ಳೆಯ ಮಾರ್ಗದರ್ಶನವನ್ನು ನಾವು ಇತಿಹಾಸ ಪುರಾಣಗಳಿಂದ ಪಡೆಯುತ್ತೇವೆ. ಈ ಕಾರಣದಿಂದಲೇ ಇತಿಹಾಸ ಪುರಾಣಗಳು ನಿತ್ಯನೂತನವಾಗಿರುತ್ತಾ ನಮಗೂ ಅಷ್ಟೇ ಏಕೆ ? ಮಾನವ ಸಾಮಾನ್ಯಕ್ಕೂ ಬೆಳಕನ್ನು ನೀಡುವ ನಂದಾದೀಪಗಳಂತಿವೆ. ಇತಿಹಾಸಗಳಲ್ಲಿ ಉತ್ತಮವಾದ ಮಹಾಭಾರತದ ವಿಷಯದಲ್ಲಿ ಒಂದು ವಿಮರ್ಶೆಯ ವಾಕ್ಯವು ಹೀಗಿದೆ :—

"ಯದಿಹಾಸ್ತಿ ತ ದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್ ।"

ಎಂದರೆ—ಈ ಭಾರತದಲ್ಲಿ ಹೇಳಿರುವ ವಿಷಯಗಳನ್ನೇ, ತತ್ವಗಳು, ನೀತಿಗಳು, ಉದಾಹರಣೆಗಳು, ಕಥೆಗಳು ಇವನ್ನೇ, ಇತರ ಸಾಹಿತ್ಯ ಗ್ರಂಥಗಳಲ್ಲೂ ಹೇಳಿದೆ. ಇಲ್ಲಿ ಹೇಳದೆ ಇರುವ ವಿಷಯಗಳು ಇನ್ನೆಲ್ಲಿಯೂ ಇಲ್ಲ. ಈ ಎರಡನೆಯ ಅಂಶವು ಸ್ವಲ್ಪ ಅತಿಶಯೋಕ್ತಿಯಿಂದ ಕೂಡಿದೆ ಎನ್ನಬಹುದಾದರೂ ಬಹು ಸಂಗತಿಗಳಲ್ಲಿ ನಿಜವಾಗಿದೆ.

"ಅಷ್ಟಾದಶ ಪುರಾಣಾನಾಂ ಕರ್ತಾ ಸತ್ಯವತೀ ಸುತಃ ॥
ಇತಿಹಾಸ ಪುರಾಣೇಷು ವ್ಯಾಸಸ್ಯ ವಚನದ್ವಯಂ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥"

ಹದಿನೆಂಟು ಪುರಾಣಗಳನ್ನೂ ರಚಿಸಿದವನು ಸತ್ಯವತೀದೇವಿಯ ಮಗನಾದ ಶ್ರೀವ್ಯಾಸ ಮಹರ್ಷಿಯು. ಇತಿಹಾಸಗಳಲ್ಲೂ ಎಂದರೆ ಮಹಾಭಾರತ, ರಾಮಾಯಣಗಳಲ್ಲೂ, ಪುರಾಣೇಷು ಪುರಾಣಗಳಲ್ಲೂ ಎಂದರೆ ವಿಷ್ಣುಪುರಾಣ, ಸ್ಕಂದಪುರಾಣ, ದೇವೀಭಾಗವತ್, ವಿಷ್ಣು ಭಾಗವತ ಮುಂತಾದ ವೈಷ್ಣವ, ಶೈವ, ಶಾಕ್ತೇಯ ಪುರಾಣ ಗಳಲ್ಲೂ, ಮತ್ತು ಉಪ ಪುರಾಣಗಳಲ್ಲೂ ವ್ಯಾಸಮಹರ್ಷಿಯು ಬೋಧಿಸಿರುವ ಮುಖ್ಯವಾದ ಎರಡು ಉಪದೇಶ ವಾಕ್ಯಗಳಿವೆ. ಯಾವುವೆಂದರೆ–ಪರೋಪಕಾರವನ್ನು ಮಾಡುವುದು ಪುಣ್ಯಕ್ಕಾಗಿ, ಸುಖಪ್ರಾಪ್ತಿಗೆ ಸಾಧನವಾಗುತ್ತದೆ. ಇತರರಿಗೆ ತೊಂದರೆಯನ್ನುಂಟು ಮಾಡುವುದು ಪಾಪಕ್ಕಾಗಿ, ದುಃಖಪ್ರಾಪ್ತಿಗೆ ಕಾರಣವಾಗುತ್ತದೆ. ಇದು ವಿಶ್ವಧರ್ಮವು. ಎಂದರೆ ಈ ಜಗತ್ತಿನಲ್ಲಿರುವ ಎಲ್ಲದೇಶಗಳ ಎಲ್ಲ ಕಾಲಗಳಲ್ಲಿರುವ ಜನರೂ ಆಚರಿಸಬೇಕಾದ ಧರ್ಮವು.

"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ"

ವಿಶ್ವಧರ್ಮದ ಸ್ವರೂಪಗಳು.

ಎಂದರೆ, ಧರ್ಮವು ಈ ಎಲ್ಲ ಪ್ರಪಂಚವನ್ನೂ ಆಶ್ರಯಕೊಟ್ಟು ಹಿಡಿದು ನಿಲ್ಲಿಸಿರುವ, ಸಾಗುತ್ತಿರುವಂತೆ, ಮೇಲ್ಮೆಯನ್ನು ಪಡೆಯುತ್ತಾ ಮುಂದುವರಿ ಯುವಂತೆ, ಸಹಾಯಮಾಡುತ್ತಿರುವ ತತ್ತ್ವ ವಾಗಿದೆ. ಧರ್ಮತತ್ತ್ವದ ಆಚರಣೆಯನ್ನು ಮಾನವವ್ಯಕ್ತಿಗಳ ಜೀವನಕ್ರಮದಲ್ಲಿ ಸ್ಪಷ್ಟವಾಗಿ ಕಾಣುವಂತೆ ವರ್ಣಿಸಿದೆ. ಆರ್ಯರು ಈ ಧರ್ಮತತ್ತ್ವವನ್ನು ಬಾಹ್ಯಪ್ರಕೃತಿಯಲ್ಲೂ ಕಾಣು ವುದೂ ಸ್ವಾಭಾವಿಕವಾಗಿಬಿಟ್ಟಿದೆ ಎನ್ನಬಹುದು. ಇದು ಭಾರತೀಯ ಸಂಸ್ಕೃತಿಯ ವಿಶೇಷ ಗುಣವೆನ್ನಬಹುದಾಗಿದೆ.

"ಪರೋಪಕಾರಾಯ ಫಲಂತಿ ವೃಕ್ಷಾಃ ಪರೋಪಕಾರಾಯ ವಹಂತಿ ನದ್ಯಃ !
ಪರೋಪಕಾರಾಯ ದುಹಂತಿ ಗಾವಃ ಪರೋಪಕಾರಾರ್ಥ
ಮಿದಂ ಶರೀರಂ ॥"

ಎಂದರೆ, ಪರೋಪಕಾರವಾಗಲೆಂದೇ ವೃಕ್ಷಗಳು ಹಣ್ಣುಗಳನ್ನು ಬಿಡುತ್ತವೆ. ತಾವೇ ಆ ಹಣ್ಣುಗಳನ್ನು ತಿನ್ನುವುದಿಲ್ಲ. ಪರೋಪಕಾರಕ್ಕಾಗಿಯೇ ನದಿಗಳೂ ಹರಿಯುತ್ತಿವೆ. ಇತರರಿಗೆ ಉಪಕಾರವಾಗಲೆಂದೇ ಹಸುಗಳು ಹೆಚ್ಚಾಗಿ ಹಾಲನ್ನು ಕೊಡುತ್ತವೆ. ಆದುದರಿಂದ ಈ ಶರೀರವೂ ಪರೋಪಕಾರಕ್ಕಾಗಿಯೇ ಇರುತ್ತದೆ, ಹಾಗೆಯೇ ಇರಬೇಕು, ಇದರಲ್ಲಿ ಶಕ್ತಿಯು ಇರುವವರೆಗೂ ಇತರರಿಗೆ ಸಹಾಯವನ್ನು ಮಾಡುವುದರಲ್ಲಿಯೇ ವಿನಿಯೋಗಿಸಬೇಕು. ಇದೇ ಉತ್ತಮ ಧರ್ಮವು–ದೇಹಸಾರ್ಥಕ್ಯವು, ಜನ್ಮಸಾಫಲ್ಯವು ಇದೆ.

ಪ್ರಥಮ ವಯಸಿ ಪೀತಂ ತೋಯಮಲ್ಪಂ ಸ್ಮರಂತಃ
ಶಿರಸಿ ನಿಹಿತಭಾರಾ ನಾರಿಕೇಳಾ ನರಾಣಾಂ ।
ಸಲಿಲಮಮೃತ ಕಲ್ಪಂ ದದ್ಯುರಾಜೀವಿತಾಂತಂ
ನಹಿ ಕೃತಮುಪಕಾರಂ ಸಾಧವೋ ವಿಸ್ಮರಂತಿ ॥

ಬಾಹ್ಯ ಪ್ರಕೃತಿಯಲ್ಲೂ ಧರ್ಮದರ್ಶನ.

ತೆಂಗಿನಮರಗಳು ತಮ್ಮ ಬಾಲ್ಯವಯಸ್ಸಿನಲ್ಲಿ ಮನುಷ್ಯರು ಹಾಕಿದ ಸ್ವಲ್ಪ ನೀರನ್ನು ನೆನೆಯುತ್ತಿರುವುವೋ ಎನ್ನುವ ಹಾಗೆ ತಮ್ಮ ತಲೆಯಮೇಲೆ ಆ ಉಪಕಾರ ಭಾರವನ್ನು ಹೊತ್ತಿವೆಯೋ ಎನ್ನುವಹಾಗೆ ಎಳನೀರು ಕಾಯಿಗಳನ್ನು ಧರಿಸಿರುತ್ತವೆ. ಅದರಲ್ಲಿರುವ ಅಮೃತದಂತೆ ಸಿಹಿಯಾಗಿರುವ ನೀರನ್ನೂ ಸ್ನೇಹಪೂರ್ಣವಾಗಿರುವ ತಿರುಳನ್ನೂ ಮಾನವರಿಗೆ ತಾವು ಬದುಕಿರುವವರೆಗೂ ಕೊಡುತ್ತಿರುತ್ತವೆ. ಸತ್ಪುರುಷರು ತಮಗೆ ಇತರರಿಂದಾದ ಉಪಕಾರವನ್ನು ಎಂದಿಗೂ ಮರೆಯುವುದಿಲ್ಲ. ಕವಿಯು ಈ ಪದ್ಯದಲ್ಲಿ

"ಕೃತೇ ಚ ಪ್ರತಿಕರ್ತವ್ಯಂ ಏಷ ಧರ್ಮಃ ಸ್ಸನಾತನಃ ।"

ಧರ್ಮದ ಪ್ರಾಥಮ್ಯವು ಪ್ರಕೃತಿಯಲ್ಲೂ ಇದೆ.

ಎಂದರೆ, ಉಪಕಾರವನ್ನು ಪಡೆದರೆ ಅದಕ್ಕೆ ಪ್ರತಿಯಾಗಿ ಉಪಕಾರವನ್ನು ಸಲ್ಲಿಸಬೇಕು. ಇದು ಈ ಪ್ರಪಂಚದಲ್ಲಿರುವ ಶಾಶ್ವತವಾದ ಧರ್ಮವು.

" ಆತ್ಮವತ್ಸರ್ವ ಭೂತಾನಿ ಯಃ ಪಶ್ಯತಿ ಸ ಪಶ್ಯತಿ "

ಸಾಮಾನ್ಯ ವಿಶ್ವಧರ್ಮದ ಸರಳಸ್ವರೂಪ.

ನನ್ನಂತೆಯೇ ಇತರರೂ ಎಂದು ಯಾವಾತನು ನೋಡು ತ್ತಾನೋ ಆತನೇ ನಿಜವಾಗಿನೋಡಬಲ್ಲವನು. ತನ್ನ ಸುಖಪ್ರಾಪ್ತಿಗೂ ದುಃಖ ನಿವೃತ್ತಿಗೂ ಹೇಗೆ ಪ್ರತಿಯೊಬ್ಬನೂ ಆಶಿಸಿ ಪ್ರಯತ್ನಿಸು ತ್ತಾನೋ, ಹಾಗೆ ಇತರರ ಸುಖಲಾಭ ದುಃಖ ಪರಿಹಾರಗಳಿಗೂ ದುಡಿಯುವವನೇ ನಿಜವಾದ ತಿಳಿವಳಿಕೆಯುಳ್ಳವನು.

" ಧರ್ಮಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ | "

ಧರ್ಮದಿಂದಲೇ ರಕ್ಷಣೆ ಮತ್ತು ಜಯ.

ಧರ್ಮವನ್ನು ನಾವು ಪಾಲಿಸಿ ಆಚರಿಸಿದರೆ ಆ ಧರ್ಮವು ನಮ್ಮನ್ನು ಕಾಪಾಡುತ್ತದೆ. ಹಾಗೆಮಾಡದೆ ಧರ್ಮವನ್ನು ಆಚರಿಸದೆ ಕೈಬಿಟ್ಟರೆ ಅದು ನಮ್ಮನ್ನು ನಾಶಮಾಡುತ್ತದೆ.

"ಯತೋ ಧರ್ಮಃ ತತೋ ಜಯಃ ಯತಃ ಅಧರ್ಮಃ ತತಃ ಅಜಯಃ "

ಯಾರು ಧಾರ್ಮಿಕರಾಗಿರುತ್ತಾರೋ ಅವರಿಗೇ ಜಯಲಾಭವಾಗು ತ್ತದೆ. ಯಾರು ಅಧರ್ಮವನ್ನು ಆಚರಿಸುತ್ತಾರೋ, ಧರ್ಮವನ್ನು ಆಚರಿಸುವುದಿಲ್ಲವೋ, ಅಂಥವರಿಗೆ ಜಯಲಾಭವಾಗದು. ಕಡೆಗಾದರೂ ಅಪಜಯವೇ ಆಗುತ್ತದೆ.

ವಿದ್ವದ್ಭಿ ಸ್ಸೇವಿತಸ್ಸದ್ಭಿಃ ನಿತ್ಯಮದ್ವೇಷರಾಗಿಭಿಃ |
ಹೃದಯೇನಾ ಭ್ಯನುಜ್ಞಾತೋ ಯೋ ಧರ್ಮ ಸ್ತಂ ನಿಭೋಧತ || ಮನು.

ವಿಶ್ವಧರ್ಮದ ಲಕ್ಷಣ.

ವಿದ್ಯಾವಂತರಾದವರು ತಿಳಿವಳಿಕೆಯುಳ್ಳವರು ಯಾವುದನು ಆಚರಿಸುತ್ತಾರೋ ಅದನ್ನು ಧರ್ಮವೆಂದು ತಿಳಿಯಬೇಕು. ಬರಿಯ ವಿದ್ಯೆ ಇದ್ದರೆ ಸಾಕಾ ಗುವುದಿಲ್ಲ. ವಿದ್ಯೆಯ ಜೊತೆಗೆ ಸತ್ಸ್ವಭಾವವಿರ ಬೇಕು. ಭೂತದಯಾ ಪಶ್ಚಾತ್ತಾಪಾದಿಗಳುಳ್ಳವರು ಆಚರಿಸುವುದು

ಧರ್ಮವು. ಅಷ್ಟೇ ಸಾಲದು. ಯಾವಾಗಲೂ ರಾಗದ್ವೇಷಗಳಿಗೆ ಅಧೀನರಾಗದೆ ಇರುವವರ ನಡೆವಳಿಕೆಗೆ ಧರ್ಮವೆಂದು ಹೇಳಬಹುದು. ಕಡೆಯದಾಗಿ ಎಲ್ಲಕ್ಕೂ ಮೇಲಾಗಿ ನಮ್ಮ ಹೃದಯಕ್ಕೂ ಒಪ್ಪಿಬರುವಂತಹ ನಡೆವಳಿಕೆಯೇ ಧರ್ಮವೆನಿಸುತ್ತದೆ. ವಿದ್ಯಾವಂತರು ಕೆಟ್ಟವರಾದರೆ ತಿಳಿವಳಿಕೆಯನ್ನು ಇತರರ ಹಾನಿಗೆ ಉಪಯೋಗಿಸಬಹುದು. ವೈಜ್ಞಾನಿಕರು ಕಂಡುಹಿಡಿದ ಶಸ್ತ್ರಾಸ್ತ್ರಗಳನ್ನು ದುಷ್ಟರು ದುರುಪಯೋಗಪಡಿಸಿದರೆ ಅದನ್ನು ಧರ್ಮವೆನ್ನಲಾಗದು. ಸತ್ಸ್ವಭಾವದವರು ಇತರರಿಗೆ ಕೇಡನ್ನು ಬಯಸುವುದಿಲ್ಲ. ರಾಗದ್ವೇಷಗಳಿಗೆ ಅಧೀನರಾಗಿದ್ದರೆ ನಮ್ಮಲ್ಲೂ ನಮ್ಮವರಲ್ಲೂ ಇರುವ ಗುಣವನ್ನು ದೋಷವೆಂದೂ, ದೋಷವನ್ನು ಗುಣವೆಂದೂ ಭಾವಿಸುವ ಸಂಭವವಿದೆ. ಆದುದರಿಂದ ರಾಗದ್ವೇಷಗಳಿಗೆ ವಶರಾಗಿರಬಾರದು. ಶಾಸ್ತ್ರದೃಷ್ಟಿಯಿಂದ, ಕಾನೂನುಪ್ರಕಾರ ಸರಿ ಎನ್ನಬಹುದಾದ ನಡೆವಳಿಕೆಯೂ ಸತ್ಪುರುಷರ ಧರ್ಮನಿಷ್ಠರ ಹೃದಯಕ್ಕೆ ಸರಿಯಲ್ಲವೆಂದು ತೋರಿದರೆ ಅದೂ ಧರ್ಮವಾಗದು.

ಇತಿಹಾಸ ಪುರಾಣಗಳಲ್ಲೂ ಧರ್ಮಕ್ಕೆ ಪ್ರಾಮುಖ್ಯವಿದೆ.

ಹೀಗೆ ಧರ್ಮವೇ ಭಾರತಾರ್ಯರ ಸಂಸ್ಕೃತಿಯಲ್ಲಿ ಮುಖ್ಯವಾಗಿರುತ್ತದೆಂಬ ವಿಷಯವು ವೈದಿಕ ಸಾಹಿತ್ಯದಲ್ಲಿ ಹೇಗೆ ಸ್ಪಷ್ಟವಾಗಿದೆಯೋ ಹಾಗೆಯೇ ಇತಿಹಾಸ ಪುರಾಣ ಸ್ಮೃತಿ ಕಾವ್ಯ ನಾಟಕ ದರ್ಶನಗಳಲ್ಲೂ ಪ್ರಧಾನವಾಗಿ ಎದ್ದು ಕಾಣುತ್ತದೆ. ಈ ವಿಷಯವನ್ನು ವಿಶದಪಡಿಸಲು ಪ್ರಯತ್ನಿಸಲಾಗುತ್ತದೆ. ಮಹಾಭಾರತವನ್ನೂ ರಾಮಾಯಣವನ್ನೂ ವ್ಯಾಸಂಗ ಮಾಡಿದರೆ ಜನರು ಧರ್ಮದಲ್ಲಿ ಆದರ ಆಸಕ್ತಿಗಳುಳ್ಳವರಾಗಿದ್ದುದರಿಂದ ಇಹದಲ್ಲಿ ಸುಖಿಗಳಾಗಿದ್ದರೆಂಬುದು ಗೊತ್ತಾಗುತ್ತದೆ. ಈ ಅಂಶವನ್ನು "ಧರ್ಮರಾಜ್ಯ" "ರಾಮರಾಜ್ಯ" ಎಂಬ ಗಾದೆಯಂತೆ ಪ್ರಸಿದ್ಧವಾಗಿ ಪ್ರಚಾರದಲ್ಲಿರುವ ಮಾತುಗಳು ಸಾರಿ ಹೇಳುತ್ತವೆ. ಭಾರತದಲ್ಲಿ ಧರ್ಮರಾಯನ ಧರ್ಮನಿಷ್ಠತೆಯೂ ರಾಮಾಯಣದಲ್ಲಿ ರಾಮನ ಧರ್ಮಾದರವೂ ಹೃದಯಂಗಮವಾಗಿ ವರ್ಣಿತಗಳಾಗಿವೆ.

ಭಾರತದಲ್ಲಿ ಶ್ರೀಕೃಷ್ಣಪರಮಾತ್ಮನು ಅರ್ಜುನನನ್ನು ನಿಮಿತ್ತ ಮಾಡಿಕೊಂಡು ಇಡಿಯಪ್ರಪಂಚಕ್ಕೆ ಉಪದೇಶ ಮಾಡಿರುವ ಭಗವದ್ಗೀತೆಯು ಧರ್ಮದ ವಿಷಯದಲ್ಲಿ ಈ ಲೋಕದಲ್ಲಿ ಎಲ್ಲ ಗ್ರಂಥಗಳಿಗಿಂತ ಅತ್ಯುತ್ತಮ ಗ್ರಂಥವಾಗಿದೆ. ಆದುದರಿಂದಲೇ ಇದು ಎಲ್ಲ ದೇಶಗಳಲ್ಲೂ ಎಲ್ಲ ಭಾಷೆಗಳಲ್ಲೂ ಪರಿವರ್ತಿತವಾಗಿ ಹೆಚ್ಚು ಪ್ರಚಾರವನ್ನು ಪಡೆಯುತ್ತಿದೆ. ಅದರಲ್ಲೂ ವಿದ್ಯಾವಂತರ ಆದರಕ್ಕೆ ಪಾತ್ರವಾಗಿದೆ. ಇದರಲ್ಲಿರುವ ಗುಣವಿಶೇಷಗಳೇನು ? ಎಂದು ಪರಿಶೀಲಿಸುವುದು ನ್ಯಾಯವೂ ಸಫಲವೂ ಆಗಿರುತ್ತದೆ.

ಭಗವದ್ಗೀತೆಯೂ ಧರ್ಮಶಾಸ್ತ್ರವೇ.

ಭಗವದ್ಗೀತೆಯು ಯೋಗಶಾಸ್ತ್ರವೆಂದು ಪ್ರಸಿದ್ಧವಾಗಿದೆ. ಗೀತೆಯನ್ನು ಪಾರಾಯಣ ಮಾಡುವಾಗ "ಶ್ರೀ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ" ಎಂದು ಆದರದಿಂದ ಸ್ಮರಿಸುತ್ತಾರೆ. ಯೋಗಗಳನ್ನು ತಿಳಿಸುವ ಶಾಸ್ತ್ರಕ್ಕೆ ಯೋಗಶಾಸ್ತ್ರವೆಂದು ಹೆಸರು. ಗೀತೆಯಲ್ಲಿರುವ ಹದಿನೆಂಟು ಅಧ್ಯಾಯಗಳಿಗೂ ಒಂದೊಂದು ಯೋಗದ ಹೆಸರನ್ನು ಇಟ್ಟು ಬಳಸಿದೆ. ಅರ್ಜುನ ವಿಷಾದಯೋಗ, ಸಾಂಖ್ಯಯೋಗ, ಕರ್ಮಯೋಗ, ಜ್ಞಾನಯೋಗ, ಮುಂತಾದ ಹೆಸರುಗಳಿವೆ. ಇವಲ್ಲದೆ ಇತರ ಯೋಗಗಳನ್ನು ಎಂದರೆ ಬ್ರಹ್ಮಯೋಗ, ಬುದ್ಧಿಯೋಗ, ಅಭ್ಯಾಸಯೋಗ, ಆತ್ಮಯೋಗ ಮುಂತಾದವನ್ನು ಅಲ್ಲಲ್ಲಿ ಉಲ್ಲೇಖಿಸಲಾಗಿದೆ. ಹೀಗೆ ಯೋಗಗಳನ್ನು ತಿಳಿಸುವ ಶಾಸ್ತ್ರಕ್ಕೆ ಯೋಗಶಾಸ್ತ್ರವೆಂಬ ಹೆಸರು ಒಪ್ಪುತ್ತದೆ. ಅಲ್ಲದೆ ಇದು ಸಫಲವೂ ಆಗಿದೆ. ಏಕೆಂದರೆ–ಜನರು ನಾನಾ ಬಗೆಯ ಚಿತ್ತವೃತ್ತಿಯುಳ್ಳವರಾಗಿದ್ದಾರೆ. ಅವರ ರುಚಿಸಂಸ್ಕೃತಿಗಳು ಭಿನ್ನಭಿನ್ನವಾದ ಮಟ್ಟಗಳಲ್ಲಿರುವುದೇ ಇದಕ್ಕೆ ಕಾರಣವಾಗಿದೆ. ಗೀತೆಯಲ್ಲಿ ಒಂದೇ ಯೋಗವನ್ನು ಹೇಳಿದ್ದರೆ ಅದು ಯಾವ ಬಗೆಯ ಚಿತ್ತವೃತ್ತಿಯುಳ್ಳವರಿಗೆ ಹೊಂದಿಬರುತ್ತಿತ್ತೋ ಅಂಥವರು ಮಾತ್ರ ಗೀತೆಯಿಂದ

ಪ್ರಯೋಜನವನ್ನು ಪಡೆಯುವಂತಾಗಿ ಇತರರಿಗೆ ಸಹಾಯವಾಗುತ್ತಿರಲಿಲ್ಲ. ಗೀತೆಯನ್ನಾದರೋ ಮಾನವರೆಲ್ಲರನ್ನೂ ಸಂಬೋಧಿಸಿ ಹೇಳಿರುವುದು ಅನೇಕ ಸ್ಥಳಗಳಲ್ಲಿ ಕಂಡುಬರುತ್ತದೆ. ಹೇಗೆಂದರೆ:

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ । ಭ ಗೀ. ೭-೩.
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ । ಭ ಗೀ. ೧೮-೪೬.
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ। ಭ.ಗೀ. ೪-೧೧

ಗೀತೆಯು ಮಾನವ ಸಾಮಾನ್ಯಕ್ಕಾಗಿದೆ.

ಈ ಗೀತೆಯನ್ನು ಒಂದು ಜಾತಿ, ಜನಾಂಗ ಅಥವಾ ದೇಶಕ್ಕೆ ಮಾತ್ರ ಹೇಳಿಲ್ಲ. ಇಡೀ ಜಗತ್ತಿನ ಮಾನವರೆಲ್ಲರಿಗೂ ಹೇಳಿದೆ. ಆದುದರಿಂದ ಈ ಲೋಕದ ಜನರೆಲ್ಲರಿಗೂ ಗೀತೆಯಿಂದ ಉಪಯೋಗವಾಗಬೇಕಾದರೆ, ಒಂದು ವಿದ್ಯಾಸಂಸ್ಥೆಯಲ್ಲಿ ಎಲ್ಲ ಅಂತಸ್ತಿನ ವಿದ್ಯಾರ್ಥಿಗಳಿಗೂ ಉಪಯೋಗವಾಗಲು ಅನೇಕ ತರಗತಿಗಳಿರುವಂತೆ, ಗೀತೆಯಲ್ಲೂ ಅನೇಕ ಯೋಗಗಳನ್ನು ಹೇಳಿರಬೇಕು ಎಂಬುದು ಆವಶ್ಯಕವಾಗಿದೆ. ಆದುದರಿಂದಲೇ ಈ ಗೀತೆಯು ಎಲ್ಲ ದೇಶಗಳಲ್ಲಿರುವ ಜನರ, ಅದರಲ್ಲೂ ವಿದ್ಯಾವಂತರೂ, ವಿಮರ್ಶಕರೂ ಆಗಿರುವ ಜನರ ಆದರ ಮನ್ನಣೆ, ಒಲುಮೆಗಳಿಗೆ ಹೆಚ್ಚು ಹೆಚ್ಚಾಗಿ ಪಾತ್ರವಾಗುತ್ತಿದೆ. ಇದರಲ್ಲಿ ಅನೇಕ ಯೋಗಗಳಿರುವುದರಿಂದಲೇ ಅವುಗಳಲ್ಲಿ ನಮಗೆ ಯಾವ ಯೋಗವು ಹೊಂದಿಬರುತ್ತದೆ ಎಂಬುದನ್ನು ನಾವೇ ಮನಗಂಡು ಆರಿಸಿಕೊಂಡು ಅದರಂತೆ ಆಚರಿಸುತ್ತಾ ಕೃತಾರ್ಥರಾಗಲು ಅನುಕೂಲವಾಗಿರುತ್ತದೆ. ಅಲ್ಲದೆ ಈ ಯೋಗಗಳ ಸ್ವರೂಪವನ್ನು ವಿಮರ್ಶಿಸಿದರೆ ಒಂದರಲ್ಲಿ ಇನ್ನೊಂದು ಸೇರಿಹೋಗುತ್ತದೆಂಬುದನ್ನೂ, ಒಂದಕ್ಕೆ ಇನ್ನೊಂದು ಕಾರಣವಾಗಿರುತ್ತದೆ ಎಂಬುದನ್ನೂ ಗುರುತಿಸಬಹುದು. ಆದುದರಿಂದ ಗೀತೆಯು ಯೋಗಗಳ ಗೊಂಡಾರಣ್ಯ, ಗೊಂದಲವಾಗಿರಬಹುದೆಂದು ಯಾರೂ ಹೆದರಬೇಕಾಗಿಯೂ ಇಲ್ಲವು.

ಯೋಗಗಳಲ್ಲಿ ಮುಖ್ಯವಾದುವು ನಾಲ್ಕು ಎನ್ನಬಹುದು.

ಈ ಯೋಗಗಳಲ್ಲಿ ನಾಲ್ಕು ಮಾತ್ರ ಮುಖ್ಯವಾದುವೆಂದು ಹೇಳಬಹುದು. ಇದುವರೆಗೆ ಈ ಗೀತೆಗೆ ಭಾಷ್ಯಗಳನ್ನು ಬರೆದಿರುವ ಆಚಾರ್ಯರುಗಳೂ ಇತರರಾದ ಗೀತಾ ವ್ಯಾಖ್ಯಾನಕಾರರೂ ತಮ್ಮ ತಮ್ಮ ರುಚಿ, ಸಂಸ್ಕೃತಿ, ಸನ್ನಿವೇಶಗಳಿಗೆ ತಕ್ಕಂತೆ ಗೀತಾಭಿಪ್ರಾಯವನ್ನು ಮನಗಂಡು ಒಂದೊಂದು ಯೋಗದಲ್ಲಿ ಪ್ರಾಮುಖ್ಯವನ್ನು ವಿವರಿಸಿರುವುದು ಕಂಡು ಬರುತ್ತದೆ. ಇದು ಸ್ವಾಭಾವಿಕವೂ ಆಗಿದೆ ಎಂದು ತಿಳಿಯಬಹುದು. 1. ಕರ್ಮಯೋಗ, 2. ಭಕ್ತಿಯೋಗ, 3. ರಾಜಯೋಗ, 4. ಜ್ಞಾನಯೋಗ ಎಂಬ ಈ ನಾಲ್ಕು ಯೋಗಗಳಲ್ಲಿ ಶ್ರೀ ರಾಮಾನುಜಾಚಾರ್ಯರೂ, ಶ್ರೀ ಮಧ್ವಾಚಾರ್ಯರೂ ಭಕ್ತಿಯೋಗಕ್ಕೆ ಪ್ರಾಧಾನ್ಯವನ್ನು ಕೊಟ್ಟು ಭಾಷ್ಯಗಳನ್ನು ಬರೆದಿರುತ್ತಾರೆ. ಶ್ರೀ ಶಂಕರಾಚಾರ್ಯರು ಗೀತೆಯಲ್ಲಿ ಜ್ಞಾನಯೋಗವೇ ಪ್ರಧಾನವೆಂದೂ ಮಿಕ್ಕ ಮೂರು ಯೋಗಗಳು ಇದಕ್ಕೆ ಅಂಗವಾದ ಸಾಧನಯೋಗಗಳೆಂದೂ ವಿವರಿಸಿ ಭಾಷ್ಯವನ್ನು ರಚಿಸಿರುತ್ತಾರೆ. ಮಧುಸೂದನ ಸರಸ್ವತಿಯವರು ರಾಜಯೋಗಕ್ಕೆ ಪ್ರಾಮುಖ್ಯವನ್ನೂ, ಬಾಲ ಗಂಗಾಧರ ತಿಲಕರವರು ಕರ್ಮಯೋಗಕ್ಕೆ ಪ್ರಾಧಾನ್ಯವನ್ನೂ ತೋರಿಸಿರುತ್ತಾರೆ. ಮಹಾತ್ಮಾ ಗಾಂಧಿಯವರು ಗೀತೆಯು ಅನಾಸಕ್ತಿಯೋಗಪರವೆಂದು ತಿಳಿಸುತ್ತಾರೆ.

1 ಕರ್ಮಪರರು-ನಿಷ್ಕಾಮ ಕರ್ಮಯೋಗ.

ಅಲ್ಲದೆ ಮಾನವರ ಸ್ವಭಾವವನ್ನು ಪರಿಶೀಲಿಸಿದರೆ ಅವರಲ್ಲಿ ನಾಲ್ಕು ಬಗೆಯ ಮನೋವೃತ್ತಿಯುಳ್ಳವರನ್ನು ನಾವು ಕಾಣಬಹುದು. ಮಾನವರನ್ನು ಅವರವರ ಮನೋವೃತ್ತಿಗಳ ಎಂದರೆ, ಸ್ವಾಭಾವಿಕವಾದ ಜನ್ಮ, ಗುಣ, ಕರ್ಮಗಳೆಂಬ ಧರ್ಮಗಳ ದೃಷ್ಟಿಯಿಂದ ನಾಲ್ಕು ಬಗೆಯಾಗಿ ವಿಂಗಡಿಸಬಹುದು. ಅವರಲ್ಲಿ ಸತ್ಪುರುಷರಾಗಿರುವ ಅನೇಕರು ಕಾಯದಾರ್ಢ್ಯ, ದೇಹಾರೋಗ್ಯ

ವುಳ್ಳವರಾಗಿ, ಧಾರ್ಮಿಕ ಮನೋವೃತ್ತಿಯುಳ್ಳವರಾಗಿ, ಉತ್ಸಾಹ ಚಟುವಟಿಕೆಗಳಿಂದ ಕೂಡಿದವರಾಗಿಯೂ ಇರುವವರು. ತಮ್ಮವರ ಮತ್ತು ಇತರರ ಐಹಿಕ ಸುಖ ಸೌಕರ್ಯಗಳ ಸಂಪಾದನೆಗಾಗಿಯೂ ಇಡೀ ಮಾನವ ಸಮಾಜದ ಮೇಲ್ಮೆಗಾಗಿಯೂ, ಮಹಾಜನರ ಹಿತಕ್ಕಾಗಿಯೂ ಮುಂದಾಳುಗಳಾಗಿರುತ್ತಾ, ಸ್ವಾರ್ಥ ಸಾಧನೆಯಲ್ಲಿಯೇ ಆಸಕ್ತರಾಗಿರದೆ, ಪರೋಪಕಾರಕ್ಕಾಗಿ ದುಡಿಯುತ್ತಿರಲು ಮುಂದುವರಿಯುತ್ತಾರೆ. ಇಂಥವರು ಅಧಿಕಾರಗಳನ್ನು ವಹಿಸಿ, ತಮ್ಮ ಪ್ರಾಮಾಣಿಕತೆ, ಸೇವಾಮನೋಭಾವ ಇವುಗಳಿಂದ ಜನರ ನಂಬಿಕೆಗೆ ಪಾತ್ರರಾಗಿ, ಆಡಳಿತಗಳನ್ನು ನೆರವೇರಿಸುತ್ತಾ, ಪ್ರತ್ಯೇಕವಾಗಿ ಪ್ರಾತಿಸ್ವಿಕವಾಗಿ ಧಾರ್ಮಿಕರಾಗಿರುತ್ತಾ, ಜನರ ಮುಖಂಡರಾಗಿ ಪರೋಪಕಾರಿಗಳಾಗಿಯೂ ಇರುತ್ತಾ, ಕರ್ಮಭೂಮಿಯಲ್ಲಿ ಅವತರಿಸಿರುವ ಈ ತಮ್ಮ ಕರ್ಮ ಶರೀರವನ್ನು ದರಿದ್ರನಾರಾಯಣನ ಸೇವೆಯಲ್ಲೂ, ಜನತಾರೂಪಿಯಾಗಿರುವ ಜನಾರ್ದನನ ಆರಾಧನೆಯಲ್ಲೂ ಸವೆಯಿಸಿ ಸಾರ್ಥಕಗೊಳಿಸಲು, ತಮ್ಮ ಧಾರ್ಮಿಕ ಮನೋವೃತ್ತಿಯಿಂದ ಪ್ರೇರಿತರಾಗಿ ಮುಂದುವರೆಯುತ್ತಿರುತ್ತಾರೆ. ಇಂಥವರ ಮನೋವೃತ್ತಿಯು ಕರ್ಮಪ್ರಧಾನವಾದುದು. ಇವರು ಸುಮ್ಮನಿರಲಾರರು. ಸಾಧ್ಯವಾದಷ್ಟು ಹೆಚ್ಚು ಜನರಿಗೆ ಅವರವರ ದುಃಖ ಕಾರಣಗಳನ್ನ ವಿಚಾರಿಸಿ ನಿವಾರಿಸುವುದರಲ್ಲೂ, ಸಾಧ್ಯವಾದಷ್ಟು ಹೆಚ್ಚಿನ ಸುಖ ಸೌಕರ್ಯಗಳನ್ನು ಒದಗಿಸುವುದರಲ್ಲೂ ಹೆಚ್ಚು ಹೆಚ್ಚಾಗಿ ದುಡಿಯುತ್ತಿರುತ್ತಾರೆ. ಇವರಂತೆಯೇ ವೈಜ್ಞಾನಿಕರೂ ವಿಜ್ಞಾನ ಶಾಸ್ತ್ರಗಳನ್ನ ವ್ಯಾಸಂಗ ಮಾಡುತ್ತಾ ಪ್ರಕೃತಿಯಲ್ಲಿರುವ ರಹಸ್ಯ ತತ್ವಗಳನ್ನೂ, ಶಕ್ತಿಗಳನ್ನೂ ಸಂಶೋಧನೆ ಪ್ರಯೋಗಗಳಿಂದ ಕಂಡುಹಿಡಿಯುತ್ತಾ ಮಾನವನ ಐಹಿಕ ಜೀವನದಲ್ಲಿನ ಸುಖ ಸೌಕರ್ಯಗಳನ್ನು ಹೆಚ್ಚಿಸುತ್ತಿರುತ್ತಾರೆ. (ಆದರೆ, ಅಧಾರ್ಮಿಕರೂ, ಸ್ವಾರ್ಥಪರರೂ ಆದ ಕೆಲವರು ಈ ವೈಜ್ಞಾನಿಕರ ಸಂಶೋಧನೆಗಳಿಂದ ದೊರೆತ ಜ್ಞಾನವನ್ನು ಮಾನವರ ನಾಶಕ್ಕೇ ತಕ್ಕ ಸಾಮಗ್ರಿಗಳನ್ನು ತಯಾ

ರಿಸುವುದರಲ್ಲಿ ದುರ್ವಿನಿಯೋಗ ಮಾಡಿಕೊಳ್ಳುವುದುಂಟು. ಇದು ತಪಸ್ವಿಗಳಾದ ವೈಜ್ಞಾನಿಕರ ತಪ್ಪಲ್ಲವು.) ಇಂಥವರು ಸ್ವಾರ್ಥವನ್ನೂ ಬಿಟ್ಟು ಪರಾರ್ಥವಾಗಿಯೇ ದುಡಿಯುವುದರಲ್ಲಿ ಸಂತೋಷವನ್ನೂ ಅನುಭವಿಸುತ್ತಿರುತ್ತಾರೆ. ಇಂತಹ ಮಾದರಿಯ ಕರ್ಮಾಚರಣೆಗೆ ಕರ್ಮಯೋಗವೆಂಬ ಬಿರುದು ಸಲ್ಲುತ್ತದೆ. ಇಂತಹ ಕರ್ಮಯೋಗಿಗಳು ಆಧ್ಯಾತ್ಮಿಕ ಪ್ರಪಂಚದಲ್ಲಿ ಹೇಗೋ ಹಾಗೇ ರಾಜಕೀಯ, ಆರ್ಥಿಕ, ಸಾಮಾಜಿಕ, ವೈಜ್ಞಾನಿಕ ಪ್ರಪಂಚಗಳಲ್ಲೂ ಮುಂದಾಳುಗಳಾಗಿ, ಮುಖಂಡರಾಗಿ, ನಾಯಕರಾಗಿ ದುಡಿಯುತ್ತಿರುತ್ತಾರೆ. ಗೀತೆಯಲ್ಲಿ ಶ್ರೀಕೃಷ್ಣನು ತಾನೇ ಒಬ್ಬ ಕರ್ಮಯೋಗಿಯಂತೆ ಆದರ್ಶಭೂತವಾದ ಉದಾಹರಣೆಯಾಗಿದ್ದಾನೆ. ಅವನು ಅರ್ಜುನನಿಗೆ ಉಪದೇಶಿಸಿದ ನಿಷ್ಕಾಮ ಕರ್ಮಯೋಗವೇ ಇದಾಗಿದೆ. ಇದನ್ನು ಗೀತೆಯಲ್ಲಿ ಮೊದಲಿನಿಂದ ಕಡೆಯವರೆಗೆ ಸಾಮಾನ್ಯವಾಗಿಯೂ ಮೂರು, ನಾಲ್ಕು ಐದನೆಯ ಅಧ್ಯಾಯಗಳಲ್ಲಿ ವಿಶೇಷವಾಗಿಯೂ ವಿವರಿಸಿದೆ. ಯೋಗವೆಂದರೆ ಕರ್ಮಯೋಗವು. ಕರ್ಮವೆಂದರೆ ಎಲ್ಲರೂ ಆಚರಿಸಬೇಕಾದ ಕೆಲಸವಾಗಿದೆ. ಮಾನವರೆಲ್ಲ ಮಾಡಬೇಕಾದ ಈ ಕರ್ತವ್ಯ ಕರ್ಮವೇ ಧರ್ಮವೆನಿಸುತ್ತದೆ. ನಿಷ್ಕಾಮ ಕರ್ಮಯೋಗವೇ ನಿಷ್ಕಾಮ ಧರ್ಮಯೋಗವೂ ಆಗಿದೆ ಎಂಬುದನ್ನು ಗಮನಿಸಬೇಕು.

**2. ಭಕ್ತಿಪರಮ-ನಿಷ್ಕಾಮ ಭಕ್ತಿಯೋಗ.**

ಮತ್ತೆ ಕೆಲವರು ಈ ಚರಾಚರ ಪ್ರಪಂಚದಲ್ಲಿ ಸೌಂದರ್ಯ, ಉದ್ದೇಶ, ಕ್ರಮ ಇವುಗಳನ್ನು ಮನಗಂಡು ಇದರ ಸೃಷ್ಟಿ, ರಕ್ಷಣೆ, ಉಪಸಂಹಾರಗಳೆಂಬ ಮಹಾಕಾರ್ಯಗಳನ್ನು ಕಾಲ ಕಾರಣ ಕರ್ಮ ಇವುಗಳಲ್ಲಿ ವ್ಯವಸ್ಥೆಯಿಂದ ನೆರವೇರಿಸುತ್ತಿರುವ, ಆದುದರಿಂದಲೇ ಸರ್ವಜ್ಞವೂ ಸರ್ವಶಕ್ತವೂ ಆಗಿರಬೇಕಾದ ಚೈತನ್ಯಶಕ್ತಿಯೊಂದು ಇರಬೇಕೆಂದೂ, ಮೊದ ಮೊದಲು ಶ್ರದ್ಧಾಭಕ್ತಿಗಳಿಂದ ನಂಬುತಲೂ, ಆಮೇಲೆ ಕ್ರಮವಾಗಿ ಅನುಭವದಿಂದ

ಅದು ನಿಜವೆಂದು ತಿಳಿಯುತ್ತಾರೆ. ಆ ಚೈತನ್ಯವೇ ದೇವರೆಂದೂ, ಆ ದೇವರ ಇಚ್ಛೆಯಾಗಿರುವ ಈ ವ್ಯವಸ್ಥೆಯೇ, ಶಿಸ್ತೇ, ಕ್ರಮವೇ, ಧರ್ಮವೆಂದೂ, ಧರ್ಮರೂಪಿಯಾದ, ಈ ಶಾಶ್ವತಧರ್ಮ ಗೋಪ್ತೃವೂ ಆಗಿರುವ, ಆ ಚೈತನ್ಯವು ಸರ್ವಜ್ಞವೂ ಸರ್ವಶಕ್ತವೂ ಆಗಿರಬೇಕೆಂದೂ ವೇದಶಾಸ್ತ್ರ ಗುರೂಪದೇಶಗಳಲ್ಲಿ ಶ್ರದ್ಧಾಭಕ್ತಿಗಳುಳ್ಳವರಾಗಿ ಮೊದಲು ನಂಬಿದ್ದರೂ ಆಮೇಲೆ ಅಪರೋಕ್ಷವಾಗುವ ಅನುಭವದಿಂದಲೂ ನಿಶ್ಚಯಿಸುತ್ತಾರೆ. ಆ ದೇವರಲ್ಲಿ ಪ್ರೀತಿ, ಗೌರವ, ಕೃತಜ್ಞತೆಗಳಿಂದ ಕೂಡಿ ಆ ಮಾನವರು ವಿಧೇಯತೆಯಿಂದ ಪೂಜಾ, ಧ್ಯಾನ, ಉಪಾಸನೆಗಳಿಂದ ಆರಾಧಿಸುತ್ತಿರುತ್ತಾರೆ.

ಬದ್ಧೇನಾಂಜಲಿನಾ ನತೇನ ಶಿರಸಾ ಗಾತ್ರೈಸ್ಸಲೋಮೋದ್ಗಮೈಃ
ಕಂಠೇನ ಸ್ವರಗದ್ಗದೇನ ನಯನೇನೋದ್ಗೀರ್ಣ ಬಾಷ್ಪಾಂಬುನಾ ।
ಚಿತ್ತೇನಾಪಿ ತವಾಂಘ್ರಿಪಂಕಜಯುಗ ಧ್ಯಾನಾಮೃತಾಸ್ವಾದಿನಾ
ತ್ವಲ್ಲೀನಂ ಶಿವವಿಷ್ಣುರೂಪ ಭವತಾತ್ ಮೇ ಜೀವಿತಂ ಸಂತತಂ ॥

ದೇವರು ಮಾನವರ ಪ್ರಾರ್ಥನೆಗಳನ್ನು ಲಾಲಿಸುತ್ತಾನೆಂದೂ, ಅವರ ಧಾರ್ಮಿಕವಾದ ಕೋರಿಕೆಗಳನ್ನು ನೆರವೇರಿಸುತ್ತಾನೆಂದೂ ನಂಬಿ ನಿರೀಕ್ಷಿಸುತ್ತಾರೆ. ಅವರ ದೃಷ್ಟಿಯಲ್ಲಿ ದೇವರು ದೊರೆಯು. ಆ ಭಕ್ತನು ಸೇವಕನು. ದಣಿಯ ಅನುಗ್ರಹದಿಂದ ಸೇವಕನಿಗೆ ಲಾಭವೂ, ಸುಖವೂ, ಮೇಲ್ಮೆಯೂ ಆಗುತ್ತಿರುವಂತೆ, ದೇವರ ದಯೆಯಿಂದಲೇ ಭಕ್ತರಿಗೆ ಅವರವರು ಮಾಡಿಯೂ ಮಾಡುತ್ತಲೂ ಇರುವ ಕರ್ಮಗಳ ಉದ್ದೇಶದಂತೆ ಈ ಲೋಕದಲ್ಲಿ ಸುಖವೂ, ಪರಲೋಕದಲ್ಲಿ ಸದ್ಗತಿಯೂ, ಕಡೆಗೆ ಮುಕ್ತಿಯೂ ತಪ್ಪದೆ ದೊರೆಯುತ್ತವೆ ಎಂಬ ನಂಬಿಕೆಯು ಆ ಭಕ್ತರ ಮನಸ್ಸಿನಲ್ಲಿ ಬಲವಾಗಿ ಬೇರೂರಿರುತ್ತದೆ. ದೇವರ ಮಹಿಮೆ, ಗುಣ ಮತ್ತು ಶಕ್ತಿ ವಿಶೇಷಗಳನ್ನು ಭಕ್ತರು ಆಶ್ಚರ್ಯ, ಕೃತಜ್ಞತೆ, ಅನುರಾಗಗಳಿಂದ ಯಾವಾಗಲೂ ಧ್ಯಾನಿಸುತ್ತಾ, ತಮ್ಮ ಸರ್ವಸ್ವ

ವನ್ನೂ ಆ ದೇವರಲ್ಲಿ ಸಮರ್ಪಿಸಿ ದೇವರ ಕೈಂಕರ್ಯದಲ್ಲಿ ಸುಖಿಸುತ್ತಾರೆ.

ನಾಥೇ ನಃ ಪುರುಷೋತ್ತಮೇ ತ್ರಿಜಗತಾ ಮೇಕಾಧಿಪೇ ಚೇತಸಾ
ಸೇವ್ಯೇ ಸ್ವಸ್ಯ ಪದಸ್ಯ ದಾತರಿ ಶಿವೇ ನಾರಾಯಣೇ ಪಾ ಸ್ಥಿತೇ।
ಯಂಕಂಚಿತ್ ಪುರುಷಾಧಮಂ ಕತಿಪಯಗ್ರಾಮೇಶ ಮಲ್ಪಾರ್ಥದಂ
ಸೇವಾಯೈ ಮೃಗಯಾ ಮಹೇನರಮ ಹೋ ಮೂಕಾ ವರಾಕಾ ವಯಂ॥

ಇಂತಹ ಮನೋವೃತ್ತಿಯು ಭಕ್ತಿಪ್ರಧಾನವಾದುದು. ದೇವರ ಅನುಗ್ರಹಕ್ಕೆ ಪಾತ್ರನಾದವರಲ್ಲೂ ಆದರ್ಶಭೂತನಾದ ಭಕ್ತನು ಯಾವ ಕೋರಿಕೆಯನ್ನೂ ತನಗಾಗಿ ಬೇಡುವುದಿಲ್ಲ. ಎಲ್ಲ ಮಾನವರ ಇಡೀ ಜಗತ್ತಿನ ಕಲ್ಯಾಣಕ್ಕಾಗಿ ಒಂಬತ್ತು ಬಗೆಯ ಭಕ್ತಿಯಿಂದ ದೇವರನು ಆರಾಧಿಸುತ್ತಿರುವುದರಲ್ಲಿ ಪರಮಾನಂದವನ್ನು ಪಡೆಯುತ್ತಾನೆ ಇಂತಹ ನಡೆವಳಿಕೆಗೆ ಭಕ್ತಿಯೋಗವೆಂದು ಹೆಸರು. ಇದನ್ನು ಗೀತೆಯಲ್ಲಿ ಸಾಮಾನ್ಯವಾಗಿ ಎಲ್ಲ ಕಡೆಯಲ್ಲೂ ಹನ್ನೊಂದು, ಹನ್ನೆರಡನೆಯ ಅಧ್ಯಾಯಗಳಲ್ಲಿ ವಿಶೇಷವಾಗಿಯೂ ವಿವರಿಸಿದೆ. ಇಂತಹ ಭಕ್ತನಿಗೆ ದೊರೆಯುವ ಪರಮ ಫಲವು ದೇವರ ವಿಶ್ವರೂಪದರ್ಶನದಿಂದ ಅಥವಾ ಅವನ ಉಪಾಸನೆಯಲ್ಲಿ ಉದ್ದಿಷ್ಟವಾಗಿದ್ದ ದೇವತಾ ಸ್ವರೂಪದ ಸಾಕ್ಷಾತ್ಕಾರದಿಂದ ಆಗುವ ದಿವ್ಯಾನಂದವು. ಇದು ಪರತತ್ವದ ವ್ಯಾವಹಾರಿಕವಾದ ಸಗುಣವೂ ಸಾಕಾರವೂ ಆದ ಮೂರ್ತಿಯ ಆರಾಧನೆ ಉಪಾಸನೆಗಳಿಂದ ದೊರೆಯುವ ಪರಮೋತ್ತಮ ಸ್ಥಿತಿಯು. ಈ ಫಲವು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯಗಳೆಂಬ ಮೂರು ಪ್ರಕಾರಗಳುಳ್ಳದ್ದಾಗಿರುತ್ತದೆ. ಇದನ್ನೇ ಶೈವರೂ, ಮಾಧ್ವರೂ, ರಾಮಾನುಜೀಯರೂ ಮುಂತಾದ ವೈಷ್ಣವರೂ, ಶಾಕ್ತೇಯರೂ ಮೋಕ್ಷವೆನ್ನುತ್ತಾರೆ. ಇವರು ಕಡೆಗೆ ತಮ್ಮ ಉಪಾಸನೆಗೆ ವಿಷಯವಾಗಿದ್ದ ಇಷ್ಟ ದೇವತೆಯಲ್ಲಿ ಸಾಯುಜ್ಯ ರೂಪವಾದ ಮೋಕ್ಷವನ್ನೂ ಪಡೆಯುವುದುಂಟು.

೩. ರಾಜಯೋಗ-ಸಾಧನ ಪರರು, ಧ್ಯಾನ ಪರರು.

ಮಾನವರಲ್ಲಿ ಮತ್ತೆ ಕೆಲವರು ದೇಶದಲ್ಲಿ ಜನರ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗಳಲ್ಲಿನ ಏಳುಬೀಳುಗಳಲ್ಲಿ ಚಟುವಟಿಕೆ ಉತ್ಸಾಹಗಳಿಂದ ಭಾಗವನ್ನು ವಹಿಸದೆ, ತಮ್ಮಲ್ಲಿಯೇ ಅಡಗಿರುವ ಗುಣಶಕ್ತಿಗಳನ್ನು ಹೊರ ಹೊಮ್ಮಿಸುತ್ತಾ ಇತರರಿಗೂ ಮಾದರಿಯಂತೆ ಇರುತ್ತಾರೆ. ತಮ್ಮ ಜನ್ಮವು ಸಾರ್ಥಕವಾಗಿ ಉಪಯುಕ್ತವಾಗಿದ್ದರೆ ಸಾಕೆಂದು ಇವರು ತಿಳಿಯುತ್ತಾರೆ. ಇಂಥವರು ಏಕಾಂತದಲ್ಲಿ ವಿವಿಕ್ತ ಸೇವಿಗಳಾಗಿರುತ್ತಾರೆ, ಯುಕ್ತಾಹಾರ ವಿಹಾರಗಳಿಂದ ಶಾಸ್ತ್ರೋಕ್ತವಾದ ನಿಯಮಗಳನ್ನು ಪಾಲಿಸುತ್ತಾ, ಅಂತರ್ಮುಖಿಗಳಾಗಿರುತ್ತಾರೆ. ಇವರು "ಉದ್ಧರೇದಾತ್ಮನಾತ್ಮಾನಂ" ತಮ್ಮ ಮೇಲ್ಮೆಗಾಗಿ ತಾವೇ ದುಡಿಯಬೇಕಾದ ಜವಾಬುದಾರಿಯನ್ನು ಮೊದಲೇ ಮನಗಂಡು,

> ಮಹತಾ ಪುಣ್ಯ ಪಣ್ಯೇನ ಕ್ರೀತೇಯಂ ಕಾಯನೌ ಸ್ತ್ವಯಾ ।
> ಸಂಸಾರಾಂಭೋ ನಿಧೇಃ ಪಾರಂ ತರ ಯಾವನ್ನ ಭಿದ್ಯತೇ ॥

ಎಲೈ ಜೀವನೇ, ಈ ನಿನ್ನ ಶರೀರವೆಂಬ ದೋಣಿಯನ್ನು ಹೆಚ್ಚಾದ ಪುಣ್ಯವೆಂಬ ಬೆಲೆಯನ್ನು ಕೊಟ್ಟು ಕೊಂಡುಕೊಂಡಿರುವೆ. ಆದುದರಿಂದ ಇದು ಮುಪ್ಪಿನಿಂದ ಶಕ್ತಿಕುಂದಿ ಒಡೆದುಹೋಗುವುದಕ್ಕಿಂತ ಮುಂಚಿತವಾಗಿಯೇ ಈ ಸಂಸಾರವೆಂಬ ಸಾಗರವನ್ನು ದಾಟಿ ಅದರ ಆಚೆಯ ದಡವನ್ನು ಇದರ ಸಹಾಯದಿಂದ ಪಡೆಯುವವನಾಗು ಎಂಬ ನೀತಿಯನ್ನು ಅನುಸರಿಸುತ್ತಾರೆ. ಇವರು ಯಮ, ನಿಯಮ, ಆಸನ, ಪ್ರತ್ಯಾಹಾರ, ಪ್ರಾಣಾಯಾಮ, ಧಾರಣಾ, ಧ್ಯಾನ, ಸಮಾಧಿಗಳೆಂಬ ಅಷ್ಟಾಂಗ ಯೋಗಾಭ್ಯಾಸದಲ್ಲಿ ನಿರತರಾಗಿರುತ್ತಾ ಯಮ, ನಿಯಮ, ಆಸನ, ಪ್ರಾಣಾಯಾಮಗಳಿಂದ ದೇಹ, ಮನಸ್ಸು, ಇಂದ್ರಿಯಗಳನ್ನು ಹತೋಟಿಗೆ ತಂದುಕೊಂಡು, ಪ್ರತ್ಯಾಹಾರದಿಂದ ಅವನ್ನು ವಿಷಯಗಳಲ್ಲಿ ಲೋಲುಪಗಳಾಗಿರಲು ಬಿಡದೆ ಹಿಂತಿರುಗಿಸಿ, ಆತ್ಮಾಭಿಮುಖ

ವಾಗುವಂತೆ ಮಾಡಿಕೊಂಡು, ಧಾರಣಾ, ಧ್ಯಾನ, ಸಮಾಧಿಗಳಿಂದ ಆತ್ಮತತ್ವದ ಪರಮ ಸ್ವರೂಪವನ್ನು ಚಿತ್ತಶುದ್ಧಿಯಿಂದಲೂ, ವಿಕ್ಷೇಪಗಳಿಲ್ಲದ ಏಕಾಗ್ರತೆಯಿಂದಲೂ, ಅಪರೋಕ್ಷಾನುಭವವಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ಹೀಗೆ ಮುಂದುವರೆಯುತ್ತಿರುವ ಇಂಥವರ ಈ ನಡೆವಳಿಕೆಗೆ ರಾಜಯೋಗವೆಂದು ವ್ಯವಹಾರವಿದೆ. ಇದಕ್ಕೆ ಧ್ಯಾನಯೋಗವೆಂಬ ಹೆಸರೂ ಇದೆ ಎಂಬುದನ್ನು ಗಮನಿಸಬಹುದು. ಈ ಯೋಗವನ್ನು ಐದು ಮತ್ತು ಆರನೆಯ ಅಧ್ಯಾಯಗಳಲ್ಲಿ ವಿಶೇಷವಾಗಿಯೂ ಮಿಕ್ಕೆಡೆಗಳಲ್ಲಿ ಸಾಧಾರಣವಾಗಿಯೂ ವಿವರಿಸಿರುತ್ತದೆ. ಪ್ರತಿಯೊಬ್ಬರೂ ಈ ಯೋಗದಿಂದ ಇಷ್ಟಾರ್ಥ ಸಿದ್ಧಿಯನ್ನು ಪಡೆಯಬಹುದು. ಹೀಗೆ ವ್ಯಕ್ತಿಗಳೆಲ್ಲರೂ ಸಿದ್ಧಿಯನ್ನು ಪಡೆದರೆ ಇಡೀ ಜಗತ್ತಿನ ಕಲ್ಯಾಣವೂ ಸಾಧಿತವೇ ಆಗುವುದರಿಂದ ಇದನ್ನು ಕೇವಲ ಸ್ವಾರ್ಥ ಸಾಧನೆಯ ಮಾರ್ಗವೆಂದು ಅಲ್ಲಗಳೆಯಲಾಗುವುದೂ ಇಲ್ಲವು. ಈ ಮೂರು ಯೋಗಗಳು ಸಾಧನ ಯೋಗಗಳು.

**4. ಜ್ಞಾನಪರರು- ಜ್ಞಾನಯೋಗ.**

ಇನ್ನು ನಾಲ್ಕನೆಯದಾಗಿ ಮಾನವ ಜನ್ಮವು ಜ್ಞಾನಪ್ರಧಾನವಾದುದು. ಪ್ರಾಣಿಗಳಲ್ಲಿ ಮಾನವ ಜನ್ಮವು ಶ್ರೇಷ್ಠವಾದುದೆಂದು ಎಲ್ಲರೂ ಒಪ್ಪಿರುತ್ತಾರೆ. ಇದಕ್ಕೆ ಮಾನವನಲ್ಲಿ ಮಾತ್ರ ಕಾಣಬರುವ, ಇತರ ಪ್ರಾಣಿಗಳಲ್ಲಿಲ್ಲದ, ಬುದ್ಧಿಶಕ್ತಿ ವಿಶೇಷವೇ ಕಾರಣವಾಗಿದೆ. ಮಾನವನು ಮಾತನಾಡುವ, ಆಲೋಚಿಸುವ, ವಿವೇಚಿಸಬಲ್ಲ, ಮುಂದು ಮುಂದಕ್ಕೆ ತಿಳಿವಳಿಕೆ ನಡೆವಳಿಕೆಗಳನ್ನು ಹೆಚ್ಚಿಸಿಕೊಂಡು ಮೇಲ್ಮೆಯನ್ನು ಸಾಧಿಸುತ್ತಾ ಪ್ರಗತಿಮಾರ್ಗದಲ್ಲಿ ಮುಂದುವರಿಯುತ್ತಿರುವ ಪ್ರಾಣಿಯಾಗಿದಾನೆಂಬುದು ಎಲ್ಲರಿಗೂ ಗೊತ್ತಿದೆ. ಶ್ರೀ ಶಂಕರಾಚಾರ್ಯರು ವಿವೇಕ ಚೂಡಾಮಣಿಯ ಪ್ರಾರಂಭದಲ್ಲಿ ಹೀಗೆ ಹೇಳಿದಾರೆ:

"ಜಂತೂನಾಂ ನರಜನ್ಮ ದುರ್ಲಭಂ......"
"ದುರ್ಲಭಂ ತ್ರಯಮೇವೈತತ್ ದೈವಾನುಗ್ರಹ ಹೇತುಕಂ ।
ಮನುಷ್ಯತ್ವಂ ಮುಮುಕ್ಷುತ್ವಂ ಮಹಾ ಪುರುಷ ಸಂಶ್ರಯಃ ॥"

ಎಂದರೆ, "ಪ್ರಾಣಿಗಳ ಜನ್ಮಗಳಲ್ಲಿ ಮಾನವ ಜನ್ಮವನ್ನು ಪಡೆಯುವುದು ತುಂಬ ಕಷ್ಟಪಟ್ಟು ಸಾಧಿಸಬೇಕಾದ ಗುರಿಯಾಗಿದೆ." "ಮಾನವನಾಗಿ ಹುಟ್ಟುವುದೂ, ಅದರಲ್ಲೂ ಸಂಸಾರದಿಂದ ಬಿಡುಗಡೆಯನ್ನು ಬಯಸುವುದೂ, ಸತ್ಪುರುಷರಾದ ಮಹಾನುಭಾವರ ಸಹವಾಸವನ್ನು ಪಡೆಯುವುದೂ-ಈ ಮೂರೂ ಸುಲಭವಾಗಿ ದೊರೆಯುವ ವಿಷಯಗಳಲ್ಲವು. ದೇವರ ದಯೆಯಿಂದಲೇ ದೊರೆಯುವ ಸಂಗತಿಗಳಾಗಿರುತ್ತವೆ."

"Man is the Lord of Creation"

ಎಂದರೆ "ಸೃಷ್ಟಿಸಲ್ಪಟ್ಟಿರುವ ಈ ಜಗತ್ತಿನಲ್ಲಿ ಮಾನವನೇ ಜನ್ಮ ಗುಣ ಕರ್ಮಗಳಿಂದ ಶ್ರೇಷ್ಠನೆನಿಸಿಕೊಂಡಿರುವ ಪ್ರಾಣಿಯಾಗಿದಾನೆ." ಈ ಅಂಶವನ್ನು ಹಿಂದೆ ೭೬-೭೮ ಪುಟಗಳಲ್ಲಿ ಸ್ವಲ್ಪ ವಿವರಗಳೊಡನೆ ವಿವರಿಸಲಾಗಿದೆ. ಆದುದರಿಂದ ತಿಳಿವಳಿಕೆ ವಿವೇಚನೆಗಳಲ್ಲಿ ಮುಂದುವರಿಯುವುದೇ ಮಾನವನ ವಿಶೇಷಗುಣವಾಗಿದೆ. ಇದರಿಂದ ಮಾನವನು ಆಸ್ತಿಕನೂ ಧಾರ್ಮಿಕನೂ ಆಗಿ ಪ್ರಗತಿಮಾರ್ಗದಲ್ಲಿ ಪುರುಷಾರ್ಥಗಳನ್ನು ತಿಳಿದು ಮುಂದುವರಿಯುತ್ತಿದಾನೆ. ಇಂತಹ ಮಾನವರು ತಮ್ಮ ಮನಸ್ಸಿಗೂ ಯಾವ ವಿಷಯವು ಸಕಾರಣವಾಗಿದೆ ಎಂದು ಕಂಡುಬರುತ್ತದೋ, ಯಾವುದು ಬುದ್ಧಿಗೂ ಸಯುಕ್ತಿಕವಾಗಿದೆ ಎಂದು ತೋರಿಬರುತ್ತದೋ ಅಂತಹ ತತ್ವಸಿದ್ಧಾಂತಗಳನ್ನು ಆದರಿಸುತ್ತಾರೆ. ಯಾವುದು ಕೇವಲ ನಂಬಿಕೆಯನ್ನೇ ಅವಲಂಬಿಸಿ ನಿಲ್ಲಬೇಕಾಗುತ್ತದೋ ಅದನ್ನು ಇವರು ತಿರಸ್ಕರಿಸದೇ ಅಂತಹ ಮತ, ಧರ್ಮ, ಪರಲೋಕ, ದೇವರು, ತತ್ವ ಇವುಗಳನ್ನೂ, ಇವರು ಧೈರ್ಯದಿಂದ ವಾದ, ವಿಮರ್ಶೆ, ಪರೀಕ್ಷೆ, ಅನುಭವಗಳಿಂದ ರುಜುವಾತಿಗೆ ಗುರಿಮಾಡಲು ಹಿಂಜರಿಯುವುದಿಲ್ಲ. ಮಾನವನಿಗೆ ಇರುವ ವಿವೇಚನ ಶಕ್ತಿಯನ್ನು ಎಲ್ಲ ವಿಷಯಗಳಲ್ಲೂ ಜಾಗರೂಕತೆಯಿಂದಲೂ ಎಚ್ಚರಿಕೆಯಿಂದಲೂ ಉಪಯೋಗಿಸಬೇಕೆಂದೂ ಹಾಗೆ ಮಾಡದಿದ್ದರೆ ಮಾನವನ

ವಿಶೇಷಗುಣವಾದ ವಿವೇಚನ ಶಕ್ತಿಯೇ ಕ್ರಮವಾಗಿ ಕುಗ್ಗುತ್ತಾ ಬಂದು, ತುಕ್ಕುಹಿಡಿದು, ಕಡೆಗೆ ಲುಪ್ತವೇ ಆಗುವ ಸಂಭವವಿದೆ ಎಂದು ತಿಳಿಯುತ್ತಾರೆ. ಇವರು ಭಕ್ತಿವಾದಿಗಳಂತೆ, ಎಲ್ಲ ವಿಷಯ ಗಳನ್ನೂ ಯುಕ್ತಿ ಅನುಭವಗಳಲ್ಲಿ ಒರೆ ಹಚ್ಚಿ ನೋಡಿ ಅವುಗಳ ತತ್ತ್ವ ವನ್ನು ಗೊತ್ತುಮಾಡಲು ಹಿಂಜರಿಯಬೇಕಾದುದಿಲ್ಲವೆಂದೂ, ನಂಬಿಕೆ ಯಲ್ಲಿಯೇ ಕಾಲವನ್ನು ಕಳೆಯುತ್ತಿರಬಾರದೆಂದೂ, ಅವನ್ನು ಸಕಾರಣ ವಾಗಿ ವಿವರಿಸುತ್ತಾ ಹಾಗೆಯೇ ಮುಂದುವರಿಯುತ್ತಿರುತ್ತಾರೆ. ಇಂತಹ ಮನೋವೃತ್ತಿಗೆ ಜ್ಞಾನಯೋಗ ಅಥವಾ ಜ್ಞಾನಮಾರ್ಗ ವೆಂದು ವ್ಯವಹಾರವಿದೆ. ಇಂಥವರು ಹೇತುವಾದವನ್ನು ಅಲ್ಲಗಳೆ ಯದೆ ಕಾರಣಗಳನ್ನು ಸರಿಯಾಗಿ ವಿಮರ್ಶಿಸಿ ನಿರ್ದುಷ್ಟವಾದ ಯುಕ್ತಿಗಳನ್ನು ಅವಲಂಬಿಸಿ, ಏರ್ಪಡುವ ಸಿದ್ಧಾಂತಗಳನ್ನು ತೆರೆದ ಮನಸ್ಸಿನಿಂದ ಅಂಗೀಕರಿಸಲು ಹೆದರುವುದಿಲ್ಲವು. ಇದರಿಂದ ನಾಸ್ತಿ ಕತೆಯಾಗಲಿ, ಅವ್ಯವಸ್ಥೆಯಾಗಲಿ, ಅನವಸ್ಥೆಯಾಗಲಿ ಪರಿಣಮಿಸ ಬಹುದೆಂಬ ವಾದದಲ್ಲಿ ಹುರುಳಿಲ್ಲವು. ಏಕೆಂದರೆ ಧಾರ್ಮಿಕವಾದ ನೀತಿ ಯುಕ್ತವಾದ ಜೀವನಕ್ರಮವು ಇಂಥವರಿಗೆ ಸ್ವಾಭಾವಿಕವಾಗಿ ಬಿಟ್ಟಿರು ತ್ತದೆ. ಇವರ ದಿನಗಟ್ಟಲೆಯ ಜೀವನಕ್ರಮದಲ್ಲಿ, ವೈಜ್ಞಾನಿಕ ಶಾಸ್ತ್ರಗಳಲ್ಲಿ ಹೇಗೋ ಹಾಗೆ, ವೇದಾಂತ ಶಾಸ್ತ್ರದಲ್ಲೂ ಪ್ರಾಮಾಣಿಕ ವಾದ ತಿಳಿವಳಿಕೆ, ನಿಜವಾದ ಅನುಭವಗಳಿಗೆ ಪ್ರಾಧಾನ್ಯವಿರ ಬೇಕೆಂಬುದು ಗೊತ್ತಾಗಿರುತ್ತದೆ. ಜ್ಞಾನಯೋಗಿಗಳಾಗುವವರೂ ಮೊದಮೊದಲು ಶ್ರುತಿವಾಕ್ಯಗಳ ಬೋಧನೆಗಳಲ್ಲೂ ಗುರುಗಳ ಉಪ ದೇಶಗಳಲ್ಲೂ ಭಕ್ತಿ ಶ್ರದ್ಧೆಗಳಿಂದ ಕೂಡಿಯೇ ಅವನ್ನು ಅನುಸರಿಸು ತ್ತಿರುತ್ತಾರೆ. ಆದರೂ ತಮ್ಮ ಬುದ್ಧಿಶಕ್ತಿ, ಯುಕ್ತಿ, ವಿಮರ್ಶೆ ಗಳನ್ನು ಬಿಡದೆ ಮುಂದುವರಿಸುತ್ತಾ ಶ್ರುತಿ, ಸ್ಮೃತಿ, ಗುರೂಪ ದೇಶಗಳ ಮನನ ನಿದಿಧ್ಯಾಸನಗಳಿಂದ ತಾವು ಪಡೆಯುವ ಅನುಭವ ಗಳಲ್ಲಿ ಅವನ್ನೂ ಒರೆ ಹಚ್ಚಿ ನೋಡುತ್ತಾ ತತ್ತ್ವಗಳನ್ನು ಕ್ರಮವಾಗಿ ಮನಗಾಣುತ್ತಿರುತ್ತಾರೆ. ಈ ರೀತಿಯಲ್ಲಿ ಮುಂದುವರಿದ ಹಾಗೆಲ್ಲ

ಅವರು ಮೊದಲು ಹೊಂದಿದ್ದ ನಂಬಿಕೆಯ ವಿಷಯಗಳೂ ಕೇವಲ ನಂಬಿಕೆಯಾಗಿಯೇ ಉಳಿಯದೆ ವಾಸ್ತವ ತತ್ತ್ವವೂ ಆಗಿವೆ ಎಂಬು ದನ್ನು ಗೊತ್ತುಮಾಡಿಕೊಳ್ಳುತ್ತಿರುತ್ತಾರೆ. ಇವರಿಗೆ, ಭಕ್ತಿಮಾರ್ಗ ದಲ್ಲಿರುವಂತೆ, ತಮ್ಮ ನಂಬಿಕೆಯ ವಿಷಯಗಳ ತತ್ತ್ವವನ್ನು ಸಾಕ್ಷಾತ್ಕರಿಸಿಕೊಳ್ಳಲು ಕಾಲಾಂತರ ದೇಶಾಂತರಗಳನ್ನು ನಿರೀಕ್ಷಿಸಿರ ಬೇಕಾದ ಅವಶ್ಯಕತೆ ಇಲ್ಲವು. ಇಲ್ಲಿಯೇ ಈಗಲೇ ಪರತತ್ತ್ವದ ಸಾಕ್ಷಾ ತ್ಕಾರವನ್ನು ಎಲ್ಲರೂ ಪಡೆಯಬಹುದು. ಇದೇ ಜೀವನ್ಮುಕ್ತಿಯಾಗಿರು ತ್ತದೆ. ಇಂಥವರು ಜ್ಞಾನಯೋಗಿಗಳು.

ನಾಲ್ಕುಯೋಗಗಳಿಗೂ ಸಮನ್ವಯವಿದೆ ವಿರೋಧವಿಲ್ಲ.

ಈ ನಾಲ್ಕು ಯೋಗಗಳೂ ಪರಸ್ಪರವಾಗಿ ಹೊಂದಿಕೊಳ್ಳದ ಸ್ವತಂತ್ರಮಾರ್ಗಗಳೆಂದು ತಿಳಿಯಬಾರದು. ಇವೆಲ್ಲವೂ ಪರಸ್ಪರವಾಗಿ ಹೊಂದಿಕೊಳ್ಳುತ್ತಾ ಪೂರಕ ಪೋಷಕಗಳಾಗಿರುತ್ತಾ ಸಹಕರಿ ಸುತ್ತಿರುತ್ತವೆ. ಯೋಗಶಬ್ದವು ಯುಜ ಧಾತುವಿನಿಂದ ಉಂಟಾಗಿದೆ. ಸೇರಿಸುವಿಕೆ ಎಂಬುದು ಧಾತುವಿನ ಅರ್ಥವು. ಜೀವಾತ್ಮನನ್ನು ಪರಮಾತ್ಮನಲ್ಲಿ ಸೇರಿಸುವಿಕೆ ಎಂದು ತಾತ್ಪರ್ಯವು. ಇದರಿಂದ ಜೀವಾತ್ಮನೂ ಪರಮಾತ್ಮನೂ ಬೇರೆ ಬೇರೆ ವಸ್ತುಗಳೆಂದೂ ಒಂದರಲ್ಲಿ ಇನ್ನೊಂದನ್ನು ಸೇರಿಸುವುದೆಂದೂ ತಿಳಿಯ ಬಾರದು. ಜೀವಾತ್ಮನನ್ನು ಪರಮಾತ್ಮನಲ್ಲಿ ಲಯಗೊಳಿಸುವುದು ಎಂದು ಅರ್ಥವು. ಲಯಗೊಳಿಸುವುದೆಂದರೆ ಯಾವ ವಸ್ತುವನ್ನು ನಾವು, ಜೀವಾತ್ಮಾ ಎಂದು ವ್ಯವಹರಿಸುತ್ತಿರುವೆವೋ; ಅದರ ವಾಸ್ತವ ಸ್ವರೂಪವನ್ನು ಗುರೂಪದೇಶ ಶಾಸ್ತ್ರೋಪದೇಶಗಳ ಸಹಾಯದಿಂದ ವಿಮರ್ಶಿಸಿದರೆ, ಅದರ ಪಾರಮಾರ್ಥಿಕ ಸ್ವರೂಪವು ಅಖಂಡ ಸಚ್ಚಿದಾನಂದಾನಂತಾದ್ವಯಪರಮಾತ್ಮ ಚೈತನ್ಯವೆಂದೂ, ಶುದ್ಧ ಪರಬ್ರಹ್ಮವೆಂದೂ ಸಾಕ್ಷಾತ್ಕಾರ ಅಥವಾ ಅಪರೋಕ್ಷಾನುಭವ ವಾಗುತ್ತಿರುತ್ತದೆ. ಇದಕ್ಕೇ ಜ್ಞಾನಯೋಗವೆಂದು ವ್ಯವಹಾರವಿದೆ. ಈ ಅನುಭವವನ್ನು ಪಡೆಯುವುದಕ್ಕೆ ಜ್ಞಾನವೇ ಮುಖ್ಯ ಸಾಧನವು.

ಎಂದರೆ ಉತ್ತಮಪುರುಷಾರ್ಥವಾದ ಮೋಕ್ಷವನ್ನು ಪಡೆಯುವ ಉಪಾಯವೆಂದು ತಾತ್ಪರ್ಯವು. ಕರ್ಮ, ಭಕ್ತಿ, ಧ್ಯಾನಗಳು ಜ್ಞಾನಕ್ಕೆ ಅಂಗವಾಗಿರುತ್ತವೆ ಎಂಬುದೂ ಗೊತ್ತಾಗುತ್ತದೆ. ಆದುದರಿಂದ ಈ ಯೋಗಗಳಿಗೆ ಪರಸ್ಪರವಿರೋಧವೇನೂ ಇಲ್ಲ. ಆದುದರಿಂದ ಗೀತೆಯಲ್ಲಿ ಈ ನಾಲ್ಕು ಯೋಗಗಳನ್ನು ಮುಖ್ಯವಾಗಿ ವರ್ಣಿಸಿದೆ ಎನ್ನುತ್ತಾರೆ. ಇನ್ನೂ ಆಳವಾಗಿ ಒಳಹೊಕ್ಕು ನೋಡಿದರೆ ಗೀತೆಯು ಎರಡು ಯೋಗಗಳನ್ನು ತಿಳಿಸುತ್ತದೆ ಎನ್ನಬೇಕು. ಏಕೆಂದರೆ ಜ್ಞಾನಯೋಗ ಕರ್ಮಯೋಗಗಳನ್ನು ತಿಳಿಸುವುದರಲ್ಲಿ ಗೀತೆಯ ತಾತ್ಪರ್ಯವಿದೆ ಎಂದು ಈ ಗಮಕಗಳಿಂದ ಗೊತ್ತಾಗುತ್ತದೆ. ಅರ್ಜುನನ ಪ್ರಶ್ನೆಯು ಹೀಗಿದೆ :—

"ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।...
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ ॥ ೩.೨.

**ಗೀತೆಯಲ್ಲಿ ಎರಡು ಯೋಗಗಳನ್ನೇ ಹೇಳಿದೆ.**

ಓ ಕೃಷ್ಣನೇ, ಕರ್ಮಕ್ಕಿಂತಲೂ ಜ್ಞಾನವೇ ಶ್ರೇಷ್ಠವೆಂದು ನಿನ್ನ ಅಭಿಪ್ರಾಯವಾದರೆ ಕರ್ಮವನ್ನೇ ಆಚರಿಸೆಂದು ನನಗೆ ಏಕೆ ಹೇಳುತ್ತಿದೀಯೆ ? ಆದುದರಿಂದ ನಿಶ್ಚಯಮಾಡಿ ಹೇಳು ಯಾವುದನ್ನು ಆಚರಿಸುವುದರಿಂದ ನನಗೆ ಶ್ರೇಯಸ್ಸಾಗುವುದು ?

ಸನ್ನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂಚ ಶಂಸಸಿ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸು ನಿಶ್ಚಿತಂ ॥ ೫.೧."

ಓ ಕೃಷ್ಣನೇ, ಕರ್ಮಯೋಗವನ್ನೂ, ಕರ್ಮಸನ್ನ್ಯಾಸ ಅಥವಾ ಜ್ಞಾನಯೋಗವನ್ನೂ ಪುನಃ ಹೊಗಳುತ್ತಿರುವೆ. ಎರಡನ್ನೂ ಒಬ್ಬನೇ ಒಂದೇ ಕಾಲದಲ್ಲಿ ಆಚರಿಸಲಾಗುವುದಿಲ್ಲವು. ಆದುದರಿಂದ ಈ ಎರಡರಲ್ಲಿ ಯಾವುದು ಶ್ರೇಯಸ್ಕರವು ಎಂಬುದನ್ನು ನಿಶ್ಚಯಿಸಿ ನನಗೆ ಹೇಳು. ಅದನ್ನು ಆಚರಿಸಿ ನಾನು ಶ್ರೇಯಸ್ಸನ್ನು ಪಡೆಯುವೆನು.

ಈ ಪ್ರಶ್ನೆಗಳಿಗೆ ಶ್ರೀಕೃಷ್ಣನ ಉತ್ತರವು ಹೀಗಿದೆ :—

"ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।
ಜ್ಞಾನಯೋಗೇ ನ ಸಾಂಖ್ಯಾನಾಂ ಕರ್ಮಯೋಗೇನ
ಯೋಗಿನಾಂ॥" ೩.೩

ಓ ನಿರ್ದೋಷಿಯಾದ ಅರ್ಜುನನೇ, ಜ್ಞಾನದಲ್ಲಿ ಆಸಕ್ತಿಯುಳ್ಳವರಿಗೆ ಜ್ಞಾನಯೋಗವನ್ನೂ, ಕರ್ಮದಲ್ಲಿ ಆದರವುಳ್ಳವರಿಗೆ ಕರ್ಮಯೋಗವನ್ನೂ, ಹೀಗೆ ಎರಡು ಬಗೆಯ ನಿಷ್ಠೆಯನ್ನು ನಾನು ಹಿಂದೆ ಹೇಳಿದೆನು. ಯಾರು ಆತ್ಮಾನಾತ್ಮವಿವೇಕವುಳ್ಳವರೋ ಬ್ರಹ್ಮಚರ್ಯಾಶ್ರಮದಿಂದ ಗೃಹಸ್ಥಾಶ್ರಮಕ್ಕೆ ಹೋಗಲು ಆಶಿಸದೆ, ಜ್ಞಾನ ವೈರಾಗ್ಯಶಾಲಿಗಳಾಗಿರುವರೋ ಅಂಥವರಿಗೆ ಜ್ಞಾನಯೋಗ ನಿಷ್ಠೆಯನ್ನು ಹೇಳಿದೆನು. ವಿವೇಕ ವೈರಾಗ್ಯಗಳಿಲ್ಲದವರಿಗೆ ಕರ್ಮಯೋಗ ನಿಷ್ಠೆಯನ್ನು ಹೇಳಿರುವೆನು.

ಗೀತೆಯು ಜ್ಞಾನಯೋಗ ಒಂದನ್ನೇ ಮುಖ್ಯವಾಗಿ ಉಪದೇಶಿಸುತ್ತದೆ.

ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಒಂದೇ ಯೋಗವನ್ನು ಎಂದರೆ ಜ್ಞಾನಯೋಗವನ್ನು, ಪರಮಪುರುಷಾರ್ಥವಾದ ಮೋಕ್ಷಲಾಭಕ್ಕೆ ಜ್ಞಾನಯೋಗವೇ ಮುಖ್ಯವಾದ ಉಪಾಯವು ಎಂಬ ಅಂಶವನ್ನು ಗೀತೆಯು ತಿಳಿಸುತ್ತದೆ. ಹೇಗೆಂದರೆ :—

ಆರುರುಕ್ಷೋರ್ಮುನೇಃ ಯೋಗಂ ಕರ್ಮಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥
"ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿಗಮ್ಯತೇ ।
ಏಕಂ ಸಾಂಖ್ಯಂ ಚ ಯೋಗಂಚ ಯಃ ಪಶ್ಯತಿ ಸ ಪಶ್ಯತಿ ॥ ೬.೩.

ಜ್ಞಾನಯೋಗಿಗಳಿಂದ ಯಾವ ಮೋಕ್ಷರೂಪವಾದ ಉತ್ತಮ ಸ್ಥಿತಿಯು, ಮೋಕ್ಷಪ್ರಾಪ್ತಿಯು, ಪಡೆಯಲ್ಪಡುತ್ತದೋ, ಆ ಫಲವು ಕರ್ಮಯೋಗಿಗಳಿಂದಲೂ ಪಡೆಯಲ್ಪಡುತ್ತದೆ. ಹೇಗೆಂದರೆ ಕರ್ಮಯೋಗಿಗಳು ಕರ್ಮಗಳನ್ನು ಈಶ್ವರನಿಗೆ ಸಮರ್ಪಿಸಿ, ತಮಗಾಗಿ ಆ ಕರ್ಮಗಳ ಫಲಗಳನ್ನು ಬಯಸದೆ ಕರ್ಮವನ್ನು ಮಾಡುತ್ತಾರೆ.

ಅಂಥವರೂ ಚಿತ್ತಶುದ್ಧಿಯನ್ನು ಪಡೆದು ಪರಮಾರ್ಥ ಜ್ಞಾನವನ್ನೂ ಸನ್ಯಾಸವನ್ನೂ ಪಡೆಯುವ ಮೂಲಕ ಮೋಕ್ಷವನ್ನು ಪಡೆಯುತ್ತಾರೆ. ಆದುದರಿಂದ ಇವೆರಡಕ್ಕೂ ಒಂದೇ ಫಲವಾಗಿರುವುದರಿಂದ ಈ ಎರಡು ಯೋಗಗಳನ್ನೂ ಒಂದೇ ಎಂದು, ಒಂದೇ ಫಲವುಳ್ಳವು ಎಂದು, ಯಾರು ತಿಳಿಯುತ್ತಾರೋ, ಅವರು ಚನ್ನಾಗಿ ತಿಳಿದವರಾಗಿರುತ್ತಾರೆ. ಕರ್ಮ ಸನ್ಯಾಸಕ್ಕೆ ಜ್ಞಾನವೂ ಸೇರಿದರೆ ಸಾಂಖ್ಯಮಾರ್ಗವೆನಿಸುತ್ತದೆ. ಕರ್ಮಾಚರಣೆಗೆ ಸಮತ್ವಬುದ್ಧಿ, ಈಶ್ವರಾರ್ಪಣಗಳು ಸೇರಿದರೆ ಕರ್ಮಯೋಗವೆನಿಸುತ್ತದೆ. ಕರ್ಮಯೋಗಿಯನ್ನು ನಿತ್ಯ ಸನ್ಯಾಸಿ ಎಂದು (೫,೩) ಕರೆದಿರುವುದು ನಿಜವಾದ ಸನ್ಯಾಸಕ್ಕೆ ಕರ್ಮಯೋಗವು ಸಾಧನವಾಗುವುದರಿಂದ ಎಂದು ತಿಳಿಯಬೇಕು. ಕರ್ಮಯೋಗವನ್ನು ಯೋಗವೆಂದು ಕರೆದಿರುವುದು ಪರಮಾರ್ಥ ಯೋಗವಾದ ಜ್ಞಾನಕ್ಕೆ ಕರ್ಮಯೋಗವು ಸಹಾಯಕವು ಎಂಬ ಕಾರಣದಿಂದ ಎಂದು ತಿಳಿಯಬೇಕು.

ಪ್ರತಿಯೊಬ್ಬರಲ್ಲೂ ಈ ನಾಲ್ಕು ಧರ್ಮಗಳು ಇರುತ್ತವೆ. ಆದರೆ ಒಂದು ಮುಂದಾಗಿರುತ್ತದೆ.

ಮೇಲೆ ಹೇಳಿದಹಾಗೆ ಜನರಲ್ಲಿ ನಾಲ್ಕುಬಗೆಯ ಮನೋವೃತ್ತಿಯುಳ್ಳವರು ಕಾಣಬರುತ್ತಾರೆ ಎಂದರೆ ಒಂದು ವ್ಯಕ್ತಿಯಲ್ಲಿ ಒಂದು ಬಗೆಯ ಮನೋವೃತ್ತಿಯೇ ಇರುತ್ತದೆಂದು ಅಭಿಪ್ರಾಯವಲ್ಲವು. ಕರ್ಮಯೋಗದ ಮನೋವೃತ್ತಿಯು ಪ್ರಮುಖವಾಗಿರುವವರಲ್ಲಿ ಇತರ ಯೋಗಗಳ ಸ್ವಭಾವವೂ ಆನುಷಂಗಿಕವಾಗಿ, ಸಾಧಾರಣವಾಗಿ ಇರುತ್ತದೆಂದು ತಿಳಿಯಬೇಕು. ಜಿಜ್ಞಾಸುವಾದ ಸಾಧಕನು ಮೋಕ್ಷಮಾರ್ಗದಲ್ಲಿ ಮುಂದುವರಿಯುತ್ತಿರುವಾಗ ಸಾಮಾನ್ಯವಾಗಿ ಪಡೆಯುವ ಅಂತಸ್ತುಗಳನ್ನು ಈ ಯೋಗಗಳು ತಿಳಿಸುತ್ತವೆ ಎಂಬುದನ್ನು ನೆನಪಿನಲ್ಲಿಡಬೇಕು. ಇದರಿಂದ ಗೀತೆಯು ಮಾನವರ ಸಾಮಾನ್ಯವಾದ ಏಳಿಗೆಗೆ ಆವಶ್ಯಕವಾದ ಯೋಗಗಳನ್ನು ಉಪಾಯಗಳನ್ನು, ಬೋಧಿಸುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಆಯಾ

ಅಧಿಕಾರಿಗಳು ತಮ್ಮ ಅರ್ಹತೆ ಶಕ್ತಿಗಳಿಗೆ ಅನುಗುಣವಾಗಿ ತಕ್ಕುದಾದ ಯೋಗವನ್ನು ಆರಿಸಿಕೊಂಡು ಅದನ್ನು ಆಚರಿಸುತ್ತಾ ಕೃತಾರ್ಥರಾಗಲು ಎಲ್ಲ ಜನರಿಗೂ ಅವಕಾಶವಿದೆ. ಈ ಕಾರಣದಿಂದಲೇ ಭಗವದ್ಗೀತೆಯು ಪ್ರಪಂಚದ ಎಲ್ಲ ದೇಶಗಳ ಜನರ, ಅದರಲ್ಲೂ ವಿಶೇಷವಾಗಿ ವಿದ್ಯಾವಂತರೂ ಸತ್ಪುರುಷರೂ ಆಗಿರುವ ಜನರ, ಆದರ ಗೌರವಗಳಿಗೆ ಹೆಚ್ಚು ಹೆಚ್ಚಾಗಿ ಪಾತ್ರವಾಗುತ್ತಾ ಪ್ರಚಾರವನ್ನು ಪಡೆಯುತ್ತಿದೆ.

ಗೀತೆಯನ್ನು ಧರ್ಮಶಾಸ್ತ್ರವೆಂದು ಒಪ್ಪಬೇಕು.

ಹೀಗೆ ಗೀತೆಯು ಯೋಗಶಾಸ್ತ್ರವಾಗಿರುವಂತೆಯೇ ಧರ್ಮಶಾಸ್ತ್ರವೂ ಆಗಿದೆ ಎಂಬುದನ್ನೂ ಗಮನಿಸಬೇಕು. ಯೋಗವೆಂದರೆ ಕರ್ಮಯೋಗವೆಂದೂ, ಕರ್ಮವೇ ಧರ್ಮವೆಂದು ಮೇಲೆ ತಿಳಿಸಿದೆ. ಅಲ್ಲದೆ ಧರ್ಮವು ಯೋಗಕ್ಕಿಂತಲೂ ಜನಜೀವನದಲ್ಲಿ ಹೆಚ್ಚು ನಿಕಟವಾದ ಸಂಬಂಧವನ್ನು ಪಡೆದಿದೆ.

ಗೀತೆಯ ಉದ್ದೇಶವು ಜನರಿಗೆ ಸ್ವಧರ್ಮಾಚರಣೆಯ ವಿಷಯದಲ್ಲಿ ಬರಬಹುದಾದ ಸಂದೇಹ ಮತ್ತು ಮೋಹ ಇವುಗಳನ್ನು ನಿವಾರಿಸಿ ಸ್ವಧರ್ಮಾಚರಣೆಯಲ್ಲಿ ಜನರು ನಿರತರಾಗಿರುವಂತೆ ಮಾಡುವುದೇ ಆಗಿದೆ. ಸ್ವಧರ್ಮವು ನಮ್ಮ ಹುಟ್ಟಿನಿಂದಲೇ ಉಂಟಾಗಿ ನಮ್ಮ ಜೊತೆಯಲ್ಲಿರುತ್ತದೆ; ಅಥವಾ ಅದಕ್ಕೆ ಮೊದಲೇ ರೂಪಗೊಂಡು ಬರುತ್ತದೆ. ನಾವು ಹುಟ್ಟುವ ಮೊದಲೇ ಇರುವ ನಮ್ಮ ಸಮಾಜ ನಮ್ಮ ತಾಯಿತಂದೆ ನಮ್ಮ ನೆರೆಹೊರೆ ಇವುಗಳಲ್ಲಿ ನಮ್ಮ ತಂದೆ ತಾಯಿಯರ ಸೇವೆಯು ನಮ್ಮ ಸ್ವಧರ್ಮವಾಗಿರುತ್ತದೆ. ಸ್ವಧರ್ಮವನ್ನು ನಮ್ಮ ಸಹಧರ್ಮಿಣಿಯರಿಗೆ ಹೋಲಿಸುವುದುಂಟು. ಧರ್ಮಪತ್ನಿಯ ಸಂಬಂಧ ಅವಿಚ್ಛೇದ್ಯವಾದುದು ನಿಜ. ಆದರೂ ಈ ಹೋಲಿಕೆಗಿಂತ ಸ್ವಧರ್ಮವನ್ನು ನಮ್ಮ ತಾಯಿಯರಿಗೆ ಹೋಲಿಸುವುದು ಹೆಚ್ಚು ಒಪ್ಪುತ್ತದೆ. ಹೆಂಡತಿಯನ್ನು ಆರಿಸುವ ಹಾಗೆ ತಾಯಿಯನ್ನು ಆರಿಸಲಾಗುವುದಿಲ್ಲ. ಅದು ಮೊದಲೇ ಗೊತ್ತಾಗಿದೆ. ಅದು ಹೇಗಿದ್ದರೂ ಅದನ್ನು ನಾವು ಮರಿಯಲೊಲ್ಲೆವು ಸ್ವಧರ್ಮವೂ ಹಾಗೆಯೇ ಅದೊಂದೇ ನಮ್ಮನ್ನು ಬಾಳಿನುದ್ದಕ್ಕೂ ಕಾಪಾಡುತ್ತದೆ. ನಮ್ಮ ಮೇಲ್ಮೆಗೆ ನಮ್ಮ ಶ್ರೇಯಸ್ಸಿಗೆ ಅದು ಒಂದೇ ಸಹಾಯ. ಎಂದಿಗೂ ಕೈಬಿಡದ ಬೆಂಬಲ, ಬಾಳಿನ ಮೂಲ ಸೂತ್ರವಾಗಿರುತ್ತದೆ.

ಧರ್ಮಕರ್ಮಗಳ ಅರಿವು ಮತ್ತು ಆಚರಣೆ ಇವುಗಳು ಎಲ್ಲರಲ್ಲೂ ಬಳಕೆಗೆ ಬರುತ್ತಿವೆ. ಪಂಡಿತರೂ, ಪಾಮರರೂ, ನಾಗರಿಕರೂ ಗ್ರಾಮಾಂತರಗಳಲ್ಲಿರುವವರು, ಈ ಎಲ್ಲರ ದಿನಗಟ್ಟಲೆಯ ಜೀವನ ಕ್ರಮ, ಮಾತು, ಆಲೋಚನೆಗಳಲ್ಲಿ ಧರ್ಮಕರ್ಮಗಳು ಬಳಕೆಗೆ ಹೆಚ್ಚಾಗಿ ಬರುವಂತೆ ಗೀತೆಯು ಬೋಧಿಸುತ್ತದೆ. ಆದುದರಿಂದ ಅದು ಧರ್ಮಶಾಸ್ತ್ರವೆಂದರೆ ಹೆಚ್ಚಾಗಿಯೇ ಒಪ್ಪುತ್ತದೆ. ಆದುದರಿಂದಲೇ ಗೀತಾ ಭಾಷ್ಯದ ಮೊದಲಿನಲ್ಲಿಯೇ ಶ್ರೀ ಶಂಕರಾಚಾರ್ಯರು—

> "ಸ ಭಗವಾನ್ ಸೃಷ್ಟ್ವೇದಂ ಜಗತ್ ತಸ್ಯಚ ಸ್ಥಿತಿಂ ಚಿಕೀರ್ಷುಃ ಮರೀಚ್ಯಾದೀ ನಗ್ರೇ ಸೃಷ್ಟ್ವಾ ಪ್ರಜಾಪತೀನ್ ಪ್ರವೃತ್ತಿಲಕ್ಷಣಂ ಧರ್ಮಂ ಗ್ರಾಹ ಯಾಮಾಸ ವೇದೋಕ್ತಂ ತತಃ ಅನ್ಯಾಂಶ್ಚ ಸನಕ ಸನಂದನಾದೀನ್ ಉತ್ಪಾದ್ಯ ನಿವೃತ್ತಿ ಲಕ್ಷಣಂ ಜ್ಞಾನವೈರಾಗ್ಯ ಲಕ್ಷಣಂ ಧರ್ಮಂ ಗ್ರಾಹಯಾ ಮಾಸ. ದ್ವಿವಿಧೋಹಿವೇದೋಕ್ತೋ ಧರ್ಮಃ ಪ್ರವೃತ್ತಿ ಲಕ್ಷಣೋ ನಿವೃತ್ತಿ ಲಕ್ಷಣಶ್ಚ ಜಗತಃ ಸ್ಥಿತಿಕಾರಣಮಿತಿ. ಪ್ರಾಣಿನಾಂ ಸಾಕ್ಷಾದಭ್ಯುದಯ ನಿಶ್ರೇಯಸಹೇತುಃ ಯಃ ಸಃ ಧರ್ಮಃ......ಇಮಂದ್ವಿ ಪ್ರಕಾರಂ ಧರ್ಮಂ ನಿಃಶ್ರೇಯಸ ಪ್ರಯೋಜನಂ, ಪರಮಾರ್ಥ ತತ್ವಂಚ ವಾಸುದೇವಾಖ್ಯಂ ಪರಂಬ್ರಹ್ಮ ಅಭಿಧೇಯ ಭೂತಂ ವಿಶೇಷತಃ ಅಭಿವ್ಯಂಜಯತ್ ಇದಂ ಗೀತಾಶಾಸ್ತ್ರಂ"

ಎಂದು ಹೇಳಿರುವುದನ್ನು ನೋಡಿದರೆ ಗೀತೆಯನ್ನು ಧರ್ಮಶಾಸ್ತ್ರವೆನ್ನುವುದು ಅವರಿಗೂ ಸಮ್ಮತವಾಗಿರುತ್ತದೆ ಎಂದು ಹೇಳಬಹುದಾಗಿದೆ. ಅಲ್ಲದೆ,

> "ಸ್ಮತಿರಪಿಚ ಸ್ಥಿತ ಪ್ರಜ್ಞಸ್ಯ ಕಾ ಭಾಷಾ..."
>
> —ಶಂ. ಸೂ. ಭಾ. ೧.೧.೪.

ಎಂದು ಮುಂತಾಗಿ ಅನೇಕ ಕಡೆಗಳಲ್ಲಿ ಗೀತೆಯನ್ನು ಸ್ಮೃತಿ ಎಂದು ಉದಾಹರಿಸಿರುತ್ತಾರೆ. "ಧರ್ಮಶಾಸ್ತ್ರಂತುವೈಸ್ಮೃತಿಃ" "ಆ ಭಗವಂತನಾದ ದೇವರು ಈ ಪ್ರಪಂಚವನ್ನು ಸೃಸ್ಟಿಸಿದ ಕೂಡಲೆ ಪ್ರವೃತ್ತಿಧರ್ಮವನ್ನು ಮರೀಚಿಮುಂತಾದ ಮಹರ್ಷಿಗಳಿಗೆ

ಉಪದೇಶಿಸಿ, ಹಾಗೆಯೇ ಸನಕಾದಿ ಬ್ರಹ್ಮರ್ಷಿಗಳಿಗೆ ನಿವೃತ್ತಿಧರ್ಮವನ್ನು ಉಪದೇಶಿಸಿದನು. ಅವರನ್ನು ಕುರಿತು ಈ ಎರಡು ಬಗೆಯ ಧರ್ಮಗಳನ್ನೂ ಲೋಕದಲ್ಲಿ ಪ್ರಚಾರಮಾಡಲು ನಿಯೋಜಿಸಿದನು. ಈ ಎರಡು ಬಗೆಯ ಧರ್ಮವು ಆಚರಣೆಗೆ ಬಂದರೆ ಪ್ರಪಂಚದ ಸ್ಥಿತಿಯನ್ನು ರಕ್ಷಿಸಿದಂತಾಗುತ್ತದೆ ಎಂದು ದೇವರು ಹಾಗೆ ಮಾಡಿದನು.

ಉಪಕ್ರಮೋಪ ಸಂಹಾರೌ ಅಭ್ಯಾಸೋಽಪೂರ್ವತಾ ಫಲಂ ।
ಅರ್ಥವಾದೋಪಪತ್ತೀಚ ಲಿಂಗಂ ತಾತ್ಪರ್ಯನಿರ್ಣಯೇ ॥

ಎಂದು ಮೀಮಾಂಸಕರು ಗೊತ್ತುಮಾಡಿರುವ ತಾತ್ಪರ್ಯ ಗ್ರಾಹಕ ಲಿಂಗಗಳಿಂದಲೂ ಗೀತೆಯು ಧರ್ಮಶಾಸ್ತ್ರವೆಂಬುದನ್ನು ತಿಳಿಯಬಹುದು. ಗೀತೆಯ ಮೊದಲಲ್ಲಿರುವ "ಧರ್ಮಕ್ಷೇತ್ರೇ" ಎಂಬ ಪದವು ಜನರನ್ನು ಧರ್ಮಾಚರಣೆಗೆ ಒಲಿಸಿಕೊಳ್ಳುವ ಪ್ರಭಾವವುಳ್ಳ ಕ್ಷೇತ್ರವೆಂದು ಅರ್ಥವನ್ನು ಸೂಚಿಸುತ್ತದೆ.

ವಾಕ್ಯದ ತಾತ್ಪರ್ಯವನ್ನು ಗೊತ್ತುಮಾಡಲು ಗುರುತುಗಳು.

ಇದಕ್ಕೆ ಅನುಸಾರವಾಗಿ ಅರ್ಜುನನು ಯುದ್ಧಾಂಗಣದಲ್ಲಿ ಭೀಷ್ಮದ್ರೋಣ ಮುಂತಾದ ಬಂಧು ಗುರುಜನಗಳನ್ನು ನೋಡಿದಾಗ, ಅವನೂ ಧಾರ್ಮಿಕನಾದುದರಿಂದ ಅವನ ಮನಸ್ಸಿನಲ್ಲಿ ರಾಜ್ಯ ವಿಜಯಗಳ ಆಶೆಯಿಂದ ಈ ಯುದ್ಧವು ಕ್ಷತ್ರಿಯನಾದ ತನಗೂ ಅಧರ್ಮವೆಂದೂ ಪಾಪಕರ್ಮವೆಂದೂ ತೋರಿ ಕಳವಳವನ್ನು ಉಂಟುಮಾಡುತ್ತದೆ. ಏಕೆಂದರೆ ತಾನೂ ಜಯ ರಾಜ್ಯ ಅಪಕಾರಗಳಿಗೆ ಪ್ರತೀಕಾರ ಇವೇ ಮುಂತಾದ ಫಲಕಾಮನೆಯುಳ್ಳವನೆಂಬುದೂ ಗೊತ್ತಾಗಿ—

"ನತ್ವರ್ಥಕಾಮಸ್ತು (ಹತ್ವಾರ್ಥಕಾಮಾಂಸ್ತು) ಗುರೂನ್ ನಿಹತ್ಯ
ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ।"

ಎಂದು ನಿಶ್ಚಯಿಸುತ್ತಾನೆ. ಅಲ್ಲದೆ ಯುದ್ಧದಲ್ಲಿ ಕ್ರೌರ್ಯಕೊಲೆಗಳಿಂದ ಬಂಧು, ಗುರು, ಮಿತ್ರರನ್ನು ಸಂಹರಿಸಬೇಕಾಗುವುದರಿಂದ ಜಾತಿಧರ್ಮ ಕುಲಧರ್ಮಗಳೂ ನಷ್ಟವಾಗುವುದರಿಂದ ಅಧರ್ಮಕ್ಕೆ ಮೇಲುಕೈ ಆಗಬಹುದು.

" ಧರ್ಮೇ ನಷ್ಟೇ ಕುಲಂ ಕೃತ್ಸ್ನಂ ಅಧರ್ಮೋಽಭಿಭವತ್ಯುತ ।"

ಎಂದು ತಿಳಿದ ಅರ್ಜುನನ ಹೃದಯವು ತಲ್ಲಣಿಸುತ್ತದೆ. ಅದರಿಂದಲೇ ಆಮೇಲೆ ಜಯ, ರಾಜ್ಯ, ಸಂಪತ್ತುಗಳು ಅವನನ್ನು ಮುಂಚಿನಂತೆ ಆಕರ್ಷಿಸಲಾರದೆ ಹೋಗುತ್ತವೆ. ಆಗ—

" ನಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿಚ "

ಎಂದು ಹೇಳಿ ಕ್ಷತ್ರಿಯನಿಗೂ ಇಂತಹ ಯುದ್ಧವು ಧರ್ಮವಾಗಲಾರದು ಎಂಬ ಅಭಿಪ್ರಾಯವೇ ಬಲವಾಗಲು, ಧರ್ಮಾಸಕ್ತಿ ಪಾಪಭಯ ಗಳಿಂದ ಕಲಕಿಹೋಗಿರುವ ಮನಸ್ಸುಳ್ಳ ಅರ್ಜುನನು ವಿಷಾದಯೋಗ ದಿಂದ ಶ್ರೀಕೃಷ್ಣನನ್ನು ಕುರಿತು,—

" ಪೃಚ್ಛಾಮಿ ತ್ವಾಂ ಧರ್ಮ ಸಮ್ಮೂಢಚೇತಾಃ ॥"

ಎಂದು ಕೇಳುತ್ತಾ ಇಂತಹ ಯುದ್ಧವು ಕ್ಷತ್ರಿಯನಾದರೂ ಸ್ವಾರ್ಥ ಪರನಾದ ತನಗಾದರೂ ಧರ್ಮವಾದೀತೇ ? ಅಧರ್ಮವಾಗದೇ ? ಎಂಬುದಾಗಿ ಸಂಶಯ ಪಡುತ್ತಾ ಕೇಳುತ್ತಾನೆ.

ಧರ್ಮಜ್ಞಾನಕ್ಕೆ ತತ್ವಜ್ಞಾನವು ಹಿನ್ನೆಲೆ.

ಆ ಮೇಲೆ ಶ್ರೀಕೃಷ್ಣನು ಮೊದಲು ವೇದಾಂತ ತತ್ವದ, ಎಂದರೆ ಜೀವರ ಪಾರಮಾರ್ಥಿಕ ಸ್ವರೂಪದ ಉಪದೇಶ ದಿಂದ ಅರ್ಜುನನಿಗೆ ಮನಸ್ಸಮಾಧಾನ ವನ್ನುಂಟುಮಾಡಲು ಹೀಗೆ ಪ್ರಯತ್ನಿಸು ತ್ತಾನೆ. ಓ ಅರ್ಜುನನೇ, ಈ ಯುದ್ಧವೂ ಕ್ರೌರ್ಯ, ಕೊಲೆ, ಪಾಪ ಗಳಿಂದ ಕೂಡಿರುವುದು ನಿಜ. ಆದರೂ ಕೊಲ್ಲುವುದು ದೇಹವನ್ನೇ ಹೊರತು ಜೀವನನ್ನಲ್ಲವು. ಜೀವನ ಅಥವಾ ಆತ್ಮನ ತತ್ವವು ತನ್ನ ಕರ್ಮಾನುಸಾರವಾಗಿ ಅನೇಕ ದೇಹಗಳನ್ನು ಪಡೆಯುತ್ತಿರುತ್ತದೆ. ಜೀವತತ್ವವು ನಿತ್ಯವೂ, ನಿರ್ವಿಕಾರಿಯೂ, ಕತ್ತಿಯ ಏಟಿಗೆ ಸಿಕ್ಕದೇ ಕೊಲೆಗೆ ಗುರಿಯಾಗದೇ ಇರುವುದೂ ಆಗಿದೆ. ಕೊಲೆಗೆ ಗುರಿಯಾಗುವ ಈ ದೇಹಗಳು ಅನಿತ್ಯಗಳೂ, ಅನಿವಾರ್ಯವಾಗಿ ' ಆಗಮಾಪಾಯಿ ' ಗಳೂ ಆಗಿರುವುದರಿಂದ, ಹಳೆಯ ಅಂಗಿಯನ್ನು ಬಿಸುಟು ಹೊಸ

ಕವಚಗಳನ್ನು ಜನರು ಹಾಕಿಕೊಳ್ಳುತ್ತಿರುವಂತೆ, ಈ ದೇಹನಾಶದಿಂದ ಹೆದರಬೇಕಾಗಿಯೂ ಇಲ್ಲವು. ಏಕೆಂದರೆ ಒಳ್ಳೆಯ ನಡೆವಳಿಕೆಯಿಂದ ಧರ್ಮಾಚರಣೆಯಿಂದ ಈ ಜೀವನವನ್ನು ಸಾಗಿಸಿದವರಿಗೆ ಇನ್ನೂ ಮೇಲಾದ ದೇಹವೇ ಬರುವುದು ಖಚಿತವಾಗಿರುವುದು. ಅಷ್ಟೇ ಅಲ್ಲದೆ ನಾನು ಕೊಲ್ಲುತ್ತೇನೆ, ಕೊಲ್ಲಿಸಿಕೊಳ್ಳುತ್ತೇನೆ ಎಂದು ತಿಳಿಯುವುದೂ ಅಹಂಕಾರ ಮಮಕಾರಗಳಿಂದ, ದೇಹದಲ್ಲಿಯೇ ನಾನು ನನ್ನದು ಎಂದು ಅಭಿಮಾನದಿಂದ ಉಂಟಾಗುವ ಭ್ರಾಂತಿಯೂ ಆಗಿದೆ. ಇದನ್ನು ಬಿಟ್ಟು ಯುದ್ಧವನ್ನು ಮಾಡುವುದು ತತ್ವದೃಷ್ಟಿಯುಳ್ಳ ವಿವೇಕಿಗಳಿಗೂ ಸಹ ಸ್ವಾಭಾವಿಕವೂ ಅನಿವಾರ್ಯವೂ ಆಗಿರುವುದರಿಂದ ಯುದ್ಧವನ್ನು ಮಾಡು ಎಂದು ಹೇಳುವಾಗ ಕಡೆಗೆ—

"ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥"

ಎಂದು ಉಪದೇಶಿಸಿದುದು. ಆದರೆ ಧರ್ಮ ಸಂಶಯದಿಂದ ಉಂಟಾಗಿದ್ದ ತನ್ನ ಪ್ರಶ್ನೆಗೆ ನೇರವಾದ ಉತ್ತರವನ್ನು ನಿರೀಕ್ಷಿಸುತ್ತಿದ್ದ ಅರ್ಜುನನನ್ನು ಕುರಿತು ಅವನ ವಿಷಾದ ವೈರಾಗ್ಯಗಳಿಗೆ ಕಾರಣವಾಗಿರುವ ಧರ್ಮಾದರವೆಂಬ ನಿಜವಾದ ನಾಡಿಯನ್ನು ಮೀಟಲು ಬುದ್ಧಿವಾದವನ್ನು ಮುಂದುವರಿಯಿಸುತ್ತಾ ಅನ್ವಯವ್ಯತಿರೇಕಗಳಿಂದ ಹೀಗೆ ಧರ್ಮೋಪದೇಶವನ್ನು ಮಾಡುತ್ತಾನೆ. ನಿತ್ಯನಾದ ಆತ್ಮನನ್ನು ಕೊಲ್ಲಲಾಗುವುದೇ ಇಲ್ಲವು. ಅನಿತ್ಯವಾದ ನಾಶಿಯಾದ ದೇಹವನ್ನು ನೀನು ಕೊಲ್ಲದಿದ್ದರೂ ಅದು ನಾಶವಾಗಿಯೇ ಆಗುತ್ತದೆ. ಆದುದರಿಂದ ದೇಹನಾಶಕ್ಕೆ ನೀನು ನಿಮಿತ್ತಮಾತ್ರನು. ನಿನ್ನ ಸ್ವಧರ್ಮದ ದೃಷ್ಟಿಯಿಂದಲೂ ಲೋಕ ಸಂಗ್ರಹ ದೃಷ್ಟಿಯಿಂದಲೂ, ಯುದ್ಧವು ಅನಿವಾರ್ಯವಾಗಿರುವುದರಿಂದಲೂ ನೀನು ಯುದ್ಧವನ್ನು ಮಾಡುವುದೇ ಸರಿಯಾದ ಧರ್ಮವು. ಎಂದು—

"ಸ್ವಧರ್ಮಮಪಿಚಾವೇಕ್ಷ್ಯನವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋಽನ್ಯತ್ ಕ್ಷತ್ರಿಯಸ್ಯ ನವಿದ್ಯತೇ॥"
೨.೩೧.

"ಅಥಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ |
ತತಸ್ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪ ಮವಾಪ್ಸ್ಯಸಿ||" 2 33

"ಈ ಯುದ್ಧವು ಕ್ಷತ್ರಿಯನಾದ ನಿನಗೆ ಸ್ವಧರ್ಮವು ಎಂಬುದನ್ನರಿತು ನೀನು ಹೆದರಬೇಕಾಗಿಲ್ಲವು. ರಾಜ್ಯಲಾಭ, ಜಯ, ಕೀರ್ತಿಪ್ರಾಪ್ತಿ ಎಂಬ ಪ್ರಯೋಜನಗಳನ್ನೂ ಬಿಟ್ಟು ದುಷ್ಟರಾದ ದುರ್ಯೋಧನ ಮುಂತಾದವರ ನಿಗ್ರಹರೂಪವಾದ ಧರ್ಮ ಕಾರ್ಯದಲ್ಲಿ ನಿಮಿತ್ತ ಮಾತ್ರನಾಗಿ ಯುದ್ಧಮಾಡುವುದು ನಿನಗೆ ಧರ್ಮವೇ ಆಗಿದೆ. ನೀನು ಸುಮ್ಮನಿದ್ದರೆ ದುರ್ಯೋಧನನಿಗೆ ಅನುಕೂಲವೇ ಆಗಿ, ದುಷ್ಟರಿಗೆ ಜಯವಾಗಿ ಅಧರ್ಮಕ್ಕೆ ಬೆಂಬಲಕೊಟ್ಟಂತಾಗುತ್ತದೆ. ನೀನು ಕ್ಷತ್ರಿಯ ವೀರನಾದುದರಿಂದ ಶತ್ರುಗಳಿಂದ ತಿರಸ್ಕಾರ ಘೋಷಣೆಗಳಾಗಲಿ ಬಾಣವಾಗಲಿ ಬಂದಕೂಡಲೇ ನೀನು ಯುದ್ಧವನ್ನು ಮಾಡಲೇಬೇಕಾಗುತ್ತದೆ. ಏಕೆಂದರೆ "ಯದಹಂಕಾರ ಮಾಶ್ರಿತ್ಯ ನಯೋತ್ಸ್ಯ ಇತಿಮನ್ಯಸೇ| ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ||" ಈ ಪ್ರಕೃತಿ ಪ್ರಭಾವವು ಪ್ರಬಲತರವಾದುದು. ಅಲ್ಲದೆ "ಈಶ್ವರಸ್ಸರ್ವ ಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ| ಭ್ರಾಮಯನ್ ಸರ್ವ ಭೂತಾನಿ ಯಂತ್ರಾ ರೂಢಾನಿಮಾಯಯಾ||" ಆದುದರಿಂದ

ಇತಿಹಾಸ—ಇತಿ+ಹ+ಆಸ, ಎಂದರೆ ಹೀಗೆ ಇತ್ತಂತೆ, ಹೀಗೆ ಆಯಿತಂತೆ, ಹೀಗೆ ಇದ್ದಿತಂತೆ, ಹೀಗೆ ಆದನಂತೆ. ಎಂಬ ಮುಂತಾಗಿ ತಿಳಿಸುವ ಕಥೆ. ಮಾನವರ, ಮಹಾನುಭಾವರಾದ ಆದರ್ಶ ಪುರುಷರ ಚರಿತ್ರೆ. ಅವರು ಆಚರಿಸಿದ ಧರ್ಮಗಳ, ದಾಟಿದ ಕಷ್ಟಗಳ, ಪಡೆದ ಪುರುಷಾರ್ಥಗಳ ಕಥೆಗಳು.

ಪುರಾಣಂ—ಪುರಾಪಿನವಮಿವ, ಹಳೆಯದಾದರೂ ನಿತ್ಯನೂತನವಾಗಿರುವ, ಮುಖ್ಯವಾಗಿ ದೇವತೆಗಳಿಗೆ ಸಂಬಂಧಿಸಿರುವ, ಆನುಷಂಗಿಕವಾಗಿ ಮಹಾತ್ಮರಾದ ಮಾನವರಿಗೂ ಸಂಬಂಧಿಸಿರುವ, ಧರ್ಮಗಳನ್ನು ತಿಳಿಸುವ ಕಥೆಗಳು. ದೇಶ, ಕಾಲ, ವ್ಯಕ್ತಿಗಳು ಭಿನ್ನವಾದರೂ ಧರ್ಮವು ಒಂದೇ ವಿಶ್ವವ್ಯಾಪಿಯಾದ ತತ್ವವು

ಧರ್ಮದಿಂದ ಕೂಡಿದ ಈ ಧರ್ಮಯುದ್ಧಕ್ಕಿಂತಲೂ ನಿನಗೆ ಹೆಚ್ಚಿನ ಶ್ರೇಯಸ್ಕರವಾದ ಧರ್ಮವು ಕ್ಷತ್ರಿಯನಾದ ನಿನಗೆ ಬೇರೆ ಯಾವುದೂ

ಇಲ್ಲವು. ಹಾಗೆ ಮಾಡದೆ ಧರ್ಮಯುಕ್ತವಾದ ಈ ಯುದ್ಧವನ್ನು ನೀನು ಮಾಡದೆ ಇರುವೆಯಾದರೆ, ನೀನು ಸುಮ್ಮನಿದ್ದರೂ ಈ ಯುದ್ಧವು ನಡದೇ ನಡೆಯುವುದರಿಂದ "ನೀನು ಮಾತ್ರ ನಿನ್ನ ಧರ್ಮವನ್ನೂ ಬಿಟ್ಟು ಕೀರ್ತಿಯನ್ನೂ ಕಳೆದುಕೊಂಡು ಪಾಪವನ್ನೂ ಪಡೆಯುವೆ." ಅಲ್ಲದೆ ಎದುರುಕಡೆಯಿಂದ ತಿರಸ್ಕಾರವೂ ಬಾಣವೂ ಬಂದಮೇಲಂತೂ ನೀನು ಯುದ್ಧವನ್ನು ಮಾಡದೆ ಇರಲಾಗುವುದಿಲ್ಲ. ಇಷ್ಟೇ ಅಲ್ಲದೆ ನೀನು ನಿನಗೆ ಯಾವ ಫಲವನ್ನೂ ಅಪೇಕ್ಷಿಸದೆ ಇದ್ದರೂ

"ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ|" ೩.೨೦
"ಕುರ್ಯಾದ್ವಿದ್ವಾನ್ ತಥಾಸಕ್ತಃ ಚಿಕೀರ್ಷುರ್ಲೋಕ ಸಂಗ್ರಹಂ"

ಧರ್ಮ ಮತ್ತು ಲೋಕ ಸಂಗ್ರಹ.

"ಲೋಕ ಸಂಗ್ರಹವೆಂದರೆ ಇತರ ಕ್ಷತ್ರಿಯರಾದರೂ ಇಂತಹ ಯುದ್ಧವನ್ನು ಬಿಡದೆ ಮಾಡುವಂತಾಗಲಿ ಎಂಬ ಧರ್ಮ ಪ್ರಚಾರಕ್ಕಾಗಿಯಾದರೂ ಒಳ್ಳೆಯ ಮಾದರಿಯ ಉದಾಹರಣೆಯಾಗಿರುವುದಕ್ಕಾದರೂ ಯುದ್ಧವನ್ನು ಮಾಡುವುದು ನಿನಗೆ ಉಚಿತವಾಗಿದೆ. ತಿಳಿವಳಿಕೆಯುಳ್ಳವನು ಇತರರನ್ನು ಧರ್ಮಾಸಕ್ತರಾಗಿರುವಂತೆ ಮಾಡುವುದಕ್ಕಾದರೂ ಯುದ್ಧ ಮುಂತಾದ ಸ್ವಧರ್ಮವನ್ನು ಆಚರಿಸುತ್ತಿರಬೇಕು." ಎಂದು ಹೇಳಲು ಅದು ಅರ್ಜುನನಿಗೂ ಒಪ್ಪಿ ಬರುತ್ತದೆ. ಈಗ ಅರ್ಜುನನನ್ನು ನೆಪಮಾಡಿಕೊಂಡು ಮಾನವಸಾಮಾನ್ಯಕ್ಕೆ ಸ್ವಧರ್ಮವನ್ನು ಬಿಡದೆ ಆಚರಿಸುತ್ತಿರಬೇಕೆಂದು ಉಪದೇಶಮಾಡಲು ಗೀತೋಪದೇಶವನ್ನು ಮುಂದುವರಿಸುತ್ತಾನೆ. ಸ್ವಧರ್ಮಾಚರಣೆಯಿಂದ, ಎಂದರೆ ಅರ್ಥಕಾಮಗಳ ರೂಪವಾದ ಸ್ವಾರ್ಥಗಳಲ್ಲಿ ಆಶೆಯಿಲ್ಲದೆ, ನಿಷ್ಕಾಮ ಧರ್ಮಾಚರಣೆಯಿಂದ ಅರ್ಜುನನು ಮಾತ್ರವಲ್ಲದೆ ಎಲ್ಲ ವರ್ಣಾಶ್ರಮಿಗಳು ಮಾತ್ರವೂ ಅಲ್ಲದೆ ಈ ಲೋಕದಲ್ಲಿರುವ ಎಲ್ಲ ಜನರೂ ಕ್ರಮವಾಗಿ ಪುರುಷಾರ್ಥಗಳೆಲ್ಲವನ್ನೂ ಪಡೆದು ಕೃತಾರ್ಥರಾಗುತ್ತಾರೆ.

ಹೇಗೆಂದರೆ, ನಿಷ್ಕಾಮ ಧರ್ಮಾಚರಣೆಯೇ ನಿಷ್ಕಾಮ ಕರ್ಮ ಯೋಗವು. ಈ ಕರ್ಮಯೋಗವನ್ನು ಅನುಸರಿಸುವುದರಿಂದ ಚಿತ್ತವು ರಾಗದ್ವೇಷಗಳೆಂಬ ಮಲಗಳಿಲ್ಲದೆ ಶುದ್ಧವಾಗುತ್ತದೆ. ಚಿತ್ತ ಶುದ್ಧಿಯಿಂದ ಜ್ಞಾನಯೋಗವನ್ನು ಅನುಸರಿಸಲು ಯೋಗ್ಯತೆಯುಂಟಾಗಿ ಅದರಿಂದ ಎಲ್ಲರಿಗೂ ಪರಮಪುರುಷಾರ್ಥವಾದ ಮೋಕ್ಷದ ಪ್ರಾಪ್ತಿಯೂ ಆಗುತ್ತವೆ–ಎಂದು ಉಪದೇಶಿಸಿರುವುದರಿಂದ ಈ ಗೀತೆಯನ್ನು ಮಾನವ ಸಾಮಾನ್ಯದ ಶ್ರೇಯಸ್ಸಿಗೋಸ್ಕರ ಉಪದೇಶಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

ಆತ್ಮದರ್ಶನವೇ ಉತ್ತಮ ಧರ್ಮವು.

ಇದಕ್ಕನುಸಾರವಾಗಿ ಧರ್ಮ ಎಂಬ ಪದವು ಯೋಗ ಎಂಬ ಅರ್ಥವುಳ್ಳದು ಎಂದು

ಯೋಗ, ಧರ್ಮ ಎರಡೂ ಒಂದೇ ಅರ್ಥವುಳ್ಳ ಪದಗಳು.

ಸ್ವಲ್ಪಮಪ್ಯಸ್ಯ ಧರ್ಮಸ್ಯತ್ರಾಯತೇ ಮಹತೋ ಭಯಾತ್। ೨.೪೦

ರಲ್ಲಿ ಧರ್ಮಸ್ಯ ಎಂದರೆ ಯೋಗಸ್ಯ ಎಂದು ವಿವರಿಸಿರುತ್ತಾರೆ. ಅಲ್ಲದೆ ಧರ್ಮಪದಕ್ಕೆ ಬ್ರಹ್ಮಜ್ಞಾನ, ಜ್ಞಾನನಿಷ್ಠಾ ಎಂದು "ಧರ್ಮಸ್ಯಾಸ್ಯ ಪರಂತಪ" ೯.೩ ರಲ್ಲೂ ತಿಳಿಸಿರುತ್ತಾರೆ. ಅಲ್ಲದೆ "ಶಾಶ್ವತಸ್ಯ ಚಧರ್ಮಸ್ಯ" ೧೪.೨೭ ಎಂಬಲ್ಲಿ ಧರ್ಮಸ್ಯ ಜ್ಞಾನನಿಷ್ಠಾ ಲಕ್ಷಣಸ್ಯ ಸುಖಸ್ಯ ಎಂದು ವಿವರಿಸಿದ್ದಾರೆ. "ಪುನರ್ಯೋಗಂ ಚ ಶಂಸಸಿ" ೫.೧ ಎಂಬಲ್ಲಿ "ಯೋಗಂ ಕರ್ಮಾನುಷ್ಠಾನ ಲಕ್ಷಣಂ" ಎಂದು ವಿವರಿಸಿರುತ್ತಾರೆ. ಆದುದರಿಂದ ಧರ್ಮ, ಕರ್ಮ, ಯೋಗ ಎಂಬ ಪದಗಳು ಸಮಾನಾರ್ಥವುಳ್ಳವೆಂಬುದನ್ನು ಮರೆಯಬಾರದು. ಅಲ್ಲದೆ ಯಾಜ್ಞವಲ್ಕ ಸ್ಮೃತಿಯಲ್ಲಿಯೂ

"ಅಯಂಹಿ ಪರಮೋಧರ್ಮಃ ಯದ್ಯೋಗೇನಾತ್ಮ (ಚಿಂತನಂ) ದರ್ಶನಂ॥" ೧.೮.

ಸ್ಪಷ್ಟವಾಗಿ ಈ ಅಂಶವನ್ನು ತಿಳಿಸಲಾಗಿದೆ. ಎಂದರೆ, ಯೋಗದ ಸಹಾಯದಿಂದ ಆತ್ಮ ಸ್ವರೂಪದ ಸಾಕ್ಷಾತ್ಕಾರವನ್ನು ಪಡೆಯುವುದು ಅತ್ಯುತ್ತಮ ಧರ್ಮವಾಗಿದೆ ಎಂದು ಹೇಳಿದೆ. ಆದುದರಿಂದ ಗೀತೆಯಲ್ಲಿ ವರ್ಣಾಶ್ರಮ ಧರ್ಮಗಳನ್ನು ಮುಖ್ಯವಾಗಿ ಹಿಂದುಗಳಿಗೂ, ಸ್ವಧರ್ಮವನ್ನು ಮಾನವ ಸಾಮಾನ್ಯಕ್ಕೂ ಆಚರಿಸಬೇಕೆಂದು ಉಪದೇಶಮಾಡಿರುವುದರಿಂದ ಗೀತೆಯು ಮಾನವರೆಲ್ಲರಿಗಾಗಿ ಹೊರಟ ಉತ್ತಮ ಗ್ರಂಥವಾಗಿದೆ.

ಕರ್ಮಯೋಗವು ಯಾರಿಗೆ ?

ಇನ್ನು ಅಭ್ಯಾಸವೆಂಬ ತಾತ್ಪರ್ಯ ಗ್ರಾಹಕ ಲಿಂಗದಿಂದಲೂ ಗೀತೆಯು ಎಲ್ಲರಿಗೂ ಸ್ವಧರ್ಮವನ್ನು ಬೋಧಿಸುತ್ತದೆ ಎಂದು ಸಿದ್ಧವಾಗುತ್ತದೆ. ಹೇಗೆಂದರೆ ಒಂದು ಗ್ರಂಥದಲ್ಲಿ ಮುಖ್ಯ ವಿಷಯವನ್ನು ಅನೇಕಾವೃತ್ತಿ ಹೇಳಿರುವುದಕ್ಕೆ ಅಭ್ಯಾಸವೆಂಬ ಲಿಂಗವೆಂದು ಹೆಸರಿದೆ. ನಿಷ್ಕಾಮಧರ್ಮಾಚರಣೆಯೇ ನಿಷ್ಕಾಮ ಕರ್ಮಯೋಗವೆಂದು ವಿವರಿಸಲಾಗಿದೆ.

ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷುಕದಾಚನ।
ಮಾಕರ್ಮಫಲಹೇತುರ್ಭೂಃ ಮಾ ತೇಸಂ ಗೋಽಸ್ತ್ವಕರ್ಮಣಿ। ೨,೪೭

ಕರ್ಮಯೋಗದ ಸ್ವರೂಪ.

ಇದರ ಅರ್ಥವು ಹೀಗಿದೆ. ಕರ್ಮದಲ್ಲಿ, ಎಂದರೆ ನಿನ್ನ ಸ್ವಧರ್ಮಾಚರಣೆಯಲ್ಲಿಯೇ ನಿನಗೆ ಅಧಿಕಾರವು, ಅರ್ಹತೆಯು ಇದೆ. ಕರ್ಮಗಳ ಫಲಗಳ ವಿಷಯದಲ್ಲಿ ನಿನಗೆ ಆಸಕ್ತಿಯು ಯಾವಾಗಲೂ ಉಂಟಾಗದೆ ಇರಲಿ; ಏಕೆಂದರೆ ಕರ್ಮದ ಫಲದಲ್ಲಿ ಆಶೆಯಿಂದ ಕೂಡಿ ಕರ್ಮವನ್ನು ಆಚರಿಸಿದರೆ ಅದರ ಫಲವನ್ನು ನಾವು ಪಡೆಯಬೇಕಾಗುತ್ತದೆ. ಕರ್ಮವು ಫಲವನ್ನು ನಮಗೆ ಕೊಡಲು ನಾವೇ ಕಾರಣವಾದ ಹಾಗೆ ಆಗುತ್ತದೆ. ಆದುದರಿಂದ ಕರ್ಮಫಲದಲ್ಲಿ ಆಶೆ ಇಲ್ಲದೆ ಕರ್ಮವನ್ನು, ಅದು ನಮ್ಮ ನಿತ್ಯವಾದ ಧರ್ಮವೆಂದು ತಿಳಿದು ಆಚರಿಸಿದರೆ ಅದರಿಂದ ಸುಖದುಃಖ ರೂಪವಾದ ಫಲವು ನಮಗೆ ತಗಲುವುದಿಲ್ಲ.

ಹಾಗಾದರೆ ಎಂದರೆ ಕರ್ಮಫಲವು ಬೇಡವಾದರೆ ಆ ಕರ್ಮವನ್ನು ತಾನೆ ಏಕೆ ಮಾಡಬೇಕು ? ಸುಮ್ಮನಿದ್ದರೆ ಒಳ್ಳೆಯದಲ್ಲವೇ ? ಎಂದರೆ ಹಾಗೆ ಕರ್ಮವನ್ನು ಮಾಡದೆ ಇರಲೂ ನಿನ್ನ ಮನಸ್ಸಿನಲ್ಲಿವೃತ್ತಿಯುಂಟಾಗದೇ ಇರಲಿ. ಏಕೆಂದರೆ ಅದು ಸೋಮಾರಿತನವಾಗುತ್ತದೆ; ಮತ್ತು ಹಾಗೆ ಯಾವ ಕರ್ಮವನ್ನೂ ಮಾಡದೆ ಇರುವುದೂ ಅಸಾಧ್ಯವಾಗುತ್ತದೆ. ಇದನ್ನು ಮುಂದೆ ಹೀಗೆ ಹೇಳಿದೆ:

ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈಃ ಗುಣೈಃ॥ ಭ.ಗೀ. ೩.೫.

ನಿನ್ನ ಸ್ವಧರ್ಮವನ್ನು ಆಚರಿಸುವುದರಲ್ಲೇ ನಿನಗೆ ಅಧಿಕಾರ ಅಥವಾ ಅರ್ಹತೆಯು ಇದೆಯೇ ಹೊರತು ಜ್ಞಾನಯೋಗದಲ್ಲಿ ನಿನಗೆ ಇನ್ನೂ ಅರ್ಹತೆಯು ಬಂದಿಲ್ಲ. ಇದು ಅರ್ಜುನನನ್ನು ಮಾತ್ರ ಕುರಿತು ಹೇಳಿದ ಮಾತಲ್ಲವು. ನಮ್ಮೆಲ್ಲರಿಗೂ ಇದು ಅನ್ವಯಿಸುತ್ತದೆ. ಕರ್ಮದ ಫಲದ ವಿಷಯದಲ್ಲಿ ಆಶೆಯು ಯಾರಿಗೂ ಯಾವ ಸ್ಥಿತಿಯಲ್ಲಿಯೂ ಉಂಟಾಗದಿರಬೇಕು. ಏಕೆಂದರೆ ಫಲಾಶೆಯಿಂದ ಕೂಡಿ ಕರ್ಮವನ್ನು ಆಚರಿಸಿದರೆ ಆ ಫಲವನ್ನು ಅನುಭವಿಸಬೇಕಾಗಿ ಬರುತ್ತದೆ. ಆಗ ಸಕಾಮಕರ್ಮಾಚರಣೆ ಅದರ ಫಲಾನುಭವಗಳೆಂಬ ಈ ಸಂಸಾರ ಚಕ್ರದಿಂದ ಬಿಡುಗಡೆಯಾಗುವ ಸಂಭವವೇ ತಪ್ಪಿ ಹೋಗುತ್ತದೆ. ಆದುದರಿಂದ ಕರ್ಮವು ತನ್ನ ಫಲವನ್ನು ನಮಗೆ ಕೊಟ್ಟು ನಮ್ಮನ್ನು ಆ ಫಲಾನುಭವದಲ್ಲಿ ಆಸಕ್ತರಾಗುವಂತೆ ಮಾಡದೆ ಇರಬೇಕಾದರೆ ನಿಷ್ಕಾಮ ಕರ್ಮಾಚರಣೆಯನ್ನೇ ಮಾಡುತ್ತಿರಬೇಕು. ಫಲ ಬೇಡವೆಂದಾದರೆ ಫಲ ಸಾಧನವಾದ ಕರ್ಮದ ಆಚರಣೆಯ ಕಷ್ಟವನ್ನು ತಾನೆ ಏಕೆ ಅನುಭವಿಸಬೇಕೆಂದು ತಿಳಿದು ಕರ್ಮವನ್ನು ಬಿಡಬಾರದು. ಏಕೆಂದರೆ ಫಲಾಶೆಯನ್ನು ಬಿಟ್ಟು ಕರ್ಮಾಚರಣೆಮಾಡಿದರೆ ಮಾತ್ರ ಚಿತ್ತ ಶುದ್ಧಿಯಾಗಿ ಜ್ಞಾನಯೋಗಕ್ಕೆ ಅರ್ಹತೆಯುಂಟಾಗಿ ಮುಂದುವರಿಯಲು ಸಾಧ್ಯವಾಗುತ್ತದೆ. ಹಾಗಿಲ್ಲದೆ ಕರ್ಮವನ್ನೇ ಮಾಡುವುದನ್ನು ಕಾಯಕ್ಲೇಶ ಭಯದಿಂದ ಸೋಮಾರಿತನದಿಂದ ಬಿಟ್ಟುಬಿಟ್ಟರೆ ಇದ್ದ ಸ್ಥಿತಿಯಲ್ಲೇ

ಎಂದರೆ ಅಜ್ಞಾನದ ಸ್ಥಿತಿಯಲ್ಲಿಯೇ ಇರಬೇಕಾಗುತ್ತದೆ. ಅಲ್ಲದೆ ಹಾಗೆ ಕರ್ಮವನ್ನು ಬಿಡಲಾಗುವುದೂ ಇಲ್ಲವೆಂದು ಮುಂದೆ ೩.೫ರಲ್ಲೂ ಹೇಳಲಾಗುತ್ತದೆ.

"ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ !
ಸಿಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ॥"
೨.೪೮.

"ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತ ದುಷ್ಕೃತೇ।
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ॥" ೨.೫೦

ಎಂಬೀ ಮುಂತಾದ ಕಡೆಗಳಲ್ಲಿ ಸಾಮಾನ್ಯ ಧರ್ಮಗಳನ್ನೂ, ವಿಶೇಷ ಧರ್ಮಗಳಾದ ವರ್ಣಾಶ್ರಮ ಧರ್ಮಗಳನ್ನೂ ಮಾನವನು ಆ ಕರ್ಮಗಳ ಫಲದಲ್ಲಿ ಆಶೆಯನ್ನಿಡದೆ, ಆ ಕರ್ಮಫಲಗಳಾದ ಸುಖದುಃಖಗಳು ತನಗೆ ತಗುಲಿ ತನ್ನಲ್ಲಿ ಸುಖದಿಂದ ಹಿಗ್ಗಿ ಮೆರೆಯುವಿಕೆಯನ್ನೂ, ದುಃಖದಿಂದ ಕುಗ್ಗಿ ಸೊರಗುವಿಕೆಯನ್ನೂ ಉಂಟುಮಾಡದಿರುವಂತಾಗಲು ಸಮತ್ವ ಬುದ್ಧಿಯಿಂದ ಕೂಡಿ, ಅಹಂಕಾರ ಮಮಕಾರಗಳೆಂಬ ಅಭಿಮಾನವೂ ಇಲ್ಲದೆ ಮಾಡುತ್ತಿರಬೇಕು. ಹೀಗೆ ಕರ್ಮಾನುಷ್ಠಾನವೂ ಧರ್ಮಾಚರಣೆಯೂ ಈಶ್ವರ ಸೇವೆಯೆಂದೂ ಜನತಾರೂಪಿಯಾದ ಜನಾರ್ಧನನ ಸೇವೆಯೆಂದೂ ಭಾವಿಸಿ ಕರ್ಮಗಳನ್ನೂ, ಫಲಗಳನ್ನೂ ಈಶ್ವರನಲ್ಲಿ ಸಮರ್ಪಿಸುತ್ತಾ ಕರ್ಮವನ್ನು ಆಚರಿಸುತ್ತಿರುವುದೇ ಕರ್ಮಯೋಗವೆಂದೂ, ಇನ್ನೇ ಕರ್ಮಾಚರಣೆಯಲ್ಲಿ ಇರಬೇಕಾದ ಕೌಶಲವೆಂದರೆ ಜಾಣತನವೆಂದೂ, ಎರಡನೆಯ ಅಧ್ಯಾಯದಲ್ಲಿ ಹೇಳಿದೆ.

ಯೋಗಶಬ್ದದ ಅರ್ಥಗಳು.

ಇದರಂತೆಯೇ ಮೂರನೆಯ ಅಧ್ಯಾಯದಲ್ಲೂ ದೇವತೆಗಳಿಗೂ ಮಾನವರಿಗೂ ಧರ್ಮಾಚರಣೆಯಿಂದಲೇ ಶ್ರೇಯೋಲಾಭವಾಗುತ್ತದೆಂದು ಹೇಳಿ, ಇಹಪರಗಳಿಗೆ ಧರ್ಮವೇ ಸೇತುವೆಯಂತಿದೆ ಎಂದು ತಿಳಿಸುತ್ತಾ, ಯಜ್ಞ ಚಕ್ರವನ್ನು ಧರ್ಮಕರ್ಮಗಳ ಆಚರಣೆಯನ್ನು ಅದರ ಫಲದಲ್ಲಿ ಆಶೆಯೊಡನೆ ಆಚರಿಸುವುದರಿಂದ ಆಗುವ ಪರಿಣಾಮವು ಹೀಗಿರುತ್ತದೆ. ಎಂದು ವಿವರಿಸಲಾಗಿದೆ:—

"ಸಹ ಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ।
ಅನೇನ ಪ್ರಸವಿಷ್ಯಧ್ವಂ ಏಷ ವೋಽಸ್ತ್ವಿಷ್ಟ ಕಾಮಧುಕ್ ॥ ೩.೯
ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ॥ ೩.೧೦
"ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞ ಭಾವಿತಾಃ॥" ೩.೧೧
ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ॥"

ಧರ್ಮಚಕ್ರದ ಸ್ವರೂಪ ಮತ್ತು ಅದರ ಫಲ.

ಹೀಗೆ ಸಕಾಮಕರ್ಮಾಚರಣೆಯಿಂದ ಯಜ್ಞ ದಾನ ತಪಸ್ಸು ಎಂಬ ಧರ್ಮಾಚರಣೆಯಿಂದ ಇಹಲೋಕದಲ್ಲಿ ಅಭ್ಯುದಯಗಳೂ, ಪರಲೋಕಗಳಲ್ಲಿ ಸದ್ಗತಿಗಳೂ ದೊರೆಯುತ್ತವೆ ಎಂದು ತಿಳಿಸಿ, ಇದರಿಂದ ಸಂಸಾರ ಚಕ್ರವು ಅನಂತವಾಗುತ್ತದೆಂದು ಜ್ಞಾನನಿಷ್ಠೆಗೆ ಅರ್ಹತೆಯು ಬರಬೇಕಾದರೆ ನಿಷ್ಕಾಮ ಕರ್ಮಾಚರಣೆಯೇ ದಾರಿಯು ಎಂದು ತಿಳಿಸಿದೆ. ದೇವತೆಗಳು ಅನುಗ್ರಹಿಸುವ ಫಲಗಳನ್ನೂ ಸೌಕರ್ಯಗಳನ್ನೂ ಅವರಿಗೆ ಸಮರ್ಪಿಸದೇ ತಾನೇ ಅನುಭವಿಸಿದರೆ ಅಂಥವನು ಕಳ್ಳನಾಗುತ್ತಾನೆ. ಅಲ್ಲದೆ ಅದನ್ನು ಆಚರಿಸದಿದ್ದರೆ ಆಗುವ ಕೆಡುಕನ್ನೂ ಹೀಗೆ ಹೇಳಿದೆ:

"ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ।" ೩.೧೬

ಈ ಯಜ್ಞಚಕ್ರವನ್ನು ಅನುಸರಿಸದೆ ಇದ್ದರೆ ಮಾನವ ಜನ್ಮವೇ ವ್ಯರ್ಥವಾಗುತ್ತದೆ ಎಂದು ತಿಳಿಯು ಹೇಳಿದೆ. ಈ ಉಪದೇಶದ ಜೊತೆಗೆ ಜನಕಾದಿಗಳ ಉದಾಹರಣೆಯನ್ನು ಕೊಟ್ಟು ನಿಷ್ಕಾಮಕರ್ಮಾಚರಣೆಯಿಂದ ಜೀವನ್ಮುಕ್ತಿಯನ್ನೂ ಸಾಧಿಸುವುದು ಸುಲಭವಾಗುತ್ತದೆ ಎಂದು ಹೇಳಿದೆ. ಈ ಅಧ್ಯಾಯಕ್ಕೆ ಕರ್ಮಯೋಗವೆಂದೇ ಹೆಸರನ್ನೂ ಇಟ್ಟಿದೆ.

ಹೀಗೆಯೇ ನಾಲ್ಕನೆಯ ಅಧ್ಯಾಯದಲ್ಲೂ ವಿಶೇಷವಾಗಿ

"ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮವಿಭಾಗಶಃ
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ|" ೪.೧೩

ಎಂದು ಎಲ್ಲ ಮಾನವರಿಗೆ ಸ್ವಧರ್ಮವನ್ನೂ ವರ್ಣಾಶ್ರಮ ಧರ್ಮವನ್ನೂ ಆಚರಿಸುವುದರ ಆವಶ್ಯಕತೆ, ರೀತಿ ಮತ್ತು ಫಲ ಮುಂತಾದ ಗುಣಗಳನ್ನು ಹೇಳಿದೆ. ಮೇಲಾಗಿ ಸ್ವಧರ್ಮ ಪರಧರ್ಮಗಳನ್ನು ವಿವೇಚಿಸಿ

"ಸ್ವಧರ್ಮೇನಿಧನಂ ಶ್ರೇಯಃ ಪರಧರ್ಮೋ ಭಯಾವಹಃ॥"
೩.೩೫,೧೮.೪೭

"ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್॥"
೩.೩೫

ಎಂಬಲ್ಲಿಯೂ ಎರಡಾವೃತ್ತಿ ಒತ್ತಿ ತಿಳಿಯಹೇಳಿದೆ.

ಎಲ್ಲಕ್ಕೂ ಶಿಖರದಂತಿರುವ ಉಪದೇಶವನ್ನು ಎಂದರೆ ದೇವರ ಅವತಾರಗಳ ಮುಖ್ಯ ಉದ್ದೇಶವನ್ನು ತಿಳಿಸಲಾಗಿದೆ.

ಧರ್ಮದ ಪುನರುಜ್ಜೀವನವೇ ಅವತಾರಗಳ ಧ್ಯೇಯ.

"ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ|
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ॥ ೪.೭
ಪರಿತ್ರಾಣಾಯ ಸಾಧೂನಾಂ ವಿನಾಶಾ ಯ ಚ ದುಷ್ಕೃತಾಂ|
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥"೪.೮

ಎಂದು ದೇವರೂ ಆಗಾಗ್ಗೆ ಅವಶ್ಯಕವಾದಾಗಲೆಲ್ಲ ಅಧರ್ಮವನ್ನು ಮೆಟ್ಟಲೂ, ಧರ್ಮಾಚರಣೆಯನ್ನು ಪುನರುಜ್ಜೀವನಗೊಳಿಸಲೂ ಅವತರಿಸುವೆನೆಂದು ಕೊಟ್ಟಿರುವ ಬರವಸೆಯ ವ್ಯಾಖ್ಯಾನವನ್ನೂ ವಿವರಿಸಿರುತ್ತದೆ. ಅಲ್ಲದೆ ಇದಕ್ಕೆ ಅನುಗುಣವಾಗಿರುವಂತೆ ಈ ಅಧ್ಯಾಯಕ್ಕೆ ಜ್ಞಾನಕರ್ಮ ಯೋಗವೆಂದು ಹೆಸರನ್ನೂ ಕೊಡಲಾಗಿದೆ. ಈ ಅಧ್ಯಾಯ

ದೇವರ ಅವತಾರಗಳ ಉದ್ದೇಶವು ಧರ್ಮರಕ್ಷಣೆಯೇ ಆಗಿದೆ.

ದಲ್ಲಿ ಚಾತುರ್ವರ್ಣ್ಯದ ಏರ್ಪಾಡನ್ನು ದೇವರೇ ಏರ್ಪಡಿಸಿದ ಹಾಗೂ ಅದನ್ನು ಗುಣ ಕರ್ಮಗಳನ್ನೇ ಅವಲಂಬಿಸಿ ವಿಂಗಡಿಸಿ ರಚಿಸಿರುವ ಹಾಗೂ "ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ ||" ೪.೧೩. ಎಂಬ ಈ ವಾಕ್ಯದಿಂದ ಗೊತ್ತಾಗುತ್ತದೆ. ಆದರೆ ಈಗಿನ ವ್ಯಾಖ್ಯಾನಕಾರರಲ್ಲಿ ಹಲವರು ಗುಣ ಕರ್ಮಗಳಿಂದಲೇ ವರ್ಣ ವಿಭಾಗವು ಏರ್ಪಟ್ಟಿದೆಯೇ ಹೊರತು ಜನ್ಮದಿಂದ ಅಲ್ಲವೆಂದು ಸುಪ್ರಸಿದ್ಧ ತತ್ವಶಾಸ್ತ್ರವೇತ್ತರೂ ದೊಡ್ಡವರೂ ವಿವರಿಸಿರುತ್ತಾರೆ. ಆದರೂ ಇದು ಗೀತಾ ತಾತ್ಪರ್ಯವೆಂದು ಒಪ್ಪಲಾಗದು ಎಂದು ಹೇಳಬೇಕಾಗಿದೆ. ಏಕೆಂದರೆ ಈ ಗುಣಕರ್ಮಗಳು "ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವ ಆಶಯಾತ್ ||" ೧೫.೮ "ತತ್ರತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಂ|| ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ||" ೬.೪೩. ಎಂದು ಹೇಳಿರುವುದರಿಂದ ಗುಣಕರ್ಮಗಳಲ್ಲಿ, ವಿಶೇಷವಾಗಿ ಗುಣಗಳಲ್ಲಿ ಕೆಲವಾದರೂ ಆನುವಂಶಿಕವಾಗಿ ಬಂದಿರಬೇಕೆಂಬ ಅಂಶವನ್ನು ಗೀತೆಯೇ ತಿಳಿಸುತ್ತದೆ. ಆದುದರಿಂದ ವರ್ಣ ವಿಭಾಗದಲ್ಲಿ ಜನ್ಮ ಗುಣ ಕರ್ಮಗಳು ಮೂರೂ ಸೇರಿರುತ್ತವೆಯಾಗಿ ಚಾತುರ್ವರ್ಣ್ಯದ ವಿಂಗಡಣೆಯು ಸ್ವಾಭಾವಿಕವಾದುದೇ ಹೊರತು ಸ್ವಾರ್ಥಪರರಾದ ಕೆಲವರಿಂದ ಕಲ್ಪಿಸಲ್ಪಟ್ಟ ಏರ್ಪಾಡೆಂದು ಹೇಳುವುದಕ್ಕೆ ಗೀತಾ ವಾಕ್ಯವೇ ವಿರೋಧವಾಗಿದೆ ಎಂಬ ಅಂಶವನ್ನು ನೆನಪಿನಲ್ಲಿಡಬೇಕಾದುದು ನ್ಯಾಯುವಾಗಿರುತ್ತದೆ.

ಐದನೆಯ ಅಧ್ಯಾಯದಲ್ಲಿ ಕರ್ಮದ ಅನುಷ್ಠಾನಕ್ಕೆ ಸಮಬುದ್ಧಿಯೂ ಈಶ್ವರಾರ್ಪಣವೂ ಸೇರಿದ್ದರೆ ಅದು ಕರ್ಮಯೋಗವೆನಿಸುತ್ತದೆ. ಇದೇ ನಿಷ್ಕಾಮ ಕರ್ಮಾಚರಣೆಯೂ ಆಗಿದೆ, ಹಾಗೆಯೇ ಸನ್ಯಾಸಕ್ಕೆ ಜ್ಞಾನವೂ, ಎಂದರೆ ಆತ್ಮನು ಅಸಂಗನೂ ಅಕರ್ತೃವೂ ಅಭೋಕ್ತೃವೂ ಅವಿಕಾರಿಯೂ, ನಿತ್ಯನೂ ಆಗಿದಾನೆ ಎಂಬ ಜ್ಞಾನವೂ ಸೇರಿದರೆ ಅದು ಸಾಂಖ್ಯವೆನಿಸುತ್ತದೆ. ಇದೇ ಜ್ಞಾನಯೋಗವು. ಈ ವಿಶ್ವಧರ್ಮವು

ಸಮದರ್ಶನದಲ್ಲಿ ಪರಿಣಮಿಸುತ್ತದೆ. ಈ ಅಂಶವನ್ನು ಹೀಗೆ ಹೇಳಿದೆ :— ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ | ಶುನಿಚೈವ ಶ್ವಪಾಕೇಚ ಪಂಡಿತಾ ಸ್ಸಮದರ್ಶಿನಃ || ೫.೧೮ ಜ್ಞಾನಾರ್ಜನೆಯಲ್ಲಿ ಎಲ್ಲರಿಗೂ ಅಧಿಕಾರವಿದೆ ಎಂದು ಗೀತೆಯು ಒಪ್ಪುತ್ತದೆ. ಈ ಸಮದರ್ಶನದ ವಿಶ್ವ ಧರ್ಮಾದರದ ಫಲವಾಗಿ ಹಿಂದು ಜನರು, ಮುಖ್ಯವಾಗಿ-ಮುಂದಾಳುಗಳಾಗಿದ್ದವರೂ ಸಹ ಬುದ್ಧದೇವನನ್ನು ದೇವರ ಅವತಾರವೆಂದು ಭಾವಿಸಿ ಅಂಗೀಕರಿಸಲು ಸಹಾಯವಾಯಿತು. ಹಿಂದುಗಳಾಗಲಿ ಮುಸಲ್ಮಾನರಾಗಲಿ, ಕ್ರಿಶ್ಚಿಯನ್ನರಾಗಲಿ ಭಕ್ತಿಯಲ್ಲಿ ಮೇಲ್ಪಾಗಿದ್ದರೆ ಅವರೆಲ್ಲರನ್ನೂ ಗೌರವಿಸುವ ಮನೋಧರ್ಮವು ಈ ಸಮದರ್ಶನದ ಸತ್ಪರಿಣಾಮವೆನ್ನಬಹುದು. ನಾನಕ್, ಕಬೀರದಾಸ್, ಕನಕದಾಸ, ರೋಹಿದಾಸ, ರಾಮಕೃಷ್ಣಪರಮಹಂಸ, ದಯಾನಂದ—ಮುಂತಾದ ಮಹನೀಯರು ಈ ಭಾರತ ಭೂಮಿಯಲ್ಲಿ ಅವತರಿಸಿ ಜನಸೇವೆಯನ್ನು ಮಾಡುವುದಕ್ಕೆ ಅನುಕೂಲ್ಯವೂ ಈ ಮನೋಭಾವದಿಂದಲೇ ಉಂಟಾಯಿತು. ಕಡೆಗೆ ಪಂಚಶೀಲತತ್ತ್ವವನ್ನು ಘೋಷಿಸಿ ಪ್ರಪಂಚದಲ್ಲಿ ಶಾಂತಿಸ್ಥಾಪನೆಗೆ ನಮ್ಮ ಮೆಚ್ಚಿನ ನಾಯಕ ಶ್ರೇಷ್ಠರಾದ ಜವಾಹರ ಲಾಲ್ ನೆಹರುರವರು ಇತರ ದೇಶಗಳ ನಾಯಕರಿಗಿಂತ ಮುಂಚೆಯೇ ಪ್ರಚೋದನವನ್ನು ಪಡೆದು ಶಾಂತಿದೂತನಾಗಿ ಸೇವೆ ಸಲ್ಲಿಸುತ್ತಿರುವುದೂ ಅವರ ಸಹಾನುಭೂತಿ ಸಹಕಾರಗಳನ್ನು ಪಡೆಯುತ್ತಿರುವುದೂ ಈ ಧಾರ್ಮಿಕ ಸಂಸ್ಕೃತಿಯ ಪ್ರಭಾವವೆಂದರೆ ತಪ್ಪಾಗಲಾರದು.

ಆರನೆಯ ಅಧ್ಯಾಯದಲ್ಲಿಯೂ ಕರ್ಮಫಲವನ್ನು ಬಯಸದೆ ಈಶ್ವರನ ಸೇವಕನೆಂಬ ಭಾವನೆಯಿಂದ, ಜನತಾ ರೂಪಿಯಾದ ಜನಾರ್ದನನ ಸೇವೆ ಎಂಬ ಭಾವನೆಯಿಂದ ಕರ್ಮವನ್ನು ಅಥವಾ ಸ್ವಧರ್ಮವನ್ನು ಆಚರಿಸುವವನು ಯೋಗಿ ಎನಿಸುತ್ತಾನೆ. ಇದರಿಂದ ಧ್ಯಾನಯೋಗಕ್ಕೆ ಅರ್ಹತೆಯುಂಟಾಗಿ ಕ್ರಮವಾಗಿ ಶ್ರೇಯೋಲಾಭವಾಗುವುದೆಂದು ತಿಳಿಯಹೇಳಿದೆ.

ಏಳನೆಯ ಅಧ್ಯಾಯದಲ್ಲಿ ಈಶ್ವರನನ್ನೇ ಆಶ್ರಯಿಸಿ ನಿಷ್ಕಾಮ ಕರ್ಮಾಚರಣೆಯನ್ನು ಮಾಡುತ್ತಿರುವವರಿಗೆ ಸಂತತವಾದ ಈಶ್ವರ ಧ್ಯಾನದಿಂದ ಈಶ್ವರನ ತತ್ವದ ಸಾಕ್ಷಾತ್ಕಾರವೂ ಆಗುತ್ತದೆ. ಈ ಈಶ್ವರನು ಚರಾಚರ, ಜೀವಜಡ, ಪರಾಪರ. ಪ್ರಕೃತಿ ರೂಪನಾಗಿಯೂ ಇದಾನೆಂಬುದು ಅನುಭವಕ್ಕೂ ಬರುತ್ತದೆ. ಹೀಗೆ ಭಕ್ತಿ, ಧ್ಯಾನ, ಜ್ಞಾನ, ಕರ್ಮಗಳಿಗೆ ಸಾಮರಸ್ಯವನ್ನು ಹೇಳಿದೆ, ಮತ್ತು

ಧರ್ಮಯುಕ್ತವಾದ ಕಾಮವು ದೇವರ ಸ್ವರೂಪ

" ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ " ೭.೧೧.

ಎಂದು ಧರ್ಮಾನುಸಾರಿಯಾದ ಕಾಮಕ್ಕೂ ದೇವರ ವಿಭೂತಿಯಷ್ಟು ಗೌರವಸ್ಥಾನವನ್ನೂ ಕೊಡಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಈ ಚರಾಚರ ಪ್ರಪಂಚದ ಸೃಷ್ಟಿಗೆ ಪ್ರಚೋದಕವಾಗಿಯೂ, ಅದರ ಸ್ಥಿತಿಗೆ ಆಧಾರ ಬೆಂಬಲವಾಗಿಯೂ ಅದರ ಕಾರ್ಯವಾದ ಮೇಲೆ ಅದರ ಉಪಸಂಹಾರಕ್ಕೆ ಕಾರಣವಾಗಿಯೂ ಇರುವ ಕರ್ಮ ಅಥವಾ ಧರ್ಮದ ಸ್ವರೂಪವನ್ನು ತಿಳಿಸಿ ಅದರಿಂದ ಆತ್ಮದರ್ಶನಲಾಭವನ್ನೂ,

" ಅಯಂ ಹಿ ಪರಮೋ ಧರ್ಮಃ ಯದ್ಯೋಗೇನಾತ್ಮದರ್ಶನಂ॥"
ಯಾಜ್ಞವಲ್ಕ್ಯ ಸ್ಮೃತಿ ೧.೮.

ಯಲ್ಲಿ ಹೇಳಿರುವಂತೆ ಸಂತತವಾಗಿ ಆತ್ಮಸ್ವರೂಪಧ್ಯಾನವನ್ನು ಮರಣ ಕಾಲದಲ್ಲಿ ಸದ್ಭಾವ ಸದ್ಗತಿಗಳಿಗೆ ಕಾರಣವೆಂದು ಹೇಳಿ, ಅದರಿಂದ ಆತ್ಮೋಪಾಸನೆಯೇ ಕಡೆಗೆ ಶ್ರೇಯಸ್ಸಿಗೂ ಕಾರಣವಾದ ಧರ್ಮವೆಂದು ವಿವರಿಸಿದೆ.

ಒಂಬತ್ತನೆಯ ಅಧ್ಯಾಯದಲ್ಲಿ

" ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ॥" ೯.೨.

ಎಂದರೆ, ಧರ್ಮದಲ್ಲಿ ಶ್ರದ್ಧಾಭಕ್ತಿಗಳುಳ್ಳ ಜನರ ಅನುಭವಕ್ಕೆ ಬರುವ ಈ ಆತ್ಮಜ್ಞಾನವು ಧರ್ಮಕ್ಕೆ ಹೊಂದಿಕೊಂಡಿದೆ. ಅಷ್ಟೇ ಅಲ್ಲದೆ ಈ ಅಧ್ಯಾಯದಲ್ಲಿ ಧರ್ಮದ ವಿಶ್ವವ್ಯಾಪ್ತಿಯನ್ನು ತಿಳಿಸಿದೆ.

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಽಪಿ ಯಾಂತಿ ಪರಾಂಗತಿಂ॥೯.೩೨.

ಗೀತೆಯು ಮಾನವ ಸಾಮಾನ್ಯರ ಉದ್ಧಾರವನ್ನು ಕರ್ತವ್ಯಧರ್ಮವನ್ನಾಗಿ ಬೋಧಿಸುತ್ತದೆ. ಅಸ್ಪೃಶ್ಯತಾ ನಿವಾರಣೆಯನ್ನು ಮಾಡಬೇಕಾದುದು ಎಲ್ಲರ ಕರ್ತವ್ಯವಾಗಿದೆ. ಮೊದಲು ಶೌಚಾಭ್ಯಾಸವೂ ವಿದ್ಯಾಭ್ಯಾಸವೂ ಆಗಬೇಕು, ಅನಂತರದಲ್ಲಿ ದೇವಾಲಯ ಪ್ರವೇಶವು ಅವರಿಗೆ, ಹರಿಜನರಿಗೆ ಹಿತಕರವಾಗುತ್ತದೆ. ಅವರು ಮೊದಲು ಸ್ವಪ್ರಯತ್ನ ಮಾಡಬೇಕು. ಇತರರು ಅವರಿಗೆ ಅಡ್ಡಿಮಾಡದೆ ಉತ್ತೇಜನವನ್ನು ಕೊಡಬೇಕು. ವೇದಾಭ್ಯಾಸಕ್ಕಿಂತ ವಿದ್ಯಾಭ್ಯಾಸವು ಅವರಿಗೆ ಹೆಚ್ಚು ಹಿತಕರವಾದುದು. ಜ್ಞಾನಾರ್ಜನೆಯಲ್ಲಿ ಅವರಿಗೂ ಸಹಾಯಮಾಡಬೇಕಾದುದು ಧರ್ಮವೆಂದು ತಿಳಿದೇ ವ್ಯಾಸರು "ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ। ಇತಿ ಭಾರತ ಮಾಖ್ಯಾನಂ ಕೃಪಯಾ ಮುನಿನಾ ಕೃತಂ॥ ಎಂಬಂತೆ ಎಲ್ಲರಿಗೂ ಸಮಾನವಾಗಿ ಉಪಯೋಗವಾಗಲೆಂದು ಪುರಾಣ ಇತಿಹಾಸಗಳನ್ನು ರಚಿಸಿ ಪ್ರಚಾರಕ್ಕೆ ತಂದರು ಎಂಬುದನ್ನು ಮರೆಯಬಾರದು. ಅಸ್ಪೃಶ್ಯತೆಯು ಪ್ರತಿಷ್ಠಾಕಾಮಿಗಳಾದ ಸ್ವಾರ್ಥಪರರಾದ ಕೆಲವರಿಂದ ಕಲ್ಪಿತವಾದುದಲ್ಲ. ಅದೂ ಸ್ವಾಭಾವಿಕವಾಗಿರುತ್ತದೆ. ಅದರ ನಿವಾರಣೆಯನ್ನು ಎಲ್ಲರೂ ಮಾಡಬೇಕಾದುದು ಧರ್ಮವೆಂದು ಗೀತೆಯೂ ತಿಳಿಸುತ್ತದೆ. ಬ್ರಾಹ್ಮಣರು ತಿಳಿವಳಿಕೆಯನ್ನು ಇತರರಿಗೆ ದೊರೆಯದಿರುವಂತೆ ಮುಚ್ಚಿಟ್ಟರೆಂದು ಇತರರು ಮಾಡುತ್ತಿರುವ ದೂಷಣೆಗೆ ಆಧಾರವಿಲ್ಲವೆಂಬುದು ಸ್ಪಷ್ಟವಾಗಿದೆ. "ಧರ್ಮಸ್ಯಫಲಮಿಚ್ಛಂತಿ ಧರ್ಮಂ ನೇಚ್ಛಂತಿ ಮಾನವಾಃ। ನ ಪಾಪಫಲಮಿಚ್ಛಂತಿ

ಪಾಪಂ ಕುರ್ವಂತಿ ಮಾನವಾಃ ॥" ಎಂಬುದು ಯಾವಾಗಲೂ ನಿಜ ವಾಗಿರುವ ಮಾತಾಗಿದೆ.

"ಅಶ್ರದ್ಧಧಾನಾಃ ಪುರುಷಾಃ ಧರ್ಮಸ್ಯಾಸ್ಯ ಪರಂತಪ।
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ॥" ೯.೩.

ಎಂದರೆ, ಈ ಆತ್ಮಜ್ಞಾನವೆಂಬ ಧರ್ಮದಲ್ಲಿ ಶ್ರದ್ಧಾ ಭಕ್ತಿಗಳಿಲ್ಲದ ಜನರು ದೇವಭಾವವೆಂಬ ಮುಕ್ತಿಯನ್ನು ಪಡೆಯದೆ, ಜನನ ಮರಣ ಗಳಿಂದ ಕೂಡಿದ ಈ ಸಂಸಾರ ಚಕ್ರದಲ್ಲಿ ಯಾತಾಯಾತಗಳ ದುಃಖಾನುಭವದಲ್ಲಿಯೇ ಇರಬೇಕಾಗುತ್ತದೆ. ಧರ್ಮಾಚರಣೆಯು ಯೋಗದಿಂದ ಈಶ್ವರ ಭಕ್ತಿಯೂ ಆತ್ಮಜ್ಞಾನವೂ ಕ್ರಮವಾಗಿ ಉಂಟಾಗುತ್ತದೆ. ಅಂತಹ ಮಾನವನೇ ಧರ್ಮಾತ್ಮನು ಎಂದೂ

"ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿ ಗಚ್ಛತಿ॥" ೯.೩೧.

ಅಂಥವನೇ ಶಾಂತಿ ಸುಖವನ್ನು ಅನುಭವಿಸುವನೆಂದು ವಿವರಿಸಿದೆ.

ಹತ್ತನೆಯ ಅಧ್ಯಾಯದಲ್ಲಿ ಕರ್ಮ, ಭಕ್ತಿ, ಧ್ಯಾನಗಳೆಂಬ ಧರ್ಮ ಗಳನ್ನು ನಿಷ್ಕಾಮವಾಗಿ ಈಶ್ವರಾರ್ಥವಾಗಿ ಆಚರಿಸುತ್ತಿದ್ದರೆ ಪರಮಾ ತ್ಮನ ವಿಶ್ವರೂಪದ ದರ್ಶನವನ್ನೂ ಪಡೆದು ಭಕ್ತಿಯೋಗದ ಫಲವನ್ನೂ ಪಡೆಯುತ್ತಾನೆ ಎಂದು ಹೇಳಿದೆ.

ಆದರ್ಶ ಧರ್ಮಾಚರಣೆಗೆ ವಿಶ್ವರೂಪದ ದರ್ಶನವೂ ಫಲ.

ಹನ್ನೊಂದನೆಯ ಅಧ್ಯಾಯದಲ್ಲಿ ಹಿಂದೆ ಹೇಳಿದಂತೆಯೇ ವಿಭೂತಿ ವಿಶೇಷಗಳಲ್ಲಿ ಈಶ್ವರೋಪಾಸನೆ ಎಂಬ ಧರ್ಮದ ಆಚರಣೆಯಿಂದ ಪರಮಾತ್ಮನ ವಿಶ್ವ ರೂಪದ ಸಾಕ್ಷಾತ್ಕಾರವು ದೊರೆಯುತ್ತದೆ. ಈ ಲೋಕದಲ್ಲಿರುವ ಎಲ್ಲ ಮತಗಳಲ್ಲಿಯೂ ಹೇಳಿರುವ ಧರ್ಮಗಳ ಆಚರಣೆಯಿಂದ ಅವರವರಿಗೆ ದೊರೆಯುವ ಉತ್ತಮಸ್ಥಿತಿ ಎಂಬ ಮೋಕ್ಷವೂ ಇದೇ ಆಗಿರುತ್ತದೆ.

" ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ ಸನಾತನಸ್ತ್ವಂ ಪುರುಷೋ ಮತೋಮೇ ॥ " ೧೧.೧೮.

ಎಂದು ಶಾಶ್ವತವೂ, ಸನಾತನವೂ ಆಗಿರುವ ಧರ್ಮವನ್ನು ಕಾಪಾಡುತ್ತಿರುವವನೇ ದೇವರೆಂದು ತಿಳಿಸಿ ಶಾಶ್ವತ ಧರ್ಮವನ್ನು ಅದರಿಂದಾಗುವ ಫಲದೊಡನೆ ನಿರೂಪಿಸಿರುತ್ತಾರೆ. ಪರಮೇಶ್ವರನ ಮಹಾಮಹಿಮೆಯು ವ್ಯಾವಹಾರಿಕವಾದ ಈ ವಿಶ್ವರೂಪವೂ ಆಗಿದೆ. ಭಕ್ತಿಧ್ಯಾನಗಳಿಂದ ಕೂಡಿದ ಉಪಾಸನೆಯಿಂದ ಎಲ್ಲ ಭಕ್ತರಿಗೂ ಆಗುವ ಉತ್ತಮಸ್ಥಿತಿಯೂ ಇದೇ ಆಗಿದೆ ಎಂದು ವಿವರಿಸಿರುತ್ತದೆ. ಶೈವರೂ, ವೈಷ್ಣವರೂ, ಶಾಕ್ತೇಯರೂ ವರ್ಣಿಸುತ್ತಿರುವ, ಸಗುಣವೂ, ಸಾಕಾರವೂ ಆಗಿರುವ, ಪರಮಾತ್ಮನ ಅಪರ ರೂಪವಾಗಿರುವ ಇದು ಪರಬ್ರಹ್ಮತತ್ವದ ವ್ಯಾವಹಾರಿಕ ಸ್ವರೂಪವಾಗಿದೆ. ಇದನ್ನೇ ಶೈವರು ಪರಶಿವ ಉಮಾಮಹೇಶ್ವರನೆಂದೂ, ವೈಷ್ಣವರು ಪುರುಷೋತ್ತಮ ಲಕ್ಷ್ಮೀನಾರಾಯಣನೆಂದೂ, ಶಾಕ್ತೇಯರು ಪರಾಶಕ್ತಿ ಭುವನೇಶ್ವರೀ ದೇವೀ ಎಂದೂ ತಿಳಿಯ ಹೇಳುತ್ತಿದ್ದಾರೆ. ಈ ಸ್ವರೂಪದೊಡನೆ ಜೀವರು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾರ್ಷ್ಟಿ, ಸಾಯುಜ್ಯರೂಪವಾದ ಮುಕ್ತಿಯನ್ನು ಪಡೆಯುವುದಕ್ಕೆ

" ಮತ್ಕರ್ಮಕೃತ್ ಮತ್ಪರಮಃ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಸ್ಸರ್ವ ಭೂತೇಷು ಯಃ ಸ ಮಾಮೇತಿ ಪಾಂಡವ ॥ " ೧೧.೫೫.

ಎಲ್ಲರಿಗೂ ಈ ಸ್ವಧರ್ಮವನ್ನೇ ಸಾಧನವಾಗಿ ಹೇಳಿದೆ.

ಹನ್ನೆರಡನೆಯ ಅಧ್ಯಾಯದಲ್ಲಿ ಭಕ್ತಿಯೋಗದಿಂದ ಎಂದರೆ, ಪರಮೇಶ್ವರನ ಅರ್ಚನೆ, ಧ್ಯಾನ, ಈಶ್ವರನು ವಿಶ್ವರೂಪಿಯಾಗಿರುವುದರಿಂದ ಜನತಾಸೇವೆ, ಪ್ರಾಣಿಹಿತಾಚರಣೆ ಇವೇ ಮುಂತಾದ ವಿಶ್ವಧರ್ಮಗಳ ಆಚರಣೆಯಿಂದ, ಫಲದಲ್ಲಿ ಆಶೆಯನ್ನಿಡದೆ ಕರ್ಮಗಳನ್ನು ಈಶ್ವರಾರ್ಥವಾಗಿ ಮಾಡುತ್ತಿರುವುದರಿಂದ, ಚಿತ್ತಶುದ್ಧಿ ಜ್ಞಾನಪ್ರಾಪ್ತಿಗಳ ಮೂಲಕ ಧಾರ್ಮಿಕರಾದ ಭಕ್ತರು ಪರಮೇಶ್ವರನಿಗೆ ಪ್ರಿಯರಾಗುವರೆಂದೂ ಉಪದೇಶಿಸಿ

"ಯೇತುಧರ್ಮ್ಯಾಮೃತ ಮಿದಂ ಯಥೋಕ್ತಂ ಪರ್ಯುಪಾಸತೇ।"

ಇಂತಹ ಭಕ್ತಿಯಿಂದ ಕೂಡಿದ ಉಪಾಸನೆಯಲ್ಲಿ ಆಸಕ್ತರಾಗಿರುವ ಧರ್ಮನಿಷ್ಠರಿಗೆ ಶ್ರೇಯೋಲಾಭವಾಗುತ್ತದೆ ಎಂದು ತಿಳಿಯ ಹೇಳಿದೆ.

ಅಮಾನಿತ್ವಾದಿ ಧರ್ಮಗಳು.

ಹದಿಮೂರನೆಯ ಅಧ್ಯಾಯದಲ್ಲಿ ಭಗವಂತನ ಪರಾಪರ ಪ್ರಕೃತಿಗಳಲ್ಲಿ ಚೇತನರೂಪವೂ, ಸಮರೂಪವೂ, ಬ್ರಹ್ಮರೂಪವೂ ಆಗಿರುವ ಪರಪ್ರಕೃತಿಯೇ ಆತ್ಮನ ಸ್ವರೂಪವು. ಪರಮ ಧರ್ಮರೂಪವಾದ ಈ ಆತ್ಮಜ್ಞಾನಕ್ಕೆ ಸಾಧನವಾಗಿರುವ ಅಮಾನಿತ್ವಾದಿ ಧರ್ಮಗಳನ್ನು ಸಂಪಾದಿಸಿಕೊಂಡಿರುವವರಿಗೆ ಕ್ಷೇತ್ರ ಕ್ಷೇತ್ರಜ್ಞ ಸ್ವರೂಪ ವಿಚಾರದಿಂದ ಆತ್ಮಾನುಭವವಾಗುತ್ತದೆ ಎಂದು ತಿಳಿಯ ಹೇಳಿದೆ.

ಹದಿನಾಲ್ಕನೆಯ ಅಧ್ಯಾಯದಲ್ಲಿ ಹಿಂದೆ ಹೇಳಿದ ಅಮಾನಿತ್ವಾದಿ ಧರ್ಮಗಳನ್ನು ಆಚರಿಸಿದವರು ಉಪಾಸ್ಯ ದೇವತಾ ಸಾಧರ್ಮ್ಯವನ್ನೂ ಸಾರೂಪ್ಯವನ್ನೂ ಹೊಂದುತ್ತಾರೆ. ಪ್ರಕೃತಿಯ ಗುಣತ್ರಯದ ಸ್ವರೂಪವನ್ನು ತಿಳಿಯುವುದೂ ಆತ್ಮನು ಅಸಂಗನೆಂದು ತಿಳಿಯುವುದೂ ಗುಣಾತೀತ ಸ್ಥಿತಿಯನ್ನು ಪಡೆಯಲು ಸಾಧನವಾಗುತ್ತದೆ.

"ಬ್ರಹ್ಮಣೋ ಹಿ ಪ್ರತಿಷ್ಠಾ ಅಹಂ ಅಮೃತಸ್ಯಾವ್ಯಯಸ್ಯ ಚ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ॥" ೧೪.೨೭.

ಅಮೃತವೂ, ನಾಶರಹಿತವೂ, ಅವ್ಯಯವೂ ವಿಕಾರವಿಲ್ಲದ್ದೂ ಆಗಿರುವ ಬ್ರಹ್ಮಕ್ಕೆ ನಾನು ಪ್ರತ್ಯಗಾತ್ಮನಾಗಿರುತ್ತಾ ಆಶ್ರಯನಾಗಿದ್ದೇನೆ. ಶಾಶ್ವತವಾದ ಧರ್ಮಕ್ಕೂ, ಜ್ಞಾನಯೋಗದಿಂದ ದೊರಕಬೇಕಾದ, ಸ್ವಲ್ಪವೂ ಬೇರ್ಪಡದ ಆನಂದ ರೂಪವಾದ ಸುಖಕ್ಕೂ ನಾನೇ ಆಶ್ರಯನು. ಧರ್ಮವೆಂದರೆ ಪರಮಾತ್ಮನ ಶಕ್ತಿಯು ಎಂದು ಅರ್ಥವು. ಪ್ರಪಂಚಕ್ಕೆ ಮೂಲಕಾರಣವಾದ "ಸೋಽಕಾಮಯತ" ಎಂಬ ಇಚ್ಛಾಶಕ್ತಿ; "ಸ ತಪೋಽತಪ್ಯತ" ಎಂಬ ಜ್ಞಾನಶಕ್ತಿ, "ಇದಂ ಸರ್ವ

ಮಸೃಜತ" ಎಂಬ ಕ್ರಿಯಾಶಕ್ತಿ, ಈ ಮೂರು ರೂಪವಾದ ಶಕ್ತಿಯು ಧರ್ಮರೂಪವಾದುದೆಂದು ಸೂಚಿಸುತ್ತಾ, ಪರಮಧರ್ಮವಾದ ಜ್ಞಾನ ನಿಷ್ಠಾರೂಪವಾದ ಧರ್ಮಕ್ಕೆ ಫಲವಾದ ಶಾಶ್ವತ ಸುಖಕ್ಕೆ ನಿತ್ಯಾನಂದಕ್ಕೆ ಸಹ ಆಶ್ರಯನು ಎಂದರೆ, "ಶಕ್ತಿ ಶಕ್ತಿಮತೋಃ ಧರ್ಮಧರ್ಮಿಣೋಃ ಅಭೇದಃ ಇತಿನ್ಯಾಯಾತ್" ಎಂಬಂತೆ, ನಾನೇ ಆಧಾರ ರೂಪನು ಎಂದು ಉಪದೇಶಿಸಲಾಗಿದೆ.

ಹದಿನೈದನೆಯ ಅಧ್ಯಾಯದಲ್ಲಿ ಪಾಪಾಚರಣೆಯನ್ನು ಬಿಟ್ಟು ನಿಷ್ಕಾಮವಾದ ಯಜ್ಞದಾನ ತಪಸ್ಸುಗಳೆಂಬ ಧರ್ಮಾಚರಣೆಯಿಂದ ಚಿತ್ತಶುದ್ಧಿಯಾಗಲು, ಆತ್ಮನು ಬ್ರಹ್ಮವೃಕ್ಷದಲ್ಲಿನ ಕ್ಷರಾಕ್ಷರಗಳನ್ನು ದಾಟಿ ಸರ್ವಾತ್ಮಭಾವವನ್ನು ಪಡೆದು, ಪುರುಷೋತ್ತಮ ಸ್ವರೂಪನೂ ಆಗುತ್ತಾನೆಂದು ತಿಳಿಸಿದೆ.

ಹದಿನಾರನೆಯ ಅಧ್ಯಾಯದಲ್ಲಿ—

"ಇದಮದ್ಯ ಮದ್ಯ ಮಯಾ ಲಬ್ಧಂ ಇದಂ ಪ್ರಾಪ್ಸ್ಯೇ ಮನೋರಥಂ।" ೧೬.೧೩.

**ಸ್ವಧರ್ಮಾಚರಣದಿಂದ ದೈವೀ ಸಂಪತ್ತು.**

ಎಂದು ಮುಂತಾಗಿ ವರ್ಣಿಸಿರುವ ಆಸುರಸಂಪತ್ತಿನ ದಂಬಾಚಾರದ ಅಧರ್ಮಗಳನ್ನು ಹುಟ್ಟಡಗಿಸಿ, ಅಭಯ ಮುಂತಾದ ದೈವಸಂಪತ್ತಿನ ಧರ್ಮಗಳನ್ನು ಬೆಳೆಸಿ, ಸ್ವಕರ್ಮದಿಂದ ಎಂದರೆ, ನಿಷ್ಕಾಮ ಧರ್ಮಾಚರಣೆಯಿಂದ ಕ್ರಮವಾಗಿ ಕಡೆಗೆ ಮೋಕ್ಷಲಾಭವೂ ಆಗುತ್ತದೆಂದು ಬೋಧಿಸಿರುತ್ತದೆ.

"ಅಭಯಂ ಸತ್ವಸಂಶುದ್ಧಿಃ ಜ್ಞಾನಯೋಗವ್ಯವಸ್ಥಿತಿಃ।
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ॥" ೧೬.೧.

ಎಂದು ಮುಂತಾದುವೇ ದೈವೀಸಂಪತ್ತಿನ ಧರ್ಮಗಳಾಗಿವೆ ಎಂದೂ ತಿಳಿಸಿದೆ. ಹೀಗೆ ಅಧರ್ಮಗಳನ್ನು ಬಿಟ್ಟು ಧರ್ಮಗಳನ್ನು ಆಚರಿಸುತ್ತಿದ್ದರೆ ಎಲ್ಲ ಪುರುಷಾರ್ಥಗಳ ಸಾಧನೆಯೂ ನೆರವೇರುತ್ತದೆ ಎಂದು ತಿಳಿಸಿದೆ.

ಹದಿನೆಂಟನೆಯ ಅಧ್ಯಾಯದಲ್ಲಿ ಉಪಸಂಹಾರವೆಂಬ ತಾತ್ಪರ್ಯ ಗ್ರಾಹಕ ಲಿಂಗವನ್ನೂ ಹೆಚ್ಚು ವ್ಯಕ್ತವಾಗಿಯೇ ಕಾಣಬಹುದು. ಇದುವರೆಗೆ ಅನೇಕಾವೃತ್ತಿ ವಿವರಿಸಿದ್ದ ಧರ್ಮವಿಚಾರವೆಲ್ಲವನ್ನೂ ಸಂಗ್ರಹಿಸಿ ಕಡೆಗೆ ಧರ್ಮಮುದ್ರೆಯನ್ನೂ ಇಟ್ಟು ತಿಳಿಸಿದೆ.

ಉಪಸಂಹಾರವೆಂಬ ಲಿಂಗದಿಂದಲೂ ಗೀತೆಯು ಧರ್ಮಶಾಸ್ತ್ರ.

"ಶರೀರವಾಙ್ಮನೋಭಿರ್ಯತ್ ಕರ್ಮ ಪ್ರಾರಭತೇ ನರಃ।
ನ್ಯಾಯ್ಯಂವಾ ವಿಪರೀತಂವಾ ಪಂಚೈತೇ ತಸ್ಯ ಹೇತವಃ॥" ೧೮ ೧೫.

ಎಂಬಂತೆ ನಾವು ಮಾಡುವ ಎಲ್ಲ ಕರ್ಮಗಳಿಗೂ, ಎಂದರೆ ಸತ್ಕರ್ಮ, ದುಷ್ಕರ್ಮ, ಉದಾಸೀನಕರ್ಮ, ಇವೆಲ್ಲಕ್ಕೂ ಈ ಐದೂ ಕಾರಣಗಳಾಗಿರುತ್ತವೆ. ಯಾವುವೆಂದರೆ,

"ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ।
ವಿವಿಧಾಶ್ಚ ಪೃಥಕ್‌ಚೇಷ್ಟಾಃ ದೈವಂ ಚೈವಾತ್ರ ಪಂಚಮಂ॥" ೧೮.೧೪.

ಶರೀರ, ಇಂದ್ರಿಯಗಳು, ಕರ್ತೃ (ಜೀವ), ವ್ಯಾಪಾರ, ದೈವ, ಇವಿಷ್ಟೂ ಕರ್ಮಗಳಿಗೆ ಸಾಮಾನ್ಯ ಕಾರಣಗಳು. ಈ ಕರ್ಮಗಳಲ್ಲಿ ಉದಾಸೀನ ಕರ್ಮಗಳು ನಿಷ್ಫಲಗಳು. ವ್ಯರ್ಥವಾಗಿ ಕಾಲಹರಣವಾಗುತ್ತದೆ. ಶರೀರಯಾತ್ರಾರ್ಥವಾದ ಕರ್ಮಗಳು ದೇಹರಕ್ಷಣೆ ಮಾತ್ರದಲ್ಲೇ ಪರ್ಯವಸಾನವನ್ನು ಹೊಂದುತ್ತವೆ. ದುಷ್ಕರ್ಮಗಳು ದುಃಖಕರವಾದ ಫಲಗಳನ್ನು ಕೊಡುತ್ತವೆ. ವಿವೇಕಿಯಾದವನು ಈ ಮೂರು ಬಗೆಯ ಕರ್ಮಗಳನ್ನೂ ಬಿಡುತ್ತಾನೆ. ಸತ್ಕರ್ಮಗಳೇ ಧರ್ಮಗಳೆನಿಸಿಕೊಂಡು ಸುಖಕರವಾದ ಫಲಗಳನ್ನು ಕೊಡುತ್ತವೆ. ಈ ಧರ್ಮಗಳನ್ನು ಫಲದಲ್ಲಿ ಆಶೆಯುಳ್ಳವನಾಗಿ ಆಚರಿಸಿದರೆ ಅವುಗಳ ಫಲಗಳಿಂದ ಸುಖದುಃಖಗಳನ್ನು ಅನುಭವಿಸಲೇಬೇಕಾಗುತ್ತದೆ. ಅಷ್ಟೇ ಅಲ್ಲದೆ ಜನನ ಮರಣಗಳ ಪರಂಪರೆ ಎಂಬ ಸಂಸಾರವು ಅನಂತವಾಗುತ್ತಾ ಹೋಗುತ್ತದೆ. ಇದರಲ್ಲಿ ವಿವೇಕಿಯಾದ ಮುಂದಾ

ಲೋಚನೆಯುಳ್ಳ ಜನರಿಗೆ ಬೇಸರ ಉಂಟಾಗುವುದು ಸ್ವಾಭಾವಿಕ ವಾಗಿರುತ್ತದೆ. ಏಕೆಂದರೆ ಈ ಜನನ, ಮರಣ, ಸುಖಾಭಾಸ, ದುಃಖಗಳ ಅನುಭವವು ಅನಿವಾರ್ಯವಾಗಿ ಕಡೆಗೆ ದುಃಖದಲ್ಲಿಯೇ ಪರ್ಯವಸಾನವಾಗುತ್ತದೆ. ಇದನ್ನು ಮನಗಂಡ ವಿವೇಕಿಯು ಸಂಸಾರ ದಲ್ಲಿ ದೊರೆಯಬಹುದಾದ ಎಲ್ಲ ಫಲಗಳಲ್ಲೂ ಅನಿವಾರ್ಯವಾಗಿ ಅವಿ ಶುದ್ಧಿ, ಕ್ಷಯ, ಅತಿಶಯ ಎಂಬ ದೋಷಗಳು ಇದ್ದೇ ಇರುತ್ತವಾದುದ ರಿಂದ ಈ ಸಂಸಾರದಲ್ಲಿ ವಿರಕ್ತನಾಗುತ್ತಾನೆ. ನಿತ್ಯನಿರ್ದುಷ್ಟ ನಿರತಿ ಶಯ ಸುಖವನ್ನುಂಟುಮಾಡುವ ಕರ್ಮಗಳಿವೆಯೇ ? ಎಂದು ವಿಚಾರಿ ಸುತ್ತಾನೆ. ಶರೀರವುಳ್ಳವನಿಗೆ ಕರ್ಮಾಚರಣೆಯು ಅನಿವಾರ್ಯ ವಾಗಿರುವುದರಿಂದ ಕರ್ಮ ಫಲದಲ್ಲಿ ಆಶೆಯನ್ನು ಬಿಟ್ಟು ಕರ್ಮಾಚರಣೆ ಯನ್ನು ಮಾಡುವುದು ಒಂದೇ ಮಾರ್ಗವೆಂದು ಶಾಸ್ತ್ರೋಪದೇಶ, ಗುರೂ ಪದೇಶಗಳಿಂದ ಮನಗಾಣುತ್ತಾನೆ. ಆಮೇಲೆ ಇಂತಹ ಜ್ಞಾನಿಯು ಫಲಾಶೆ, ಅಹಂಕಾರ, ಮಮಕಾರಗಳನ್ನು ಬಿಟ್ಟು ಕೇವಲ ಲೋಕ ಸಂಗ್ರಹಾರ್ಥವಾಗಿ ಈಶ್ವರ ಪ್ರೀತ್ಯರ್ಥವಾಗಿ, ಈಶ್ವರನ ಅರ್ಪಣೆ ಎಂಬ ಬುದ್ಧಿಯಿಂದ, ಈಶ್ವರಸೇವೆ ಎಂಬ ಮನೋಭಾವದೊಡನೆ ಕರ್ಮಗಳನ್ನು ಎಂದರೆ, ವರ್ಣಾಶ್ರಮ ಧರ್ಮಗಳನ್ನು ಮಾಡುತ್ತಿರು ತ್ತಾನೆ. ಇದರಿಂದ ಚಿತ್ತವು ಶುದ್ಧವಾಗುತ್ತದೆ. ಹೇಗೆಂದರೆ ಚಿತ್ತದ ಮಲಗಳಾದ ರಾಗದ್ವೇಷಗಳ ಪೈಕಿ ಹೊಸ ಆಸೆಗಳು ಬಂದು ಸೇರದೆ ಹೋಗುವುದರಿಂದ ಚಿತ್ತಮಲವು ಹೆಚ್ಚುವುದು ನಿಂತುಹೋಗು ತ್ತದೆ. ಮುಂಚೆ ಸೇರಿದ್ದ ರಾಗದ್ವೇಷಮಲಗಳು ಅನುಭವದಿಂದಲೂ, ಜ್ಞಾನದಿಂದಲೂ ಹುರಿದ ಬೀಜಗಳಂತಾಗಿ ಸುಖ ದುಃಖಗಳನ್ನುಂಟು ಮಾಡಲಾರದೆ ನಷ್ಟವಾಗುತ್ತವೆ. ಹೀಗೆ ಚಿತ್ತವು ರಾಗದ್ವೇಷಗಳಿಲ್ಲದೆ ಶುದ್ಧವಾಗುತ್ತದೆ. ಆತ್ಮನು ಅಸಂಗನಾದುದರಿಂದ ಅವನ ಸ್ವರೂಪವು, ಎಂದರೆ ಸಚ್ಚಿದಾನಂದ ರೂಪವು ಉಪಾಧಿನೈರ್ಮಲ್ಯದಿಂದ ಮತ್ತು ಜ್ಞಾನದಿಂದ ಅವಿದ್ಯಾನಾಶವೂ ಆಗುವುದರಿಂದ ಅನು ಭವಕ್ಕೆ ಬರುತ್ತದೆ. ಆಗ ಜೀವಾತ್ಮ ಪರಮಾತ್ಮರು ಸಚ್ಚಿದಾನಂದ

ರೂಪದಲ್ಲಿ ಅಭಿನ್ನರು, ಭೇದವೆಲ್ಲವೂ ಸ್ವಸ್ವರೂಪದ ಅಜ್ಞಾನ ಅಥವಾ ಅವಿದ್ಯಾ ಅಥವಾ ಮಾಯೆಯಿಂದ ತೋರುತ್ತಿದ್ದುದು ಜ್ಞಾನದಿಂದ ನಷ್ಟವಾಗಿದೆ, ಎಂಬ ಅಪರೋಕ್ಷಾನುಭವವು ಆಗುವುದೆಂಬ ಮೋಕ್ಷ ಲಾಭವಾಗುತ್ತದೆ. ಈ ಅಂಶವನ್ನು

"ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಽಪಿ ಸ ಇಮಾನ್ ಲೋಕಾನ್ ನ ಹಂತಿ ನನಿಬಧ್ಯತೇ ॥"
೧೮-೧೭

ಜ್ಞಾನದಿಂದ ಕರ್ಮ ಅಕರ್ಮವಾಗುತ್ತದೆ.

ಶಾಸ್ತ್ರೋಪದೇಶ, ಆಚಾರ್ಯೋಪದೇಶ, ಮತ್ತು ನ್ಯಾಯ ಇವುಗಳಿಂದ ಸಂಸ್ಕೃತವಾದ ಅಂತಃಕರಣವುಳ್ಳ ಜ್ಞಾನಿಗೆ ಅಹಂಕಾರ ಮಮಕಾರಗಳು ನಷ್ಟವಾಗಿರುತ್ತವೆ. ಅಹಂಪ್ರತ್ಯಯ ರೂಪವಾದ ಅಂತಃಕರಣವನ್ನೇ ನಾನು ಎಂದು ತಪ್ಪಾಗಿ ತಿಳಿದುಕೊಂಡು ವ್ಯವಹರಿಸುತ್ತಿರುವಿಕೆಯೇ ಎಲ್ಲ ಬಗೆಯ ಅನರ್ಥಗಳಿಗೂ ಕಾರಣವಾದ ಅವಿದ್ಯೆಯಾಗಿರುತ್ತದೆ. ಯಾವ ಜ್ಞಾನಿಗೆ ತನ್ನ ಉಪಾಧಿಯಾಗಿರುವ ಬುದ್ಧಿಯು ಅಂತಃಕರಣವು ಸುಖದುಃಖಗಳಿಂದ ಲಿಪ್ತವಾಗುವುದಿಲ್ಲವೋ, ಕರ್ಮಾಚರಣೆಯಿಂದ ಆಗುವ ಸಂಸ್ಕಾರದಿಂದ ಉಂಟಾಗುವ ಕ್ಲೇಶವೆಂಬ ಅನುಶಯವುಳ್ಳದ್ದಾಗುವುದಿಲ್ಲವೋ ಅಂತಹ ಜ್ಞಾನಿಯು ಹನನ ಎಂದರೆ ಈ ಲೋಕ ವ್ಯಾಪಾರಗಳನ್ನು ಮಾಡುತ್ತಿದ್ದರೂ ಸುಖದುಃಖ ಲೇಪಗಳನ್ನು ಪಡೆಯದೆ ಇರುತ್ತಾನೆ. ಅಹಂಕಾರಾಧ್ಯಾಸದಿಂದ ಕೂಡಿರುವ ರೂಪಕ್ಕಿಂತ ಬೇರೆಯಾಗಿರುವ ಸಾಕ್ಷಿಚೈತನ್ಯವೇ ತನ್ನ ಆತ್ಮನ ವಾಸ್ತವ ಸ್ವರೂಪವೆಂದು ತಿಳಿಸುವುದೇ ಎಲ್ಲ ವೇದಾಂತಶಾಸ್ತ್ರದ ಗುರಿಯಾಗಿರುತ್ತದೆ. ಇಂತಹ ಜ್ಞಾನವಾಗುವುದಕ್ಕಿಂತ ಮುಂಚೆ ಕರ್ಮವು ಪ್ರವರ್ತಕವು, ಜ್ಞಾನ ಜ್ಞಾತಾ ಜ್ಞೇಯ ಎಂಬ ತ್ರಿಪುಟಿಯ ಜ್ಞಾನವು, ಕರ್ಮಸಂಗ್ರಹವು ಕರ್ಮಕರಣ ಕರ್ತಾ ಎಂದು ಮೂರು ಬಗೆಯಾಗಿರುತ್ತಾ ಹಾನ, ದಾನ, ಉಪೇಕ್ಷಾ ಎಂಬ ಮೂರು ಬಗೆಯ ಫಲವುಳ್ಳದ್ದಾಗಿರುತ್ತದೆ. ಇದೆಲ್ಲವೂ ಪ್ರಾಕೃತವಾಗಿ

ತ್ರಿಗುಣಾತ್ಮಕವಾಗಿರುವುದರಿಂದ ಸಾತ್ವಿಕ ರಾಜಸ ತಾಮಸ ರೂಪಗಳಾಗಿರುತ್ತವೆ. ಅಲ್ಲದೆ ಇದು ಜ್ಞಾನದಲ್ಲೂ ಕರ್ಮದಲ್ಲೂ ಕರ್ತೃವಿನಲ್ಲೂ ಮೂರು ಬಗೆಯಾಗಿರುತ್ತಾ, ಹೀಗೆಯೇ ಬುದ್ಧಿಯಲ್ಲೂ ಧೃತಿಯಲ್ಲೂ ಮೂರು ಬಗೆಯಾಗಿರುತ್ತದೆ. ಹೀಗೆ ಮಾನವರನ್ನು ಅವರವರ ಸ್ವಾಭಾವಿಕವಾದ ರುಚಿ ಸಂಸ್ಕೃತಿಗಳಿಗೆ ತಕ್ಕಂತೆ ವಿಂಗಡಿಸಿ ಎಲ್ಲರೂ ಶ್ರೇಯಸ್ಸನ್ನು ಪಡೆಯಲು ಅನುಕೂಲವಾಗಲೆಂದು ಧರ್ಮಗಳನ್ನೂ ಚತುರ್ವರ್ಣಗಳನ್ನೂ ಹೇಳಿದೆ. ಈ ಧರ್ಮಗಳನ್ನು ಎಂದರೆ ಜನ್ಮ ಗುಣ ಕರ್ಮ ಇವುಗಳಿಂದ ಸ್ವಾಭಾವಿಕವಾಗಿ ಪ್ರವರ್ತಿಸುವ ಈ ಕರ್ಮಗಳನ್ನು ಇತರ ಧರ್ಮಶಾಸ್ತ್ರಗಳಂತೆ ಇಲ್ಲಿಯೂ ಹೇಳಿದೆ. ಆದರೆ

" ಯತಃ ಪ್ರವೃತ್ತಿಃ ಭೂತಾನಾಂ ಯೇನ ಸರ್ವಮಿದಂ ತತಂ |
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ‖ " ೧೮-೪೬

ಎಲ್ಲ ಭೂತಗಳಲ್ಲೂ ಅಂತರ್ಯಾಮಿಯಾಗಿರುವ ಯಾವ ಪರಮಾತ್ಮ ಚೈತನ್ಯದಿಂದ ಈ ಲೋಕದಲ್ಲಿರುವ ಎಲ್ಲ ಪ್ರಾಣಿಸಮುದಾಯವೂ ತಮ್ಮ ಕರ್ಮದಲ್ಲಿ ಪ್ರವರ್ತಿಸುತ್ತಿರುವಂತೆ ಪ್ರೇರಣೆಯಾಗುತ್ತಿರುವುದೋ, ಯಾವ ಪರಬ್ರಹ್ಮ ಚೈತನ್ಯದಿಂದ ಈ ಪ್ರಪಂಚವೆಲ್ಲವೂ ವ್ಯಾಪ್ತವಾಗಿದೆಯೋ, ಅಂತಹ ಪರಮೇಶ್ವರನನ್ನು ಎಲ್ಲರೂ ತಮ್ಮ ಸಾಮಾನ್ಯ ಮತ್ತು ವಿಶೇಷಧರ್ಮಗಳ ಆಚರಣೆಯಿಂದಲೇ ಆರಾಧಿಸುತ್ತಿರಬೇಕು. ಹೀಗೆ ಮಾಡುವುದರಿಂದ ಎಲ್ಲ ಜನರೂ ಸಿದ್ಧಿಯನ್ನು ಜ್ಞಾನನಿಷ್ಠೆಗೆ ತಕ್ಕ ಯೋಗ್ಯತೆಯನ್ನು ಪಡೆಯುತ್ತಾರೆ. ಆದ್ದರಿಂದ ಸ್ವಧರ್ಮಾಚರಣೆಯು ಎಲ್ಲರಿಗೂ ಎಲ್ಲ ಇಷ್ಟಾರ್ಥಗಳನ್ನೂ ಉಂಟು ಮಾಡುವ ಏಕಮಾತ್ರವೂ ಉತ್ತಮವೂ ಆಗಿರುವ ಸಾಧನವಾಗಿದೆ. ಆದುದರಿಂದಲೇ

" ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ |
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ‖ ೧೮-೪೭

ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ |
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ‖ "
೧೮-೪೮

ಚೆನ್ನಾಗಿ ನೆರವೇರಿಸಬಹುದಾದ ಪರಧರ್ಮಕ್ಕಿಂತಲೂ ವಿಗುಣವಾಗಿರಬಹುದಾದರೂ ತನ್ನ ಧರ್ಮವೇ ಮೇಲಾದುದು. ಸ್ವಭಾವನಿಯತವಾದ ಕರ್ಮವನ್ನು ಮಾಡುವವನು ಪಾಪವನ್ನು ಎಂದಿಗೂ ಪಡೆಯುವುದಿಲ್ಲ. ಕೌಂತೇಯನೇ, ಸಹಜವಾದ ಕರ್ಮವನ್ನು ಅದು ಸದೋಷವಾಗಿ ಕಂಡುಬರಬಹುದಾಗಿದ್ದರೂ ಬಿಡಬಾರದು. ಏಕೆಂದರೆ, ಬೆಂಕಿಯನ್ನು ಹೊಗೆಯ ಹಾಗೆ, ಎಲ್ಲ ಕರ್ಮಗಳನ್ನೂ ದೋಷವು ಆವರಿಸಿಯೇ ಇರುತ್ತದೆ. ಆದುದರಿಂದ ನಮ್ಮ ಮತಧರ್ಮಗಳಿಗಿಂತ ಇತರರ ಮತಧರ್ಮಗಳು ಮೇಲಾಗಿರುವಂತೆ ತೋರುತ್ತವೆ ಎಂದು ಮುಂತಾಗಿ ಚಾಪಲ್ಯದಿಂದ ಮತಪರಿವರ್ತನೆಗೆ ಪ್ರವರ್ತಿಸಬಾರದು. ಏಕೆಂದರೆ, ಸ್ವಧರ್ಮವನ್ನು ಬಿಟ್ಟು ಪರಧರ್ಮಾಚರಣೆಗೆ ಪ್ರಾರಂಭಿಸಿದರೆ ಕಾಲಪ್ರಯತ್ನಗಳು ಹೆಚ್ಚಾಗಿ ವ್ಯರ್ಥವಾಗುತ್ತವೆ. ಆದುದರಿಂದ ಎಲ್ಲರೂ ಸ್ವಧರ್ಮದಲ್ಲೇ ಇರಬೇಕು. ಆದರೆ ಪರಧರ್ಮಗಳಲ್ಲಿ ಕಾಣಬಹುದಾದ ಗುಣಗಳನ್ನು ಮಾತ್ರ ಪರಿಗ್ರಹಿಸಿ ಅಳವಡಿಸಿಕೊಳ್ಳುತ್ತಾ ಸ್ವಧರ್ಮವನ್ನು ಮೇಲ್ಪಡಿಸಲು ಅಡ್ಡಿ ಏನೂ ಇರುವುದಿಲ್ಲವೆಂಬುದನ್ನೂ ಮರೆಯಬಾರದು.

ನಿಷ್ಕಾಮಕರ್ಮ, ಚಿತ್ತಶುದ್ಧಿ, ಜ್ಞಾನಪ್ರಾಪ್ತಿ, ಮೋಕ್ಷ.

ಈ ಗೀತೆಯಲ್ಲಿ ಹೇಳಿರುವಂತೆ ಪ್ರವೃತ್ತಿಧರ್ಮಮಾರ್ಗ ಅಥವಾ ಸಕಾಮಕರ್ಮಾನುಷ್ಠಾನದ ಮಾರ್ಗದಿಂದ ಮಾನವರು ಇಹದಲ್ಲಿ ಅಭ್ಯುದಯ, ಸುಖ, ಶಾಂತಿಗಳನ್ನೂ, ಪರದಲ್ಲಿ ಸದ್ಗತಿಗಳನ್ನೂ, ಕಡೆಗೆ ನಿಷ್ಕಾಮಕರ್ಮಾನುಷ್ಠಾನ ಅಥವಾ ನಿವೃತ್ತಿಧರ್ಮಮಾರ್ಗವನ್ನೂ ಅನುಸರಿಸುವುದರಿಂದ ಎಲ್ಲರೂ

ಕರ್ಮಸನ್ಯಾಸಯುಕ್ತ ಜ್ಞಾನಯೋಗ.

"ನೈಷ್ಕರ್ಮ್ಯಸಿದ್ಧಿಂ ಪರಮಾಂ ಸನ್ಯಾಸೇನಾಧಿಗಚ್ಛತಿ ।" ೧೮.೪೯

ಸ್ವಧರ್ಮಾಚರಣೆಯಿಂದ ಶ್ರೇಷ್ಠವಾದ ನೈಷ್ಕರ್ಮ್ಯಸಿದ್ಧಿಯನ್ನೂ ಮಾನವನು ಪಡೆಯುತ್ತಾನೆ. ಹೇಗೆ ಎಂದರೆ ತಮ್ಮ ತಮ್ಮ ಕರ್ಮಗಳನ್ನು

ಮಾಡುತ್ತಿದ್ದರೂ ಫಲಾಶೆಯೂ, ನಾನು ಮಾಡುವವನು, ನನ್ನ ಕರ್ಮದ ಫಲವು, ಎಂಬ ಅಭಿಮಾನವೂ ಇಲ್ಲದಿರುವುದರಿಂದ ಅಂತಹ ನಿರಾಶಿಯೂ ನಿರಭಿಮಾನಿಯೂ ಮಾಡುವ ಕರ್ಮವು ಅಕರ್ಮವೇ ಆಗುತ್ತದೆ ಎಂದರೆ ಸುಖ ದುಃಖರೂಪ ಫಲವನ್ನುಂಟುಮಾಡಲಾರದಾಗಿರುತ್ತದೆ.

"ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ ॥"
೧೮-೫೦

ನೈಷ್ಕರ್ಮ್ಯ ಸಿದ್ಧಿಯನ್ನು ಪಡೆದುಕೊಂಡಿರುವವನು ಬ್ರಹ್ಮವನ್ನೂ ಪಡೆಯುತ್ತಾನೆ. ಇದೇ ಜ್ಞಾನದ ಫಲವೂ, ಉತ್ತಮ ಪುರುಷಾರ್ಥ ಲಾಭವೂ ಆಗಿರುತ್ತದೆ. ಇದೇ ಮೋಕ್ಷವು. ಆದುದರಿಂದ

"ಸರ್ವಧರ್ಮಾನ್ ಪರಿತ್ಯಜ್ಯ ಮಾ ಮೇಕಂ ಶರಣಂ ವ್ರಜ ।
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥"
೧೮-೬೬

ಎಲ್ಲ ಧರ್ಮಗಳನ್ನೂ ಅಧರ್ಮಗಳನ್ನೂ ಬಿಟ್ಟು ಎಂದರೆ ಫಲಾಶೆಯನ್ನೂ ಅಭಿಮಾನವನ್ನೂ ಬಿಟ್ಟು ಕರ್ಮಫಲ ಎರಡನ್ನೂ ನನಗೆ ಅರ್ಪಿಸುತ್ತಾ ನನ್ನನ್ನೊಬ್ಬನನ್ನೇ ಶರಣುಹೊಂದು. ಓ ಅರ್ಜುನನೇ, ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸಿ ಮೋಕ್ಷಲಾಭವಾಗುವ ಹಾಗೆ ಮಾಡುವೆನು. ದುಃಖಿಸಬೇಡ. ಸರ್ವಕರ್ಮ ಸನ್ಯಾಸಪೂರ್ವಕವಾದ ಜ್ಞಾನನಿಷ್ಠೆಯಿಂದಲೇ ಮೋಕ್ಷವಾಗುತ್ತದೆ ಎಂದು ಉಪಸಂಹಾರ ವನ್ನು ಮಾಡಿದೆ. ಕಡೆಗೆ

"ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದ ಮಾವಯೋಃ ।
ಜ್ಞಾನ ಯಜ್ಞೇನ ತೇನಾ ಹಂ ಇಷ್ಟಃ ಸ್ಯಾಮಿತಿ ಮೇ ಮತಿಃ ॥"
೧೮-೭೦

ಧರ್ಮಕ್ಕೆ ಸಂಬಂಧಪಟ್ಟಿರುವ ಎಲ್ಲ ವಿಷಯಗಳನ್ನೂ ವಿವರಿಸುತ್ತಿರುವ ಈ ಕೃಷ್ಣಾರ್ಜುನರ ಸಂವಾದ ರೂಪವಾದ, ಪ್ರಶ್ನೋತ್ತರ ರೂಪ ವಾಗಿಯೂ ಇರುವ ಈ ಗೀತೆಯನ್ನು ಯಾರು ವ್ಯಾಸಂಗಮಾಡು ತ್ತಾರೋ, ಓದುತ್ತಾರೋ, ಇತರರಿಗೂ ವಿವರಿಸುತ್ತಾರೋ, ಅವರು

ನನ್ನನ್ನು ಜ್ಞಾನಯಜ್ಞದಿಂದ ಆರಾಧಿಸಿದಂತೆ ನಾನು ತಿಳಿಯುತ್ತೇನೆ. ಎಂದು ಹೇಳಿ ಧರ್ಮ್ಯಂ ಎಂದು ಧರ್ಮ ಮುದ್ರೆಯನ್ನೂ ಇಟ್ಟು ಗೀತೆಯನ್ನು ಮುಗಿಸಿರುತ್ತದೆ.

ಗೀತೆಯ ಉಪದೇಶಗಳ ವೈಶಿಷ್ಟ್ಯ.

ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ಅತ್ಯುತ್ತಮ ಪ್ರತೀಕವಾಗಿರುವ ಈ ಭಗವದ್ಗೀತೆಯ ಹೆಚ್ಚುಗಾರಿಕೆಯನ್ನು ತಿಳಿಸುವ ಗುಣಗಳನ್ನು ಈ ಪದ್ಯದಲ್ಲಿ ಸಂಗ್ರಹಿಸಿದೆ.

ಶ್ರೀಮನ್ನಾರಾಯಣೋಕ್ತಃ ಸುಪರಮ ಪುರುಷಾರ್ಥಾಪ್ತಿಹೇತುಃ ನರಾಣಾಂ
ಆಚೀರ್ಣಃ ಶುದ್ಧಸತ್ತ್ವೈಃ ದ್ವಿಜಗುರು ಸುಜನೈಃ ಪಾತು ಗೀತೋಕ್ತಯೋಗಃ ।
ಶಾಸ್ತ್ರಾಣಾಂ ಸಾಮರಸ್ಯಾಖಿಲಮತಸಮತಾಂ ಜ್ಞಾನನಿಷ್ಠಾಂ ಜನಾನಾಂ
ತತ್ತತ್ಸಂಸ್ಕಾರ ಯೋಗ್ಯಂ ಪ್ರಗತಿಪಥಹಿತಂ ಧರ್ಮಮಾವೇದಯೇದ್ಯಃ ॥

ಮೊದಲನೆಯ ಗುಣವು ಹೀಗಿದೆ :—ಸರ್ವಜ್ಞನೂ ಕೃಪಾಳುವೂ ಆಗಿರುವ ದೇವನು ಲೋಕೋದ್ಧಾರಕ್ಕಾಗಿ ಮಾಡಿದ ಉಪದೇಶ. ಶ್ರೀಮನ್ನಾರಾಯಣನೆಂದೂ, ಮಹಾವಿಷ್ಣು, ಸತ್ವಪ್ರಧಾನ, ಜಗದ್ರಕ್ಷಕ ಪುರುಷೋತ್ತಮ ಎಂಬ ಅನ್ವರ್ಥನಾಮಗಳಿಂದ ಪ್ರಸಿದ್ಧನಾಗಿರುವ ಪರಮೇಶ್ವರನ ಅವತಾರರೂಪನಾಗಿ ಪೂಜ್ಯನಾಗಿರುವ ಶ್ರೀಕೃಷ್ಣನು ಈ ಗೀತೆಯನ್ನು, ಗಾನದಂತೆ ಮನೋಹರವಾದ, ಜನ್ಮಸಾರ್ಥಕ್ಯವನ್ನುಂಟುಮಾಡುವ ಧರ್ಮಗಳನ್ನು ಉಪದೇಶಾಮೃತವನ್ನು, ತನ್ನ ಪ್ರಿಯತಮನಾದ ಬಂಧುವೂ ಸ್ನೇಹಿತನೂ ಶಿಷ್ಯನೂ ಆಗಿರುವ ಅರ್ಜುನನಿಗೆ ಮತ್ತು ಆ ನೆಪದಿಂದಲೇ ಸಂಸಾರ ಕ್ಲೇಶದಲ್ಲಿ ಬಳಲುತ್ತಿರುವ ಜನ ಎಲ್ಲರೂ ಆಶಿಸುವ ಪುರುಷಾರ್ಥ ಸಾಧನೆಗೆ ಬೇಕಾದ ಧರ್ಮದ ಉಪದೇಶವನ್ನು ಮಾನವ ಸಾಮಾನ್ಯಕ್ಕೇ ಮಾಡಿರುವನೆಂಬುದಾಗಿದೆ ಎನ್ನಬಹುದು.

ಎರಡನೆಯದು :—ಮಾನವನು ವಿವೇಚನಾಪರನೂ ಮುಂದಾಲೋಚನೆಯುಳ್ಳವನೂ ಆಗಿರುವ ಮನುಷ್ಯನು, ಪಡೆಯಲು

ಅಪೇಕ್ಷಿಸುವ, ಪ್ರಯತ್ನಿಸಿ ಸಾಧಿಸುತ್ತಿರುವ, ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳಲ್ಲಿ ಉತ್ತಮೋತ್ತಮವಾದುದು ಮೋಕ್ಷವಾಗಿದೆ. ಅಂತಹ ನಿತ್ಯಾನಂದ ಸ್ಥಿತಿಯನ್ನು ಎಲ್ಲರೂ ಗಂಡಸರೂ ಹೆಂಗಸರೂ ಬಡವರೂ ಭಾಗ್ಯವಂತರೂ ರಾಜರೂ ಪ್ರಜೆಗಳೂ ಎಲ್ಲರೂ ಹೇಗೆ ಸಾಧಿಸಿ ಪಡೆಯಬಹುದೆಂಬುದನ್ನು ಈ ಗ್ರಂಥದಿಂದ ಹೆಚ್ಚು ಹೃದಯಂಗಮವಾಗಿ ತಿಳಿಯಬಹುದಾಗಿದೆ ಎಂಬ ಗುಣವು. ನಿತ್ಯ ಜೀವನದಲ್ಲಿ ಆಚರಿಸಲು ಸಾಧ್ಯವಾಗಿರುವ ಯೋಗ ಧರ್ಮದ ಉಪದೇಶ.

ಮೂರನೆಯದು :—ಗೀತೆಯು ಬೋಧಿಸುವ ಧರ್ಮತತ್ವವು ಕನ್ನಡಿಯೊಳಗೆ ಕಾಣುವ ಗಂಟಿನಂತೆ ಕೈಗೆ ಸಿಕ್ಕದ, ನಮ್ಮ ದಿನಗಟ್ಟಲೆಯ ವ್ಯವಹಾರಕ್ಕೆ ಹೊಂದಿಬರದ, ಕೇವಲ ಧ್ಯೇಯಮಾತ್ರವಾಗಿರುತ್ತಾ ಪ್ರೇರಿಸುತ್ತಿರಬಹುದಾದ ವಿಷಯವಲ್ಲವು. ಮತ್ತೇನೆಂದರೆ ಇದರ ಉಪದೇಶವನ್ನು ಪ್ರತಿಯೊಬ್ಬರೂ ತಿಳಿದು ಆಚರಣೆಗೆ ತಂದುಕೊಂಡು ಕೃತಾರ್ಥರಾಗಬಹುದಾಗಿರುತ್ತದೆ. ಇಂತಹ ಉದಾಹರಣೆಗಳೂ ಇವೆ. ಯಾಜ್ಞವಲ್ಕ್ಯ, ಗಾರ್ಗಿ, ಕಾತ್ಯಾಯನೀ, ಮೈತ್ರೇಯೀ, ಕನ್ಯಕಾ, ಜನಕ, ನಾರದ, ಸುಮೇಧಾಃ, ನಚೀಕೇತ, ಸುರಥ, ಸಮಾಧಿ ಮುಂತಾದ ದ್ವಿಜರೂ, ವ್ಯಾಸ, ಶುಕ, ಶಂಕರ, ರಾಮಾನುಜ, ಮಧ್ವ, ವಿದ್ಯಾರಣ್ಯ, ರೇಣುಕ, ಬಸವ, ಜಿನ, ಬುದ್ಧ, ಜರತುಷ್ಟ್ರ, ಕ್ರಿಸ್ತ, ಮಹಮದ್ ಮುಂತಾದ ಆಚಾರ್ಯರೂ ಈ ಗೀತೆಯು ಬೋಧಿಸುವ ಯೋಗವನ್ನು ಆಚರಿಸಿ ಬೋಧಿಸಿ ಪ್ರಚಾರ ಮಾಡಿರುತ್ತಾರೆ. ದೇಶಕಾಲ ಸನ್ನಿವೇಶ ವ್ಯಕ್ತಿ ಭಾಷೆಗಳು ಭಿನ್ನವಾದರೂ ನೀತಿಯೂ ತತ್ವವೂ ಸಮಾನವಾಗಿರುತ್ತವೆ. ಈ ಗೀತೆಯು ಉಪದೇಶಿಸುವ—

" ಯೇ ಯಥಾ ಮಾಂ ಪ್ರಪದ್ಯಂತೇ ತಾಂ ಸ್ತಥೈವ ಭಜಾಮ್ಯಹಂ |
ಮಮವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || " ೪-೧೧

" ಯದ್ಯದ್ವಿಭೂತಿಮತ್ ಸತ್ವಂ ಶ್ರೀಮದೂರ್ಜಿತ ಮೇವವಾ |
ತತ್ತದೇವಾವಗಚ್ಛತ್ವಂ ಮಮ ತೇಜೋಽಂಶ ಸಂಭವಂ || "

೧೦-೪೧

" ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈಃ ಮುಕ್ತೋ ಯಸ್ಸಚ ಮೇ ಪ್ರಿಯಃ ॥ "
೧೨-೧೫

" ಯೋಯೋ ಯಾಂಯಾಂ ತನೂಂ ಭಕ್ತಃ ಶ್ರದ್ಧಯಾರ್ಚಿತು ಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿಧಧಾಮ್ಯಹಂ ॥" ೭-೨೧

" ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿತಾನ್॥" ೭-೨೨

ಇಂತಹ ವಿಶಾಲವಾದ ಧಾರ್ಮಿಕ ಮನೋಭಾವವನ್ನು ಉಂಟು ಮಾಡುವ ಉಪದೇಶಗಳು ಈ ಜಗತ್ತಿನ ಇತರ ಸಾಹಿತ್ಯಗಳಲ್ಲಿ ದೊರೆಯುತ್ತಿಲ್ಲ. ಇದರಿಂದಲೇ ನಮ್ಮ ಸಂಸ್ಕೃತಿಯು ಬದುಕಿ ಊರ್ಜಿತವಾಗಿದೆ. ಅಲ್ಲದೆ ವಿದುರ, ಧರ್ಮವ್ಯಾಧ, ತುಲಸೀದಾಸ, ಪುರಂದರದಾಸ, ತ್ಯಾಗರಾಜ, ಕಬೀರ, ಕನಕ, ಕಾಳಿದಾಸ, ರವೀಂದ್ರನಾಥ ಟಾಗೂರ್, ಗಾಂಧಿ ಮುಂತಾದ ಸಾಧುಸಂತರೂ, ಸುಜನರೂ, ಕವಿಗಳೂ, ನಾಯಕರೂ ಈ ಗೀತೆಯು ತಿಳಿಸುವ ಯೋಗವನ್ನು ಆಚರಿಸಿ ಮೇಲು ಪಂಕ್ತಿಯನ್ನು ಹಾಕಿಕೊಟ್ಟು ಉಪಕರಿಸಿರುತ್ತಾರೆ. ಈ ಮೇಲೆ ಉಲ್ಲೇಖಿಸಿರುವ ಮಹನೀಯರೆಲ್ಲರೂ ಹೇಳಿರುವುದೆಲ್ಲವೂ ಪರಮ ಸಿದ್ಧಾಂತವೆಂದೂ, ಮಾಡಿರುವ ಆಚರಣೆಗಳೆಲ್ಲವೂ ಸದಾಚಾರವೆಂದೂ ಗ್ರಾಹ್ಯವೆಂದೂ ಸ್ಥಾಪಿಸಬೇಕಾಗಿಲ್ಲವು. ಬಹುಜನರಿಂದಲೂ ಬಹು ಕಾಲದಿಂದಲೂ ಮಾನ್ಯರಾಗಿರುವ ಈ ಮಹಾಪುರುಷರು ಬೋಧಿಸಿರುವ ಉಪದೇಶಗಳಲ್ಲಿ ಅನೇಕಗಳೂ ಗೀತೆಯ ಉಪದೇಶಗಳಾಗಿವೆ ಎಂದೂ, ಇವರ ಆಚರಣೆಗಳಲ್ಲಿ ಕೆಲವಾದರೂ ಗೀತೆಯೂ ಬೋಧಿಸಿರುವ ಎಲ್ಲರೂ ಅನುಸರಿಸಿ ಧನ್ಯರಾಗಬಹುದಾದ ಸದಾಚಾರಗಳೂ ಇವೆ. ಎಂಬಿಷ್ಟನ್ನು ಮಾತ್ರ ನಾವೂ ಒಪ್ಪಬೇಕು. ಈ ಅಂಶವನ್ನು ಗೀತೆಯೂ—

" ಯದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತಮೇವವಾ ।
ತತ್ತದೇವಾವ ಗಚ್ಛ ತ್ವಂ ಮಮ ತೇಜೋಽಂಶ ಸಂಭವಂ ॥"
೧೦-೪೧

ಎಂದು ಉಪದೇಶಿಸುತ್ತಿದೆ. ಹೀಗೆ ಗೀತೆಯು ಉಪದೇಶಿಸಿರುವ ಯೋಗವು ಎಲ್ಲರನ್ನೂ ಕಾಪಾಡಲಿ.

ಗೀತೆಯು ಒಂದು ವಿಶ್ವವಿದ್ಯಾಶಾಲೆಯಂತಿದೆ.

ನಾಲ್ಕನೆಯದು–ಸರ್ವಶಾಸ್ತ್ರ ಸಾಮರಸ್ಯ; ಐದನೆಯಗುಣ ಸರ್ವಮತ ಧರ್ಮಸಮತ್ವ; ಆರನೆಯದು ವಿಶ್ವಧರ್ಮ. ಇದರ ವಿವರವು ಹೀಗಿದೆ. ಈ ಲೋಕದಲ್ಲಿ ಎಲ್ಲ ಜನರೂ ಎಂದರೆ ರಾಜರೂ, ಪ್ರಜೆಗಳೂ ಗುರುಗಳೂ, ಶಿಷ್ಯರೂ, ಪಂಡಿತರೂ, ಪಾಮರರೂ, ಹೆಂಗಸರೂ, ಗಂಡಸರೂ ಎಲ್ಲರೂ ಅವರವರ ಸಂಸ್ಕೃತಿಯ ಮಟ್ಟಗಳಿಗೆ ಅನುಕೂಲವಾಗಿರುವ, ಅಭಿರುಚಿಗಳಿಗೆ ತಕ್ಕಂತೆ ಇರುವ, ಯೋಗವನ್ನು ಆರಿಸಿಕೊಂಡು ಆಚರಿಸಿ ಕೃತಾರ್ಥರಾಗಬಹುದಾದ ಧರ್ಮಗಳನ್ನು, ಪ್ರಮಾಣಶುದ್ಧವೂ ಕ್ರಮಬದ್ಧವೂ ಅನುಭವಸಿದ್ಧವೂ ಆಗಿರುವ ಧರ್ಮಗಳನ್ನು ಈ ಗೀತೆಯು ಉಪದೇಶಿಸುತ್ತಿದೆ. ಈ ದೃಷ್ಟಿಯಿಂದ ನೋಡಿದರೆ ಗೀತೆಯು ಒಂದು ದೊಡ್ಡ ವಿಶ್ವವಿದ್ಯಾಶಾಲೆಯಂತಿದೆ. ಪಾಠಶಾಲೆಗಳಲ್ಲಿ ಒಂದೇ ತರಗತಿಯು ಇರುವುದಿಲ್ಲವು. ಅಲ್ಲಿ ಅನೇಕ ತರಗತಿಗಳಿರುತ್ತವೆ. ಅಕ್ಷರಾಭ್ಯಾಸದಿಂದ ಮೊದಲುಮಾಡಿ M.S., L.S., S.S.L.C., Inter, B.A., M.A. ಎಂದರೆ, ಪ್ರಾಥಮಿಕ, ಮಾಧ್ಯಮಿಕ, ಪ್ರೌಢ, ವಿದ್ವತ್, ಮಹಾವಿದ್ವತ್ ಮುಂತಾದ ತರಗತಿಗಳೆಲ್ಲವೂ ಇರುತ್ತವೆ. ಹಾಗೆ ಇರಲೂ ಬೇಕು. ಹಾಗಿಲ್ಲದಿದ್ದರೆ ಎಲ್ಲ ವಿದ್ಯಾರ್ಥಿಗಳ ವ್ಯಾಸಂಗಕ್ಕೂ ಮುಂದುವರಿಯುವಿಕೆಗೂ ಅನುಕೂಲ್ಯವು ದೊರೆಯದೇ ಹೋಗುತ್ತದೆ. ಏಕೆಂದರೆ, ವಿದ್ಯಾರ್ಥಿಗಳೆಲ್ಲರೂ ಒಂದೇ ಮಟ್ಟದ ಸಂಸ್ಕೃತಿ, ಶಕ್ತಿ, ಯೋಗ್ಯತೆ, ಅಭಿರುಚಿಗಳನ್ನು ಹೊಂದಿರುವುದಿಲ್ಲ. ಆದುದರಿಂದ ಎಲ್ಲರಿಗೂ ಶಿಕ್ಷಣವು ದೊರೆಯಬೇಕಾದರೆ ಅನೇಕ ತರಗತಿಗಳಿರಬೇಕು. ಇಲ್ಲದಿದ್ದರೆ ಕೆಲವರು ಮಾತ್ರ ವಿದ್ಯಾವ್ಯಾಸಂಗ ಮಾಡಲು ಅವಕಾಶವು ದೊರೆತು, ಇತರ ಅನೇಕರ ಕಾಲಪ್ರಯತ್ನಗಳು ವ್ಯರ್ಥವಾಗಿ ಒಟ್ಟಿನಲ್ಲಿ ಜನರ ಪ್ರಗತಿ ಪುರೋಭಿವೃದ್ಧಿಗಳಿಗೆ ಕುಂದುಂಟಾಗುತ್ತದೆ.

ಅದರಂತೆಯೇ ಆ ಉದ್ದೇಶದಿಂದಲೇ ಗೀತೆಯಲ್ಲೂ ಅನೇಕ ಯೋಗಗಳನ್ನು ಎಂದರೆ ಧರ್ಮಗಳನ್ನು ಉಪದೇಶಿಸಿದೆ.

ಯೋಗದ ಸ್ವರೂಪ.

ಯೋಗವೆಂದರೆ ನಾವು ಮಾಡುತ್ತಿರುವ ಕೆಲಸಗಳಲ್ಲಿ ಧರ್ಮಕರ್ಮಗಳಲ್ಲಿ ತೋರಿಸುವ, ತೋರಿಸಬೇಕಾದ ಜಾಣತನಕ್ಕೆ, ಎಂದರೆ ಮಾಡಲೇಬೇಕಾಗಿರುವ ಕರ್ಮವನ್ನು ಮಾಡಿದರೂ ಅದರ ಫಲಗಳಾದ ಸುಖದುಃಖಗಳು ನಮಗೆ ತಗಲದಂತೆ ಇರಲು ನಿಷ್ಕಾಮನಾಗಿರುವಿಕೆಗೆ ಯೋಗವೆಂದು ಅರ್ಥವು; ಮತ್ತು ಇದು "ಯೋಗಃ ಕರ್ಮಸುಕೌಶಲಂ |" ೨.೫೦. ಎಂಬ ಗೀತಾವಾಕ್ಯದಿಂದಲೇ ಗೊತ್ತಾಗುತ್ತದೆ. ಅಲ್ಲದೆ "ಸಮತ್ವಂ ಯೋಗಉಚ್ಯತೇ |" ೨.೪೮. ಎಂಬ ಗೀತಾವಾಕ್ಯದಿಂದ ನಾವು ಮಾಡುವ ಕೆಲಸಗಳು ಜಯಿಸಿ ಸಫಲವಾದರೂ, ಅಥವಾ ಅವು ನಿಷ್ಫಲವಾದಂತಾಗಿ ಸೋಲಾದರೂ ನಮ್ಮ ಮನಸ್ಸನ್ನು ಒಂದೇ ಸಮಾಧಾನ ಸ್ಥಿತಿಯಲ್ಲಿಟ್ಟುಕೊಂಡಿರುವಿಕೆಗೂ ಯೋಗವೆಂದು ಅರ್ಥವಾಗುತ್ತದೆ. ಎಂದರೆ ನಮ್ಮ ಪ್ರಯತ್ನದಿಂದ ನಮ್ಮ ಉದ್ದೇಶವು ಕೈಗೂಡಿದಾಗ ನಾವು ಹಿಗ್ಗಿ ಮೆರೆಯುತ್ತಾ ಜಯ ಮತ್ತು ಲಾಭಗಳಿಂದ ಉಂಟಾಗುವ ಅಹಂಕಾರದಿಂದ ದೇವರಲ್ಲಿ ಔದಾಸೀನ್ಯವನ್ನೂ ಧರ್ಮದಲ್ಲಿ ಅನಾದರವನ್ನೂ ತೋರಿಸುತ್ತಾ ಅನಾರ್ಯ ರೀತಿಯಲ್ಲಿ ವರ್ತಿಸುವಂತಾಗಲು ಅವಕಾಶವನ್ನು ಕೊಟ್ಟು ನಮ್ಮ ಮನಸ್ಸನ್ನು ಸ್ವೇಚ್ಛೆಯಿಂದ ನುಗ್ಗಲು ಬಿಡಬಾರದು. ಹಾಗೆಯೇ ನಮ್ಮ ಪ್ರಯತ್ನವು ಸಿದ್ಧಿಸದೆ ಸೋಲಾದಾಗ ನಮ್ಮ ಕಾಲ ಮತ್ತು ಶಕ್ತಿಗಳು ವ್ಯರ್ಥವಾದಾಗ ಅರ್ಥ ಹಾನಿ ಮಾನಹಾನಿಗಳಿಂದ ದುಃಖಿತರಾಗಿ ಕುಗ್ಗಿ ಕೊರಗಿ ಸೊರಗಿ ದೇವರನ್ನು ನಿಂದಿಸುತ್ತಾ, ಧರ್ಮದಲ್ಲಿ ಆಸಕ್ತಿಯನ್ನು ಬಿಡುತ್ತಾ, ನಿರೀಕ್ಷಣೆ ಭರವಸೆಗಳನ್ನೂ ಕಳೆದುಕೊಂಡು ಚಟುವಟಿಕೆಯನ್ನೂ ಬಿಟ್ಟು ತಲೆಯಮೇಲೆ ಕೈಯಿಟ್ಟುಕೊಂಡು ದುಃಖಿಸುತ್ತಾ ಕೂತಿರಲು ಮನಸ್ಸನ್ನು ಬಿಡಬಾರದು ಎಂದು ತಿಳಿಯಬೇಕು. ಕರ್ಮವನ್ನು ಮಾಡುವಾಗ ಫಲದಲ್ಲಿ

ಆಶೆಯನ್ನು ಇಡದೆ, ಅದು ದೇವರ ಅಪ್ಪಣೆಯೆಂದೂ, ದೇವರ ಸೇವಕನಾದ ನಾನು ಅವನ ಅಪ್ಪಣೆಯನ್ನು ನೆರವೇರಿಸುವುದೇ ನನ್ನ ಕರ್ತವ್ಯ ಧರ್ಮವೆಂದೂ, ಫಲವನ್ನು ದೇವರಿಗೆ ಸಮರ್ಪಿಸಿ ತನ್ನದೆಂಬ ಅಭಿಮಾನವನ್ನು ಬಿಟ್ಟು ಕರ್ಮವನ್ನು ಮಾಡುತ್ತಿರಬೇಕೆಂದು ಇದರಿಂದ ಗೊತ್ತಾಗುತ್ತದೆ.

ಗೀತಾವ್ಯಾಸಂಗದಿಂದ ಶಾಸ್ತ್ರಗಳ ಎಂದರೆ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸಾ, ವೇದಾಂತ ಶಾಸ್ತ್ರಗಳ, ಆರು ದರ್ಶನಗಳ ಮತ್ತು ಇತರರ ಮತಧರ್ಮಶಾಸ್ತ್ರಗಳ ಎಂದರೆ ಜರತುಷ್ಟ್ರ, ಜೈನ, ಬೌದ್ಧ ಮತ್ತು ಈಚಿನ ಬ್ರಹ್ಮಸಮಾಜ, ಆರ್ಯ ಸಮಾಜ, ಥಿಯಾಸಫಿ, ರಾಮಕೃಷ್ಣ ಸಂಘ ಧರ್ಮ, ದ್ವೈತ, ವಿಶಿಷ್ಟಾದ್ವೈತ, ಶಾಕ್ತೇಯ ದರ್ಶನ, ಇವುಗಳಲ್ಲೆಲ್ಲ ಇರುವ ಸಮಾನವಾದ ಧರ್ಮಗಳನ್ನು ಗ್ರಹಿಸುವ ಅಭಿನಂದಿಸುವ ಮತ್ತು ಉತ್ತಮ ಭಾವಗಳನ್ನು ಸ್ವೀಕರಿಸುವಷ್ಟು ಮನೋವೈಶಾಲ್ಯವನ್ನೂ ನಾವು ಪಡೆಯುತ್ತೇವೆ. ಎಲ್ಲ ಮತಧರ್ಮಗಳೂ ದೇವರನ್ನು ಕಾಣುವ ಮಾರ್ಗಗಳೆಂದು ಉದಾರ ಹೃದಯದಿಂದ ಗುರುತಿಸುವ ಪರಮತ ಸಹನೆ ಗೌರವಗಳು ನಮ್ಮಲ್ಲೂ ಉಂಟಾಗುತ್ತದೆ. ಜ್ಞಾನವೇ ಮಾನವನ ಮೇಲ್ಮೆಗೆ ಏಕಮಾತ್ರ ಸಾಧನವೆಂದು ಗೊತ್ತಾಗಿ ಜನರೆಲ್ಲರೂ ತಮ್ಮ ತಮ್ಮ ಅಂತಸ್ತಿನಿಂದ ಮುಂದಕ್ಕೆ ಅಭಿವೃದ್ಧಿಯನ್ನು ಕ್ರಮವಾಗಿ ಪಡೆಯಲು ಸಹಾಯವಾಗುವ ಈ ಧರ್ಮಗಳನ್ನು ಬೋಧಿಸುವ ಈ ಗೀತೆಯು ಸರ್ವಾದರ ಪಾತ್ರವಾಗುತ್ತಿದೆ.

ಗೀತೆಯ ಅಂತರ ರಾಷ್ಟ್ರೀಯ ಮನೋಭಾವ.

ಈ ವಿಶಾಲ ಮನೋಭಾವದ ಫಲವಾಗಿ ನಮ್ಮ ಪೂರ್ವಜರಾದ ಆರ್ಯರು ಬುದ್ಧನನ್ನು ದಶಾವತಾರಗಳನು ಮಾಡಿದ ವಿಷ್ಣುವಿನ ಒಂದು ಅವತಾರವೆಂದು ಗೌರವಿಸಿದರು. ಜಿನಧರ್ಮವಾದ ಅಹಿಂಸೆಯನ್ನು ಮುಂಚೆಗಿಂತ ಹೆಚ್ಚಾಗಿ ಆಚರಿಸುತ್ತಾ ಬಂದರು. ಜರತುಷ್ಟ್ರಮತವು ಪರಮತ ದ್ವೇಷಿಗಳಾದ

ಮುಸಲ್ಮಾನರ ಹಿಂಸೆಯನ್ನು ತಾಳಲಾರದೆ ಭಾರತದೇಶಕ್ಕೇ ಬರಲು ಅದಕ್ಕೆ ಸಹಾನುಭೂತಿಯಿಂದ ರಕ್ಷಣೆಯನ್ನು ಕೊಟ್ಟರು. ಅದು ಇಲ್ಲಿ ಮಾತ್ರ ಬದುಕಿದೆ. ಕ್ರಿಶ್ಚಿಯನ್ನರೂ ಇಲ್ಲಿಗೆ ಬಂದು ನೆಲೆಸಲು ಅಡ್ಡಿಯನ್ನು ಮಾಡಲಿಲ್ಲ. ಮುಸಲ್ಮಾನರು ಇಲ್ಲಿ ಬಂದು ನೆಲೆಸಿದರು. ಪರಮತ ಸಹನೆಯು ಅತಿಯಾಗಿ ದೋಷವಾಗಿ ಈ ಎರಡು ಜನಾಂಗಗಳೂ ಹಿಂದುಗಳನ್ನು ಮತಪರಿವರ್ತನೆಯಿಂದ ತಮ್ಮ ಮತಕ್ಕೆ ಸೇರಿಸಿಕೊಳ್ಳುವುದೂ ರಾಜ್ಯವನ್ನು ಕಟ್ಟಿ ಆಳುವುದೂ ಸಾಧ್ಯವಾಯಿತು. ಆದರೂ ಸೂಫಿ ಮುಸಲ್ಮಾನರು ಉಪನಿಷತ್ತು ಗೀತೆಗಳ ಉಪದೇಶವನ್ನು ಎಂದರೆ ಜೀವರಿಗೆ ಪುನರ್ಜನ್ಮದಂತೆ, ಕರ್ಮಸಿದ್ಧಾಂತ, ಜ್ಞಾನದ ಪ್ರಾಮುಖ್ಯ ಇವನ್ನು ಅಂಗೀಕರಿಸಿರುತ್ತಾರೆ. ಕ್ರಿಶ್ಚಿಯನ್ನರೂ ಈಚೆಗೆ ಭಾರತ ಧರ್ಮವನ್ನು ಹೆಚ್ಚುಹೆಚ್ಚಾಗಿ ಅಭಿನಂದಿಸಿ ಸ್ವೀಕರಿಸುತ್ತಿದ್ದಾರೆ. ಈಗ ಸುದೈವದಿಂದ ಸ್ವರಾಜ್ಯವೂ ದೊರೆತಿದೆ. ಇನ್ನು ಮುಂದಾದರೂ ನಾವು ನಮ್ಮ ಧರ್ಮದ ವೈಶಾಲ್ಯವನ್ನು ಹೆಚ್ಚು ಪ್ರಚಾರಮಾಡಿ ಎಲ್ಲರೂ ಜನ್ಮಸಾರ್ಥಕ್ಯವನ್ನು ಪಡೆಯಲು ಸಹಕರಿಸಬೇಕಾದ ಭಾರವು ನಮ್ಮ ಮೇಲೆ ಬಿದ್ದಿರುತ್ತದೆ.

ಈ ಹೃದಯ ವೈಶಾಲ್ಯದ ಫಲವಾಗಿ ಪ್ರಮಥಗಣಗಳಲ್ಲಿ ಪ್ರಮುಖನಾದ ಪುಷ್ಪದಂತಾಚಾರ್ಯನು ಆಗಿನ ಕಾಲದಲ್ಲಿದ್ದ ಐದು ಮತಧರ್ಮಗಳನ್ನೂ ಸಮತಾಭಾವನೆಯಿಂದ ಗೌರವಿಸಿ ಅಭಿನಂದಿಸಿರುವುದನ್ನು ಗಮನಿಸಬೇಕು.

ತ್ರಯೀ ಸಾಙ್ಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ।
ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲನಾನಾಪಥಜುಷಾಂ
ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ॥

ದೇವರನ್ನು ಭಜಿಸಿ ಕೃತಾರ್ಥರಾಗಲು ಮನುಷ್ಯನು ಅವಲಂಬಿಸುವ ರೀತಿಗಳೂ ಮಾರ್ಗಗಳೂ ಭಿನ್ನವಾಗಿರುತ್ತವೆ. ಈ ಭೇದಕ್ಕೆ ಜನರಲ್ಲಿರುವ ರುಚಿ ಸಂಸ್ಕೃತಿಗಳ ಅಂತಸ್ತುಗಳೇ ಕಾರಣವೇ ಹೊರತು ದೇವ

ತತ್ವವೂ ಭಿನ್ನವಾಗಿರುತ್ತದೆ ಎಂಬುದಲ್ಲವು. ದೇವರು ಒಬ್ಬನೇ. ಏಕಮೇವಾ ದ್ವಿತೀಯನಾಗಿರುತ್ತಾನೆ. ಇದರಂತೆ ತ್ರಯೀ ಎಂದರೆ ಋಗ್ವೇದ, ಯಜುರ್ವೇದ, ಸಾಮವೇದ ಎಂಬ ಮೂರು ವೇದಗಳಲ್ಲಿ ಗೊತ್ತಾಗುವ ವೈದಿಕ ಮತವು ಮೊದಲನೆಯದು. ಆಮೇಲೆ ಕೆಲವು ಕಾಲಾನಂತರದಲ್ಲಿ ಕಪಿಲ ಋಷಿಯು ಮನಗಂಡು ಪ್ರಚಾರಮಾಡಿದ ಸಾಂಖ್ಯಮತವೂ, ಪತಂಜಲ ಋಷಿಯು ತಿಳಿದು ಬೋಧಿಸಿದ ಯೋಗ ಮತವೂ ಶಿವಭಕ್ತರು ಅನುಸರಿಸಿದ ಪಾಶುಪತಮತವೂ, ವಿಷ್ಣು ಭಕ್ತರಾದ ಭಾಗವತರು ಆದರಿಸಿ ಪ್ರಚಾರ ಮಾಡಿದ ವೈಷ್ಣವ ಮತವೂ, ಈ ಪದ್ಯವನ್ನು ರಚಿಸಿದ ಪುಷ್ಪದಂತಾಚಾರ್ಯನ ಕಾಲದಲ್ಲಿ ಈ ಐದು ಮತಧರ್ಮಗಳೂ ರೂಢಿಯಲ್ಲಿದ್ದವು. ಇವುಗಳಲ್ಲಿ ಇದೇ ಉತ್ತಮ ವಾದುದು ಎಂದು ಮುಂತಾಗಿ ವಾದಿಸುತ್ತಾ ಜಗಳವಾಡಬಾರದು. ಜನರು ತಮ್ಮ ತಮ್ಮ ರುಚಿ ಸಂಸ್ಕೃತಿ ಸನ್ನಿವೇಶಗಳ ಅಂತಸ್ತುಗಳಿಗೆ ಅನುಸಾರವಾಗಿ ಸರಳವಾಗಿರುವ ಅಥವಾ ಕ್ಲಿಷ್ಟವಾಗಿರುವ, ನೇರ ವಾಗಿರುವ ಅಥವಾ ಸ್ವಲ್ಪ ಬಳಸಿ ಬರುವ, ಈ ಮಾರ್ಗಗಳಲ್ಲಿ ತಮಗೆ ಇಷ್ಟವಾಗಿಯೂ, ಅನುಕೂಲವಾಗಿಯೂ, ಸಾಧ್ಯವಾಗಿಯೂ ಇರು ವಂತೆ ತೋರಿಬಂದುದನ್ನು ಅವಲಂಬಿಸಿರುತ್ತಾರೆ. ಅಷ್ಟೇ ಹೊರತು ಆ ಮಾರ್ಗಗಳಿಂದ ಅವರೆಲ್ಲರೂ ಪಡೆಯುವ ದೇವತತ್ವ ಮಾತ್ರ ಒಂದೇ ಆಗಿರುತ್ತದೆ. ಹೇಗೆಂದರೆ ನದಿಗಳ ಪ್ರವಾಹಗಳು ಭಿನ್ನ ಭಿನ್ನ ದೇಶಗಳಿಂದ ಬೇರೆ ಬೇರೆ ಮಾರ್ಗಗಳಲ್ಲಿ ಹರಿದು ಬಂದರೂ ಕಡೆಗೆ ಅವೆಲ್ಲವೂ ಸಮುದ್ರವೆಂಬ ಒಂದೇ ಸ್ಥಾನದಲ್ಲಿ ಸೇರಿ ತಮ್ಮ ತಮ್ಮ ಭೇದಗಳನ್ನು ಕಳೆದುಕೊಂಡು ಒಂದೇ ನೀರಾಗುತ್ತವೆ. ಹಾಗೆಯೇ ಮತಗಳಲ್ಲಿ ದೇವರ ಹೆಸರುಗಳೂ ರೂಪಗಳೂ ಭಿನ್ನಭಿನ್ನ ವಾಗಿರಬಹುದಾದರೂ ಆ ಹೆಸರುಗಳು ತಿಳಿಸುವ ದೇವತತ್ವವು ಮಾತ್ರ ಒಂದೇ ಆಗಿರುತ್ತದೆ. ಏಕೆಂದರೆ ದೇವರ ಲಕ್ಷಣಗಳನ್ನು ಸ್ವಲ್ಪ ಹೆಚ್ಚು ಕಡಿಮೆಯಾಗಿ ಒಂದೇ ವಿಧವಾಗಿ ಹೇಳಿದೆ. ಹೇಗೆಂದರೆ—ದೇವರು ಈ ಜಗತ್ತಿನ ಸೃಷ್ಟಿ ರಕ್ಷಣೆ ಉಪಸಂಹಾರಗಳನ್ನು ಮಾಡುತ್ತಾನೆ.

ದೇವನು ಸರ್ವಜ್ಞನೂ, ಸರ್ವಶಕ್ತನೂ, ಸರ್ವವ್ಯಾಪಿಯೂ ಆಗಿರುತ್ತಾನೆ. ಭಕ್ತರ ಪೂಜೆಗಳನ್ನು ಸ್ವೀಕರಿಸುತ್ತಾನೆ. ಅವರ ಸ್ತೋತ್ರಗಳನ್ನು ಕೇಳುತ್ತಾನೆ. ಅವರ ಪ್ರಾರ್ಥನೆಗಳನ್ನು ಲಾಲಿಸುತ್ತಾನೆ. ಅವರ ಧರ್ಮಾಚರಣೆಯನ್ನು ಮೆಚ್ಚಿಕೊಳ್ಳುತ್ತಾನೆ. ಅವರ ಕೋರಿಕೆಗಳನ್ನು ನೆರವೇರಿಸುತ್ತಾನೆ. ಎಂದು ಎಲ್ಲ ಮತಧರ್ಮಗಳಲ್ಲೂ ಹೇಳಿದೆ.

ವಿಶ್ವಧರ್ಮದ ಅಂತಸ್ತುಗಳು.

ಮೇಲೆ ೪೭ನೆಯ ಪುಟದಲ್ಲಿ ಉದಾಹರಿಸಿರುವ "ಇಂದ್ರಂ ಮಿತ್ರಂ........" ಎಂಬ ವೇದಮಂತ್ರದಲ್ಲಿ ಉಲ್ಲೇಖಿಸಿರುವ ಇಂದ್ರ, ಅಗ್ನಿ, ವಾಯು, ವರುಣ, ಯಮಧರ್ಮ ಮುಂತಾದ ದೇವತೆಗಳನ್ನು ಒಂದೇ ತತ್ವದ ಭಿನ್ನನಾಮರೂಪಗಳೆಂದು ಮನಗಂಡ ಋಷಿಗಳ ವಿಶಾಲ ಮನೋಭಾವವನ್ನೂ, ಪರಮತಗಳಲ್ಲಿರಬೇಕಾದ ಗೌರವವನ್ನು ಸೂಚಿಸುವ "ವಿಪ್ರಾಃ" ಎಂಬ ಪದಪ್ರಯೋಗವನ್ನೂ ಗಮನಿಸಬೇಕು. ಅಲ್ಲದೆ, ಆಗ ಪ್ರಾಮುಖ್ಯವನ್ನು ಪಡೆದಿದ್ದ ಇಂದ್ರ, ಅಗ್ನಿ, ವಾಯು, ಸೂರ್ಯ ಮುಂತಾದ ದೇವತೆಗಳ ಸ್ಥಾನದಲ್ಲಿ, ಆಗ ಅಪ್ರಧಾನವಾಗಿದ್ದ ಶಿವ, ವಿಷ್ಣು, ಶಕ್ತಿ ಮುಂತಾದ ದೇವತೆಗಳು ಮುಂದಿನ ಪುರಾಣಗಳ ಇತಿಹಾಸಗಳ ಕಾಲದಲ್ಲಿ ಮುಖ್ಯ ದೇವತೆಗಳಾಗಿ ಪೂಜಿಸಲ್ಪಟ್ಟುವೆಂಬುದನ್ನೂ ಗಮನಿಸಬೇಕು. ಇದರಿಂದ ನಾಮರೂಪಗಳು ಮುಖ್ಯವಲ್ಲ, ತತ್ವವೇ ಮುಖ್ಯವೆಂಬುದು ಗೊತ್ತಾಗುತ್ತದೆ. ಸಾಂಖ್ಯದರ್ಶನದಲ್ಲಿ ಪ್ರಕೃತಿ ಪುರುಷ ಎಂಬ ಎರಡು ತತ್ವಗಳೂ, ಯೋಗದರ್ಶನದಲ್ಲಿ ಪ್ರಕೃತಿ, ಪುರುಷ, ಈಶ್ವರ ಎಂಬ ಮೂರು ತತ್ವಗಳೂ ಪ್ರಾಮುಖ್ಯಕ್ಕೆ ಬಂದುದೂ ಗೊತ್ತಾಗುತ್ತದೆ.

ಇದೇ ರೀತಿಯಲ್ಲಿ ಇನ್ನೂ ಮುಂದಿನ ಕಾಲದಲ್ಲಿ ಆರ್ಯರ ವಿಶಾಲಮನೋಭಾವದ ಬೆಳವಳಿಗೆಯನ್ನು "ಯಂಶೈವಾಃ......." ಎಂಬ ೨೪೯ನೆಯ ಪುಟದಲ್ಲಿರುವ ಪದ್ಯದಲ್ಲಿ ಕಾಣಬಹುದು. ಅದರ ಅರ್ಥವು ಹೀಗಿದೆ. "ಯಾವ ಪರತತ್ವವನ್ನು ವೇದಾಂತಿಗಳು ಬ್ರಹ್ಮವೆಂದು ಧ್ಯಾನಿಸುತ್ತಾರೋ, ಅದನ್ನೇ ಶಿವಭಕ್ತರಾದ ಶೈವರು ಶಿವ

ನೆಂದು ಆರಾಧಿಸುತ್ತಾರೆ. ಆ ದೇವನನ್ನೇ ಬೌದ್ಧರು ಬುದ್ಧದೇವನೆಂದೂ ಉಪಾಸನೆ ಮಾಡುತ್ತಾರೆ. ಆ ದೇವನನ್ನೇ ಜ್ಞಾನಸಾಧನಗಳಾದ ಪ್ರಮಾಣಗಳನ್ನು ಶೋಧಿಸಿ ಯಥಾರ್ಥ ಜ್ಞಾನವನ್ನು ಪಡೆಯುವುದರಲ್ಲಿ ಗಟ್ಟಿಗರಾದ ನೈಯಾಯಿಕರೂ ತಾರ್ಕಿಕರೂ 'ಕರ್ತಾ' ಎಂದರೆ ಈ ಜಗತ್ತಿನ ಸೃಷ್ಟಿ ಸ್ಥಿತಿಲಯಗಳನ್ನು ನೆರವೇರಿಸುತ್ತಿರುವವನೆಂದು ತಿಳಿಯುತ್ತಾರೆ. ಜಿನದೇವನ ಅಪ್ಪಣೆಗಳನ್ನು ಪಾಲಿಸುವ ಜೈನರು ಆ ದೇವನನ್ನೇ ಜಿನ, ಅರ್ಹನ್, ತೀರ್ಥಂಕರ ಎಂದು ಮುಂತಾಗಿ ಧ್ಯಾನಿಸುತ್ತಾರೆ. ವೇದಾರ್ಥವನ್ನು ನಿಶ್ಚಯಿಸುವುದಕ್ಕೋಸ್ಕರ ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯಾ ಎಂಬ ಆರು ಅಂಗತಾಬೋಧಕ ಪ್ರಮಾಣಗಳನ್ನೂ, ಉಪಕ್ರಮ ಮುಂತಾದ ಏಳು ತಾತ್ಪರ್ಯ ಗ್ರಾಹಕಲಿಂಗ (ಗುರುತು) ಗಳನ್ನೂ ಉಪಯೋಗಿಸುವ ಮೀಮಾಂಸಕರು ಜನರಿಗೆ ಅವರ ಕರ್ಮಫಲಗಳಾದ ಸುಖದುಃಖಗಳನ್ನು ಆ ಕರ್ಮ (ಧರ್ಮ)ಗಳೇ ಕೊಡುತ್ತವೆಂದೂ, ಅದೇ ದೇವತತ್ತ್ವವೆಂದೂ ತಿಳಿಸುತ್ತಾರೆ. ಹೀಗೆ ನಾನಾ ಬಗೆಗಳಲ್ಲಿ ವಿಮರ್ಶಕರೂ ಭಕ್ತರೂ ತಿಳಿಯುತ್ತಿರುವ ಆ ತತ್ತ್ವವನ್ನು ವೈಷ್ಣವರು ವಿಷ್ಣುವೆಂದು ಪೂಜಿಸುತ್ತಾರೆ. ಆ ವಿಷ್ಣುವು ಮೂರು ಲೋಕಗಳಿಗೂ ಒಡೆಯನಾಗಿರುತ್ತಾನಾಗಿ ಅವನು ನಿಮ್ಮೆಲ್ಲರ ಇಷ್ಟಾರ್ಥಗಳನ್ನು ಅನುಗ್ರಹಿಸುತ್ತಾ ಕಾಪಾಡುತ್ತಿರಲಿ." ಈ ಪದ್ಯವನ್ನು ಬರೆದವನು ವಿಷ್ಣುಭಕ್ತನೆಂಬುದೂ ಸ್ಪಷ್ಟವಾಗಿದೆ. ಅದ್ವೈತಿಗಳು ಎಲ್ಲ ದೇವರೂಪಗಳನ್ನು ಸಮಾನವಾದ ಭಕ್ತಿ ಆದರಗಳಿಂದ ಪಂಚಾಯತನ ಕ್ರಮದಲ್ಲಿ ಪೂಜಿಸುವುದು ಆಚರಣೆಯಲ್ಲಿದೆ ಎಂಬ ಅಂಶವು ಗಮನಾರ್ಹವಾಗಿದೆ.

ವಿಶ್ವಧರ್ಮದ ವಿಸ್ತರಣೆಯ ರೀತಿ

ಈ ಅಭಿನಂದನೆಯು "ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂಬ ವೇದಮಂತ್ರದ ಪ್ರತಿಧ್ವನಿಯಾಗಿದೆ ಎಂಬುದನ್ನೂ, ಈ ಮತಸಾಮರಸ್ಯ, ಗುಣಾದರಗಳಿಂದ ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯು ಅಳಿಯದೆ ಉಳಿದು ಉಜ್ಜ್ವ

ಲವೂ ವಿಶಾಲವೂ ಆಗುತ್ತಾ ಬರುತ್ತಿದೆ ಎಂಬುದನ್ನೂ ಗಮನಿಸಬೇಕು. ಈ ಭಾವವನ್ನೇ ಅನುಸರಿಸಿ ಕ್ರಿ. ಶ. ೧೩ನೆಯ ಶತಮಾನದಲ್ಲಿ ನಿರ್ಮಿತವಾದ ಬೇಲೂರಿನ ಶ್ರೀ ಚನ್ನಕೇಶವಸ್ವಾಮಿಯ ದೇವಸ್ಥಾನದಲ್ಲಿ ದೊರೆಯುವ ಶಿಲಾಶಾಸನದಲ್ಲಿ ಈ ಪದ್ಯವು ಉಲ್ಲೇಖವನ್ನು ಪಡೆದಿದೆ. ಅದ್ವೈತಿಗಳ ಮನಸ್ಸು ವಿಶ್ವಧರ್ಮವನ್ನು ಆದರಿಸಲು ಇತರರಿಗಿಂತಲೂ ಹೆಚ್ಚಾಗಿ ಒಲಿದುಬರುತ್ತದೆ.

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ
ಬೌದ್ಧಾಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ।
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋऽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ॥

ಈ ಪದ್ಯದಲ್ಲಿ ಶೈವರು, ವೇದಾಂತಿಗಳು, ಬೌದ್ಧರು, ಜೈನರು, ನೈಯಾಯಿಕರು, ಮೀಮಾಂಸಕರು ಮತ್ತು ವೈಷ್ಣವರು ಇವರನ್ನು ಉಲ್ಲೇಖಿಸಿದೆ. ಲೇಖಕನು ವೈಷ್ಣವನಾಗಿರಬಹುದು. ವೈಷ್ಣವ ದೇವಾಲಯದಲ್ಲಿರುವುದರಿಂದ ವಿಷ್ಣುವನ್ನು ಇಷ್ಟಾರ್ಥ ಪ್ರಾಪ್ತಿಗಾಗಿ ಪ್ರಾರ್ಥಿಸಲಾಗಿದೆ. ಆದರೂ ಇತರರ ಮತಧರ್ಮಗಳ ವಿಷಯದಲ್ಲಿ ಗೌರವ ಭಾವನೆಯೂ ಎದ್ದು ಕಾಣುವಂತಿದೆ. ಹಿಂದಿನ ಪದ್ಯದಲ್ಲಿರುವ ಶೈವ, ವೈಷ್ಣವ ಮತಗಳ ಜೊತೆಗೆ ವೇದಾಂತಿಗಳು, ಬೌದ್ಧರು, ನೈಯಾಯಿಕರು, ಮೀಮಾಂಸಕರು, ಜೈನರನ್ನೂ ಸೇರಿಸಿ, ವೈದಿಕ ಮತಗಳೊಡನೆ ಅವೈದಿಕ ಮತಗಳಾದ ಬೌದ್ಧ, ಜೈನ ಮತಗಳನ್ನೂ ಸಂಗ್ರಹಿಸಿರುವುದು ಪರಮತಸಹನೆ ಗೌರವಗಳನ್ನು ಸೂಚಿಸುತ್ತದೆ. ಇದೇ ವಿಶಾಲ ಮನೋಭಾವನೆಯನ್ನು ಮುಂದುವರಿಸಿ ಈಗಿನ ಕಾಲಕ್ಕೆ ತಕ್ಕಂತೆ ಈ ಪದ್ಯವನ್ನು ರಚಿಸಿದೆ.

ಯಶ್ಶೈವೈಸ್ಸಮುಪಾಸ್ಯತೇ ಶಿವ ಇತಿ ಬ್ರಹ್ಮೇತಿ ವೇದಾಂತಿಭಿಃ
ವಿಷ್ಣುಃ ವೈಷ್ಣವ ಮಾರ್ಗಗೈಃ ಭಗವತೀ ಶಕ್ತಿಸ್ತು ಶಾಕ್ತೈಃ ಪರಾ।
ಬೌದ್ಧೈರ್ಬುದ್ಧ ಇತಿ ಸ್ವಭಾವ ಇತರೈಃ ಅಲ್ಲೇತಿ ಮುಸ್ಲಿಂಜನೈಃ
ಕ್ರಿಸ್ತೈರ್ಗಾಡ್ ಇತಿ ನಾಮ ಮಾತ್ರವಿವಿಧಂ ಪಾಯಾತ್ತದೇಕಂ ಮಹಃ॥

ಈ ಮೇಲೆ ಹೇಳಿದ ರೀತಿಯಲ್ಲಿ ಭಾರತಾರ್ಯರ ಸಂಸ್ಕೃತಿಯು ಧಾರ್ಮಿಕವಾದುದೂ, ಆ ಧರ್ಮವು ವಿಶ್ವ ವಿಶಾಲವಾದುದೂ ಆಗಿರುತ್ತಾ ಕಾಲಕ್ರಮದಲ್ಲಿ ತಿಳಿದುಬಂದ ಹೊಸ ಹೊಸ ಭಾವಗಳನ್ನೂ, ಒಪ್ಪಿಬಂದ ಸದಾಚಾರಗಳನ್ನೂ ತೆರೆದ ಮನಸ್ಸಿನಿಂದ ಗ್ರಹಿಸಿ ಅಳವಡಿಸಿ ಕೊಳ್ಳುತ್ತಾ ಬೆಳೆಯುತ್ತಾ ಬಂದಿದೆ ಎಂಬುದು ಆಯಾ ಕಾಲಗಳಲ್ಲಿ ರಚಿತವಾದ ಈ ಮೂರು ಪದ್ಯಗಳಿಂದಲೂ ತಿಳಿಯಬಹುದು.

ವಿಶ್ವಧರ್ಮದ ಈಗಿನ ಸ್ವರೂಪ.

ಸುಮಾರು ನಾಲ್ಕು ಸಾವಿರ ವರ್ಷಗಳಷ್ಟು ಪ್ರಾಚೀನವಾದ ವೇದ ಮಂತ್ರದಲ್ಲಿ "ಏಕಂಸತ್ ವಿಪ್ರಾ ಬಹುಧಾ ವದಂತಿ" ಎಂದೂ, ಮೂರು ಸಾವಿರ ವರ್ಷಗಳಷ್ಟು ಪ್ರಾಚೀನವಾದ ಉಪನಿಷತ್ತುಗಳಲ್ಲಿ "ಸ ದೇವ ಸೌಮ್ಯೇದ ಮಗ್ರ ಆಸೀದೇಕಮೇವಾದ್ವಿತೀಯಂ ಬ್ರಹ್ಮ" ಎಂದೂ, ಒಂದು ಸಾವಿರದ ಮುನ್ನೂರು ವರ್ಷಗಳಷ್ಟು ಪ್ರಾಚೀನ ವಾದ "ತ್ರಯೀಸಾಖ್ಯಂಯೋಗಃ ..." ಎಂಬ ಪದ್ಯದಲ್ಲೂ, ಸುಮಾರು ಒಂಬೈನೂರು ವರ್ಷಗಳಷ್ಟು ಪ್ರಾಚೀನವಾದ "ಯಂಶೈವಾಸ್ಸಮು ಪಾಸತೇ" ಎಂಬ ಪದ್ಯದಲ್ಲೂ, ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯು ಬೆಳೆದು ಬರುತ್ತಿರುವುದನ್ನು ಗಮನಿಸಬೇಕು. ಈ ಪದ್ಯದಲ್ಲಿ ಈಗಿನ ಕಾಲಕ್ಕೆ ತಕ್ಕಂತೆ ಈಗಿರುವ ಮುಖ್ಯಮತಗಳನ್ನು ಸಂಗ್ರಹಿಸಿ ಈಗ ರಚಿತವಾಗಿರುವ "ಯಃಶೈವೈಃ...." ಎಂಬ ಪದ್ಯದ ಅರ್ಥವು ಹೀಗಿದೆ — ಈ ಪದ್ಯವನ್ನು ೨೪೬ನೆಯ ಪುಟದಲ್ಲಿ ಉದಾಹರಿಸಿದೆ.

ಏಕಂ ಎಂದರೆ ಪಾರಮಾರ್ಥಿಕ ಸ್ವರೂಪದಲ್ಲಿ ಒಂದೇ ಆಗಿರುವ, ಎರಡೂ ಅನೇಕವೂ ಅಲ್ಲದ, ತತ್ತ್ವವು ಎಂದು ಅರ್ಥವು. ಸತ್ ಎಂದರೆ ತ್ರಿಕಾಲಾಬಾಧಿತವಾಗಿರುವ, ಹಿಂದಿನ, ಇಂದಿನ, ಮುಂದಿನ ಕಾಲ ಗಳಲ್ಲೂ ಅನುಸ್ಯೂತವಾಗಿ ಅವಿಚ್ಛಿನ್ನವಾಗಿ ಇರುವ ತತ್ತ್ವವು. ಈ ತತ್ತ್ವ ವನ್ನೇ ವೇದಾಂತಿಗಳು ಅಖಂಡ ಸಚ್ಚಿದಾನಂದಾನಂತಾ ದ್ವಿತೀಯ ಪರಬ್ರಹ್ಮವೆಂದು ಧ್ಯಾನಿಸುತ್ತಾರೆ. ಈ ತತ್ತ್ವವನ್ನೇ ಶೈವರು ಶಿವ ನೆಂಬ ನಾಮರೂಪ ವಿಶೇಷದಿಂದ ಕೂಡಿರುವಂತೆ ಉಪಾಸನೆ ಮಾಡು

ತ್ತಾರೆ. ಇದನ್ನೇ ವೈಷ್ಣವರು ವಿಷ್ಣುವೆಂದೂ, ಶಾಕ್ತೇಯರು ಅಪಾರವಾದ ಮಹಿಮೆಯುಳ್ಳ ಶಕ್ತಿತತ್ವವೆಂದೂ, ಪೂಜಿಸುತ್ತಾ ಧ್ಯಾನಾರಾಧನೆಗಳನ್ನು ಮಾಡುತ್ತಿದ್ದಾರೆ. ಬೌದ್ಧರು "ಬುದ್ಧದೇವ"ನೆಂದೂ, ಮುಸಲ್ಮಾನರು "ಅಲ್ಲಾ" "ಖುದಾ" ಎಂದೂ, ಕ್ರಿಶ್ಚಿಯನ್ನರು "ಗಾಡ್" "ಲಾರ್ಡ್" ಎಂದೂ, ಈ ತತ್ವವನ್ನೇ ಪೂಜಿಸಿ ನಮಸ್ಕರಿಸುತ್ತಿರುತ್ತಾರೆ. ಅಲ್ಲದೆ ವೈಜ್ಞಾನಿಕರು nature ಪ್ರಕೃತಿ ಎಂದು ಹೇಳುವ ತತ್ವವೂ ಇದೇ ಆಗಿದೆ ಎನ್ನಬಹುದು. ಆದುದರಿಂದ ಹೀಗೆ ಹೆಸರಿನಲ್ಲಿ ಮಾತ್ರ ನಾನಾ ಬಗೆಯಾಗಿ ತೋರುತ್ತಿರುವ, ತತ್ ಎಂದರೆ ಆ ವೇದಕಾಲದಿಂದ ಆರಂಭವಾಗಿ ಉಪನಿಷತ್ಕಾಲ, ಇತಿಹಾಸ ಪುರಾಣಗಳಕಾಲ, ದರ್ಶನಗಳಕಾಲ ಎಂಬ ನಾಲ್ಕು ಕಾಲಗಳಲ್ಲೂ ಬೆಳೆದುಬರುತ್ತಿರುವ, ಜನರ ತಿಳಿವಳಿಕೆ ಅನುಭವಗಳಿಗೆ ಹೆಚ್ಚುಹೆಚ್ಚಾಗಿ ಪಾತ್ರವಾಗುತ್ತಾ ಇರುವ, ಮಹಃ, ಎಂದರೆ ತೇಜಸ್ಸು ಅಥವಾ ಜ್ಯೋತಿಯು ಅಥವಾ ಸ್ವಪ್ರಕಾಶ ಚೈತನ್ಯವು ಎಲ್ಲರನ್ನೂ ಕಾಪಾಡುತ್ತಿರಲಿ.

ವಿಶ್ವಧರ್ಮವೂ ಆಚರಣೆಯಲ್ಲಿದೆ.

ಈ ಕಾಲದಲ್ಲಿ ಪ್ರಸಿದ್ಧವಾಗಿರುವ ಮತಧರ್ಮಗಳಲ್ಲಿಯೂ ಪೂಜ್ಯವಾಗಿರುವ ದೇವತತ್ವವೂ ಒಂದೇ ಎಂದು ಮನಗಂಡು ಹಿಂದಿನ ಪದ್ಯಗಳಲ್ಲಿ ಬಿಟ್ಟುಹೋಗಿದ್ದ ದೇವರ ಹೆಸರುಗಳನ್ನೂ ಸೇರಿಸಿದೆ. ಬುದ್ಧದೇವನನ್ನೂ ದೇವರ ಅವತಾರವೆಂದು ಒಪ್ಪಿಕೊಂಡ ಭಾರತಾರ್ಯರು ಜೀಸಸ್ ಕ್ರೈಸ್ತನನ್ನೂ ಮಹಮ್ಮದನನ್ನೂ ಹಾಗೆ ಒಪ್ಪಿಕೊಳ್ಳುವುದು ನ್ಯಾಯ್ಯವೂ, ನಿಜವೂ ಆಗಿರುತ್ತದೆಂದು ಭಾವಿಸಿ ಆ ಎರಡು ಮತಗಳಲ್ಲಿ ರೂಢಿಯಲ್ಲಿರುವ ದೇವರ ಹೆಸರುಗಳನ್ನೂ ಈ ಪದ್ಯದಲ್ಲಿ ಸೇರಿಸಿ ನಮ್ಮ ಅಭಿಪ್ರಾಯವನ್ನು ಪೂರ್ಣತರವನ್ನಾಗಿ ಮಾಡಲಾಗಿದೆ. ಇದು ಸಹಜವೂ ಉಚಿತವೂ ಆಗಿದೆ ಎಂಬ ಅಂಶವನ್ನು ಈಗ ಭಾರತ ಸರ್ಕಾರದ ಉಪಾಧ್ಯಕ್ಷರಾಗಿರುವ ಡಾ|| ಸರ್ ಎಸ್. ರಾಧಾಕೃಷ್ಣರವರೂ ಒಪ್ಪಿ ಸೂಚಿಸಿರುತ್ತಾರೆ. ಅವರು 1949ರಲ್ಲಿ ಪ್ರಕಟಿಸಿರುವ

ಭಗವದ್ಗೀತೆಯಲ್ಲಿ 159ನೆಯ ಪುಟದಲ್ಲಿ ಇದನ್ನು ಕಾಣಬಹುದು. ಈ ಪದ್ಯವು ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲೆಯಲ್ಲಿ 1940ರಲ್ಲಿ ಪ್ರಕಟವಾಗಿರುವ ಸೂತಸಂಹಿತೆಯ ಯಜ್ಞ ವೈಭವ ಖಂಡದ ಮುನ್ನುಡಿಯಲ್ಲಿ ಮುದ್ರಿತವಾಗಿದೆ. ಅದ್ವೈತಿಗಳಲ್ಲಿ (ಸ್ಮಾರ್ತರಲ್ಲಿ) ಈ ಮನೋವೈಶಾಲ್ಯವು ಸಹಜವಾಗಿರುತ್ತದೆ. ಇದನ್ನು ಶ್ರೀ ಶಂಕರಾಚಾರ್ಯರೂ ಹೆಚ್ಚಾಗಿ ಪ್ರಚಾರಕ್ಕೆ ತಂದರು. ಪಂಚಾಯತನ ಪೂಜೆಯೂ ಆಗಿನಿಂದಲೂ ರೂಢಿಗೆ ಬಂದಿದೆ ಎನ್ನಬಹುದು. ಅಲ್ಲದೆ ಪ್ರತಿದಿನದ ಸಂಧ್ಯಾವಂದನೆಯ ಉಪಸ್ಥಾನ ಶ್ಲೋಕಗಳಲ್ಲಿ —

> ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ|
> ಶಿವಸ್ಯ ಹೃದಯಂ ವಿಷ್ಣುಃ ವಿಷ್ಣೋಶ್ಚ ಹೃದಯಂ ಶಿವಃ ||
> ಯಥಾ ಶಿವಮಯೋ ವಿಷ್ಣುಃ ಏವಂ ವಿಷ್ಣುಮಯಃ ಶಿವಃ |
> ಯಥ್ಯಾಂತರಂ ನ ಪಶ್ಯಾಮಿ ತಥಾ ಮೇ ಸ್ವಸ್ತಿರಾಯುಷಿ ||

ಈ ಶ್ಲೋಕಗಳನ್ನೂ ಅದ್ವೈತಿಗಳು ಮಾತ್ರ ಪಠಿಸುತ್ತಾ ಧ್ಯಾನಿಸುತ್ತಾರೆ. ವೈದಿಕ ಕಾಲದ ಸಾಹಿತ್ಯದಲ್ಲಿ ಸೂಚಿತರಾಗಿದ್ದ ಶಿವನ ವಿಷ್ಣುವೂ ಪುರಾಣೇತಿಹಾಸಗಳ ಕಾಲದಲ್ಲಿ ಪ್ರಾಮುಖ್ಯಕ್ಕೆ ಬಂದುದನ್ನೂ ಗಮನಿಸಬೇಕು. ಇವರಿಬ್ಬರ ಜೊತೆಗೆ ಚತುರ್ಮುಖ ಬ್ರಹ್ಮನನ್ನೂ ಸೇರಿಸಿ ತ್ರಿಮೂರ್ತಿಗಳೆಂದು ಪೂಜಿಸಿದರು. ದೇವರ ಕಾರ್ಯವಾದ ಜಗತ್ತಿನ ಸೃಷ್ಟಿ ರಕ್ಷಣೆ ಉಪಸಂಹಾರವೆಂಬ ಮಹಾಕಾರ್ಯಗಳಲ್ಲಿ ಬ್ರಹ್ಮನು ಸೃಷ್ಟಿಯನ್ನೂ ವಿಷ್ಣುವು ರಕ್ಷಣೆಯನ್ನೂ ರುದ್ರನು ಉಪಸಂಹಾರವನ್ನೂ ನೆರವೇರಿಸುತ್ತಿರುವರೆಂದು ವಿಂಗಡಿಸಿ ಹಂಚಿ ಪೂಜಿಸುವುದೂ, ಈ ತ್ರಿಮೂರ್ತಿಗಳ ಸಹಧರ್ಮಿಣಿಯರಾದ ಸರಸ್ವತೀ, ಲಕ್ಷ್ಮೀ, ಪಾರ್ವತೀ ದೇವಿಯರು ಪರಾಶಕ್ತಿ ಸ್ವರೂಪರೆಂದೂ ಭಾವಿಸಿ ಪೂಜಿಸುತ್ತಿರುವುದೂ ರೂಢಿಗೆ ಬಂದಿದೆ. ಶಾಕ್ತೇಯ ಮಾರ್ಗವು ಅದ್ವೈತಕ್ಕೆ ಉಪಾಂತ್ಯಸೋಪಾನವಾಗಿದೆ. ಎಂದರೆ, ತಪ್ಪಾಗಲಾರದು. ಕೆಲವು ಪುರಾಣಗಳನ್ನು ತಾಮಸವೆನ್ನಬಾರದು.

" ರಜೋಜುಷೇ ಜನ್ಮನಿ ಸತ್ವವೃತ್ತಯೇ
ಸ್ಥಿತೌ ಪ್ರಜಾನಾಂ ಪ್ರಳಯೇ ತಮಸ್ಸ್ಪೃಶೇ।
ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ
ವಿರಿಂಚಿ ನಾರಾಯಣ ಶಂಕರಾತ್ಮನೇ ॥

ಎಂದು ಮುಂತಾಗಿ ತ್ರಿಮೂರ್ತಿಗಳನ್ನೂ ಒಂದೇ ಬ್ರಹ್ಮ ತತ್ವದ ವ್ಯಾವಹಾರಿಕವಾದ ರೂಪಗಳೆಂದೂ ವರ್ಣನೆ, ಪೂಜೆ, ಧ್ಯಾನಗಳನ್ನು ಮಾಡುವುದೂ ರೂಢಿಗೆ ಬಂದಿದೆ. ಶಿವಪಾರಮ್ಯವನ್ನು ಒಪ್ಪುವ ಶೈವರೂ, ವಿಷ್ಣುಪಾರಮ್ಯವನ್ನು ಒಪ್ಪುವ ವೈಷ್ಣವರೂ ಈ ಭಾವನೆಯನ್ನು ಮನ್ನಿಸುತ್ತಿಲ್ಲ. ಇದು ಮನಸ್ಸಂಕೋಚದ ಗುರುತೆನ್ನಬಹುದು. ಪುರಾಣಗಳನ್ನೆಲ್ಲವನ್ನೂ, ಭಾರತವನ್ನೂ ವ್ಯಾಸನೇ ರಚಿಸಿದನೆಂದು ನಂಬಿಕೆ ಎಲ್ಲರಲ್ಲೂ ಇದೆ. ಹೀಗಿದ್ದರೂ ಈ ಮನಸ್ಸಂಕೋಚದ ಫಲವಾಗಿ ಶೈವಪುರಾಣಗಳನ್ನು ತಾಮಸಗಳೆಂದೂ, ವೈಷ್ಣವ ಪುರಾಣಗಳನ್ನು ಸಾತ್ವಿಕಗಳೆಂದೂ, ನಿರೂಪಿಸಿರುವುದೂ ಕಂಡುಬರುತ್ತದೆ. ಇದು ವಿಷ್ಣುಪುರಾಣದ ಉಪದೇಶಕ್ಕೆ ವಿರೋಧವಾಗಿಯೂ ಇದೆ. ವಿಮರ್ಶಕರು ಈ ಶ್ಲೋಕಗಳು ಪ್ರಕ್ಷಿಪ್ತಗಳೆಂದು ಹೇಳುತ್ತಾರೆ. ಈ ಅಂಶವನ್ನೂ ವೈಷ್ಣವರು ಒಪ್ಪುತ್ತಿಲ್ಲವು.

ಸೃಷ್ಟಿಸ್ಥಿತ್ಯಂತಕರಿಣೀಂ ಬ್ರಹ್ಮವಿಷ್ಣುಶಿವಾಭಿಧಾಂ।
ಸ ಸಂಜ್ಞಾಂ ಯಾತಿ ಭಗವಾನ್ ಏಕ ಏವ ಜನಾರ್ದನಃ ॥ ವಿಷ್ಣುಪುರಾಣ

ಶೈವಪುರಾಣವಾದ ಲಿಂಗ ಮಹಾ ಪುರಾಣದಲ್ಲಿ ಹೀಗೆ ಹೇಳಿದೆ: ಪರತತ್ವ ಚೈತನ್ಯವನ್ನು ನಮಗೆ ಜ್ಞಾಪಕಕ್ಕೆ ತರುವ ಗುರುತಿಗೆ ಲಿಂಗವೆಂದು ಹೆಸರು. ಇಡಿಯ ಪ್ರಪಂಚವೇ ಪರಮೇಶ್ವರನ ಉಪಾಸನೆಯಲ್ಲಿ ಉಪಯೋಗಿಸಬಹುದಾದ ಪ್ರತೀಕ ಅಥವಾ ಲಿಂಗವೆಂದೂ, ಅದನ್ನು ಈಶ್ವರನ ಅಷ್ಟಮೂರ್ತಿ ಸ್ವರೂಪ ಅಥವಾ ವಿರಾಟ್ರೂಪದ ಪ್ರತಿನಿಧಿ ಎಂದು ಭಾವಿಸಬೇಕೆಂದೂ ಹೇಳಿದೆ. ಶರೀರದಲ್ಲೂ ಹೃದಯಾಕಾಶದಲ್ಲೂ ಲಿಂಗ ಸ್ವರೂಪವನ್ನು ಉಪಾಸನೆಮಾಡಿ ಆದರಿಂದ ಪರಮೇಶ್ವರನ ಸಾಕ್ಷಾತ್ಕಾರವನ್ನು ಎಲ್ಲರೂ ಪಡೆಯಬಹುದು. ಅಲ್ಲದೆ

ಇಲ್ಲಿರುವ ಒಂದು ವಿಶೇಷವಾದ ಉಪದೇಶವೇನೆಂದರೆ, ಲಿಂಗದ ಬುಡದಲ್ಲಿ ಬ್ರಹ್ಮನನ್ನೂ, ಮಧ್ಯದಲ್ಲಿ ವಿಷ್ಣುವನ್ನೂ, ಶಿರಸ್ಸಿನಲ್ಲಿ ಶಿವನನ್ನೂ, ಲಿಂಗದ ಎಡಭಾಗದಲ್ಲಿ ಬ್ರಹ್ಮನನ್ನೂ, ಬಲಭಾಗದಲ್ಲಿ ವಿಷ್ಣುವನ್ನೂ, ಮಧ್ಯದಲ್ಲಿ ಶಿವನನ್ನೂ ಧ್ಯಾನಿಸಬೇಕೆಂದು ಹೇಳಿ ಲಿಂಗವು ಬ್ರಹ್ಮಾ, ವಿಷ್ಣು, ಶಿವರೆಂಬ ತ್ರಿಮೂರ್ತಿ ಸ್ವರೂಪವಾದುದೆಂದು ಭಾವಿಸಬೇಕೆಂದು ಹೇಳಿ ವಿಧಿಸಿರುವುದೇ ಆಗಿದೆ. ಈ ಅಂಶವನ್ನು ಈ ಶ್ಲೋಕಗಳು ತಿಳಿಸುತ್ತವೆ.

ಲಿಂಗಮೇಕತಮಂ ಶೈಲಂ ಬ್ರಹ್ಮವಿಷ್ಣು ಶಿವಾತ್ಮಕಂ । ೬.೪೭.೬.
ಲಿಂಗವೇದೀ ಉಮಾ ದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ । ೬.೪೭.೮.
ಮೂಲೇ ಬ್ರಹ್ಮಾ ವಸತಿ ಭಗವಾನ್ ಮಧ್ಯಭಾಗೇ ಚ ವಿಷ್ಣುಃ
ಸರ್ವೇಶಾನಃ ಪಶುಪತಿ ರಜೋ ರುದ್ರಮೂರ್ತಿರ್ವರೇಣ್ಯಃ॥ ೬.೪೭.೧೦.

**ಶಿವಪುರಾಣಗಳ ವೈಶಿಷ್ಟ್ಯ.**

ಹೀಗೆ ಧ್ಯಾನಿಸಿ ಆರಾಧಿಸಬೇಕೆಂದು ಹೇಳಿದೆ. ಈ ಭಾವಕ್ಕೆ ಮೂರ್ತ ರೂಪವನ್ನೂ ಕೊಟ್ಟಿರುವುದನ್ನೂ ತರೀಕೆರೆಯ ಹತ್ತಿರದಲ್ಲಿರುವ ಸೋಮಪುರದ ದೇವಾಲಯದಲ್ಲಿಯೂ ಕಾಣಬಹುದು. ಅಲ್ಲಿರುವ ಲಿಂಗದಲ್ಲಿ ತ್ರಿಮೂರ್ತಿ ರೂಪಗಳನ್ನೂ ಬಿಡಿಸಿ ತೋರಿಸಿರುತ್ತದೆ. ಇಂತಹ ಉದಾಹರಣೆಗಳು ಇನ್ನೂ ಇವೆ. ಇಂತಹ ವಿಶಾಲ ಮನೋಭಾವವನ್ನುಂಟುಮಾಡುವ ಆರಾಧನೆಯ ರೀತಿಯನ್ನು ಶಾಕ್ತೇಯ ಪುರಾಣಗಳಲ್ಲೂ ತಂತ್ರಶಾಸ್ತ್ರಗಳಲ್ಲೂ ಹೇಳಿರುವುದನ್ನೂ ಗಮನಿಸಬಹುದು. ಈ ಉದಾರ ಹೃದಯದ ವಿಶಾಲಮನೋಭಾವವು ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ಫಲವಾಗಿ ಆನುವಶಿಂಕವಾಗಿ ನಮ್ಮವರೆಗೂ ಬಂದಿರುತ್ತದೆ. ಈ ಧಾರ್ಮಿಕ ಸಂಸ್ಕೃತಿಯ ಫಲವಾಗಿಯೇ ಮಹಾತ್ಮಾಗಾಂಧಿಯವರೂ ಅವರು ಪ್ರತಿದಿನವೂ ನೆರವೇರಿಸುತ್ತಿದ್ದ ಸಾಮೂಹಿಕವಾದ ಭಜನೆಯಲ್ಲಿಯೂ "ಈಶ್ವರ ಅಲ್ಲಾ ತೇರೇನಾಮ್, ಸಬ್‌ಕೋ ಸನ್ಮತಿ ದೇ ಭಗವಾನ್" ಎಂದೂ ಪ್ರಾರ್ಥಿಸುತ್ತಿದ್ದರೆಂಬುದನ್ನೂ ಗಮನಿಸ

ಬಹುದು. ಮುಸಲ್ಮಾನರು ಇದನ್ನು ಆದರಿಸುವ ಹಾಗೆ ಕಾಣು ತ್ತಿಲ್ಲವು. ಆದರೆ ಹಿಂದೂಗಳು ದೊಡ್ಡವರೂ ಮಕ್ಕಳೂ ಎಲ್ಲರೂ ಇದನ್ನು ಹೇಳುತ್ತಿದ್ದಾರೆ.

ಸಂಸ್ಕೃತಿಗೆ ಭಾಷೆಯು ವಾಹನವೆಂದು ಮೇಲೆ ತಿಳಿಸಲಾಗಿದೆ.

ಸಾಹಿತ್ಯದ ಸ್ವರೂಪ ಮತ್ತು ಪ್ರಯೋಜನಗಳು.

ಸಂಸ್ಕೃತ ಭಾಷೆಯಲ್ಲಿ ಭಾರತಾರ್ಯರ ಸಂಸ್ಕೃತಿಗೆ ವಿಶ್ವಧರ್ಮದ ತಳಹದಿಯೂ ಇರುವುದನ್ನು ಮೇಲೆ ವಿವರಿಸಿದೆ. ಸಂಸ್ಕೃತ ಸಾಹಿತ್ಯದಲ್ಲಿ ಇದನ್ನೂ ಕಾಣಬಹುದು.

ಸಾಹಿತ್ಯಂ ಜನಜೀವನಸ್ಯ ಮುಕುರಾದರ್ಶಃ ಸದಾ ನಿರ್ಮಲಃ
ಬಿಂಬಾನೀಹ ಯತೋ ವ್ಯತೀತ ಸಮಯೇ ದೇಶೇsಪಿ
ಯೋ ದರ್ಶಯೇತ್ ।
ಆಶಾಭಂಗ ವಿಯೋಗವಿಹ್ವಲಜನಂ ಚಾಶ್ವಾಸ್ಯ ಯ ಸ್ತೋಷಯೇತ್
ಮೋಹೋನ್ಮೂಲನ ಶಾಂತಿಸೌಖ್ಯ ಕಲನೇ ಯೋ ರತ್ನದೀಪಾಯತೇ ॥

ಈ ಪದ್ಯದ ಅರ್ಥವನ್ನು ಮೇಲೆ ೫೩-೫೫ ಪುಟಗಳಲ್ಲಿ ವಿವರಿಸಲಾಗಿದೆ. ಆನಂದವು ವಿಷಯಾನಂದ, ವಿದ್ಯಾನಂದ, ಬ್ರಹ್ಮಾನಂದ ಎಂದು ಮೂರು ಬಗೆಯಾಗಿ ಅನುಭವಕ್ಕೆ ಬರುತ್ತದೆ.

ಸಾಹಿತ್ಯವು ಸಂಸ್ಕೃತಿಯ ವಾಹನ.

ಸಂಸ್ಕೃತ ಭಾಷಾವ್ಯಾಸಂಗದಲ್ಲಿ ನಾವು ಆದರವುಳ್ಳವರಾಗಿರ ಬೇಕು. ಹಿಂದಿನ ಕಾಲದಲ್ಲಿದ್ದ ನಮ್ಮ ಪೂರ್ವಜರಾದ ಆರ್ಯರು ಸಂಪಾದಿ ಸಿದ್ಧ ತಿಳಿವಳಿಕೆ, ಸಾಧಿಸಿದ ಉದ್ದೇಶ ಫಲ ಗಳು ಇವೇ ಮುಂತಾದವಕ್ಕೆ ಸಂಸ್ಕೃತ ಭಾಷೆಯು ತವರುಮನೆ ಯಂತಿದೆ. ನಮ್ಮ ಪೂರ್ವಿಕರ ಧ್ಯೇಯ ಗುರಿಗಳು, ಸಂಸ್ಕೃತಿಯ ಐತಿಹ್ಯಗಳು ಇವುಗಳಿಗೆ ಸಂಸ್ಕೃತವು ಬೋಧಕಭಾಷೆ ಮಾತ್ರವಲ್ಲವು. ಈಗ ಭಾರತದಲ್ಲಿರುವ ಇತರ ಭಾಷೆಗಳೂ ಸಂಸ್ಕೃತದಿಂದ ತಮ್ಮ ಶಬ್ದಕೋಶಗಳನ್ನು ವಿಸ್ತರಿಸಿ ಬೆಳೆಸಿಕೊಳ್ಳುತ್ತಲೂ, ಭಾವಗಳ ಸ್ಫೂರ್ತಿಯನ್ನು ಪಡೆಯುತ್ತಲೂ ಇವೆ. ದಕ್ಷಿಣದೇಶದಲ್ಲಿರುವ

ನಾಲ್ಕು ದ್ರಾವಿಡಭಾಷೆಗಳು ತಮ್ಮ ಹುಟ್ಟು ಮತ್ತು ದಿನಗಟ್ಟಲೆಯ ವ್ಯಾವಹಾರಿಕ ರೂಪಗಳಲ್ಲಿ ಭಾರತಾರ್ಯರ (Indo Aryan) ಭಾಷೆಗಳ ಗುಂಪಿಗೆ ಸೇರದೆ ಇರುವುವುಗಳಾದರೂ, ಸಂಸ್ಕೃತ ದೊಡನೆ ಪರಸ್ಪರ ಸಂಪರ್ಕ, ಸಂಸ್ಕೃತಿಯ ಸಾಮ್ಯ, ಮತಧರ್ಮಗಳ ಹೊಂದಿಕೆ ಇವುಗಳಿಂದ ತಮ್ಮ ಭಾವಸಂಪತ್ತು, ಶಬ್ದಕೋಶ, ಭಾಷೆ ಇವುಗಳನ್ನು ಬೆಳೆಸಿಕೊಳ್ಳುತ್ತಲೇ ಇವೆ. ಹೀಗೆ ಭಾರತೀಯ ಭಾಷೆಗಳಿಗೆಲ್ಲಕ್ಕೂ ಸಂಸ್ಕೃತವು ಸ್ಫೂರ್ತಿ ಮೂಲವಾಗಿದೆ ಎನ್ನಬಹುದು.

ಸಂಸ್ಕೃತ ಸಾಹಿತ್ಯ ಸ್ಫೂರ್ತಿಗೆ ಮೂಲ.

"ಸಂಸ್ಕೃತ ಭಾಷೆಯು ಪೂರ್ವಕಾಲದಲ್ಲಿ ಅನೇಕ ಶತಮಾನಗಳವರೆಗೂ ಭಾರತಾರ್ಯರ ಐಕಮತ್ಯ ಭಾವನೆಗೆ ಮೂಲಾಧಾರವಾಗಿತ್ತು" ಎಂಬ ಮಾತಿನಲ್ಲಿ ತುಂಬ ಸತ್ಯಾಂಶವಿದೆ. ಈಗ್ಗೆ ಎರಡು ಸಾವಿರ ವರ್ಷಗಳ ಹಿಂದೆ ಭಾರತವು ಈಗ್ಗಿಂತಲೂ ದೊಡ್ಡ ಭಾರತವಾಗಿದ್ದಾಗಲೂ, ನಾಲ್ಕು ದಿಕ್ಕುಗಳಲ್ಲೂ ಬಹುದೂರ ದೇಶಗಳಲ್ಲಿ ವಾಸಿಸುತ್ತಿದ್ದರೂ ಭಾರತಾರ್ಯರು ತಾವು ಒಂದು ದೇಶದವರು, ಒಂದು ಸಂಸ್ಕೃತಿಯುಳ್ಳ ಒಂದು ಜನಾಂಗಕ್ಕೆ ಸೇರಿದವರು ಎಂಬ ಭಾವನೆಯನ್ನು ಹೇಗೆ ರೂಪಿಸಿಕೊಂಡು ಬೆಳೆಸಿಕೊಳ್ಳುತಾ ಬಂದರೆಂಬುದನ್ನು ಆಲೋಚಿಸಿದರೆ ಆಶ್ಚರ್ಯಕರವಾಗುತ್ತದೆ. ಈ ಐಕ್ಯಭಾವನೆಗೆ ಸಂಸ್ಕೃತ ಭಾಷೆ ಮತ್ತು ಅದರಲ್ಲಿ ಬರೆದಿರುವ ಗ್ರಂಥಗಳ ವ್ಯಾಸಂಗ, ಅದು ಬೋಧಿಸುವ ಧರ್ಮಗಳ ಆಚರಣೆ, ಅವು ಮನಗಾಣಿಸುವ ತತ್ವಗಳ ಸಾದರ ಸ್ವೀಕಾರ—ಇವೇ ಕಾರಣಗಳಾಗಿ ಇದ್ದುವೆಂದು ಒಪ್ಪಬೇಕಾಗುತ್ತದೆ.

ಸಂಸ್ಕೃತ ಭಾಷೆಯೂ ಧಾರ್ಮಿಕ ಸಂಸ್ಕೃತಿಯೂ.

ಅವರು ಪರಸ್ಪರವಾಗಿ ವ್ಯವಹಾರವನ್ನು ಇಟ್ಟುಕೊಳ್ಳುವುದಕ್ಕೆ ಸಂಸ್ಕೃತ ಭಾಷೆಯೇ ಮುಖ್ಯ ಕಾರಣವಾಗಿತ್ತೆಂದರೆ ಅತಿಶಯೋಕ್ತಿ ಏನೂ ಇಲ್ಲವು. ಇಷ್ಟು ಹೇಳಿದುದರಿಂದ ಸಂಸ್ಕೃತ ಭಾಷೆಯನ್ನು ಈಗಲೇ ರಾಷ್ಟ್ರಭಾಷೆಯಾಗಿ ಮಾಡ

ಬೇಕೆಂದೂ, ಅದು ಸಾಧ್ಯವೆಂದೂ ತಾತ್ಪರ್ಯವಲ್ಲವು. ಈ ಅಂಶ ವನ್ನು ಕೆಲವರು ಜನರ ಮುಂದಿಟ್ಟು ಹಾಗೆ ವಾದಿಸುತ್ತಿರುವುದೂ ನಿಜ. ಈ ಸಲಹೆಯನ್ನು ಆಚರಣೆಗೆ ತರಲು ಸಾಧ್ಯವೇ? ಉಚಿತವೇ? ಎಂಬ ಅಂಶಗಳನ್ನು ಪರ್ಯಾಲೋಚಿಸಬಹುದು. ಈಗಿನ ಕಾಲದಲ್ಲಿರುವ ಪರಿಸ್ಥಿತಿಗಳು ಹಿಂದಿನ ಕಾಲದವುಗಳಿಗಿಂತ ತುಂಬ ಭಿನ್ನವಾಗಿರುವುದೂ ನಿಜ. ಆದರೂ ಸಂಸ್ಕೃತ ಭಾಷೆಯ ಬಳಕೆ, ಸಂಸ್ಕೃತ ಗ್ರಂಥಗಳ ವ್ಯಾಸಂಗ- ಇವುಗಳಿಂದ ಈಗಲೂ ನಮಗೆ ಪ್ರಯೋಜನವಾಗುವುದರಲ್ಲಿ ಸಂದೇಹವಿಲ್ಲವು. ಭಾರತದಲ್ಲಿ ದೂರದೇಶಗಳಲ್ಲಿರುವ ಜನರು ಎಲ್ಲರೂ ತಾವು ಒಂದು ಜನಾಂಗಕ್ಕೆ ಸೇರಿದವರೆಂದೂ ಒಂದೇ ದೇಶದ ಪ್ರಜೆಗಳೆಂದೂ, ಒಂದೇ ಸರ್ಕಾರದ ಆಡಳಿತಕ್ಕೆ ಸೇರಿರಬೇಕೆಂದೂ, ಈ ಪರಿಯ ಐಕ್ಯಭಾವನೆಗೆ ಸಂಸ್ಕೃತ ಭಾಷೆಯೂ, ಸಾಹಿತ್ಯ ವ್ಯಾಸಂಗವೂ, ಷೋಡಶಕರ್ಮಗಳ ಧರ್ಮ ಗಳ ಆಚರಣೆಯೂ ಸಮಾನವಾಗಿ ಕಾರಣವಾಗಿದ್ದುವು. ದೇಶೀಯ ಭಾಷೆಗಳೂ ಸಂಸ್ಕೃತದಿಂದ ಸ್ಫೂರ್ತಿಯನ್ನು ಪಡೆಯುತ್ತಲೂ ತಮ್ಮ ಶಬ್ದಕೋಶಗಳನ್ನು ವಿಸ್ತರಿಸಿಕೊಳ್ಳುತ್ತಲೂ ಇವೆ. ಅನೇಕ ಶತಮಾನ ಗಳಿಂದ ಸಂಸ್ಕೃತವು ರಾಷ್ಟ್ರಭಾಷೆಯಾಗಿದ್ದಿತು. ಹೀಗೆ ಸಾಹಿತ್ಯ ಗಳಿಗೂ ಸಂಸ್ಕೃತಿಗಳಿಗೂ ಸಂಸ್ಕೃತವು ಸಹಾಯವನ್ನು ನೀಡುತ್ತಾ ಬಂದಿದೆ. ಇದು ರಾಷ್ಟ್ರೀಯ ಭಾಷೆಯಾಗಲು ಇತರ ಭಾಷೆಗಳಿ ಗಿಂತ ಹೆಚ್ಚು ಅರ್ಹತೆಯನ್ನೂ ಪಡೆದಿದೆ. ಈಗ ಭಾರತದಲ್ಲಿರುವ ದೇಶಗಳು ಪರಸ್ಪರವಾಗಿ ದೂರವಾಗಿದ್ದರೂ, ಆಯಾ ದೇಶಗಳಲ್ಲಿ ವಿಶಿಷ್ಟವಾಗಿರುವ ಪದ್ಧತಿಗಳೂ ಐತಿಹ್ಯಗಳೂ ಇದ್ದರೂ, ಔತ್ತರೇಯನು ದಕ್ಷಿಣ ದೇಶಕ್ಕೆ ಬಂದುನೋಡಿದರೆ ಜನರ ನಂಬಿಕೆಗಳೂ ಧರ್ಮಾ ಚರಣೆಗಳೂ ಸಮಾನವಾಗಿರುವುದನ್ನು ಮನಗಾಣಬಹುದಾಗಿದೆ. ಉದಾಹರಣೆಗೆ ವನಮಹೋತ್ಸವದ ಸಂದರ್ಭದಲ್ಲಿಯೂ ಧರ್ಮಾ ಚರಣೆಯ ವಿವರಗಳೂ ಸಮಾನವಾಗಿರುವುದನ್ನು ಎಲ್ಲರೂ ಮನ ಗಾಣಬಹುದಾಗಿದೆ.

ಸಂಸ್ಕೃತ ಭಾಷೆಯ ವಿಶೇಷ ಗುಣಗಳು.

ಹಿಂದೂ ಜನರು ತಮ್ಮ ಜನ್ಮಾವಧಿಯಲ್ಲಿ ಆಚರಿಸುತ್ತಿರುವ ಷೋಡಶ ಸಂಸ್ಕಾರಗಳೂ ಇಡಿ ಭಾರತದಲ್ಲಿ ಸಮಾನವಾಗಿರುತ್ತವೆ. ಆದುದರಿಂದ ಸಂಸ್ಕೃತ ವ್ಯಾಸಂಗಕ್ಕೆ ಉತ್ತೇಜನವನ್ನು ಕೊಡಬೇಕಾದುದು ಭಾರತೀಯರೆಲ್ಲರಿಗೂ ಸೇರಿದ ಕರ್ತವ್ಯ ಧರ್ಮವಾಗಿದೆ. ಸಂಸ್ಕೃತಭಾಷೆಗೆ ಎಷ್ಟರಮಟ್ಟಿನ ಸ್ಥಾನಮಾನಗಳನ್ನು ಕೊಡಬೇಕೆಂಬುದನ್ನು ಎಲ್ಲ ದೃಷ್ಟಿಗಳಿಂದಲೂ ಪರಿಶೀಲಿಸಿ ಗೊತ್ತು ಮಾಡುವುದು ನ್ಯಾಯವೂ ಉಚಿತವೂ ಸಫಲವೂ ಆಗಿರುತ್ತದೆ.

"ಅಯೋಧ್ಯಾ ಮಧುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ |
ಪುರೀ ದ್ವಾರವತೀ ಚೈವ ಸಪ್ತೈತೇ ಮೋಕ್ಷದಾಯಕಾಃ ||"

"ಗೋಕರ್ಣ ಸೇತೂ ಹಿಮವಾನ್ ಪ್ರಯಾಗ ಕಾಶ್ಮೀರ
ಸೋಮೇಶ್ವರ ರುದ್ರಪಾದಾಃ |
ಶ್ರೀರಂಗ ಕೇದಾರಮನಂತ ಕನ್ಯಾ ಸ್ವಾಮಿನ್ ಕುರುಕ್ಷೇತ್ರ
ಸದಾ ನಮಸ್ತೇ ||"

"ಇಮಂಮೇಗಂಗೇಯಮುನೇ ಸರಸ್ವತೀ ಸುತುದ್ರಿಸ್ತೋಮಂ
ಸಚತಾಪರುಷ್ಣಿಯಾ |
ಅಸಿಕ್ನಿಯಾಮರುದ್ವೃಧೇ......ಸ್ರುಣುಹ್ಯಾಸುಷೋಮಯಾ ||

"ಗಂಗೇಚಯಮುನೇ ಚೈವ ಗೋದಾವರೀ ಸರಸ್ವತೀ |
ನರ್ಮದೇ ಸಿಂಧು ಕಾವೇರಿ ಜಲೇऽಸ್ಮಿನ್ ಸನ್ನಿಧಿಂ ಕುರು || "

ಹೀಗೆ ಅಖಿಲಭಾರತದಲ್ಲಿರುವ ಪವಿತ್ರಕ್ಷೇತ್ರಗಳನ್ನೂ, ಪಾವನ ನದಿಗಳನ್ನೂ, ಎಲ್ಲ ಕರ್ಮಗಳಲ್ಲೂ ನೆನೆಯುವ ಈಗಲೂ ನಮ್ಮಲ್ಲಿರುವ ಪದ್ಧತಿಯು ಐಕ್ಯಭಾವನೆಗೆ, ನಾವೆಲ್ಲರೂ ಒಂದು ಜನಾಂಗಕ್ಕೆ ಸೇರಿದವರೆಂಬ ಭಾವನೆಗೆ ತುಂಬ ಸಹಾಯಮಾಡುತ್ತದೆ.

ಸಂಸ್ಕೃತ ಸಾಹಿತ್ಯದಲ್ಲಿ ಜ್ಞಾನ ಬಂಡಾರ.

ಸಂಸ್ಕೃತ ಸಾಹಿತ್ಯ ಗ್ರಂಥಗಳಲ್ಲಿ ಸಂಗ್ರಹಿಸಿರುವ ಬುದ್ಧಿಜ್ಞಾನಗಳು ಇತರ ಭಾಷೆಗಳಲ್ಲಿರುವುದಕ್ಕಿಂತ ಗುಣದಲ್ಲೂ ಪರಿಮಾಣದಲ್ಲೂ ಮಿಗಿಲಾಗಿವೆ. ಕಾವ್ಯಗಳು, ಕುಶಲಕಲೆಗಳು, ವೇದಾಂತ ಮತ್ತು ಮತಧರ್ಮಗಳು, ಭೌತಶಾಸ್ತ್ರಗಳೂ ಮುಂತಾದವುಗಳಲ್ಲಿ

ಭಾರತಾರ್ಯರ ಬುದ್ಧಿ ಜ್ಞಾನಗಳು ಕಾಪಾಡಲ್ಪಟ್ಟಿವೆ. ಕೃಷ್ಣದೇವರಾಯ, ವಿದ್ಯಾರಣ್ಯ, ತ್ಯಾಗರಾಯ, ಆಂಧ್ರ ದೇಶದ ಮಹಾಪುರುಷರೂ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಪುರಂದರದಾಸ, ಬಸವೇಶ್ವರ ಮುಂತಾದ ತಮಿಳು ಮತ್ತು ಕನ್ನಡದೇಶಗಳ ಮಹಾನುಭಾವರೂ ತಮ್ಮ ಸ್ಫೂರ್ತಿ ಜ್ಞಾನಗಳನ್ನು ಸಂಸ್ಕೃತದಲ್ಲೂ ದೇಶಭಾಷೆಗಳಲ್ಲೂ ಮಂಡಿಸಿ ಬೆಳೆಸಿರುತ್ತಾರೆ. ಆಂಧ್ರರ ಸಂಸ್ಕೃತಿಯ ಮೇಲೆ ಸಂಸ್ಕೃತ ಸಾಹಿತ್ಯದ ಪ್ರಭಾವವು, ಕನ್ನಡಿಗರ ತಮಿಳರ ಸಂಸ್ಕೃತಿಗಳ ಮೇಲೆ ಹೇಗೋ ಹಾಗೆ ಮೇಲ್ಮೆಯನ್ನು ಹೆಚ್ಚಾಗಿಯೇ ಉಂಟುಮಾಡಿದೆ.

ಸಂಸ್ಕೃತ ಭಾಷೆಯಲ್ಲಿ ರಾಷ್ಟ್ರೀಯ ಮನೋಭಾವವೂ ಜೀವಂತವಾಗಿದೆ.

ವೇದಗಳನ್ನು ಸುಸ್ವರವಾಗಿ ಸಂಹಿತಾ, ಪದ, ಕ್ರಮ, ಜಟಾ ಘನ, ಪಾಠಕ್ರಮಗಳಲ್ಲಿ ಸುಸ್ವರದಿಂದ ಗಾನ ಮಾಡುತ್ತಾ ಸ್ವಸ್ತಿವಾಚನ ಮಾಡಬಲ್ಲ ಪಂಡಿತರು ಹಿಂದಿನ ಕಾಲದಲ್ಲಿದ್ದಂತೆಯೇ ಈಗಲೂ ದೊರೆಯುತ್ತಾರೆ. ಸಾವಿತ್ರೀ ಸತ್ಯವಾನ್, ದಮಯಂತೀ ನಳ, ಚಂದ್ರಮತೀ ಹರಿಶ್ಚಂದ್ರ, ಸೀತಾರಾಮ, ರಾಧಾಕೃಷ್ಣ ಇಂತಹ ಆದರ್ಶಗಳನ್ನು ಚಿತ್ರಗಳಲ್ಲಿ ಪ್ರತಿಮೆಗಳಲ್ಲಿ, ಕಾವ್ಯನಾಟಕಗಳಲ್ಲಿ, ಪುರಾಣೇತಿಹಾಸಗಳಲ್ಲಿ ಹೇಗೋ ಹಾಗೆ ಜೀವನದಲ್ಲೂ ಹಿಂದಿನಂತೆ ಈಗಲೂ ಮುಂದಕ್ಕೂ ದೊರೆಯುವಂತೆ ಮಾಡುವುದು ನಮ್ಮ ಪಾಲಿಗೂ ಬಿದ್ದಿರುವ ಧರ್ಮವಾಗಿದೆ. ನಾವೂ ಅದನ್ನು ಬೆಳೆಸುತ್ತಿದೇವೆ. ಇದರಿಂದ ನಮ್ಮ ಪ್ರಗತಿಯೂ ದೇಶ ಕಲ್ಯಾಣವೂ ನೆರವೇರುತ್ತದೆ. ಬ್ರಿಟಿಷರ ಆಳುವಿಕೆಯ ಕಾಲದಲ್ಲಿ ಸಂಸ್ಕೃತಕ್ಕಾಗಲಿ ದೇಶ ಭಾಷೆಗಳಿಗಾಗಲಿ ತಕ್ಕಷ್ಟು ಉತ್ತೇಜನ ದೊರೆಯದೆ ಇಂಗ್ಲೀಷು ಆ ಸ್ಥಾನವನ್ನು ಆಕ್ರಮಿಸಿತ್ತು. ಸಂಸ್ಕೃತವು ಮೂಲೆಗೆ ಬಿದ್ದಿತು. ಕನ್ನಡನಾಡಿನಲ್ಲಿ ಕನ್ನಡವನ್ನು ಮೇಲಕ್ಕೆತ್ತಬೇಕೆಂಬ ಪ್ರಯತ್ನವು ಸಫಲವಾಗಿ ಸಂಸ್ಕೃತವು ಇನ್ನೂ ಮೂಲೆಗುಂಪಾಯಿತು. ಸಂಸ್ಕೃತ ಸಾಹಿತ್ಯ

ದಲ್ಲಿ ಅಡಗಿರುವ ಸಂಸ್ಕೃತಿಯ ಪುನರುಜ್ಜೀವನವು ಸ್ವತಂತ್ರ ಭಾರತದ ಹೊಸ ಶಕ್ತಿಗಳನ್ನು ಭದ್ರಗೊಳಿಸುವುದರಲ್ಲಿ ಆವಶ್ಯಕವಾಗಿರುತ್ತದೆ. ಸರ್ಕಾರದ ರಾಜ್ಯಸೂತ್ರಗಳಲ್ಲಿ ಇದಕ್ಕೆ ಅನುಕೂಲವಾದ ಮಾರ್ಪಾಡುಗಳು ಆಗಬೇಕಾಗಿವೆ. ಅವು ಆಗದೆ ಇದರ ಉಜ್ಜೀವನವು ಅಸಾಧ್ಯವಾಗಿರುತ್ತದೆ. ಆದುದರಿಂದ ಸರ್ಕಾರವು ಎಲ್ಲ ವಿದ್ಯಾಶಾಲೆಗಳಲ್ಲೂ ವಿಶ್ವವಿದ್ಯಾನಿಲಯಗಳಲ್ಲೂ ವಿದ್ಯಾರ್ಥಿಗಳು ನೆರವೇರಿಸಬೇಕಾಗಿರುವ ವ್ಯಾಸಂಗಕ್ರಮದಲ್ಲೂ, ಪಠ್ಯ ವಿಷಯಗಳಲ್ಲೂ, ಪಠ್ಯ ಗ್ರಂಥಗಳಲ್ಲೂ ಸಂಸ್ಕೃತಕ್ಕೆ ಧಾರ್ಮಿಕ ಗ್ರಂಥಗಳ ಪಾಠಪ್ರವಚನಗಳಿಗೆ ತಕ್ಕ ಸ್ಥಾನಮಾನಗಳನ್ನು ಕೊಡಿಸುವುದು ನಮ್ಮೆಲ್ಲರ ಮೇಲಿರುವ ಆವಶ್ಯಕವಾದ ಧರ್ಮವಾಗಿದೆ. ಇಂಗ್ಲಿಷ್ ವಿದ್ಯಾವಂತರಿಗೆ ದೊರೆಯುವ ಸ್ಥಾನಮಾನಗಳೂ ಜೀವನ ಸೌಕರ್ಯಗಳೂ ಸಂಸ್ಕೃತ ವಿದ್ಯಾವಂತರಿಗೆ ದೊರೆಯದೆ ಇರುವುದರಿಂದ ಪಂಡಿತರೂ ಅವರ ಮಕ್ಕಳೂ ಸಂಸ್ಕೃತ ವ್ಯಾಸಂಗವನ್ನು ಬಿಟ್ಟು ಇಂಗ್ಲಿಷ್ ವ್ಯಾಸಂಗಕ್ಕೆ ಸೇರುತ್ತಿದಾರೆ. ತಾವು ಕಡಿಮೆ, ಕೀಳು, ಎಂಬ (Inferiority complex) ಭಾವನೆ ಆ ವೈದಿಕ ಪಂಡಿತರಲ್ಲಿ ಉಂಟಾಗುತ್ತಿದೆ.

ಸಂಸ್ಕೃತ ಭಾಷೆಯನ್ನು ಕಲಿಯುವುದು ಕಷ್ಟವಲ್ಲ.

ಸಂಸ್ಕೃತ ಭಾಷೆಯನ್ನು ಕಲಿಯುವುದು ಕಷ್ಟವೆಂದು ಹೇಳುವ ಮಾತಿನಲ್ಲಿ ಸತ್ಯತೆ ಇಲ್ಲ. ಸಂಸ್ಕೃತ ಭಾಷೆಯನ್ನು ಸುಲಭಮಾಡುವುದರಿಂದ ಅದರಲ್ಲಿರುವ ಉತ್ತಮ ವಿಷಯವೂ ಗುಣವೂ ದೊರೆಯದೇ ಹೋಗುತ್ತದೆ. ಆದುದರಿಂದ ಅದನ್ನು ಸುಲಭಮಾರ್ಗದಲ್ಲಿ ಕಲಿಸಬೇಕು. ತಿರುವನಂತಪುರದಲ್ಲಿರುವ ಶ್ರೀ ಶಂಕರಸುಬ್ರಹ್ಮಣ್ಯ ಐಯರವರು ಆ ಮಾರ್ಗವನ್ನು ತೋರಿಸಿರುತ್ತಾರೆ. ಸಂಸ್ಕೃತವು ರಾಷ್ಟ್ರಭಾಷೆಯಾಗಲು ತೊಂದರೆಗಳಿರುವುದು ನಿಜ. ಸ್ವಾತಂತ್ರ್ಯವು ಬಂದಮೇಲೆ ಇಂಗ್ಲಿಷ್ ಭಾಷೆಯು ಫ್ರೆಂಚ್, ಜರ್ಮನ್, ರಷ್ಯನ್ ಮುಂತಾದ ಪರಭಾಷೆಗಳ ಸ್ಥಾನಕ್ಕೆ ಸೇರಬೇಕಾಗಿರುವುದು ನ್ಯಾಯವಾಗಿದೆ.

ಆದರೆ ಅದರ ಎಂದರೆ ಇಂಗ್ಲಿಷಿನ ಸ್ಥಾನದಲ್ಲಿರಲು ಭಾರತೀಯ ದೇಶಭಾಷೆಗಳಲ್ಲಿಯೂ ಯಾವುದೂ ತಕ್ಕಷ್ಟು ಬೆಳೆದಿಲ್ಲವು ಮತ್ತು ಅರ್ಹತೆಯುಳ್ಳವೂ ಅಲ್ಲವು. ಸಂಸ್ಕೃತವು ಆ ಭಾಷೆಗಳಿಗೆಲ್ಲಕ್ಕೂ ಸಹಾಯಮಾಡುತ್ತಿದೆ. ಅವುಗಳ ಶಬ್ದ ಕೋಶಗಳು ಬೆಳೆಯಬೇಕಾಗಿದೆ. ತಕ್ಕಗ್ರಂಥಗಳ ರಚನೆಯೂ ಆಗ ಬೇಕಾಗಿದೆ. ಇದರ ಜೊತೆಗೆ ಸಂಸ್ಕೃತ ಸಾಹಿತ್ಯದ ವಿಷಯ ಗೌರವವೂ ಭಾಷೆಯ ರೂಪಸಂಪತ್ತೂ ಶಬ್ದಕೋಶದ ವಿಸ್ತಾರವೂ ರಾಷ್ಟ್ರಭಾಷೆಯಾಗಲು ಅರ್ಹತೆಯನ್ನು ತೋರಿಸುತ್ತಿವೆ. ಎಂಬು ದನ್ನು ಎಲ್ಲರೂ ಸಹೃದಯತೆಯಿಂದ ಗಮನಿಸುತ್ತಾ ಬಂದರೆ ಮುಂದಿನ ಕೆಲಸವು ಸುಲಭವಾಗುತ್ತದೆ—ಎಂದು ಧೈರ್ಯವಾಗಿ ಹೇಳಬಹುದು. ನಮ್ಮ ದೇಶದಲ್ಲಿ ಪ್ರಾದೇಶಿಕ ಭಾಷೆಗಳು ಅನೇಕ ವಾಗಿರುವುದರಿಂದ ಅವುಗಳಲ್ಲಿ ಯಾವುದನ್ನು ರಾಷ್ಟ್ರಭಾಷೆಯಾಗಿ ಮಾಡಬೇಕೆಂದು ಗೊತ್ತುಮಾಡುವುದರಲ್ಲಿ ತೊಡಕುಗಳಿವೆ. ಆ ದೇಶೀಯ ಭಾಷೆಗಳು ಇನ್ನೂ ಬೆಳೆಯಬೇಕಾಗಿವೆ. ಎಲ್ಲ ದೇಶೀಯ ಭಾಷೆಗಳಿಗೆ ಸಂಸ್ಕೃತವು ಬೆಳೆಯಲು ಸಹಾಯವನ್ನು ನೀಡುತ್ತಾ ಬಂದಿರುವುದು ನಿಜವಾಗಿರುವುದರಿಂದ ಸಂಸ್ಕೃತವನ್ನೇ ರಾಷ್ಟ್ರಭಾಷೆ ಯನ್ನಾಗಿ ಮಾರ್ಪಡಿಸಿಕೊಳ್ಳುವುದು ಸುಲಭವೂ ಸುಖಕರವೂ ಆಗಿರುತ್ತದೆ.

ಸಂಸ್ಕೃತವು ರಾಷ್ಟ್ರ ಭಾಷೆಯಾಗಲು ತಕ್ಕ ಗುಣ ವಿಶೇಷಗಳಿವೆ.

ಒಂದು ಭಾಷೆಯು ಪಡೆದಿರುವ ಶಬ್ದ ಸಂಪತ್ತು, ಅರ್ಥ ಗೌರವ, ರೂಪನಿಷ್ಪಾದನ ಸೌಕರ್ಯ, ಭಾವ ಗಾಂಭೀರ್ಯ, ಬಹುಕಾಲದಿಂದಲೂ ಬೆಳೆದು ಬಂದಿರುವಿಕೆ, ಇವೆಲ್ಲವೂ ಆ ಭಾಷೆಯು ಇತರ ಭಾಷೆಗಳ ಬೆಳವಳಿಗೆಗೆ ಸಹಾಯ ಮಾಡುವುದರಲ್ಲಿಯೂ, ರಾಷ್ಟ್ರಭಾಷೆಯಾಗುವುದರಲ್ಲಿಯೂ ಅರ್ಹತೆ ಯನ್ನು ಪಡೆದಿರುತ್ತದೆ. ಈ ಗುಣವೆಲ್ಲವೂ ಸಂಸ್ಕೃತದಲ್ಲಿ

ರಾಷ್ಟ್ರಭಾಷೆಯಲ್ಲಿ ರಬೇಕಾದ ಗುಣ ವಿಶೇಷಗಳು.

ಹೆಚ್ಚಾಗಿಯೇ ಇದೆ. ದೇಶೀಯ ಭಾಷೆಗಳೆಲ್ಲವೂ ಸಂಸ್ಕೃತದಿಂದ ಸಹಾಯವನ್ನು ಪಡೆಯುತ್ತಾ ಬೆಳೆದುಬರುತ್ತಿರುವುದರಿಂದ ಸಂಸ್ಕೃತವನ್ನು ರಾಷ್ಟ್ರಭಾಷೆಯಾಗಿ ಮಾಡಿಕೊಳ್ಳುವುದು ಕಷ್ಟವಾಗುವುದಿಲ್ಲ. ಆದುದರಿಂದ ಈ ಉದ್ದೇಶದ ಸಾಧನೆಗಾಗಿ ವಿಶ್ವವಿದ್ಯಾನಿಲಯಗಳ ಸಂಸ್ಕೃತ ಭಾಗಗಳಲ್ಲಿ ಸಂಸ್ಕೃತಾಭ್ಯಾಸವನ್ನು ಇನ್ನೂ ಹೆಚ್ಚಿಸಲು ಉತ್ತೇಜನವನ್ನು ಕೊಡಬೇಕಾಗಿದೆ. ಎಲ್ಲ ಪ್ರಾಧ್ಯಾಪಕರೂ ಸಂಸ್ಕೃತಾಭ್ಯಾಸ ಮಾಡಲು ಪ್ರೋತ್ಸಾಹಿಸಬೇಕು. ಅವರು ಸಂಶೋಧನೆಗಳನ್ನು ನಡೆಸಬೇಕು. ವಿದ್ಯಾರ್ಥಿಗಳಿಗೆ ಹೆಚ್ಚಿನ ಸಹಾಯವನ್ನು ಒದಗಿಸಬೇಕು. ಎಲ್ಲ ವೈಜ್ಞಾನಿಕ ಗ್ರಂಥಗಳ ಸಂಗ್ರಹಗಳನ್ನು ಸಂಸ್ಕೃತದಲ್ಲಿ ಪ್ರಕಟಿಸಬೇಕು. ಸಾಂಪ್ರದಾಯಿಕ ರೀತಿಯಂತೆ ಭಾಷಾಭ್ಯಾಸವನ್ನು ಆಳವಾಗಿ ನೆರವೇರಿಸಲು ಸಹಾಯ ಪ್ರೋತ್ಸಾಹಗಳನ್ನು ಒದಗಿಸಬೇಕು.

ಉಪದೇಶಗಳೂ ರಾಷ್ಟ್ರೀಯ ಭಾವನೆಗೆ ಅನುಕೂಲವಾಗಿವೆ.

ನಮ್ಮ ಋಷಿಗಳು ಬೋಧಿಸಿದ ಸಾರಾಂಶವು "ಸತ್ಯಂವದ, ಧರ್ಮಂ ಚರ" "ಸಹನಾವವತು, ಸಹ ನಾ ಭುನಕ್ತು, ಸಹವೀರ್ಯಂ ಕರವಾವಹೈ, ತೇಜಸ್ವಿ ನಾವಧೀತ ಮಸ್ತು, ಮಾವಿದ್ವಿಷಾವಹೈ"

"ಸತ್ಯವನ್ನು ಹೇಳು. ಧರ್ಮವನ್ನು ಆಚರಿಸು. ಗುರುಶಿಷ್ಯರಾದ ನಾವಿಬ್ಬರೂ ಕಲಿತು ಕಲಿಸುತ್ತಿರುವ ವಿದ್ಯೆಯು ಗುರುಶಿಷ್ಯರಿಬ್ಬರನ್ನೂ ಕಾಪಾಡಲಿ, ಇಬ್ಬರೂ ಸುಖಾನುಭವಗಳನ್ನು ಪಡೆಯುತ್ತಿರುವಂತಾಗಲಿ, ಶಾಶ್ವತವಾಗಿರುವ ಕೆಲಸವನ್ನು ಮಾಡುತ್ತಿರುವಂತಾಗಲಿ, ತಿಳಿವಳಿಕೆಯ ಬೆಳಕನ್ನೂ ಶಕ್ತಿಯನ್ನೂ ನೀಡುತ್ತಿರಲಿ, ದ್ವೇಷಬುದ್ಧಿಯು ಉಂಟಾಗದಿರಲಿ." ಎಂಬುದೇ ಆಗಿದೆ. ಈಗಿನ ಶಾಂತಿಕಾಲದಲ್ಲಿ ಯುದ್ಧವನ್ನು ತಡೆಗಟ್ಟುತ್ತಾ ಶಾಂತಿಗಾಗಿ ದುಡಿಯುವುದು ಈಗ ಜನರ ಗುರಿಯಾಗಿದೆ. ನಮ್ಮ ನಾಯಕರೂ ಅದಕ್ಕಾಗಿ ಪಂಚಶೀಲತತ್ವಗಳನ್ನು ಪ್ರಚಾರಮಾಡುತ್ತಾ ಅನುಸರಿಸುತ್ತಾ ದುಡಿಯುತ್ತಿ

ದಾರೆ. ಜನಜೀವನದಲ್ಲಿ ಸಂಸ್ಕೃತಿಯನ್ನು ಬೆಳೆಸಲೂ ಸಂಸ್ಕೃತಭಾಷಾ ಮತ್ತು ಸಾಹಿತ್ಯಗಳಿಂದ ದೊರೆತಿರುವ ಸಹಾಯವು ನಾಗರಿಕತೆಯ ಪ್ರಾರಂಭ ಕಾಲದಿಂದಲೂ ಸಂತತವಾಗಿಯೂ ಹೆಚ್ಚಾಗಿಯೂ ಲಭಿಸಿದೆ. ಅದರ ಪ್ರಚಾರವು ಮಧ್ಯ ಏಷ್ಯಾ, ಚೈನಾ, ಯೂರೋಪು ಪ್ರದೇಶಗಳಲ್ಲಿಯೂ ವ್ಯಾಪಿಸಿತ್ತು. ನಮ್ಮ ದೇಶದಲ್ಲಿರುವ ವೇದಾಂತ, ಸಾಹಿತ್ಯ, ವಿಜ್ಞಾನ ಗ್ರಂಥಗಳಲ್ಲಿರುವ ವಿಷಯಗಳಲ್ಲಿ ಬಹುಭಾಗವು ಸಂಸ್ಕೃತದಲ್ಲಿದೆ. ನಮ್ಮ ವೇದಗಳು, ಉಪನಿಷತ್ತುಗಳು, ಇತಿಹಾಸ ಪುರಾಣಗಳು, ರಾಮಾಯಣ, ಮಹಾಭಾರತ ಮುಂತಾದ ಉತ್ತಮ ಗ್ರಂಥಗಳು ಮೇಲ್ಮೆಯನ್ನು ಉಂಟುಮಾಡುವ ಸ್ಫೂರ್ತಿದಾಯಕಗಳಾದ ಸಂದೇಶಗಳನ್ನು ಈಗಲೂ ನೀಡುತ್ತಿವೆ. ಸಂಸ್ಕೃತ ಭಾಷೆಯಲ್ಲಿ ಧ್ವನಿ ಮಾಧುರ್ಯ, ಸ್ವರಯೋಜನೆ, ತಾಲಬದ್ಧತೆ ಮತ್ತು ವ್ಯಾಕರಣ ಕ್ರಮ ಇವುಗಳು ಇತರಾತಿಶಾಯಿಗಳಾಗಿವೆ. ಸಂಸ್ಕೃತ ಭಾಷೆಯು ಆಗಲೂ ಹೊಂದಿಕೊಳ್ಳುವ ಮತ್ತು ಬೆಳೆಯುವ ಸಾಮರ್ಥ್ಯವನ್ನು ತೋರಿಸುತ್ತಿತ್ತು. ಈ ಗುಣವೂ ಈಗಲೂ ಇದೆ. ಪ್ರೌಢವಾದ ಬ್ರಹ್ಮವಿದ್ಯಾ, ಆತ್ಮವಿದ್ಯಾ ಮುಂತಾದ ತತ್ವಶಾಸ್ತ್ರ, ಧರ್ಮಶಾಸ್ತ್ರಗಳಲ್ಲೂ ಲೌಕಿಕಗಳಾದ ವೈದ್ಯ, ಭೌತಶಾಸ್ತ್ರ, ಜ್ಯೋತಿಷ, ಗಣಿತ, ಅರ್ಥಶಾಸ್ತ್ರ ಮುಂತಾದ ಶಾಸ್ತ್ರಗಳಲ್ಲೂ ಎಲ್ಲ ಭಾವಗಳ ಸೂಕ್ಷ್ಮಭೇದಗಳನ್ನೂ ತಿಳಿಸಬಲ್ಲ ಪದಸಂಪತ್ತಿನಿಂದ ಕೂಡಿದೆ. ಸಾಹಿತ್ಯ, ವ್ಯಾಕರಣ, ನಾಟಕ, ಕಾವ್ಯ, ಅಲಂಕಾರ ಮುಂತಾದ ಶಾಸ್ತ್ರಗಳಲ್ಲಿ ತುಂಬಿರುವ ಭಾವ ಸಂಪತ್ತು ಆಶ್ಚರ್ಯಕರವಾಗುವಷ್ಟಿದೆ. ವಂಶಪರಂಪರೆಯಿಂದ ಬೆಳೆಯುತ್ತಾ ಬಂದಿರುವ ಈ ಸಾಹಿತ್ಯವೆಂಬ ಧನ ಸಂಪತ್ತು ಈ ದೊಡ್ಡ ಖಂಡದಷ್ಟು ವಿಸ್ತಾರವಾಗಿರುವ ದೇಶದಲ್ಲಿ ಔತ್ತರೇಯರನ್ನೂ, ದಾಕ್ಷಿಣಾತ್ಯರನ್ನೂ ಮತ್ತು ಪಶ್ಚಿಮ ಪೂರ್ವದೇಶವಾಸಿ ಜನರೆಲ್ಲರನ್ನೂ ಸಂತತವಾಗಿ ಒಂದುಗೂಡಿಸುತ್ತಿರುವ ಶಕ್ತಿಯಾಗಿದೆ. ಈ ಅಮೂಲ್ಯವಾದ ಆಸ್ತಿಯಿಂದ ಪ್ರತಿಯೊಬ್ಬ ಭಾರತೀಯನೂ ನ್ಯಾಯವಾದ ಹೆಮ್ಮೆಯನ್ನೂ, ಬೆಳಕನ್ನೂ

ಅನುಭವಿಸುತ್ತಾನೆ. ಹೀಗಿದ್ದರೂ ಈಚೆಗೆ ಅನೇಕ ಕಾರಣಗಳಿಂದ ನಮ್ಮ ಸಮಾಜದಲ್ಲಿ ಅಭಿವೃದ್ಧಿಯು ನಿಂತು ಅವನತಿಯು ತಲೆಹಾಕಿದೆ. ಈಗ ಸ್ವಾತಂತ್ರ್ಯವು ಬಂದಿರುವುದರಿಂದ ಈ ಅಮೂಲ್ಯ ಭಾಷೆಯು ಪೂರ್ವದ ಉಜ್ವಲಸ್ಥಿತಿಯನ್ನು ಪುನಃ ಪಡೆಯುವಂತೆ ಮಾಡಲು ಸಾಧ್ಯವಾಗುತ್ತದೆಂದು ನಿರೀಕ್ಷಿಸಬಹುದು. ಈ ಸದವಕಾಶವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕು.

ರಾಷ್ಟ್ರೀಯ ಭಾವನೆಯನ್ನು ಬೆಳೆಸುವ ಬಗೆ, ಸರ್ವಮತ ಸಮತಾ ಭಾವನೆ.

“ಡಾ|| ಎಸ್. ರಾಧಾಕೃಷ್ಣರವರು 1955ನೇ ಇಸವಿ ಡಿಸೆಂಬರ್ 26ನೇ ತಾರೀಖಿನಲ್ಲೂ ಅಧ್ಯಕ್ಷ ಪದವಿಯಿಂದ ಹೀಗೆ ಹೇಳಿದರು. “ಇನ್ನು ಮೇಲೆ ಮತಧರ್ಮಗಳು ಪರಸ್ಪರವಾಗಿ ಪ್ರತಿಭಟಿಸುವ, ಖಂಡಿಸುವ ಸ್ವಭಾವವನ್ನು ಬಿಟ್ಟು ಸಹಾನುಭೂತಿಯಿಂದ ಸಹಕರಿಸುವ ಮನೋಭಾವದಿಂದ ಮುಂದುವರಿಯಬೇಕಾಗಿದೆ. ಯಾವ ಮತವೂ ತನ್ನ ಮತವೇ ಶ್ರೇಷ್ಠವೆಂದಾಗಲಿ ಪರಮಾರ್ಥ ಸತ್ಯದ ಕಡೆಯ ಪೂರ್ಣ ಸ್ವರೂಪವನ್ನು ತಮ್ಮ ಮತವೇ ಬೋಧಿಸುತ್ತದೆ ಎಂದೂ ತಿಳಿಯಬಾರದು. ಈಗಿರುವ ದೊಡ್ಡ ಮತಗಳಲ್ಲಿ ಎಲ್ಲವುಗಳಲ್ಲೂ ಕೆಲವು ಮೂಲಭೂತವಾದ ಸಮಾನವಾದ ಉಪದೇಶಗಳಿರುತ್ತವೆ. ಇವನ್ನು ಅವು ಮುಂದುಮಾಡದೆ ಗಮನಿಸದಿದ್ದರೆ ದೇಶದಲ್ಲಿ ನಾಶಕಾರಿ ಮನೋಭಾವದವರನ್ನೂ, ನಾಸ್ತಿಕರನ್ನೂ ಶ್ರದ್ಧಾಭಕ್ತಿಹೀನರನ್ನೂ ತಡೆಯುವುದು ಅಸಾಧ್ಯವಾಗುತ್ತದೆ. ಮುಂದಿನ ನಮ್ಮ ಸ್ಥಿತಿಯು ಏನಾಗುವುದೆಂಬ ವಿಷಯದಲ್ಲಿ ನಾವು ಕತ್ತಲಲ್ಲಿ ತಡಕಾಡುತ್ತಿರುವವರಂತಿದ್ದೇವೆ. ಹೀಗಿರುವಾಗ ನಾವು ಸತ್ಯ ತತ್ವವನ್ನು ಕಾಣಲು ಅಡ್ಡಿಯಾಗುವ ಮತಾಂಧತೆ, ಪ್ರಾಚೀನಪ್ರೇಮ, ಕುರುಡು ಪದ್ಧತಿ ಇವುಗಳ ವಿಷಯದಲ್ಲಿ ತುಂಬ ಜಾಗರೂಕರಾಗಿ ವರ್ತಿಸಬೇಕು. ಮತಧರ್ಮದ ಬೆಂಬಲದಿಂದ ಮುಂದಿನ ಜಗತ್ತನ್ನು ಕಾಪಾಡಲು ಸಾಧ್ಯವಾಗಬಹುದೆಂಬ ನಿರೀಕ್ಷಣೆಯನ್ನು ಮಾನವನಲ್ಲಿ ಬಲಪಡಿಸು

ವಂತಾಗಬೇಕು. ಪಾಶ್ಚಾತ್ಯರ ಅನುಭವಗಳಲ್ಲಿ ಯೆಹೂದ್ಯರು, ಕ್ರಿಶ್ಚಿಯನ್ನರು ಮತ್ತು ಮುಸಲ್ಮಾನರು ಬೆಳವಣಿಗೆಯನ್ನುಂಟು ಮಾಡಿರುವಂತೆ ಪೂರ್ವಾತ್ಯರಲ್ಲಿ ಅನುಭವಗಳ ಬೆಳವಣಿಗೆಗೆ ಹಿಂದೂ, ಬೌದ್ಧ, ಚೀನಾ, ಜಪಾನ್ ಮತಗಳು ಸಹಕರಿಸಿ ಸಹಾಯ ಮಾಡಿವೆ ಎಂಬುದನ್ನು ಗಮನಿಸಬೇಕು. ಈ ಮತಧರ್ಮಗಳ ಪರಸ್ಪರ ಸಂಬಂಧವು, ಗಿಡಗಳನ್ನು ಕಶಿಮಾಡುವಂತೆ, ಎಲ್ಲ ಜನರ ಆಧ್ಯಾತ್ಮಿಕ ಜೀವನದಲ್ಲೂ, ವಿಶ್ವವ್ಯಾಪಿಯಾದ ನೀತಿ ಧರ್ಮಗಳ ಅನುಸರಣೆಯಲ್ಲೂ ತುಂಬ ಫಲಕಾರಿಯಾಗುವಂತೆ ಮಾಡುತ್ತದೆ. ಆದುದರಿಂದ ಎಲ್ಲ ಮತೀಯರೂ ಪರಸ್ಪರವಾಗಿ ಸಹಾನುಭೂತಿ ಸಹಕಾರಗಳಿಂದ ವರ್ತಿಸುತ್ತಾ ಸರ್ವಮತಧರ್ಮಗಳಲ್ಲೂ ಸಮತಾ ಭಾವನೆಯಿಂದ ನಡೆದುಕೊಂಡರೆ ನಮ್ಮ ಭವಿಷ್ಯವೂ ಸುಖದಾಯಕವಾಗುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿದ್ದಾರೆ.

ಹಿಂದೆ ಸೂಚಿಸಿದ ಧರ್ಮದ ಆವಿರ್ಭಾವವನ್ನು ಹೀಗೆ ವರ್ಣಿಸಿದೆ.

ವಿಶ್ವಧರ್ಮದ ಅರಿವು ಮೊದಲು ಮೂಡಿದಕಥೆ.

ದೇವತೆಗಳು ಒಂದು ದಿನ ಸುಧರ್ಮ ಸಭೆಯಲ್ಲಿ ನೆರೆದಿದ್ದರು. ಅವರ ಮುಖದಲ್ಲಿ ವಿಷಾದವೂ, ಆಲೋಚನೆಯೂ ಎದ್ದು ಕಾಣುತ್ತಿತ್ತು. ಮಾನವರು ದಬ್ಬಾಳಿಕೆ, ನಿರಂಕುಶ ಪ್ರವೃತ್ತಿ, ಧರ್ಮಾತಿಕ್ರಮ ಇವುಗಳಿಂದ ಪೀಡಿತರಾಗಿ ದೇವತೆಗಳಲ್ಲಿ ಮೊರೆಯಿಡುತ್ತಿದ್ದರು. ಭೂದೇವಿಯು ಪಾಪಿಗಳ ಭಾರವನ್ನು ತಾಳಲಾರದೆ ಸುಧರ್ಮ ಸಭೆಗೆ ಹೊರಟಳು, ದಾರಿಯಲ್ಲಿ ನಾರದರು ಸಿಕ್ಕಿದರು. ಅವರೂ ಅವಳನ್ನು ಆ ಸಭೆಗೆ ಕರೆದುಕೊಂಡುಹೋದರು. ಆ ಸಭೆಯಲ್ಲಿ ಮೌನವೂ, ಶಾಂತಿಯೂ ತುಂಬಿತ್ತು. ನಾರದನು ಬ್ರಹ್ಮದೇವನಲ್ಲಿ ಭೂದೇವಿಯ ಮೊರೆಯನ್ನು ವಿಜ್ಞಾಪಿಸಿದನು. ಅವನೂ ಸ್ವಲ್ಪ ಹೊತ್ತು ಯೋಚಿಸಿ ಅವರೊಡನೆ ಕೈಲಾಸಕ್ಕೆ ಹೊರಟನು. ಅಲ್ಲಿ ಶಿವನನ್ನು ಕಂಡು ಭೂಲೋಕದ ಸ್ಥಿತಿಯನ್ನು ನಿವೇದಿಸಿದನು. ಮಹಾ ದೇವನು ಮತಧರ್ಮಗಳನ್ನು ಪುನಃ ಸಂಸ್ಥಾಪನೆ ಮಾಡಿದ

ಹೊರತು ಬೇರೆ ಮಾರ್ಗವಿಲ್ಲ. ನೀವು ಹಿಂತಿರುಗಿ ಹೋಗಿರಿ. ದಾರಿಯಲ್ಲಿ ಪದ್ಮವರ್ಣನೆಂಬ ಪಾಪಿಯು ಸಿಕ್ಕುವನು. ಅವನಿಗೆ ಧರ್ಮವನ್ನು ಉಪದೇಶಿಸಿರಿ. ಅವನು ಧರ್ಮಪ್ರಚಾರ ಕಾರ್ಯವನ್ನು ನೆರವೇರಿಸುತ್ತಾನೆಂದು ಬುದ್ಧಿವಾದವನ್ನು ಹೇಳಿದನು.

ಧರ್ಮದ ಆವಿರ್ಭಾವದ ಕಥೆ—ಪದ್ಮವರ್ಣನ ಕಥೆ.

ಅವರು ಬರುತ್ತಾ ದಾರಿಯಲ್ಲಿ ಪದ್ಮವರ್ಣನ ನಗರದ ಸಮೀಪಕ್ಕೆ ಬರುವಾಗಲೇ ಆರ್ತರ ದೀನ ಧ್ವನಿಯನ್ನು ಕೇಳಿದರು. ಬ್ರಹ್ಮನೂ, ನಾರದನೂ ಶ್ರೀಮಂತರಾದ ವರ್ತಕರಂತೆ ವೇಷಧಾರಿಗಳಾಗಿ ಪದ್ಮವರ್ಣನ ಸಮೀಪಕ್ಕೆ ಹೋದರು. ಅವನು ಅವರಿಗೆ ಸತ್ಕಾರವನ್ನು ಮಾಡಿ ಮಾತನಾಡುತ್ತಿರುವಾಗಲೇ ಅವರಲ್ಲಿದ್ದ ವ್ಯಾಪಾರಕ್ಕಾಗಿ ತಂದಿದ್ದ ಹಣವನ್ನು ತಿಳಿದನು. ಆ ರಾತ್ರಿ ಅವರನ್ನು ಕೊಲ್ಲಲು ಆಯುಧಧಾರಿಗಳಾದ ಕಟುಗರನ್ನು ಕಳುಹಿಸಿದನು. ಅವರು ಆ ವ್ಯಾಪಾರಿಗಳ ಮೇಲೆ ಕೈಯೆತ್ತಲು ಆ ಕೈಗಳು ಹಾಗೆಯೇ ನಿಂತವು. ಅದು ದೈವಸಂಕಲ್ಪದಿಂದ ಹಾಗೆ ಆಯಿತು. ಕಡೆಗೆ ಪದ್ಮವರ್ಣನೇ ಬಂದು ಆ ವರ್ತಕನನ್ನು ಆಕ್ರಮಿಸಹೋದನು. ಆಗ ಬ್ರಹ್ಮನು ಆ ಪದ್ಮವರ್ಣನನ್ನು ಕುರಿತು, "ತಮ್ಮಾ, ನಿನ್ನ ಅತಿಥಿ ಸತ್ಕಾರದಿಂದ ನಾವು ಸಂತುಷ್ಟರಾಗಿದ್ದೇವೆ. ನಮ್ಮಿಂದ ನೀನು ಏನನ್ನು ಅಪೇಕ್ಷಿಸುತ್ತಿರುವೆ ?" ಎಂದು ಕೇಳಿದನು. ಅದಕ್ಕೆ ಅವನು "ನಾನು ನಿಮ್ಮಲ್ಲಿರುವ ಧನವನ್ನು ಅಪೇಕ್ಷಿಸುತ್ತೇನೆ" ಎನ್ನಲು, ಬ್ರಹ್ಮನು "ಹಾಗೇ ಆಗಲಿ, ನೀನು ಈ ಹಣವನ್ನು ನಿನ್ನ ಮರಣಾನಂತರದಲ್ಲಿ ಪರಲೋಕಕ್ಕೆ ತೆಗೆದುಕೊಂಡುಹೋಗುವುದಾದರೆ ಕೊಡುವೆವು" ಎಂದು ಉತ್ತರಿಸಿದನು ; ಮತ್ತು ಅವನನ್ನು ಆ ಊರಿನ ಸ್ಮಶಾನಕ್ಕೆ ಹೋಗಿ ಯಾರಾದರೂ ತಮ್ಮ ಧನವನ್ನು ತೆಗೆದುಕೊಂಡು ಹೋಗುತ್ತಾರೆಯೇ ? ಎಂಬುದನ್ನು ನೋಡಿ ಬಾರೆಂದು ಕಳುಹಿಸಿದನು. ಅವನು ಹಾಗೆ ಅಲ್ಲಿಗೆ ಹೋಗಿ ನೋಡಲು ಸತ್ತವರು ಯಾರೂ ತಮ್ಮ ಜತೆಯಲ್ಲಿ ತಮ್ಮ ಸಂಪತ್ತನ್ನು ತೆಗೆದುಕೊಂಡು ಹೋಗದೆ

ಇರುವುದನ್ನು ನೋಡಿಬಂದು ಆ ವಿಷಯವನ್ನು ಅವರಿಗೆ ನಿವೇದಿಸಿದನು. ಮತ್ತು ಆ ಪದ್ಮವರ್ಣನಿಗೆ ಆಗ ಜ್ಞಾನೋದಯವಾಯಿತು. ಆಗ ಬ್ರಹ್ಮನು ;

" ವಿತ್ತಾನಿ ಭೂಮೌ ಪ ಶವಶ್ಚಗೋಷ್ಠೇ ಭಾರ್ಯಾ ಗೃಹ ದ್ವಾರಿ ಜನಃ ಸ್ಮಶಾನೇ ।
ದೇಹಶ್ಚಿತಾಯಾಂ ಪರಲೋಕಮಾರ್ಗೇ ಧರ್ಮಾನುಗೋ ಗಚ್ಛತಿ ಜೀವ ಏಕಃ ॥ "

ಧನ ಸಂಪತ್ತೆಲ್ಲವೂ ಭೂಮಿಯಲ್ಲೇ ಉಳಿಯುತ್ತದೆ. ದನಕರುಗಳು ಕೊಟ್ಟಿಗೆಯಲ್ಲೇ ಉಳಿಯುತ್ತವೆ. ಹೆಂಡತಿಯು ಮನೆಯ ಬಾಗಿಲಿನಲ್ಲೇ ನಿಲ್ಲುತ್ತಾಳೆ. ನೆಂಟರಿಷ್ಟರೂ, ವಾಹಕರೂ ಸ್ಮಶಾನದಲ್ಲೇ ನಿಲ್ಲುತ್ತಾರೆ. ಕಡೆಗೆ ಈ ದೇಹವೂ ಕೂಡ ಚಿತೆಯಲ್ಲಿ ಸುಟ್ಟುಬೂದಿಯಾಗುತ್ತದೆ. ಸತ್ತವನ ಜೊತೆಯಲ್ಲಿ ಯಾವುದೂ ಬರುವುದಿಲ್ಲ. ಪರಲೋಕದ ದಾರಿಯಲ್ಲಿ ಹೋಗುವಾಗ ಜೀವನನ್ನು ಧರ್ಮವು ಒಂದು ಮಾತ್ರ ಅನುಸರಿಸಿಹೋಗುತ್ತದೆ. ಆದುದರಿಂದ ಸಂಪತ್ತನ್ನು ಸಂಪಾದಿಸುವುದಕ್ಕಿಂತಲೂ ಅದರ ವಿನಿಯೋಗದಿಂದ ಧರ್ಮವನ್ನು ಸಂಪಾದಿಸುತ್ತಿರುವುದು ಮೇಲಾದ ಕಾರ್ಯವು.

" ಮೃತಂ ಶರೀರ ಮುತ್ಸೃಜ್ಯ ಕಾಷ್ಠಲೋಷ್ಟಸಮಂ ಕ್ಷಿತೌ ।
ವಿಮುಖಾ ಬಾಂಧವಾ ಯಾಂತಿ ಧರ್ಮ ಸ್ತಮನು ಗಚ್ಛತಿ ॥
ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಂ ॥ "

ಧರ್ಮನಿಷ್ಠರ ಉಪದೇಶವು ಸಾರ್ಥಕವಾಗುತ್ತದೆ.

ಸತ್ತ ಶರೀರವು ಕಟ್ಟಿಗೆಯ ತುಂಡಿನಂತೆಯೂ, ಮಣ್ಣಿನ ಹೆಂಟೆಯಂತೆಯೂ, ಭೂಮಿಯ ಮೇಲೆ ಬಿದ್ದಿರುವುದನ್ನು ನೋಡಿ, ನೆಂಟರಿಷ್ಟರು ತಮ್ಮ ಮುಖವನ್ನು ತಿರುಗಿಸಿಕೊಂಡು ಹೊರಟುಹೋಗುತ್ತಾರೆ. ಆದರೆ ಧರ್ಮ ಒಂದು ಮಾತ್ರ ಅವನನ್ನು ಹಿಂಬಾಲಿಸಿಹೋಗುತ್ತಿರುತ್ತದೆ. ಈ ಧರ್ಮದ ಸಹಾಯದಿಂದಲೇ ದಾಟಲು ಕಷ್ಟವಾಗಿರುವ ಈ ಸಂಸಾರ

ಸಾಗರವನ್ನೂ, ಕತ್ತಲೆಯನ್ನೂ, ಅಜ್ಞಾನವನ್ನೂ ಮಾನವನು ದಾಟ ಬಲ್ಲವನಾಗುತ್ತಾನೆ ಎಂದು ಉಪದೇಶವನ್ನು ಮಾಡಿದನು. ಆಗ ಪದ್ಮವರ್ಣನು ತನ್ನ ಪಾಪಕರ್ಮಗಳನ್ನು ಬಿಟ್ಟು ಧಾರ್ಮಿಕ ವೃತ್ತಿಯಲ್ಲಿ ಜೀವಿಸುತ್ತಾ ಲೋಕಕ್ಕೆ ಧರ್ಮಗಳನ್ನು ಉಪದೇಶಿಸಿ ಪ್ರಚಾರ ಮಾಡಿದನು. ಆ ಪದ್ಮವರ್ಣನು ಗೌತಮ ಗೋತ್ರದವನಾಗಿದ್ದುದರಿಂದ ಗೌತಮಋಷಿ ಎಂದು ಪ್ರಸಿದ್ಧನಾದನು. ಇದು ವಾಲ್ಮೀಕಿ ಋಷಿಯ ಕಥೆಯಂತೆಯೇ ಭಾವಗರ್ಭಿತವಾಗಿದೆ ಎಂಬುದು ಸ್ಪಷ್ಟವಿದೆ. ಗೌತಮ ಧರ್ಮಸೂತ್ರವು ಸರ್ವಮಾನ್ಯವಾಗಿದೆ. Women in the Sacred Laws by Shakuntala Rao Shastry, P. I. IV ಬೃಹದಾರಣ್ಯಕ ಉಪನಿಷತ್ ೧.೪. ೧೪ರಲ್ಲಿ ಚಾತುರ್ವರ್ಣ್ಯವೂ ಧರ್ಮವೂ ವಿವರಿಸಲ್ಪಟ್ಟಿವೆ.

ಧಾರ್ಮಿಕ ಸಂಸ್ಕೃತಿ, ಪಾಶ್ಚಾತ್ಯರ ಅಭಿನಂದನೆಗಳು.

ವೈದಿಕಸಾಹಿತ್ಯವೂ, ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಪರಾಶರ ಸ್ಮೃತಿಗಳೂ ಧರ್ಮಗಳ ವಿಷಯದಲ್ಲಿ ಪ್ರಮಾಣಗ್ರಂಥಗಳಾಗಿವೆ. ಈ ಸಾಹಿತ್ಯದ ವಿಷಯದಲ್ಲಿ ಭಾರತೀಯರಿಗೆ ಭಕ್ತಿಗೌರವಗಳಿರುವುದು ಸಹಜವಾಗಿದೆ. ಆದರೆ ವಿಚಾರಪ್ರಧಾನರಾಗಿರುವ ಪಾಶ್ಚಾತ್ಯರೂ ಕೂಡ ಇದರಲ್ಲಿರುವ ಅಗಾಧ ವಿಷಯಗಳನ್ನು ಗಮನಿಸಿ ಬೆರಗಾಗಿ ಮಣಿಯುತ್ತಿದ್ದಾರೆ. ಜರ್ಮನಿಯ ತತ್ವಶಾಸ್ತ್ರಜ್ಞನಾದ ಷೋಪೆನ್‌ಹವರ್ ಎಂಬಾತನು “ ಈ ಜಗತ್ತಿನಲ್ಲೆಲ್ಲ ಉಪನಿಷತ್ತುಗಳ ವ್ಯಾಸಂಗದಷ್ಟು ಹಿತಕರವಾದುದು ಮತ್ತಾವುದೂ ಇಲ್ಲ. ಇದರ ಬಲದಿಂದಲೇ ನಾನು ಶಾಂತಿ ಸುಖಗಳನ್ನು ಅನುಭವಿಸುತ್ತಿದೇನೆ ಮತ್ತು ಇದರ ಬಲದಿಂದಲೇ ಶಾಂತಿ ಸಮಾಧಾನಗಳಿಂದ ಕೂಡಿಯೇ ದೇಹತ್ಯಾಗವನ್ನೂ ಮಾಡುವೆನು ” ಎಂದು ಹೇಳಿರುವನು. ಪ್ರೊಫೆಸರ್ ಮ್ಯಾಕ್ಸ್‌ಮಿಲ್ಲರ್ ಎಂಬಾತನು ಮೇಲಿನ ಮಾತನ್ನು ಒಪ್ಪಿ “ ಇದಕ್ಕೆ ಅನುಮೋದನವೇನಾದರೂ ಬೇಕಾಗಿದ್ದರೆ ವೇದಗಳು, ತತ್ವಶಾಸ್ತ್ರ ಮತ್ತು ಧರ್ಮ

ಶಾಸ್ತ್ರ ಮುಂತಾದ ಭಾರತೀಯ ಸಾಹಿತ್ಯದ ವ್ಯಾಸಂಗ, ಪ್ರಕಟನೆಗಳಿಗಾಗಿಯೇ ಧಾರೆಯೆರದಿರುವ ಈ ನನ್ನ ದೀರ್ಘಾಯುಷ್ಯದ ಅನುಭವವನ್ನೂ ಕೊಡುತ್ತೇನೆ. ತತ್ವಶಾಸ್ತ್ರವು ಮರಣವನ್ನೂ ಸಂತೋಷದಿಂದ ಪಡೆಯುವ ಸಿದ್ಧತೆಗಾಗಿಯೇ ಇರುವುದಾದರೆ ಇಂಥ ತತ್ವಶಾಸ್ತ್ರವು ವೇದಮೂಲವಾದುದು ಒಂದನ್ನು ಹೊರತು ಇನ್ನು ಬೇರೆ ಯಾವುದನ್ನೂ ನಾನರಿಯೆನು" ಎಂದು ತಿಳಿಸಿರುತ್ತಾನೆ.

"ಕೃತಕೃತ್ಯಾ ನಿರೀಕ್ಷಂತೇ ಮೃತ್ಯುಂ ಪ್ರಿಯಮಿವಾತಿಥಿಂ |".

ಎಂದರೆ, ಕರ್ತವ್ಯ ಧರ್ಮವನ್ನು ನೆರವೇರಿಸಿರುವವರು ಮರಣವನ್ನು ಪ್ರಿಯನಾದ ಅತಿಥಿಯಂತೆ ಸ್ವಾಗತಿಸಲು ನಿರೀಕ್ಷಿಸುತ್ತಿರುತ್ತಾರೆ. ಅವರಿಗೆ ಸಾವಿನಲ್ಲಿ ಅಂಜಿಕೆ ಇರುವುದಿಲ್ಲ. ಇದರಂತೆಯೇ ವಿಕ್ಟರ್ ಕಜಿನ್ಸ್ ಎಂಬಾತನು "ಯೂರೋಪಿನಲ್ಲಿ ಹರಡುವುದಕ್ಕೆ ಪ್ರಾರಂಭವಾಗಿ ಹೆಚ್ಚುತ್ತಿರುವ ಪೂರ್ವದೇಶಗಳ, ಮುಖ್ಯವಾಗಿ ಹಿಂದೂಸ್ಥಾನದ, ತತ್ವಶಾಸ್ತ್ರ ವಿಚಾರಗಳನ್ನು ಗಮನಿಸಿದರೆ ಅನೇಕ ತತ್ವಗಳು ತಿಳಿಯ ಬರುತ್ತಿವೆ. ಆ ತತ್ವಗಳು ಉದಾತ್ತವಾಗಿರುವುದಲ್ಲದೆ ಕೆಲವು ವೇಳೆ ಯೂರೋಪಿಯನ್ನರ ಬುದ್ಧಿಯು ಮುಂದಕ್ಕೆ ಹಾಯದೆ ನಿಂತಿರುವ ಎಷ್ಟೋ ವಿಚಾರಗಳಿಗಿಂತಲೂ ಮಹತ್ತ್ವವುಳ್ಳವಾಗಿರುವುದರಿಂದ ಅವರೂ ಅವನ್ನು ಗೌರವಿಸುವಂತಾಗಿದೆ" ಎಂದು ಹೃತ್ಪೂರ್ವಕವಾಗಿ ನುಡಿದಿರುತ್ತಾನೆ. ಧರ್ಮದ ವಿಷಯದಲ್ಲಿ ವಿಚಾರಪರವಾದ ಭಾರತಾರ್ಯರ ಮನಸ್ಸು ತತ್ವಗಳ ಮತ್ತು ದೇವರ ವಿಷಯದಲ್ಲೂ ಪ್ರವರ್ತಿಸಿರುವುದು ಸಹಜವೂ, ಮಾನ್ಯವೂ ಆಗಿರುತ್ತದೆ.

> ದಾರಾಃ ಪುತ್ರಾಃಧನಮಧಿ ಕೃತಿಃ ಜ್ಞಾನಮಾರೋಗ್ಯಮಾಯುಃ
> ಸೌವರ್ಣೀ ಸ್ಯಾತ್ ಗುಣಯುಕ್ ಅಗುಣ್ಯಾವ್ಯಾಯಸೀ ಶೃಂಖಲೈವ |
> ಭೋಗಶ್ಶೈಷಾಂ ಋಣಪರಿಹೃತೌ ಕೇವಲಂ ದುರ್ಬಲಾನಾಂ
> ದ್ವೇಷೋಽಪ್ಯಸ್ಮಿನ್ ಯದಿ ಭವತಿ ಸಾ ವಿಶ್ವಮಾಯಾ ಪ್ರಸಿದ್ಧಾ ||

ಹೆಂಡತಿ, ಮಕ್ಕಳು, ಐಶ್ವರ್ಯ, ಅಧಿಕಾರ, ತಿಳಿವಳಿಕೆ, ಆರೋಗ್ಯ, ಆಯುಸ್ಸು, ಈ ಐಹಿಕ ಪುರುಷಾರ್ಥಗಳು ಒಳ್ಳೆಯವಾಗಿ ಗುಣವುಳ್ಳ

ವಾಗಿದ್ದರೂ ಇವೆಲ್ಲವೂ ಚಿನ್ನದಿಂದ ಮಾಡಿದ ಸಂಕೋಲೆಗಳಾಗಿರು ತ್ತವೆ. ಹಾಗಲ್ಲದೆ ಇವು ಗುಣವಿಲ್ಲದೆ ಕೆಟ್ಟವುಗಳಾಗಿದ್ದರೆ ಕಬ್ಬಿಣ ದಿಂದ ಮಾಡಿದ ಬೇಡಿಗಳಾಗಿರುತ್ತವೆ. ಎರಡೂ ಸಂಕೋಲೆಗ ಳೆಂಬುದೇ ನಿಜವಾದುದು. ಇವುಗಳನ್ನು ಅನುಭವಿಸುವುದರಲ್ಲೂ ತತ್ವಜ್ಞಾನಶಕ್ತಿ ಇಲ್ಲದ ಅಶಕ್ತರಿಗೆ ಮಾತ್ರ ಮತ್ತು ತತ್ವಜ್ಞಾನವನ್ನು ಪಡೆಯುವವರೆಗೆ ಮಾತ್ರ ಶಾಸ್ತ್ರವು ಅನುಮತಿಯನ್ನು ಕೊಡುತ್ತದೆ. ಅದರಲ್ಲೂ ಋಣತ್ರಯವನ್ನು, ಮೂರು ಬಗೆಯ ಹುಟ್ಟುಸಾಲಗಳನ್ನೂ ತೀರಿಸುವುದಕ್ಕಾಗಿಯೇ ಹೇಳಿದೆ. ಇದರಲ್ಲೂ ಜನರಿಗೆ ಅನಾದರ, ತಿರಸ್ಕಾರ, ದ್ವೇಷಗಳು ಇರುವುದಾದರೆ ಅದೇ ವಿಶ್ವವ್ಯಾಪಿಯಾಗಿರುವ ಮಾಯೆಯ ಸ್ವರೂಪವಾಗಿದೆ ಎಂದು ತಿಳಿಯ ಹೇಳಿದೆ.

ಮನುಧರ್ಮ ಶಾಸ್ತ್ರದಲ್ಲಿ ಮಹಿಳೆಯರ ವಿಷಯದಲ್ಲಿ ಹೀಗೆ ಹೇಳಿದೆ.—

"ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ ।"
"ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ಪುತ್ರೋ ರಕ್ಷತಿ ವಾರ್ಧಕ್ಯೇ ನಸ್ತ್ರೀ ಸ್ವಾತಂತ್ರ್ಯ ಮರ್ಹತಿ ॥"
ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ವಿವಿಕ್ತಾಸನೋ ಭವೇತ್ ।
ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥"

ಮನುವೂ ಸ್ತ್ರೀಯರ ಸ್ಥಾನಮಾನಗಳೂ.

"ಎಲ್ಲಿ ಮಹಿಳೆಯರಿಗೆ ಮಾನ್ಯತೆಯನ್ನು ತೋರಿಸುತ್ತಾರೋ ಅಲ್ಲಿ ದೇವತೆಗಳೂ ಸಂತೋಷದಿಂದ ನೆಲ ಸಿರುತ್ತಾರೆ." ಎಂದು ಸ್ತ್ರೀಯರ ಸ್ಥಾನ ಮಾನಗಳನ್ನು ದೇವತೆಗಳೊಡನೆ ಸಮಾನ ವಾಗಿ ಹೇಳಿದೆ. ಆದರೆ ಅದೇ ಗ್ರಂಥದಲ್ಲಿ "ಸ್ತ್ರೀಯು ಬಾಲ್ಯದಲ್ಲಿ ತಂದೆಯಿಂದ ರಕ್ಷಣೆಯನ್ನು ಪಡೆಯುತ್ತಾಳೆ. ಯೌವನದಲ್ಲಿ ಗಂಡ ನಿಂದಲೂ, ಮುಪ್ಪಿನಲ್ಲಿ ಮಗನಿಂದಲೂ ರಕ್ಷಣೆಯನ್ನು ಪಡೆಯುತ್ತಾ ಳಾದುದರಿಂದ ಸ್ತ್ರೀಯು ಸ್ವಾತಂತ್ರ್ಯಕ್ಕೆ ಅರ್ಹಳಾಗಿರುವುದಿಲ್ಲ" ಎಂದೂ ಹೇಳಿದೆ. ಇದರ ವಿಷಯದಲ್ಲಿ ನಾನಾ ಅಭಿಪ್ರಾಯಗಳು ಕೇಳಿಬರುತ್ತವೆ. ಇದನ್ನು ಮಹಿಳೆಯರು ಮನ್ನಿಸುವುದಿಲ್ಲವೆಂಬುದು

ಸಹಜವಾಗಿದೆ. ಗಂಡಸರೂ ಇದನ್ನು ಒಪ್ಪುವುದಿಲ್ಲ. "ಪತಿಯನ್ನು ದೇವರೆಂದು ಭಾವಿಸಬೇಕೆಂಬುದು ಧರ್ಮವಲ್ಲ, ಹೇಡಿತನ. ಗಂಡನ ಮನೆಯಲ್ಲಿ ಶಿಕ್ಷೆಯನ್ನು ಅನುಭವಿಸುತ್ತಾ ಮೂಗೆತ್ತಿನಂತೆ ದುಡಿದು ಬಾಳುವುದಕ್ಕಿಂತ ಅವನನ್ನು ತ್ಯಜಿಸಿ ಕೂಲಿಮಾಡುವುದು ಲೇಸು. ಎರಡು ತುತ್ತು ಅನ್ನಕ್ಕಾಗಿ ಹೆಂಗಸು ಆತ್ಮಗೌರವವನ್ನು ತ್ಯಜಿಸಿ ಗಂಡನ ಆಳಾಗಿರಬೇಕೆನ್ನುವುದು ಧರ್ಮವಲ್ಲ. ಹೆಣ್ಣು ಹುಟ್ಟಿತು ಎಂತ ಹೆಂಗಸನ್ನು ಹಿಂಸೆಮಾಡುವ, ಹೊಡೆಯುವ, ತನ್ನ ಮಕ್ಕಳಲ್ಲೂ ಆದರ ಕನಿಕರಗಳಿಲ್ಲದ, ಗಂಡನೆನಿಸಿರುವ ಪ್ರಾಣಿಯನ್ನು ದೇವರಿಗೆ ಸಮ ಎನ್ನುವುದು ಧರ್ಮವೂ ಅಲ್ಲ. ದೇವರಿಗೂ ಅವಮಾನ ಮಾಡಿದ ಹಾಗಾಗುತ್ತದೆ." ಎಂದು ಆಕ್ಷೇಪಿಸುವುದರಲ್ಲಿ ತಪ್ಪಿಲ್ಲ. ಆದರೆ ಸೂಕ್ಷ್ಮವಾಗಿ ಕೂಲಂಕಷವಾಗಿ ವಿಮರ್ಶಿಸುವವರಿಗೆ ಈ ಆಕ್ಷೇಪಣೆಗಳಿಗೆ ತೃಪ್ತಿಕರವಾದ ಸಮಾಧಾನಗಳೂ ಹೊಳೆಯುತ್ತವೆ. ಹೇಗೆಂದರೆ "ಸ್ತ್ರೀಗೆ ಮನೆಯೇ ಜಗತ್ತು. ಪುರುಷನಿಗೆ ಜಗತ್ತೇ ಮನೆ. ಅವಳೂ ಪುರುಷನಂತೆ ಜೀವನದ ಎಲ್ಲ ಕಾರ್ಯಕ್ಷೇತ್ರಗಳಲ್ಲೂ ಎಂದರೆ ಸಾಹಿತ್ಯರಚನೆ, ಕಲೆ, ವಾಣಿಜ್ಯ, ಔದ್ಯೋಗಿಕ, ರಾಜಕೀಯ ಕ್ಷೇತ್ರಗಳಲ್ಲೂ ಕಾರ್ಯನಿರ್ವಾಹ ಮಾಡಬಲ್ಲಳು. ಆದರೆ ಈಕ್ಷೇತ್ರಗಳಲ್ಲಿ ಮಹಿಳೆಯು ಪ್ರವರ್ತಿಸದಿದ್ದರೆ ಜನಾಂಗಕ್ಕೆ ನಷ್ಟವಿಲ್ಲ. ಅವಳು ಉತ್ತಮ ಗೃಹಿಣಿಯಾಗದಿದ್ದರೆ ಜಗತ್ತು ಪತನಹೊಂದುತ್ತದೆ." "ಸ್ತ್ರೀಯನ್ನು ನಾವು ತಾಯಿಯಾಗಿ, ಸೋದರಿಯಾಗಿ, ಪತ್ನಿಯಾಗಿ, ಸಹಧರ್ಮಿಣಿಯಾಗಿ ನಮ್ಮ ಬಾಳಿನ ಸಕಲಸಂಪತ್ತಾಗಿ ಕಾಣುತ್ತಾ ಬಂದಿದೇವೆ ಎಂಬುದು ಹೆಚ್ಚು ನಿಜವಾಗಿದೆ. ಶ್ರೀ ಶಕುಂತಲಾ ರಾವ್ ಶಾಸ್ತ್ರೀ ಎಂಬಾಕೆಯ ಗ್ರಂಥವನ್ನು ನೋಡಬಹುದು.

"ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।"

ಎಂದು ಹೇಳಿ ಮನುವು ಭಾರತದ ಮನೋಭಾವವನ್ನೇ ಪ್ರತಿಧ್ವನಿಸಿದ್ದಾನೆ. ಇದು ನಿಜ. ಆದರೂ ಆ ಮನುವೇ ಮುಂದಿನ

ಶ್ಲೋಕಗಳನ್ನೂ ಹೇಳಿದ್ದಾನೆ. ಇದರಿಂದ ಮನುವಿನ ತಾರುಣ್ಯ ಜೀವನವು ಸುಂದರಿಯೂ ಗುಣವತಿಯೂ ಆಗಿರುವ ಹೆಂಡತಿ ದೊರಕಿ ಸುಖವಾಗಿದ್ದಾಗ ಮೊದಲಿನ ಮಾತನ್ನು ಹೇಳಿರಬೇಕು. ಆಮೇಲೆ ವಯಸ್ಸು ಕಳೆದು ತಾಪತ್ರಯ ಮಿತಿಮೀರಿದಾಗ ಸ್ತ್ರೀಯ ಇನ್ನೊಂದು ಮುಖವೂ ಅವನಿಗೆ ಪರಿಚಯವಾಗಿರಬೇಕು, ಮುಖಗುಲಾಬಿ, ಮೈಮುಳ್ಳು, ಎಂಬುದು ಭಾಸವಾಗಿರಬೇಕು.'' ಆಗ ಸ್ತ್ರೀಯ ಸಹಜ ಗುಣವನ್ನು ತಿಳಿಸುವ ಮೇಲಿನ ಎರಡನೆಯ ಮಾತುಗಳನ್ನು ಹೇಳಿರಬೇಕೆಂದು ಊಹಿಸುವುದೂ ಸರಿಯಲ್ಲವು. ಧರ್ಮವು ಗುಲಾಬಿಯ ಹಾಗೆ. ಅದನ್ನು ಆಚರಿಸುವಾಗ ಮುಳ್ಳಿನಂತೆ ತಾತ್ಕಾಲಿಕವಾಗಿ ಕಷ್ಟವನ್ನು ಉಂಟುಮಾಡುತ್ತದೆ. ಆದರೆ ಆಚರಿಸಿದಮೇಲೆ ಅದರ ಫಲವು ಸತ್ಪರಿಣಾಮವು ಎಲ್ಲರಿಗೂ ಸುಖದ ಶ್ರೇಯಸ್ಸಿನ ಸೌಂದರ್ಯ ಪರಿಮಳಗಳನ್ನು ಬೀರುತ್ತದೆ. ಎಂಬುದನ್ನೂ ನೆನಪಿನಲ್ಲಿಟ್ಟಿರಬೇಕು. ಸುಖಬರಲಿ, ದುಃಖಬರಲಿ, ಮಾನವನು ಹೆಂಗುಸಾಗಲಿ ಗಂಡಸಾಗಲಿ, ಸಮಚಿತ್ತನಾಗಿರಬೇಕು. ಎರಡನ್ನೂ ಅನಾಸಕ್ತ ದೃಷ್ಟಿಯಿಂದ ನೋಡುತ್ತಾ ತನ್ನ ಬಾಳಿನಗುರಿಯತ್ತ ಚಿತ್ತವನ್ನು ತಿರುಗಿಸಬೇಕು.

" ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ |
ವೀತರಾಗ ಭಯಕ್ರೋಧಃ ಸ್ಥಿತಧೀ ರ್ಮುನಿರುಚ್ಯತೇ ‖ '' ಭ.ಗೀ.

ದುಃಖಗಳು ಬಂದಾಗ ಮನಸ್ಸನ್ನು ಉದ್ವೇಗಗೊಳ್ಳಲು ಬಿಡಬಾರದು. ಹಾಗೆಯೇ ಸುಖಗಳು ಬಂದಾಗ ಮನಸ್ಸು ಅವನ್ನು ಆಶಿಸಲೂ ಬಿಡಬಾರದು. ಆಶೆ, ಭಯ, ಕ್ರೋಧ ಇವುಗಳಿಗೆ ವಶನಾಗದೆ, ಅವನ್ನು ಹತೋಟಿಯಲ್ಲಿಟ್ಟು ಸ್ತಿಮಿತವಾದ ಬುದ್ಧಿಯುಳ್ಳವನು ಮುನಿ, ಸ್ಥಿತಪ್ರಜ್ಞ, ಎನಿಸಿಕೊಳ್ಳುತ್ತಾನೆ.'' ಹಾಗೆಯೇ ಮಾಡುತ್ತಿರಬೇಕೆಂದು ಭಾರತವು ಯುಗಯುಗಾಂತರಗಳಿಂದ ಉಪದೇಶಿಸುತ್ತಾ ಬಂದಿದೆ. ದ್ರೌಪದಿಯಲ್ಲಿ ಸಹನೆ ಎಂಬ ಗುಣ ಹೆಚ್ಚಾಗಿಯೇ ಇತ್ತು. ಆದರೂ ಪ್ರತೀಕಾರದಿಂದ ಮನಸ್ಸಮಾಧಾನ

ವನ್ನು ಹೊಂದಿದಳು. ಆದರೆ ಸೀತಾದೇವಿಯು ಸಹನೆಗುಣದಲ್ಲಿಯೇ ಶಾಂತಿಸುಖಗಳನ್ನು ಮನಗಂಡಳು. ಆದುದರಿಂದಲೇ ಭಾರತೀಯರು ಬೆಳಿಗ್ಗೆ ಏಳುವಾಗಲೇ ಈ ಶ್ಲೋಕವನ್ನು ಪಠಿಸುತ್ತಾ ಧ್ಯಾನಿಸುತ್ತಾರೆ.

ಸಾವಿತ್ರೀ ದ್ರೌಪದೀ ಸೀತಾ ಅಹಲ್ಯಾ ಮಂಡೋದರೀತಥಾ ।
ಪಂಚಕನ್ಯಾಃ ಸ್ಮರೇನ್ನಿತ್ಯಂ ಮಹಾಪಾತಕನಾಶನಂ ॥

ಆದುದರಿಂದಲೇ ಮನುವು "ಧರ್ಮಸ್ಯ ಸೂಕ್ಷ್ಮಾಗತಿಃ" ಎಂಬ ಸೂಕ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಧರ್ಮದ ಲಕ್ಷಣವನ್ನು ಹೀಗೆ ಹೇಳಿದ್ದಾನೆ.

"ವಿದ್ವದ್ಭಿಸ್ಸೇವಿತಸ್ಸದ್ಭಿಃ ನಿತ್ಯಮದ್ವೇಷರಾಗಿಭಿಃ ।
ಹೃದಯೇನಾಭ್ಯನುಜ್ಞಾತಃ ಯೋ ಧರ್ಮಸ್ತಂನಿಬೋಧತ ॥"

ಪುಟ 70 ನೋಡಿ

ಎಂದು ಹೇಳಿದಾನೆ. ಇದರ ಅರ್ಥವು ಹೀಗಿದೆ. "ವಿದ್ಯಾವಂತರು ಯಾವಾಗಲೂ ಆದರದಿಂದ ಆಚರಿಸುತ್ತಿರುವುದೇ ಧರ್ಮವು. ಆದರೆ ಅವರು ಸತ್ಪುರುಷರಾಗಿಯೂ ಇರಬೇಕು. ಅಲ್ಲದೆ ಅವರು ರಾಗಕ್ಕಾಗಲಿ ದ್ವೇಷಕ್ಕಾಗಲಿ ಮನಸೋತಿರಬಾರದು. ಅಂಥ ಶಿಷ್ಟರ ಹೃದಯದಿಂದಲೂ ಯಾವುದು ಸರಿ ಎಂದು ಗೊತ್ತಾಗುತ್ತದೋ ಅದೇ ಧರ್ಮವು. ಅದನ್ನು ಧರ್ಮವೆಂದು ತಿಳಿಯಿರಿ. ವೈಜ್ಞಾನಿಕರೂ ವಿದ್ಯಾವಂತರು, ಅವರು ತಮ್ಮ ಪ್ರಕೃತಿ ಸಂಶೋಧನಕಾರ್ಯವೆಂಬ ತಪಸ್ಸಿನ ಫಲವಾಗಿ ಪ್ರಕೃತಿಯಲ್ಲಿ ಅಡಗಿರುವ ಶಕ್ತಿವಿಶೇಷಗಳನ್ನು ಕಂಡುಹಿಡಿದು ಲೋಕ ಕಲ್ಯಾಣಕ್ಕೋಸ್ಕರ ಪ್ರಕಟಿಸುತ್ತಾರೆ, ಆ ತಿಳಿವಳಿಕೆಯಿಂದ ಮಾನವನ ಇಹಜೀವನ ಕ್ರಮವನ್ನು ಉತ್ತಮ ಗೊಳಿಸುವ ಸುಖಸೌಕರ್ಯಗಳನ್ನು ಹೆಚ್ಚಿಸಿಕೊಳ್ಳಲಾಗುತ್ತಿದೆ. ಆದರೆ ವಿದ್ಯಾವಂತರಾದರೂ ಲಾಭಕೋರ ಸ್ವಭಾವವುಳ್ಳ ಜನರು ಮಾನವನ ನಾಶಕ್ಕೆ ತಕ್ಕ ಸಾಧನಗಳನ್ನೂ ಎಂದರೆ ಮದ್ದು, ಗುಂಡು, ಬಾಂಬು ಗಳನ್ನೂ ತಯಾರಿಸುವುದರಲ್ಲಿ ಆ ವೈಜ್ಞಾನಿಕ ತಿಳಿವಳಿಕೆಯನ್ನು ಉಪಯೋಗಿಸಿಕೊಳ್ಳುತ್ತಾರೆ. ಇದು ಧರ್ಮವಾಗದು. ಆದುದ

ರಿಂದಲೇ ವಿದ್ಯಾವಂತರೂ ಸತ್ಪುರುಷರೂ ಆಗಿರುವವರ ನಡೆವಳಿಕೆಯೇ ಧರ್ಮವೆಂದು ಹೇಳಿದೆ. ಅಲ್ಲದೆ ರಾಗದ್ವೇಷಗಳಿಗೆ ಒಳಗಾಗಿರುವವರ ನಡೆವಳಿಕೆಯನ್ನು ಧರ್ಮವೆನ್ನಲಾಗದು. ಏಕೆಂದರೆ ನಮ್ಮ ಮಕ್ಕಳು ಮಾಡುವ ತಪ್ಪನ್ನು ಸಹಿಸಿಕೊಳ್ಳುತ್ತೇವೆ. ಆದರೆ ಅದೇ ತಪ್ಪನ್ನು ಇತರರ ಮಕ್ಕಳು ಮಾಡಿದರೆ ಆಕ್ಷೇಪಿಸುತ್ತೇವೆ. ಇದಕ್ಕೆ ನಮ್ಮ ಎಂಬ ರಾಗದ ಅಭಿಮಾನವೇ ಕಾರಣವು. ಹಾಗೆಯೇ ನಮ್ಮವರಲ್ಲಿರ ಬಹುದಾದ ಗುಣವನ್ನು ಮೆಚ್ಚಿ ಹೊಗಳಿ ಬಹುಮಾನಿಸುತ್ತೇವೆ. ಅದರಂತೆಯೇ ನಮ್ಮ ಶತ್ರುಗಳಲ್ಲೂ ಇರಬಹುದಾದ ಗುಣಗಳನ್ನೂ ಗ್ರಹಿಸಿ ಬಹುಮಾನಿಸುವುದಿಲ್ಲ. ಇದಕ್ಕೆ ನಮ್ಮಲ್ಲಿರುವ ನಮ್ಮ ಶತ್ರು ವಿಷಯಕವಾದ ದ್ವೇಷವೇ ಕಾರಣವು. ಆದುದರಿಂದ ರಾಗದ್ವೇಷ ಗಳಿಗೆ ಪರವಶರಾಗದಿರುವ ಸತ್ಪುರುಷರಾದ ವಿದ್ವಾಂಸರು ಒಪ್ಪುವ, ನಡೆಯುವ, ತಿಳಿಸುವ ನಡೆವಳಿಯೇ ಧರ್ಮವೆನ್ನಬೇಕು. ಕಡೆಯ ದಾಗಿ ಇಂಥವರಿಗೆ ಹೃದಯದಲ್ಲಿ ಸರಿ ಎಂದು ಯಾವ ನಡೆವಳಿಯು ಗೊತ್ತಾಗುತ್ತದೋ ಅದನ್ನೇ ಧರ್ಮವೆನ್ನಬೇಕು. ಇದರಿಂದ ಧರ್ಮ ನಿರ್ಣಯದಲ್ಲಿ ಮಾನವನಿಗೆ, ಧಾರ್ಮಿಕ ಸಂಸ್ಕೃತಿಯಲ್ಲಿ ಉಚ್ಚಸ್ಥಿತಿ ಯನ್ನು ಪಡೆದಿರುವ ಮಾನವರಿಗೆ ಜವಾಬುದಾರಿಯನ್ನು ವಹಿಸಲಾಗಿದೆ ಎಂಬುದನ್ನು ಗಮನಿಸಬೇಕು. ಮೊದಲು ವೇದವು ಒಂದೇ ಪ್ರಮಾಣ ಗ್ರಂಥವಾಗಿತ್ತು. ಈಚೆಗೆ ಬರುಬರುತ್ತಾ ಮಾನವರಲ್ಲಿ ಸಾತ್ವಿ ಕತೆಯು ಕಡಿಮೆಯಾಗುತ್ತಾ ಬುದ್ಧಿಯ ಸ್ವಚ್ಛತೆಯು ಮಾಸುತ್ತಾ ಬಂತು. ಹೀಗಾಗಿ ಜನರಿಗೆ ಶ್ರುತ್ಯರ್ಥವು ಹೊಳೆಯುವುದು ಕಡಿಮೆ ಯಾಗುತ್ತಾ ಬಂದಿತು. ಆಗ ಮಹರ್ಷಿಗಳು ಜನರಮೇಲೆ ಕನಿಕರ ದಿಂದ ವೇದಾರ್ಥಗಳನ್ನು ತಮ್ಮ ಸ್ಮರಣೆಗೆ ತಂದುಕೊಂಡು ಸ್ಮೃತಿಗಳನ್ನು ಬರೆದರು. ಕಾಲಕ್ರಮದಲ್ಲಿ ಜನರಬುದ್ಧಿ ಶಕ್ತಿಯು ಇನ್ನೂ ಕಡಿಮೆಯಾಗಿ ಆ ಸ್ಮೃತ್ಯರ್ಥಗಳನ್ನು ನಿಶ್ಚಯಿಸುವುದೂ ಕಷ್ಟವಾಯಿತು. ಅಲ್ಲದೆ ಧಾರ್ಮಿಕ ತತ್ವಗಳು ಹೇಳುವುದಕ್ಕೆ ಮನೋ ಹರಗಳೇ ಹೊರತು ಆಚರಿಸುವುದಕ್ಕೆ ಶಕ್ಯಗಳಲ್ಲವು ಎಂಬ ಭಾವನೆಯು

ಜನರ ಮನಸ್ಸಿಗೆ ಹತ್ತಲಾರಂಭವಾಯಿತು. ಆಗ ಋಷಿಗಳು ಕಾಲಕ್ಕೆ ತಕ್ಕಹಾಗೆ ಮನೋರಂಜಕವಾಗಿ ಅನೇಕವಾದ ಉದಾಹರಣೆಗಳನ್ನು ಮನೋಹರವಾದ ಕಥೆಗಳಲ್ಲಿ ಕೊಟ್ಟು ಅವುಗಳ ಮೂಲಕವಾಗಿಯೇ ಧರ್ಮತತ್ವಗಳನ್ನು

" ಇತಿಹಾಸ ಪುರಾಣಾಭ್ಯಾಂ ವೇದಾರ್ಥ ಮುಪಬೃಂಹಯೇತ್ "

ಎಂಬಂತೆ ವಿವರಿಸಿ ತಿಳಿಸಲು ಇತಿಹಾಸ ಪುರಾಣಗಳನ್ನು ರಚಿಸಿ ಪ್ರಚಾರಕ್ಕೆ ತಂದಿರುತ್ತಾರೆ. ಇದರಿಂದ ವೇದಾರ್ಥ ವಿವರಣೆಯಾದುದಲ್ಲದೆ ಧರ್ಮಾಚರಣೆಯೂ ಸಾಧ್ಯವೆಂಬುದೂ ಜನರಿಗೆ ತಿಳಿಯುವಂತಾಯಿತು.

ಇತಿಹಾಸ ಪುರಾಣಗಳ ಸ್ಥಾನ, ಧರ್ಮನಿರ್ಣಯದ ಬಗೆ.

ಹಾಗಾದರೂ ಧರ್ಮಸಂಶಯವು ತಲೆದೋರಿದರೆ ಧರ್ಮನಿಶ್ಚಯದ ಉಪಾಯವನ್ನು ಯಾಜ್ಞವಲ್ಕ್ಯನು ಹೀಗೆ ಹೇಳಿದಾನೆ.—

ಚತ್ವಾರೋ ವೇದಧರ್ಮಜ್ಞಾಃ ಪರ್ಷತ್ತ್ರೈವಿದ್ಯಮೇವವಾ ।
ಸಾ ಬ್ರೂತೇ ಯಂ ಸ ಧರ್ಮಃಸ್ಯಾತ್ ಏಕೋ ವಾಽಧ್ಯಾತ್ಮವಿತ್ತಮಃ ॥

ನಾಲ್ಕುವೇದಗಳ ಅಥವಾ ಮೂರು ವೇದಗಳ ಧರ್ಮಗಳನ್ನು ತಿಳಿದ ನಾಲ್ವರಾಗಲಿ, ಅಥವಾ ಆತ್ಮಜ್ಞಾನಿಯೊಬ್ಬನೇ ಆಗಲಿ, ಯಾವುದನ್ನು ಧರ್ಮವೆಂದು ಹೇಳುತ್ತಾರೋ ಅದೇ ಧರ್ಮವೆಂದು ತಿಳಿದು ಆಚರಿಸಬೇಕು. ಬರಿಯ ವೇದಾರ್ಥಜ್ಞರು ಶಬ್ದಾರ್ಥಗಳಲ್ಲಿ ಮಾತ್ರ ವ್ಯವಹರಿಸುತ್ತಿರುತ್ತಾರೆ. ಆದರೂ ಅವರ ಮನಸ್ಸು ತುಪ್ಪವನ್ನು ಅಳೆದ ಪಾವಿನಂತೆ ಬಹುಮಟ್ಟಿಗೆ ಧರ್ಮಸ್ವರೂಪದ ಪರಿಚಯವುಳ್ಳದ್ದಾಗಿರುತ್ತದೆ. ಆದರೆ ಅಷ್ಟುಮಾತ್ರವೇ ಮನುಷ್ಯನ ಧ್ಯೇಯವಲ್ಲ. ಸ್ನೇಹದ ಉಗಮಸ್ಥಾನವಾದ ಪರಮಾತ್ಮ ಸ್ವರೂಪವು ಹೃದಯದಲ್ಲಿ ಒಡೆದು ಮೂಡಿರುವುದು ಮುಖ್ಯವಾದುದು ಸಾಮಾನ್ಯರಾದ ವೇದಾರ್ಥಜ್ಞರಲ್ಲಿ ಈ ಯೋಗ್ಯತೆಯು ಇರಲಾರದಾದುದರಿಂದ ಅವರ ಮೂಲಕವಾಗಿ ಧರ್ಮನಿರ್ಣಯವಾಗಬೇಕಾದರೆ ಅಂತಹ

ನಾಲ್ಕು ಜನರ ನೆರವು ಬೇಕಾಗುತ್ತದೆ. ಏಕೆಂದರೆ ಅವರು ಧರ್ಮ ಶಾಸನೆಯನ್ನು ಹಿಡಿದು ಹೇಳಬೇಕಾಗಿರುತ್ತದೆ. ನಾಲ್ಕು ಜನರಿಗೆ ಯಾವ ಶಾಸನೆಯು ಒಪ್ಪುತ್ತದೋ ಅದೇ ಧರ್ಮವೆಂದು ತಿಳಿದರೆ ಬಾಧಕವಿಲ್ಲವು. ಆದರೆ ಆತ್ಮಜ್ಞಾನಿಯ ವಿಷಯದಲ್ಲಿ ಹಾಗಲ್ಲವು. ಅವನು ಪರಬ್ರಹ್ಮ ವಸ್ತುವನ್ನು ಬ್ರಹ್ಮಾತ್ಮೈಕ್ಯವನ್ನು ಸಾಕ್ಷಾತ್ತಾಗಿ ಕಂಡವನಾಗಿದ್ದು ಅದರಿಂದ ಹೇಳುತ್ತಾನೆ. ಅವನ ಮನಸ್ಸಿನಲ್ಲಿ ಅಧರ್ಮವು ಸುಳಿಯುವ ಸಂಭವವೇ ಇರುವುದಿಲ್ಲವು. ಆದುದರಿಂದ ಅಂಥವನು ಒಬ್ಬನೇ ಹೇಳಿದರೂ ಅದನ್ನು ಧರ್ಮವೆಂದು ಪರಿಗ್ರಹಿಸಬಹುದು. ಪ್ರತ್ಯಕ್ಷವಾಗಿ ವೇದದ ಪರಿಚಯವಿಲ್ಲದ ಜ್ಞಾನಿಗಳಲ್ಲಿ ವೈದಿಕ ಶಬ್ದಗಳ ಕೊರತೆ ಇದ್ದರೂ ವೇದಾರ್ಥ ಜ್ಞಾನದ ಕೊರತೆ ಇರುವುದಿಲ್ಲ. ಶ್ರೀರಾಮಕೃಷ್ಣ ಪರಮಹಂಸರು ಇಂಥವರಾಗಿದ್ದರು. ಅವರು ವೇದಾಧ್ಯಯನವನ್ನು ಈ ಜನ್ಮದಲ್ಲಿ ಮಾಡದೆ ಇದ್ದವರಾದರೂ ಅವರ ಉಪದೇಶಗಳು ವೇದಾರ್ಥಾನುಸಾರಿಯಾಗಿದ್ದುವು. ದೇವರನ್ನು ಕಂಡವರ ಮನಸ್ಸಿನಲ್ಲಿ ಬರುವ ಕಲ್ಪನೆಯು ಒಂದು ಪಕ್ಷದಲ್ಲಿ ಹೊರಗಣ್ಣಿನಿಂದ ನೋಡಿದಾಗ ಧರ್ಮವಿರುದ್ಧವಾಗಿ ಕಂಡುಬರಬಹುದಾದರೂ ಒಳಗಣ್ಣಿನಿಂದ ನೋಡಿದಾಗ ಅದು ಧರ್ಮಕ್ಕೆ ಅನುಗುಣವಾಗಿಯೇ ಇರುವುದು ಕಂಡುಬರುತ್ತದೆ. ಇಂತಹ ಉದಾಹರಣೆಗಳನ್ನು ಇತಿಹಾಸ ಪುರಾಣಗಳಲ್ಲೂ ಉತ್ತಮವಾದ ಕಾವ್ಯನಾಟಕಗಳಲ್ಲೂ ನಾವು ಕಾಣಬಹುದು.

**ಶಿಷ್ಟಪುರುಷರ ಆತ್ಮತುಷ್ಟಿಯೂ ಧರ್ಮಪ್ರಮಾಣ.**

ಒಂದು ಉದಾಹರಣೆಯನ್ನು ಶಾಕುಂತಳ ನಾಟಕದಿಂದ ಕೊಡಬಹುದು. ಹಿಂದೆ ದುಷ್ಯಂತನೆಂಬ ಬಹು ಧರ್ಮಿಷ್ಠನಾದ ರಾಜನಿದ್ದನು. ಅವನು ಒಮ್ಮೆ ಬೇಟೆಯ ಪ್ರಸಂಗದಿಂದ ಕಾಡಿನಲ್ಲಿ ಸಂಚರಿಸುತ್ತಾ ದಾರಿಯಲ್ಲಿದ್ದ ಕಣ್ವಋಷಿಗಳ ಆಶ್ರಮಕ್ಕೆ ಹೋದನು. ಅಲ್ಲಿ ಶಕುಂತಳೆ ಎಂಬಾಕೆಯು ಎಳೆಯ ಗಿಡಗಳಿಗೆ ನೀರೆರೆಯುತ್ತಿದ್ದಳು. ಆಗತಾನೇ ಯೌವನದ ಆವಿರ್ಭಾವ

ವಾಗುತ್ತಿದ್ದ ಆಕೆಯ ರೂಪವನ್ನು ನೋಡುತ್ತಲೇ ದುಷ್ಯಂತನ ಮನಸ್ಸು ಆಕೆಯ ಕಡೆಗೆ ಹರಿದು ಕಾಮವಿಕಾರವನ್ನು ಪಡೆಯಿತು. ಯಾವಾಗಲೂ ಇಂಥ ವಿಕಾರಗಳಾಗುತ್ತಲೇ ಇರುವ ವಿಷಯ ಲಂಪಟರಿಗೆ ತಮ್ಮ ಮನಸ್ಸಿನಲ್ಲೊಂದು ವಿಪರೀತವಾದ ವಿಕಾರ ವಾಯಿತೆಂಬುದೇ ತಿಳಿಯದೆ ಇರುತ್ತದೆ. ಕರಿಯಗೋಡೆಯ ಮೇಲೆ ಮಶಿಯು ಹಾರಿದರೆ ಅದು ಎದ್ದು ಕಾಣುವುದಿಲ್ಲ. ಬಿಳಿಯ ಗೋಡೆಯ ಮೇಲೆ ಅದೇ ಮಶಿಯು ಸಿಡಿದರೆ ಅದೇ ದೊಡ್ಡದಾಗಿ ಮುಂದಾಗಿ ಕಾಣುತ್ತದೆ. ಹಾಗೆ ಯಾವಾಗ ಲಾದರೂ ಅಂಥ ಧರ್ಮವಿರುದ್ಧ ವಿಕಾರಗಳಾಯಿತೆಂದರೆ ಆ ಸತ್ಪುರುಷರ ಮನಸ್ಸು ಗಾಬರಿಗೊಳ್ಳುವುದು. ದುಷ್ಯಂತನು ಎಷ್ಟು ಮಾತ್ರಕ್ಕೂ ವಿಷಯ ಲಂಪಟನಲ್ಲ. ನಾಟಕದವರು ದುಷ್ಯಂತನಲ್ಲಿ ಕಾಮಾಧಿಕ್ಯದ ಚೇಷ್ಟೆಗಳನ್ನು ಏನಾದರೂ ತೋರಿಸಿದರೆ ಅದು ಸಾಮಾನ್ಯರಾದ ಪ್ರೇಕ್ಷಕರ ಜನಮಂಡಲಿಗೆ ಹಿತವಾದೀತೆಂದು ಈಗಿನ ನಟವರ್ಗದವರು ಕಲ್ಪಿಸಿಕೊಂಡದ್ದೇ ಹೊರತು ನಿಜವಾದ ದುಷ್ಯಂತ ನಲ್ಲಿ ಅದು ಇರಲಿಲ್ಲ. ಆದರೂ ಶಕುಂತಲೆಯನ್ನು ನೋಡಿದ ಕೂಡಲೆ ಅವನ ಮನಸ್ಸು ಚಲಿಸಿತು. ಒಡನೆಯೇ ಅವನಿಗೆ ಗಾಬರಿಯಾಯಿತು. ಏಕೆಂದರೆ ಬ್ರಹ್ಮರ್ಷಿಗಳ ಆಶ್ರಮದಲ್ಲಿರುವ ಆ ಕನ್ಯೆ ಬ್ರಾಹ್ಮಣವರ್ಣ ದ್ದೆಂತು ತೋರುತ್ತಿತ್ತು. ಆದುದರಿಂದ ಆಕೆಯ ಮೇಲೆ ಕ್ಷತ್ರಿಯ ನಾದ ತಾನು ದೃಷ್ಟಿಯನ್ನಿಡುವುದು ಧರ್ಮಶಾಸ್ತ್ರಕ್ಕೆ ವಿರುದ್ಧ ವಾಗಿತ್ತು. ಆಗ ತನ್ನ ಮನಶ್ಶುದ್ಧಿಯ ವಿಷಯದಲ್ಲಿ ದೃಢವಾದ ನಂಬಿಕೆಯುಳ್ಳ ದುಷ್ಯಂತನು ಆಡಿರುವ ಈ ಮಾತು ಎಲ್ಲ ಕಾಲ ದೇಶಗಳವರಿಗೂ ಮನನಯೋಗ್ಯವಾಗಿದೆ. ಅದೇನೆಂದರೆ—

ಅಸಂಶಯಂ ಕ್ಷತ್ರಪರಿಗ್ರಹಕ್ಷಮಾ
ಯದಾರ್ಯಮಸ್ಯಾಮಭಿಲಾಷಿ ಮೇ ಮನಃ ।
ಸತಾಂ ಹಿ ಸಂದೇಹಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ ॥ ಅಭಿಜ್ಞಾನ ಶಾಕುಂತಳ

ಕಾಳಿದಾಸನ ಶಾಕುಂತಳದಲ್ಲಿ ಧರ್ಮದ ನಿರೂಪಣೆ.

ಎಂದರೆ—"ಶುದ್ಧವಾದ ನನ್ನ ಮನಸ್ಸು ಈಕೆಯನ್ನು ಬಯಸುವುದನ್ನು ನೋಡಿದರೆ ಈಕೆಯು ಕ್ಷತ್ರಿಯನಾದ ನನ್ನಿಂದ ಪರಿಗ್ರಹಿಸುವುದಕ್ಕೆ ತಕ್ಕವಳೆಂಬ ವಿಷಯದಲ್ಲಿ ಸಂಶಯವಿಲ್ಲ. ಏಕೆಂದರೆ ಯಾವುದಾದರೊಂದು ವಿಚಾರದಲ್ಲಿ ಸತ್ಪುರುಷರಿಗೆ ಸಂದೇಹ ಬಂದಾಗ ಅವರ ಮನಸ್ಸಿನ ಒಲುವೇ ಅದು ಧರ್ಮವೆಂಬುದಕ್ಕೆ ಪ್ರಮಾಣವಾಗಿರುತ್ತದೆ." ಹೀಗೆಂದು ದುಷ್ಯಂತನು ಹೇಳಿರುವುದನ್ನು ನೋಡಿದರೆ ಶಕುಂತಳೆಯು ಬ್ರಹ್ಮರ್ಷಿಗಳ ಆಶ್ರಮದಲ್ಲಿದ್ದರೂ ಕ್ಷತ್ರಿಯ ಕನ್ಯೆಯಾಗಿರಬೇಕೆಂದು ತೋರುತ್ತದೆ. ಇನ್ನೂ ಒಳಗಣ್ಣಿನಿಂದ ನೋಡಿದರೆ ಆಕೆ ಕ್ಷತ್ರಿಯ ಕನ್ಯೆ ಎಂಬುದೇ ನಿಜ. ಆಕೆ ಮೇನಕೆಯ ಹೊಟ್ಟೆಯಲ್ಲಿ ವಿಶ್ವಾಮಿತ್ರನಿಂದ ಹುಟ್ಟಿದವಳು. ಈ ಕಥೆಯಿಂದ ತಿಳಿಯಬೇಕಾದುದೇನೆಂದರೆ—ಶುದ್ಧಮನಸ್ಸಿಗೆ ಬರುವ ಕಲ್ಪನೆಗಳೆಲ್ಲವೂ ಧರ್ಮಕ್ಕೆ ಅನುಗುಣವಾಗಿಯೇ ಇರುತ್ತವೆ. ಎಂಬುದಾಗಿದೆ. ಆತ್ಮಜ್ಞಾನಿಗಳ ಮನಸ್ಸು ಶುದ್ಧಿಯ ಪರಮಾವಧಿಯನ್ನು ಪಡೆದಿರುತ್ತದೆ. ಆದುದರಿಂದ ಅವರ ಮನಸ್ಸಿನ ಒಲವು ಯಾವುದನ್ನು ಒಪ್ಪುವುದೊ ಅದು ಧರ್ಮವಾಗಿಯೇ ಇರುತ್ತದೆ. ಅಧರ್ಮವಾಗಿರುವುದಿಲ್ಲ. ಕಾಳಿದಾಸನ ಕಾವ್ಯನಾಟಕಗಳಲ್ಲಿ ಧರ್ಮನಿರೂಪಣೆ ಇದೆ.

ಉಪಪನ್ನಾ ಹಿ ದಾರೇಷು ಪ್ರಭುತಾ ಸರ್ವತೋಮುಖೀ ॥ ಶಾ.೫.೨೬.

ಪತಿಕುಲೇ ತವ ದಾಸ್ಯಮಪಿ ಕ್ಷಮಂ ॥ ಶಾ.೫.೨೭.

ಮೂಢಸ್ಸ್ಯಾಮಹಮೇಷಾ ವಾ ವದೇನ್ಮಿಥ್ಯೇತಿ ಸಂಶಯೇ ।
ದಾರತ್ಯಾಗೀ ಭವಾಮ್ಯಾಹೋ ಪರಸ್ತ್ರೀಸ್ಪರ್ಶಪಾಂಸುಲಃ॥ ಶಾ ೫.೨೯.

ಸಹಜಂ ಕಿಲ ಯದ್ವಿನಿಂದಿತಂ ನಖಲು ತತ್ಕರ್ಮ ವಿವರ್ಜನೀಯಂ ।
ಪಶುಮಾರಣ ಕರ್ಮದಾರುಣಃ ಅನುಕಂಪಾ ಮೃದುರೇವ ಶ್ರೋತ್ರಿಯಃ॥
ಶಾ.೬.೧.

ಷಷ್ಠಾಂಶ ವೃತ್ತೇರಪಿ ಧರ್ಮ ಏಷಃ ॥ ಶಾ.೫.೪.

ಯೇನ ಯೇನ ವಿ ಯುಜ್ಯಂತೇ ಪ್ರಜಾಃ ಸ್ನಿಗ್ಧೇನ ಬಂಧುನಾ ।
ಸ ಸ ಪಾಪಾ ದೃತೇ ತಾಸಾಂ ದುಷ್ಯಂತ ಇತಿ ಘುಷ್ಯತಾಂ ॥ ೬.೨೩.

ಶೈಶವೇಽಭ್ಯಸ್ತ ವಿದ್ಯಾನಾಂ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ ॥
ರಘು ೧.

ಯಥಾವಿಧಿ ಹುತಾಗ್ನೀನಾಂ ಯಥಾ ಕಾಮಾರ್ಚಿತಾರ್ಥಿನಾಂ ।
ಯಥಾಽಪರಾಧ ದಂಡಾನಾಂ ಯಥಾಕಾಲ ಪ್ರಬೋಧಿನಾಂ ॥

ತ್ಯಾಗಾಯ ಸಂಭೃತಾರ್ಥಾನಾಂ ಸತ್ಯಾಯ ಮಿತ ಭಾಷಿಣಾಂ ।
ಯಶಸೇ (ಧರ್ಮಾಯ) ವಿಜಿಗೀಷೂಣಾಂ ಪ್ರಜಾಯೈ ಗೃಹಮೇಧಿನಾಂ ॥

ಧರ್ಮತತ್ತ್ವ ಜ್ಞಾನವು ದೇವತತ್ತ್ವ ಜ್ಞಾನಕ್ಕೆ ದಾರಿ.

ಧರ್ಮತತ್ತ್ವದ ಸೂಕ್ಷ್ಮವಿಚಾರವು ನಮ್ಮನ್ನು ದೇವತತ್ತ್ವದ ವಿಚಾರಕ್ಕೆ ತಲಪಿಸುತ್ತದೆ. ವೈದಿಕ ಸಾಹಿತ್ಯದಲ್ಲಿ "ಋತ" ಎಂಬ ಪದವು ಶಿಸ್ತು ಕ್ರಮ ವ್ಯವಸ್ಥೆ (moral order) ಎಂಬ ಅರ್ಥದಲ್ಲಿ ಮೊದಮೊದಲು ಪ್ರಯೋಗಿಸಲ್ಪಡುತ್ತಿತ್ತು. ಆಮೇಲೆ "ಧರ್ಮ" ಪದವು ಕ್ರಮವಾಗಿ ಋತ ಪದದ ಸ್ಥಾನವನ್ನು ಆಕ್ರಮಿಸಿ ಕಡೆಗೆ ಈಚಿನ ಸಾಹಿತ್ಯದಲ್ಲಿ ಋತ ಶಬ್ದದ ಪ್ರಯೋಗವು ನಿಂತುಹೋಗಿ ಧರ್ಮಶಬ್ದದ ಪ್ರಯೋಗವೇ ಬಳಕೆಗೆ ಬಂದಿರುತ್ತದೆ. ಅನೃತ ಶಬ್ದದಲ್ಲಿರುವ ಋತ ಶಬ್ದವು ಸತ್ಯ, ಧರ್ಮ, ಶಿಸ್ತು, ಕ್ರಮ ಎಂಬ ಭಾವಗಳನ್ನು ತಿಳಿಸುತ್ತದೆ; ಈ ಅಂಶವನ್ನು ಅಲ್ಲಲ್ಲಿ ಸೂಚಿಸಲಾಗಿದೆ; ಸತ್ಯವೇ ಧರ್ಮ ಧರ್ಮವೇ ಸತ್ಯ ಎಂಬ ಅಭಿಪ್ರಾಯವು ಅಲ್ಲಲ್ಲಿ ಕಾಣಬರುತ್ತಿದ್ದುದು ಈಚಿನ ಸಾಹಿತ್ಯದಲ್ಲಿ ಹೆಚ್ಚಾಗಿಯೇ ಬಳಕೆಯಲ್ಲಿದೆ; ಸತ್ಯವೇ ದೇವರು ದೇವರೇ ಸತ್ಯವು ಎಂಬ ಅಭಿಪ್ರಾಯವೂ ರೂಢಿಗೆ ಬರುತ್ತಿದೆ-ಹೀಗೆ ಋತ, ಸತ್ಯ, ಧರ್ಮ, ದೇವರು ಈ ಪದಗಳು ಸಮಾನಾರ್ಥಕಗಳಾಗುತ್ತಿವೆ, ಎಂಬುದನ್ನು ನೆನಪಿನಲ್ಲಿಡಬೇಕು.

ಈ ಸಂದರ್ಭದಲ್ಲಿ ಮಹಾತ್ಮಾ ಗಾಂಧಿಯವರು ಹೀಗೆ ಹೇಳಿದ್ದಾರೆ :

"Hinduism is a relentless pursuit of Truth....Hinduism is the religion of

truth. Truth is God. Denial of God we have known, denial of truth we have not known."

ಎಂದರೆ, "ಹಿಂದೂ ಮತಧರ್ಮವೆಂದರೆ ದಾಕ್ಷಿಣ್ಯರಹಿತವಾದ ಸತ್ಯಾನ್ವೇಷಣೆಯಾಗಿದೆ. ಹಿಂದೂ ಧರ್ಮವೆಂದರೆ, ಸತ್ಯಧರ್ಮ, ಸತ್ಯವೇ ದೇವರು. ದೇವರಿಲ್ಲವೆಂದು ದೇವರನ್ನು ನಿರಾಕರಿಸುವುದನ್ನು ಕೇಳಿದ್ದೇವೆ. ಆದರೆ ಸತ್ಯವನ್ನು ಇಲ್ಲವೆಂದು ಹೇಳುವುದನ್ನು ತಿಳಿದಿಲ್ಲವು."

ವಿಜ್ಞಾನ ಪ್ರಪಂಚದಲ್ಲೂ ಧರ್ಮತತ್ವಜ್ಞಾನ ಪ್ರಾರಂಭ.

ವೈಜ್ಞಾನಿಕರು ಅನೇಕ ಮೂಲವಸ್ತುಗಳಿವೆ ಎಂದು ಹೇಳುತ್ತಿದ್ದು ಈಚೆಗೆ ದ್ರವ್ಯ matter, ಶಕ್ತಿ energy ಅಥವಾ ಸ್ಪಂದ vibration, ಎಂದು ಎರಡೇ ಮೂಲವಸ್ತುಗಳಿವೆ ಎಂದು ಕಂಡುಹಿಡಿದು ಘೋಷಿಸಿದ್ದರು. ಆದರೆ, ಇತ್ತೀಚೆಗೆ ದ್ರವ್ಯವೂ ಶಕ್ತಿ ಅಥವಾ ಸ್ಪಂದದ ರೂಪಾಂತರವಾಗಿದೆ ಎಂದು ಒಪ್ಪಿ ಸಾರಿರುತ್ತಾರೆ. ಐನ್‌ಸ್ಟೀನ್, ಮಿಲಿಕನ್, ಜೀನ್ಸ್ ಮುಂತಾದ ಪ್ರಸಿದ್ಧ ವಿಜ್ಞಾನಿಶ್ರೇಷ್ಠರೂ ಈ ಅಭಿಪ್ರಾಯವನ್ನು ಒಪ್ಪಿದ್ದಾರೆ. ವೈಜ್ಞಾನಿಕರು ಇದುವರೆಗೂ ಆತ್ಮಾ, ದೇವರು, ಧರ್ಮ, ಬುದ್ಧಿ, ಮುಂತಾದ ವಿಷಯಗಳು ಪ್ರಯೋಗಕ್ಕೆ ಸಿಕ್ಕುವದಿಲ್ಲವಾದುದರಿಂದ ಅದರ ವಿಷಯದಲ್ಲಿ ಏನನ್ನೂ ಹೇಳಲಾಗದೆ ಇದ್ದರು. ಮನಶ್ಶಾಸ್ತ್ರವು ಮನಸ್ಸು, ಬುದ್ಧಿ ಇವುಗಳ ತತ್ವವನ್ನು ಪ್ರಯೋಗಗಳಿಂದ ಗೊತ್ತು ಮಾಡಲು ಪ್ರಯತ್ನಿಸುತ್ತದೆ. ಭೌತಶಾಸ್ತ್ರಗಳು ಮಾಡುತ್ತಿರುವ ಪ್ರಯೋಗ, ಪರೀಕ್ಷೆ, ಸಂಯೋಜನ, ವಿಯೋಜನ, ಸಂವಾದೀಕರಣ ಮುಂತಾದ ರೀತಿಗಳಿಂದ ಏಕತತ್ವ ಸಿದ್ಧಾಂತಕ್ಕೆ ಬರುವ ಸೂಚನೆಗಳು ಕಾಣಬರುತ್ತಿವೆ. ತತ್ವದರ್ಶನದಲ್ಲಿ ಮಾನವನ ಕುತೂಹಲಪ್ರವೃತ್ತಿಯೂ ಪ್ರಯತ್ನಗಳೂ ಎಲ್ಲಕ್ಕೂ ಮೂಲಭೂತವಾದ ಏಕತತ್ವವನ್ನು ಕಂಡುಹಿಡಿಯುವವರೆಗೂ ಮುಂದುವರಿಯುತ್ತಿರುತ್ತದೆ.

ಭೌತಶಾಸ್ತ್ರಗಳಲ್ಲೂ ತತ್ವಶಾಸ್ತ್ರ (philosophy)ದಲ್ಲಿ ಹೇಗೋ ಹಾಗೆ ಕಡೆಯ ವಿಮರ್ಶೆಯು ಮುಂದುವರಿಯುತ್ತಿದೆ.

ವಿಜ್ಞಾನವೂ ಶಕ್ತಿ ತತ್ವವೂ.

ಈ ಪ್ರಪಂಚವೆಲ್ಲವೂ ಅಚಿಂತ್ಯಾದ್ಭುತಾನಂತ ಶಕ್ತಿಯ ವಿಲಾಸ ಅಥವಾ ವಿಕಾರ ಪರಿಣಾಮವೆಂಬುದನ್ನು ಶಾಕ್ತೇಯರ ತಂತ್ರಶಾಸ್ತ್ರಗಳು ಹೇಳುತ್ತಿವೆ. ಹೊರಗಿನ ಪ್ರಪಂಚವನ್ನು ಪರಿಶೋಧಿಸಿ ಮುಗಿಸುವುದು ಅಸಾಧ್ಯವೆಂದು ಎಲ್ಲರಿಗೂ ಗೊತ್ತಾದಂತೆ ನಮ್ಮ ಪೂರ್ವಿಕರಾದ ಆರ್ಯರೂ ಮೊದಲು ಮನಗಂಡರು. ಆದರೂ ಸ್ಥಾಲೀಪುಲಾಕನ್ಯಾಯದಂತೆ ಈ ಪ್ರಪಂಚದ ಸ್ವರೂಪದ ಹಾಗೆ ಇತರ ಬಾಹ್ಯ ಪ್ರಪಂಚಗಳ ಸ್ವರೂಪವೂ ಇರಬೇಕೆಂದು ನಿಶ್ಚಯಿಸಿ ಅವರು ಧೈರ್ಯಗೆಡದೆ ಅಭ್ಯಂತರ ಪ್ರಪಂಚವನ್ನೂ ಪರಿಶೀಲಿಸತೊಡಗಿದರು. ಬಾಹ್ಯ ಪ್ರಪಂಚದ ಪರಿಶೀಲನೆಯಿಂದ ಪ್ರಕೃತಿಯೇ ಇದೆಲ್ಲಕ್ಕೂ ಮೂಲವಾದ ಏಕತತ್ವವು ಎಂಬುದನ್ನು ಸಾಂಖ್ಯರು ಕಂಡುಹಿಡಿದು ಪ್ರಕಟಿಸಿದರು. ಅದರಂತೆಯೇ ಆತ್ಮವೆಂಬ ಚೇತನ ತತ್ವವೂ ಸತ್ಯವೆಂದು ಹೇಳಿ ಈ ಎರಡೂ ನಿತ್ಯ ವಸ್ತುಗಳೆಂದು ಹೇಳಿ ನಿಂತಿದ್ದರು. ವೇದಾಂತಿಗಳೂ ಇನ್ನೂ ಮುಂದಕ್ಕೆ ಹೋಗಿ ಶಕ್ತಿಯು ಎರಡು ಬಗೆಯಾಗಿದೆ. ಪ್ರಾಕೃತ ಶಕ್ತಿಯೇ ಸ್ಪಂದ ಅಥವಾ vibration ಶಕ್ತಿ ಅಥವಾ energy ಭೌತಶಕ್ತಿ ಎಂದು ಹೇಳಿದರು. ಜ್ಞಾನಶಕ್ತಿಯೇ ಚೇತನ ಅಥವಾ ಆತ್ಮಶಕ್ತಿ ಎಂದು ಹೇಳುವ ಹಾಗೆ ಕಾಣಬರುತ್ತದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ ಹೀಗೆ ಹೇಳಿದೆ :—

" ತೇಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮಶಕ್ತಿಂ
ಸ್ವಗುಣೈರ್ನಿಗೂಢಾಂ।"

" ನತಸ್ಯಕಾರ್ಯಕರಣಂಚ ವಿದ್ಯತೇ ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ।
ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ
ಜ್ಞಾನಬಲಕ್ರಿಯಾಚ ॥"

ಈ ವಿಷಯದಲ್ಲಿ ಪ್ರಯೋಗಗಳನ್ನು ನಡೆಸಲಾಗದೇ ಇದ್ದರೂ ಧ್ಯಾನ ಯೋಗವು ಮುಂದುವರಿದರೆ ಇನ್ನೂ ಹೆಚ್ಚಿನ ತತ್ವಜ್ಞಾನವು ದೊರೆಯದೆ ಹೋಗುವುದಿಲ್ಲವೆನ್ನಬಹುದು.

"The tendency of the modern physics is to resolve the whole material universe into waves and nothing but waves. These waves are of two kinds : bottled up waves, which we call matter and unbottled waves which we call radiation or light. The process of annihilation of matter is merely that of unbottling of imprisoned wave energy, and setting it free to travel through space. These concepts reduce the whole universe to a world of Radiation."

ಈ ಪ್ರಪಂಚವು ಪ್ರಸರಣಶಕ್ತಿ ರೂಪವಾಗಿದೆ.

ಎಂದರೆ—ಸಂಪೂರ್ಣವಾದ ಈ ಭೌತಿಕ ಜಗತ್ತನ್ನು ಕೇವಲ ತರಂಗ ರೂಪವಾಗಿ ಪರಿವರ್ತಿಸುವುದರಲ್ಲಿ ಆಧುನಿಕ ವಿಜ್ಞಾನದ ಪ್ರವೃತ್ತಿಯಾಗಿರುವಂತೆ ತೋರುತ್ತದೆ. ಈ ತರಂಗಗಳು ಎರಡು ರೂಪವಾಗಿವೆ. ನಾವು ಭೌತಿಕ ಪದಾರ್ಥಗಳೆನ್ನುವ, ಸೀಸೆಯಲ್ಲಿ ತುಂಬಿದಂತಿರುವ, ನಿರ್ಬಂಧಿತ ತರಂಗಗಳು ; ಮತ್ತು ನಾವು ಪ್ರಸರಣ ಅಥವಾ ಪ್ರಕಾಶ ಎನ್ನುವ ಸೀಸೆಯಿಂದ ಹೊರಕ್ಕೆ ಬಿಟ್ಟಂತಿರುವ, ಅನಿರ್ಬಂಧಿತ ತರಂಗಗಳು. ನಿರ್ಬಂಧಿತ ತರಂಗಶಕ್ತಿಯನ್ನು ಸ್ವಚ್ಛಂದವಾಗಿ ಹರಿಯಬಿಟ್ಟು ಅನಂತಾಕಾಶದಲ್ಲಿ ಪ್ರಸರಣವಾಗಗೊಡುವುದೇ ಭೌತಿಕ ವಸ್ತುವಿನ ವಿನಾಶಕ್ರಮವಾಗಿದೆ. ಈ ವೈಜ್ಞಾನಿಕರ ಭಾವನೆಗಳು ಈ ಸಮಗ್ರ ಜಗತ್ತನ್ನು ಶಕ್ತಿಪ್ರಸರಣ ರೂಪದ ವಿಶ್ವವೆಂದು ತಿಳಿಸುತ್ತವೆ.

ಹಿಂದಿನ ಧ್ಯೇಯುವಾದಿ (idealist philosopher) ಗಳಾದ ತತ್ವಶಾಸ್ತ್ರಜ್ಞರು ಸರ್ವವೂ ಭಾವನಾಮಯವೆಂದೂ, ವಿಜ್ಞಾನಿಗಳು ಸಕಲವೂ ಕೇವಲ ಭೌತಿಕವೆಂದೂ ಮಾಡುತ್ತಿದ್ದ ವಾದ ವಿವಾದವು ಶಾಂತವಾಗಿ ಆಧುನಿಕ ವಿಜ್ಞಾನವು ಸೂರ್ಯಮಂಡಲದ ಮಧ್ಯದಲ್ಲಿ ಯಾಗಲಿ, ಅಣುಗರ್ಭದ ವಿದ್ಯುತ್ಕಣಗಳಲ್ಲಿಯಾಗಲಿ, ಭಾವನಾಸಾರವೇ ಇದೆ ಎಂದು ಹೇಳುತ್ತದೆ. ಎಂದರೆ "ನಾವು ಸಮಗ್ರವಿಶ್ವಕ್ಕೇ ಹೋಗಲಿ ಅಥವಾ ಅಣುವಿನೊಳಗಿನ ಅತ್ಯಂತ ಆಂತರಿಕ ರಚನೆ ಯನ್ನೇ ನೋಡಲಿ, ಆ ಸರಪಣಿಯ ತುದಿ ಕೊಂಡಿಗಳು ಕೇವಲ ಭಾವನಾರೂಪದ ಸ್ವಭಾವದವುಗಳಾಗಿವೆ—ಎಂದು ಆಧುನಿಕ ವಿಜ್ಞಾನವು ಸೂಚಿಸುವಂತೆ ತೋರುತ್ತಿದೆ" ಮತ್ತೂ ಮುಂದುವರಿದ ವಿಜ್ಞಾನಿಗಳು ಹೀಗೆ ಹೇಳುತ್ತಿದ್ದಾರೆ :—

> "The old dualism of mind and matter which was mainly responsible for the supposed hostility, seems likely to disappear, not through matter becoming in any way more shadowy or unsubstantial than heretofore, . or through mind becoming resolved into a function of the working of matter, but through substantial matter resolving itself into a creation and manifestation of mind. We discover that the universe shows evidence of designing or controlling power, that has something in common with our own individual minds."

ಎಂದರೆ, ಈ ಭೌತ ಪ್ರಪಂಚದಲ್ಲಿ ದ್ರವ್ಯವೂ ಮನಸ್ಸೂ ಭಿನ್ನತತ್ವ

ಗಳೆಂದೂ, ವಿರೋಧಿ ತತ್ತ್ವಗಳೆಂದೂ ಭಾವನೆಯು ವೈಜ್ಞಾನಿಕರಲ್ಲಿ ಇತ್ತು. ಇದು ಈಚೆಗೆ ನಷ್ಟವಾಗುತ್ತಿರುವಂತೆ ಕಾಣಬರುತ್ತಿದೆ. ಇದರಿಂದ ದ್ರವ್ಯವು ಅವಾಸ್ತವವಾದುದು. ಎಂಬ ಭಾವನೆಯು ಉಂಟಾಗಿದೆ ಎಂದು ಹೇಳಲಾಗದು. ಅಥವಾ ಮನಸ್ಸೇ ಮೂರ್ತ ದ್ರವ್ಯದ ಸ್ವಭಾವವನ್ನು ಅಥವಾ ಅದರ ಕ್ರಿಯಾವಿಶೇಷರೂಪವಾಗಿದೆ ಎಂಬ ಭಾವನೆಯನ್ನು ಅವರು ಪಡೆದಿದ್ದಾರೆಂದೂ ಹೇಳಲಾಗದು. ಮತ್ತೇನೆಂದರೆ ಇದುವರೆಗೂ ವಾಸ್ತವವೆಂದು ಭಾವಿಸಲ್ಪಟ್ಟಿದ್ದ ಭೌತಮೂರ್ತ ದ್ರವ್ಯಗಳೂ ಮನಸ್ಸಿನ ಸೃಷ್ಟಿವಿಶೇಷರೂಪವಾಗಿರಬೇಕು ಅಥವಾ ಅದರ ಅಭಿವ್ಯಕ್ತಿವಿಶೇಷರೂಪವಾಗಿರಬೇಕು ಎಂಬ ಭಾವನೆಯು ಬಲಗೊಳ್ಳುತ್ತಿದೆ ಎನ್ನಬೇಕಾಗಿದೆ.

"ಮನಸ್ಸು ಮತ್ತು ಭೌತವೆಂಬ, ಹಳೆಯ ದ್ವೈತಭಾವನೆಯು ಬಹಳಮಟ್ಟಿಗೆ ಕಣ್ಮರೆಯಾಗುವಂತೆ ಕಾಣುತ್ತಿದೆ. ನಮ್ಮ ಬಿಡಿ ಮನಸ್ಸುಗಳಿಗೆ ಕೆಲವಂಶಗಳು ಸಮಾನವಾಗಿರುವ ವಿಧಾಯಕ ಅಥವಾ ನಿಯಾಮಕವಾದ ಒಂದು ಶಕ್ತಿಯ ಅಸ್ತಿತ್ವಕ್ಕೆ (ಇರುವಿಕೆಗೆ) ವಿಶ್ವವು ಸಾಕ್ಷಿ ತೋರುವುದನ್ನು ನಾವು ಸಂಶೋಧನೆಯಿಂದ ಕಾಣುತ್ತಿದೇವೆ. ಹೀಗೆ ಸರ್ವ ವಿಧಾಯಕವೂ ಸರ್ವ ನಿಯಾಮಕವೂ ಆದ ಒಂದು ಸರ್ವೇಶ್ವರ ಶಕ್ತಿಯನ್ನು ನಿರಭಿಮಾನಿಗಳೂ ವಿವೇಕಿಗಳೂ ಸಹೃದಯರೂ ಮೇಧಾವಿಗಳೂ ಆದ ವಿಜ್ಞಾನಿಗಳು ಒಪ್ಪುತ್ತಿದ್ದಾರೆ. ಇಷ್ಟೇ ಅಲ್ಲದೆ ಆ ಶಕ್ತಿಗೂ ನಮಗೂ (ನಮ್ಮ ಮನಸ್ಸಿಗೂ) ಇರುವ ನಿಕಟ ಸಂಬಂಧವನ್ನೂ ಸಾದೃಶ್ಯವನ್ನೂ ನಿಸ್ಸಂಕೋಚವಾಗಿ ವ್ಯಕ್ತಪಡಿಸುತ್ತಿದ್ದಾರೆ."

ವೈಜ್ಞಾನಿಕರ ದೃಷ್ಟಿಯಲ್ಲಿ ಪಂಚಭೂತಗಳು.

ಇದುವರೆಗೆ ಆಧುನಿಕ ವಿಜ್ಞಾನವು ವಿದ್ಯುಚ್ಛಕ್ತಿ ಪ್ರಕಾಶಶಕ್ತಿ ಮೊದಲಾದವುಗಳ ಶೋಧದ ಮೂಲಕ ವೇದಾಂತದ ತೇಜಸ್ತತ್ತ್ವವನ್ನೂ ಗುರುತಿಸಬಹುದೆಂದೂ, ತರಂಗವಿಲಾಸ (wave mechanics), ಸ್ಪಂದನ ವಿಧಾನ (vibration); ಪ್ರಸರಣ

ವ್ಯಾಪಾರ (Radiation) ಸಿದ್ಧಾಂತಗಳ ಮೂಲಕ ವಾಯು ತತ್ತ್ವವನ್ನೂ ಗುರುತಿಸಬಹುದೆಂದೂ, ಈಥರ್. ಸ್ಪೇಸ್ ಮೊದಲಾದ ತತ್ತ್ವಕಲ್ಪನೆಗಳಿಂದ ಆಕಾಶತತ್ತ್ವವನ್ನೂ ಗುರುತಿಸಬಹುದೆಂದೂ ಪ್ರಸಿದ್ಧ ಕ್ವಾಂಟೆಂಥಿಯುರಿಯಿಂದ ಪರ್ಯಾಯವಾಗಿ ಮಹತ್ತತ್ತ್ವವನ್ನೂ ಗುರುತಿಸಬಹುದೆಂದೂ ಊಹಿಸುವ ಪ್ರಯತ್ನವನ್ನೂ ಹೇಗೆ ಮಾಡಿರುವರೆಂದು ನೋಡಬಹುದಾಗಿದೆ. ಹೀಗಿರುವುದರಿಂದ, ಇನ್ನು ಮುಂದೆ ವೇದಾಂತಶಾಸ್ತ್ರದ ಸಹಾಯದಿಂದ ಮಹತ್ತತ್ತ್ವಕ್ಕೂ ಮೂಲವಾದುದು, ಅವ್ಯಕ್ತತತ್ತ್ವ ಅಥವಾ ಶಬಲ ಬ್ರಹ್ಮ, ಸಗುಣಬ್ರಹ್ಮ, ಹಿರಣ್ಯಗರ್ಭ ಅಥವಾ ಅರ್ಧನಾರೀಶ್ವರ ತತ್ತ್ವ ಸ್ವರೂಪವಾದುದೆಂದೂ, ಅದಕ್ಕೂ ಮೂಲಭೂತವಾದುದು ಶುದ್ಧ ಪರಬ್ರಹ್ಮವೆಂದೂ ತಿಳಿಯಬಹುದು. ಸಚ್ಚಿದಾನಂದರೂಪದಲ್ಲಿ ಆ ಪರಬ್ರಹ್ಮವೂ ಈ ಆತ್ಮನೂ ಅಭಿನ್ನರೆಂದೂ ಸಾಕ್ಷಾತ್ಕರಿಸಿಕೊಳ್ಳಬಹುದು. ಎಂದು ತೋರುತ್ತದೆ. "ತತ್ ತ್ವಮಸಿ" This does not mean that we, as we are, are divine in an easy and obvious way. But it asserts that divinity is the manifest destiny of man ಎಂದರೆ, ನೀನೇ ಆ ಪರತತ್ತ್ವಸ್ವರೂಪನಾಗಿರುವೆ. ಈ ಮಾತು ನಾವು ಈಗಿರುವ ಹಾಗೆಯೇ ಸುಲಭವಾಗಿ ಪ್ರಕಟವಾಗಿ ಪರಬ್ರಹ್ಮ ತತ್ತ್ವಸ್ವರೂಪರೆಂದು ತಿಳಿಸುವುದಿಲ್ಲ. ಮತ್ತೇನೆಂದರೆ ನಮ್ಮ ವಾಸ್ತವ ಸ್ವರೂಪವಾವುದೆಂದು ವಿಚಾರವನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಾ ಹೋದರೆ ಕಡೆಗೆ ನಮ್ಮ ಈ ಎಲ್ಲ ವ್ಯವಹಾರಗಳಿಗೂ ಸಾಕ್ಷಿಯಾಗಿರುವ ಚಿತ್ ತತ್ತ್ವವು ಆ ದಿವ್ಯ ಪರಬ್ರಹ್ಮವೇ ಆಗಿದೆ ಎಂಬ ಅನುಭವದಲ್ಲಿ ಪರ್ಯವಸಾನವಾಗುವುದು ಖಚಿತವಾದುದು ಎಂದು ಸಾರಿಹೇಳುತ್ತದೆ. ಈ ತತ್ತ್ವವನ್ನೇ ಈ ಪದ್ಯವು ಗುರುಶಿಷ್ಯರ ಪ್ರಶ್ನೋತ್ತರ ರೂಪದಲ್ಲಿ ತಿಳಿಸುತ್ತದೆ.

" ಕಿಂಜ್ಯೋತಿಸ್ತ್ವವ, ಭಾನುಮಾನಹನಿ ಮೇ, ರಾತ್ರೌ, ಪ್ರದೀಪಾದಿಕಂ,
ಯದ್ವೇವಂ ರವಿದೀಪದರ್ಶನ ವಿಧೌ ಕಿಂ ಜ್ಯೋತಿ ರಾಖ್ಯಾಹಿ ಮೇ ।
ಚಕ್ಷುಃ, ತನ್ಯನಿಮೀಲನಾದಿ ಸಮಯೇ ಕಿಂ, ಧೀಃ, ಧಿಯೋದರ್ಶನೇ
ಕಿಂ, ತತ್ರಾಹಂ, ಅತೋ ಭವಾನ್ ಪರಮಚಿತ್ ಜ್ಯೋತಿಃ, ತದಸ್ಮಿ
ಪ್ರಭೋ ।।

ಸರ್ವ ಪ್ರತ್ಯಯ ಸಾಕ್ಷೀ ಆತ್ಮಾ.

ಎಂದರೆ, ಗುರುವು ಶಿಷ್ಯನನ್ನು ಕುರಿತು, ಹಗಲುಹೊತ್ತಿನಲ್ಲಿ ವಸ್ತುಗಳನ್ನು ನೋಡಿ ವ್ಯವಹಾರಮಾಡಲು ನಿನಗೆ ಬೆಳಕು ಯಾವುದು ? ಎಂದು ಕೇಳಲು, ಶಿಷ್ಯನು ಸೂರ್ಯನ ಬೆಳಕು ಸಹಾಯಕವಾಗಿರುತ್ತದೆ ಎಂದು ಉತ್ತರಿಸಿದನು. ಆ ಮೇಲೆ ಗುರುವು ರಾತ್ರಿಯಲ್ಲಿ ? ಎಂದು ಕೇಳಲು ಶಿಷ್ಯನು ದೀಪ, ಅಗ್ನಿ, ನಕ್ಷತ್ರ, ಚಂದ್ರ-ಇವು ಎಂದನು. ಆಗ ಗುರುವು ಹಾಗಾದರೆ ಸೂರ್ಯ, ದೀಪ ಮುಂತಾದುವನ್ನು ನೋಡಲು ಯಾವ ಬೆಳಕು ? ಎಂದು ಕೇಳಲು ಶಿಷ್ಯನು, ಕಣ್ಣಿಲ್ಲದವನಿಗೆ ಸೂರ್ಯಾದಿಗಳಿದ್ದರೂ ಉಪಯೋಗವಿಲ್ಲದ್ದರಿಂದ, ನನಗೆ ಕಣ್ಣು ಸಹಾಯಕವೆಂದನು. ಆಮೇಲೆ ಗುರುವು ಅದನ್ನು ಮುಚ್ಚಿಕೊಂಡಿರುವಾಗ ? ಎಂದು ಕೇಳಲು ಶಿಷ್ಯನು, ತನ್ನೊಳಗಿರುವ ಬುದ್ಧಿ ಎಂದನು. ಆ ಮೇಲೆ ಗುರುವು ಆ ಬುದ್ಧಿಯ ಕಾರ್ಯಧರ್ಮಗಳನ್ನು ತಿಳಿಯಲು ಯಾವುದು ಸಹಾಯವೆನ್ನಲು ಶಿಷ್ಯನು, ಅಲ್ಲಿ ನಾನು. ಎಂದು ಹೇಳಿದನು. ಆದುದರಿಂದ ನೀನೇ ಪರಮ ಸತ್ಯ ಪರಂಜ್ಯೋತಿ : ಸ್ವರೂಪನಾದ ಪರಮಾತ್ಮಾ ಅಥವಾ ಪರಬ್ರಹ್ಮವೆಂದು ತಿಳಿ." ಎಂದು ಉಪದೇಶಿಸಿದನು. ಆಗ ಶಿಷ್ಯನ ಕಣ್ಣು ತೆರೆದಂತಾಗಿ, ಹೌದು ನಾನು, ಅಂಥ ಜ್ಯೋತಿಸ್ವರೂಪನಾಗಿದ್ದೇನೆ. ಎಂದು ಅನುಭವದಿಂದ ಹೇಳಿದನು, ಈ ತಿಳಿಯುವ ಶಕ್ತಿಯನ್ನೇ ಚಿತ್ ಶಕ್ತಿ ಎಂದು ಹೇಳಿದೆ. ಗಾಂಧೀಜಿಯವರು ಮೊದಲು ಸೂಚಿಸಿದ್ದ ಮಾತಿಗಿಂತ ಮುಂದೆ ಹೋಗಿ ಬ್ರಹ್ಮ ವಿದ್ಯಾಚಾರ್ಯರಾದ ಮಹರ್ಷಿಗಳ ಮಾತಿನಲ್ಲಿ ಹೀಗೆ ಹೇಳಬಹುದು :—

"Even the denial of Truth we might perhaps imagine but the denial of one's own

self we can never conceive" ಎಂದರೆ—"ದೇವನನ್ನು ಇಲ್ಲವೆಂದು ಹೇಳಿ ನಿರಾಕರಿಸುವಂತೆ ಒಂದು ವೇಳೆ ಸತ್ಯವನ್ನು ನಿರಾಕರಿಸುವುದನ್ನೂ ನಾವು ಊಹಿಸಬಹುದು. ಆದರೆ, ತನ್ನನ್ನೇ ತಾನು ಇಲ್ಲವೆನ್ನುವುದನ್ನು ನಾವು ಎಂದಿಗೂ ಭಾವಿಸಲಾರೆವು." ನಮ್ಮ ಆತ್ಮ ವಿಷಯದಲ್ಲಿ ನಾವು "ನಾನು ಇದೇನೆಯೋ ಇಲ್ಲವೋ?" ಎಂದು ಸಂದೇಹವನ್ನಾಗಲಿ, "ನಾನು ಇಲ್ಲ" ಎಂದು ನಿಷೇಧವನ್ನಾಗಲಿ ಹೇಳಲಾರೆವು "ನಾನು ಇದೇನೆ." ಎಂದೇ ಎಲ್ಲರಿಗೂ ನಿಶ್ಚಯ ಜ್ಞಾನವೇ ಇರುತ್ತದೆ. ಸಂದೇಹ, ನಿಷೇಧ ಈ ಎರಡನ್ನು ಹೇಳಬೇಕಾದರೂ ಆತ್ಮತತ್ವವೊಂದು ಹಿನ್ನೆಲೆಯಾಗಿ ಇರಬೇಕಾಗಿರುತ್ತದೆ. "In order to doubt the doubter should exist" ಎಂದರೆ, ಸಂಶಯಪಡುವುದಕ್ಕೂ ಸಂಶಯವನ್ನು ತಿಳಿಸುವುದಕ್ಕೂ ಸಂಶಯಕ್ಕಿಂತ ಬೇರೆಯಾದ ಸಂಶಯವನ್ನು ಸಾಕ್ಷಿಯಾಗಿ ತಿಳಿಯುವ ತತ್ವವು ಇರಬೇಕಾಗುತ್ತದೆ. ಈ ತತ್ವವನ್ನು ವೇದಾಂತಿಗಳು, ಅದರಲ್ಲೂ ಅದ್ವೈತ ವೇದಾಂತಿಗಳು, ಸಾಕ್ಷೀರೂಪತತ್ವವೆಂದು ತಿಳಿಸುತ್ತಾರೆ. ಅದರಂತೆಯೇ ಇದನ್ನು ಚಿತ್ ಶಕ್ತಿ ಪರಾಸಂವಿತ್ ಎಂದು ಶಾಕ್ತೇಯ ದಾರ್ಶನಿಕರೂ ಹೇಳುತ್ತಾರೆ. ಈ ಆಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರಿಯುತ್ತಿರುವ ಮುಮುಕ್ಷುವು ಪಡೆಯುವ ಮಜಲುಗಳಲ್ಲಿ ಶಾಕ್ತೇಯರ ಸಿದ್ಧಾಂತದರ್ಶನವು ಉಪಾಂತ್ಯ (penultimate state) ಸ್ಥಿತಿಯನ್ನು ತಿಳಿಸುತ್ತದೆ. ಎಂದರೆ ತಪ್ಪಾಗಲಾರದು. ಅದ್ವೈತ ದರ್ಶನಕ್ಕೆ ಶಾಕ್ತೇಯ ದರ್ಶನವು ತುಂಬ ಸಮೀಪಗತವಾಗಿದೆ ಎಂಬುದು ಸ್ಪಷ್ಟವಾಗಿದೆ. ಇದಕ್ಕೆ ಮನುಷ್ಯತ್ವವನ್ನು ಹೆಚ್ಚುಹೆಚ್ಚಾಗಿ ಮನಗಾಣಬೇಕು.

"ತೇವೈಸತ್ಪುರುಷಾಃ ಪರಾರ್ಥಘಟಕಾಃ ಸ್ವಾರ್ಥಾನ್ ಪರಿತ್ಯಜ್ಯಯೇ
ಸಾಮಾನ್ಯಾಸ್ತುಪರಾರ್ಥ ಉದ್ಯಮಭೃತಃ ಸ್ವಾರ್ಥಾವಿರೋಧೇ
ನಯೇ ।
ತೇವೈಮಾನುಷರಾಕ್ಷಸಾಃ ಪರಹಿತಂ ಸ್ವಾರ್ಥಾಯ ನಿಘ್ನಂತಿ ಯೇ
ಯೇ ತು ಘ್ನಂತಿ ನಿರರ್ಥಕಂ ಪರಹಿತಂ ತೇ ಕೇ ನಜಾನೀ ಮಹೇ ॥

ಎಂದರೆ, ಸ್ವಪ್ರಯೋಜನವನ್ನು ಸುತರಾಂ ಬಿಟ್ಟು ಪರಪ್ರಯೋಜನಗಳ ಸಾಧನೆಗಾಗಿಯೇ ಯಾರು ದುಡಿಯುತ್ತಿರುತ್ತಾರೋ ಅಂಥವರನ್ನು ಸತ್ಪುರುಷರೆನ್ನುತ್ತಾರೆ. ನಮ್ಮಂತಹ ಸಾಧಾರಣ ಜನರು ಸ್ವಪ್ರಯೋಜನಕ್ಕೆ ವಿರೋಧವಿಲ್ಲದಂತೆ ಪರಪ್ರಯೋಜನ ಸಾಧನೆಗಾಗಿ ದುಡಿಯುತ್ತಾ ಸಾಧ್ಯವಾದಷ್ಟುಮಟ್ಟಿಗೆ ಎರಡನ್ನೂ ಪಡೆಯಲು ಪ್ರಯತ್ನಿಸುತ್ತೇವೆ. ಇಂಥವರನ್ನು ಸಾಮಾನ್ಯಜನರೆನ್ನುತ್ತಾರೆ. ಆದರೆ, ಯಾರು ಸ್ವಪ್ರಯೋಜನವನ್ನು ಪಡೆಯಲು ಪರಪ್ರಯೋಜನವನ್ನು ಹಾಳುಮಾಡುತ್ತಾರೋ ಅಂಥವರನ್ನು ಮನುಷ್ಯ ರೂಪಿನಲ್ಲಿರುವ ರಾಕ್ಷಸರು ಎಂದು ಹೇಳುತ್ತಾರೆ. ಆದರೆ, ಯಾರು ಸ್ವಪ್ರಯೋಜನಲಾಭವಾಗದಿದ್ದರೂ ಪರಪ್ರಯೋಜನವನ್ನು ಹಾಳುಮಾಡುತ್ತಿರುತ್ತಾರೋ ಅಂಥವರನ್ನು ಯಾವ ಮಾತಿನಿಂದ ತಿಳಿಸಬೇಕೆಂಬುದನ್ನು ತಿಳಿಯಲಾರೆವು.

ಮಾನವ ಜನ್ಮದಲ್ಲೂ ಪ್ರಗತಿಸಾಧನೆಯ ಮೆಟ್ಟಲುಗಳು.

ಮಾನವನು ಪಶುತ್ವವನ್ನು ಮೀರಿ ದಾಟಿ ಬಂದು, ರಾಕ್ಷಸತ್ವವನ್ನೂ ಬಿಟ್ಟು ಮನುಷ್ಯತ್ವದಲ್ಲಿ ಮೇಲು ಮೇಲಿನ ಮಟ್ಟಕ್ಕೆ ಏರುತ್ತಿರುವುದೂ, ಕಡೆಗೆ ದೇವತ್ವವನ್ನು ಪಡೆಯುವುದೂ ಅವನ ಸ್ವಾಭಾವಿಕವಾದ ಒಂದು ವಿಶೇಷ ಗುಣವಾಗಿದೆ. ಇಂಥವನನ್ನು ನಾಗರಿಕತೆ (civilization)ಯಲ್ಲೂ, ಸಂಸ್ಕೃತಿ (culture) ಯಲ್ಲೂ ಮೇಲುಮೇಲಿನ ಮೆಟ್ಟಲಿಗೆ ಏರುತ್ತಿರುವವನು ಎನ್ನುತ್ತೇವೆ. ಭಾರತಾರ್ಯರ ಸಂಸ್ಕೃತಿಯು ಧಾರ್ಮಿಕವಾದುದು ಎಂಬ ಅಂಶವನ್ನು ಅಲ್ಲಲ್ಲಿ ವಿವರಿಸಲಾಗಿದೆ. ನಾವು ನಮ್ಮ ದಿನಗಟ್ಟಲೆಯ ಜೀವನಕ್ರಮದಲ್ಲಿ ಮಾಡುವ ಒಳ್ಳೆಯ ಕೆಲಸಗಳೂ, ಆಡುವ ಮಾತುಗಳೂ ಯೋಚಿಸುವ ಭಾವಗಳೂ ಇವುಗಳ ಒಟ್ಟಿಗೆ ಸಂಸ್ಕೃತಿ ಎಂದು ಹೆಸರು. ಈ ಸಂಸ್ಕೃತಿಯ ಮಾರ್ಗದಲ್ಲಿ ಮೇಲ್ಮೆಯನ್ನು ಪಡೆಯುತ್ತಾ ಮುಂದುವರಿಯುತ್ತಿರುವದಕ್ಕೆ ಪ್ರಗತಿ (progress) ಎಂದು ಹೇಳುತ್ತೇವೆ. ಇಂತಹ ಮಾನವನು ಅನುಸರಿಸುತ್ತಿರುವ

ಧರ್ಮಗಳಲ್ಲಿ ದೇವರಪೂಜೆಯೂ ಧ್ಯಾನವೂ ಉಪಾಸನೆಯೂ ಒಂದು ಮುಖ್ಯವಾದ ಧರ್ಮವಾಗಿದೆ. ದೇವರು ಇದ್ದಾನೆಂದು ಮನಗಂಡ ರೀತಿಯು ಹೀಗೆ ಇದೆ. ಈ ಜಗತ್ತಿನಲ್ಲಿ ನಾವೂ ಗುರುತಿಸಬಹುದಾದ ಸೌಂದರ್ಯ, ಉದ್ದೇಶ, ಕ್ರಮ-ಇವುಗಳಿಂದ ಈ ಜಗತ್ತಿನ ಸೃಷ್ಟಿ, ರಕ್ಷಣೆ, ಉಪಸಂಹಾರವೆಂಬ ಮಹಾಕಾರ್ಯಗಳನ್ನು ವ್ಯವಸ್ಥೆಯಿಂದ ನೆರವೇರಿಸುತ್ತಿರುವ ಒಂದು ಚೈತನ್ಯ ಶಕ್ತಿಯು ಇರಬೇಕೆಂದೂ, ಆ ಚೈತನ್ಯವೇ ದೇವರೆಂದೂ, ಈ ಪ್ರಪಂಚದ ಯೋಗಕ್ಷೇಮಗಳ ನಿರ್ವಹಣೆಗೋಸ್ಕರ ಆ ದೇವರು ಸರ್ವಜ್ಞನೂ ಸರ್ವಶಕ್ತನೂ ಆಗಿರಬೇಕೆಂದೂ, ಇದು ತೃಪ್ತಿಕರವಾಗಿ ನೆರವೇರಬೇಕಾದರೆ ಈ ವ್ಯವಸ್ಥೆಯೂ ಕಟ್ಟಳೆಯೂ ಆವಶ್ಯಕವೆಂದೂ, ಈ ಕಟ್ಟಳೆಯೇ ಧರ್ಮವೆಂದೂ ಇದೇ ದೇವರ ಇಚ್ಛೆ ಎಂದೂ ಹಿಂದೆ ವಿವರಿಸಿದೆ. ಈ ಅಂಶವನ್ನು ಮಹಾನಾರಾಯಣೋಪನಿಷತ್ತಿನಲ್ಲಿ "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂದು ಹೇಳಿದೆ.

ಧರ್ಮದಲ್ಲಿ ಮುಖ್ಯವಾದ ಎರಡು ಬಗೆ.

ಈ ಧರ್ಮವು ಸಾಮಾನ್ಯ ಅಥವಾ ವಿಶ್ವಧರ್ಮವೆಂದೂ, ವಿಶೇಷ ಅಥವಾ ವರ್ಣಾಶ್ರಮ ಧರ್ಮವೆಂದೂ ಎರಡು ಬಗೆಯಾಗಿದೆ. ಪ್ರತಿಯೊಂದು ವಸ್ತುವೂ ಪ್ರಾಣಿಯೂ ತಾನು ಮಾಡಬೇಕಾದ ಧರ್ಮವನ್ನು ತಪ್ಪದೆ ಆಚರಿಸುತ್ತಿರುವುದರಿಂದಲೇ ಈ ಜಗತ್ತು ನಿಂತಿರುತ್ತದೆ. ಇಲ್ಲಿ ವಾಸವು ಸಹ್ಯವಾಗಿದೆ. ಪ್ರಗತಿಯೂ ಸಾಧ್ಯವಾಗಿದೆ. ಶಾಂತಿ ನೆಮ್ಮದಿ ಸುಖಗಳು ಲಭ್ಯವಾಗಿವೆ. ದೇವರಿಂದ ನಮಗೆ ಆಗಿರುವ ಈ ಉಪಕಾರಕ್ಕಾಗಿ ಪ್ರೀತಿ, ಭಕ್ತಿ, ಕೃತಜ್ಞತೆ, ಗೌರವಗಳನ್ನು ತೋರಿಸುವುದು ವಿವೇಕಿಯಾದ ಮಾನವನ ಸ್ವಾಭಾವಿಕವೂ ಅನಿವಾರ್ಯವೂ ಆಗಿರುವ ಧರ್ಮವಾಗಿದೆ. ದೇವರು ನಮಗಿಂತಲೂ ಗುಣ ಶಕ್ತಿಗಳಲ್ಲಿ ಮೇಲಾದವನು ಶ್ರೇಷ್ಠನು ಎಂಬ ಭಾವನೆಗೇ ಪೂಜೆ ಎಂದು ಹೆಸರು. ಪೂಜಾಧ್ಯಾನ ಉಪಾಸನೆಗಳು ಧರ್ಮಗಳಾಗಿವೆ. ಈ ಧರ್ಮವು ಪ್ರವೃತ್ತಿ ಧರ್ಮವೆಂದೂ, ನಿವೃತ್ತಿ ಧರ್ಮವೆಂದೂ ಎರಡು ಬಗೆಯಾಗಿದೆ.

ಸಂಸ್ಕೃತಿಯ ಅಂತಸ್ಸಿನ ಭೇದಕ್ಕೆ ತಕ್ಕಂತೆ ಧರ್ಮ ಭೇದ.

ಮಾನವನು ಮಂದಾಧಿಕಾರಿಯಾಗಿದ್ದರೆ, ಎಂದರೆ, ತಾತ್ಕಾಲಿಕ ಸುಖವನ್ನು ಆಶಿಸುವವನಾಗಿದ್ದರೆ, ಪ್ರೇಯಸ್ಸನ್ನೂ ಎಂದರೆ, ಇಹದಲ್ಲಿ ಅಭ್ಯುದಯಗಳನ್ನೂ, ಪರದಲ್ಲಿ ಸದ್ಗತಿಗಳನ್ನೂ, ಅಪೇಕ್ಷಿತ್ತಾನೆ. ಫಲಾಭಿಸಂಧಿಯಿಂದ ಕೂಡಿದ ಧರ್ಮವನ್ನು ಆಚರಿಸುತ್ತಾ ಇರುತ್ತಾನೆ. ಇಲ್ಲಿ ಧರ್ಮಕರ್ಮಗಳನ್ನು ಮಾಡುವುದು, ಅವುಗಳ ಫಲಗಳನ್ನು ಇಹಪರಗಳಲ್ಲಿ ಅನುಭವಿಸುವುದು. ಆ ಪುಣ್ಯವು ಮುಗಿದ ಮೇಲೆ ಪುನಃ ಇಲ್ಲಿ ಧರ್ಮಕರ್ಮಗಳನ್ನು ಆಚರಿಸುವುದು. ಅವುಗಳ ಫಲಗಳನ್ನು ಅನುಭವಿಸುವುದು, ಪುನಃ ಇಲ್ಲಿ ಕರ್ಮಾಚರಣೆ, ಹೀಗೆ ಜನನ ಮರಣ, ಕರ್ತೃತ್ವ ಭೋಕ್ತೃತ್ವ, ಪುಣ್ಯ ಪಾಪ, ಸುಖದುಃಖಾನುಭವ-ಇವುಗಳ ಪರಂಪರೆ ಚಕ್ರದಲ್ಲಿ ಸುತ್ತುತ್ತಾ ಬಳಲುತ್ತಿರುವುದು. ಇದರಿಂದ ಸಂಸಾರವು ಅನಂತವಾಗಿ ಸಾಗುತ್ತಿರುವಂತಾಗುತ್ತದೆ. ಇದಕ್ಕೆ ಪ್ರವೃತ್ತಿಧರ್ಮವೆಂದು ವ್ಯವಹಾರವಿದೆ.

ಅಧಿಕಾರಿ ಭೇದದಿಂದ ಧ್ಯೇಯ ಭೇದ.

ಹಾಗಲ್ಲದೆ ಮಾನವನು ಪ್ರೌಢಾಧಿಕಾರಿಯಾಗಿದ್ದರೆ, ಎಂದರೆ, ಐಹಿಕವಾದ ಅಭ್ಯುದಯ ಆಮುಷ್ಮಿಕವಾದ ಸದ್ಗತಿ ಇವುಗಳಲ್ಲಿ ಅವಿಶುದ್ಧಿ, ಕ್ಷಯ, ಸಾತಿಶಯತ್ವ, ಎಂಬ ಮೂರು ದೋಷಗಳು ಅನಿವಾರ್ಯವಾಗಿ ಸೇರಿರುತ್ತವೆಂಬುದನ್ನು ಮನಗಂಡ ಮೇಲೆ ಇದರಲ್ಲಿ ಆಶೆ ಇಲ್ಲದೆ ಇರುವವನಾಗಿದ್ದರೆ, ನಿತ್ಯ ನಿರ್ದುಷ್ಟನಿರತಿಶಯ ಸುಖವೆಂಬ ಶ್ರೇಯಸ್ಸಿಗಾಗಿ ಅಪೇಕ್ಷಿಸುತ್ತಾನೆ. ಆಗ ವೇದಶಾಸ್ತ್ರ ಗೂರೂಪದೇಶಗಳಿಂದ ನಿಷ್ಕಾಮ ಧರ್ಮಾಚರಣೆಯೇ ಅಂತಹ ಸುಖಸಾಧನವೆಂದು ತಿಳಿದು ಅದನ್ನು ಆಚರಿಸುತ್ತಾನೆ. ಅದರಿಂದ ಚಿತ್ತಶುದ್ಧಿಯಾಗುತ್ತದೆ. ಆಮೇಲೆ ಜ್ಞಾನ ಪ್ರಾಪ್ತಿಯಾಗುತ್ತದೆ. ದೇವರೂ ಜೀವರೂ ಸಚ್ಚಿದಾನಂದರೂಪದಲ್ಲಿ ಅಭಿನ್ನರೆಂಬ ಜ್ಞಾನವಾಗುತ್ತದೆ. ಆತ್ಮನ ವಾಸ್ತವ ಸ್ವರೂಪಾನುಭವವು ಆದ ಮೇಲೆ ಎಂದಿನಂತೆ ಅಖಂಡ ಸಚ್ಚಿದಾನಂದಾನಂತಾದ್ವಯ ತತ್ತ್ವ

ಸ್ವರೂಪದಲ್ಲಿರುವಿಕೆ ಎಂಬ ಮೋಕ್ಷವು, ಈ ಸಂಸಾರದುಃಖದಿಂದ ಬಿಡುಗಡೆಯುೂ, ದೊರೆಯುತ್ತದೆ. ಈ ಧರ್ಮಕ್ಕೆ ನಿವೃತ್ತಿ ಧರ್ಮವೆಂದು ಹೆಸರು.

ತತ್ತ್ವದೃಷ್ಟಿ ಅವಿರೋಧವಾಗಿ ದೇವರೂಪ ಕಲ್ಪನೆ.

ದೇವರನ್ನು ಪೂಜಿಸುವುದರಲ್ಲಿ ಶಿವ, ವಿಷ್ಣು, ರಾಮ, ಕೃಷ್ಣ, ನಾರಾಯಣ ಮುಂತಾದ ಪುರುಷ ರೂಪವನ್ನೂ, ಉಮಾ, ಲಕ್ಷ್ಮೀ, ಸರಸ್ವತೀ, ತ್ರಿಪುರಸುಂದರೀ, ಗಾಯತ್ರೀ, ಭುವನೇಶ್ವರೀ, ಆದಿಶಕ್ತಿ, ಪರಾಶಕ್ತಿ, ಪರಾಸಂವಿತ್ ಮುಂತಾದ ಸ್ತ್ರೀ ರೂಪವನ್ನೂ, ಹರಿಹರ, ದತ್ತಾತ್ರೇಯ, ಅರ್ಧನಾರೀಶ್ವರ ಮುಂತಾದ ಸಂಯುಕ್ತ ರೂಪವನ್ನೂ ಭಕ್ತರು ತಮ್ಮ ರುಚಿ ಸಂಸ್ಕೃತಿ ಸನ್ನಿವೇಶಗಳಿಗೆ ಅನುಸಾರವಾಗಿ ಆದರಿಸುವುದು ರೂಢಿಯಲ್ಲಿದೆ. ಈ ಪೂಜೆಯಿಂದ ಭಕ್ತರು ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಿರುತ್ತಾರೆ. ಈ ಎಲ್ಲ ರೂಪಗಳಲ್ಲೂ ದೇವತತ್ತ್ವವು ಒಂದೇ ಆಗಿರುತ್ತದೆ ಎನ್ನುವುದನ್ನು ನೆನಪಿನಲ್ಲಿಡಬೇಕು. ಹೀಗೆ ಪ್ರವೃತ್ತಿ ನಿವೃತ್ತಿ ರೂಪ ಧರ್ಮದಿಂದ ಎಲ್ಲರ ಇಷ್ಟಾರ್ಥ ಸಾಧನೆಯಾಗುತ್ತದೆ ; ದೇಶದಲ್ಲಿ ಶಾಂತಿಸುಖಗಳೂ ನೆಲೆಸಿ ಇರುತ್ತವೆ.

"ನಿರ್ಗುಣಂ ಪರಮಂ ಬ್ರಹ್ಮಸಾಕ್ಷಾತ್ಕರ್ತುಮನೀಶ್ವರಾಃ ।
ಯೇ ಮಂದಾಸ್ತೇಽನುಕಂಪ್ಯಂತೇ ಸಗುಣಾಕಾರ ಕಲ್ಪನೈಃ ॥"

ಎಂದರೆ, ನಿರಾಕಾರವಾಗಿ ನಿರ್ಗುಣವಾಗಿರುವ ಪರಬ್ರಹ್ಮ ತತ್ತ್ವವನ್ನು ನೇರವಾಗಿ ಧ್ಯಾನಿಸಿ ಸಾಕ್ಷಾತ್ಕರಿಸಿಕೊಳ್ಳಲು ಅಸಮರ್ಥರಾದ ನಮ್ಮಂಥವರಿಗೆ ಸಹಾಯವಾಗಲೆಂದು ಸಗುಣಾಕಾರ ರೂಪಗಳ ಕಲ್ಪನೆಗಳಿಂದ ಶಾಸ್ತ್ರಗಳು ಅನುಗ್ರಹಿಸುತ್ತವೆ.

ಶೈವ ಪುರಾಣಗಳಲ್ಲಿ ಶಿವಪಾರಮ್ಯವನ್ನೂ, ವೈಷ್ಣವ ಪುರಾಣಗಳಲ್ಲಿ ವಿಷ್ಣುಸರ್ವೋತ್ತಮತ್ವವನ್ನೂ, ಶಾಕ್ತೇಯ ಪುರಾಣಗಳಲ್ಲಿ ಶಕ್ತಿತತ್ತ್ವದ ಪರಮೋತ್ಕರ್ಷವನ್ನೂ ನಾಮರೂಪಗುಣ ಶಕ್ತಿಗಳಿಂದ ವರ್ಣಿಸಿದೆ.

ಪರಾಪರ ಎಂದು ಬ್ರಹ್ಮರೂಪಗಳು ಎರಡು.

ಈ ಶಕ್ತಿ ತತ್ವವು ಶಿವ ವಿಷ್ಣು ಮುಂತಾದ ದೇವರ ವ್ಯಾವಹಾರಿಕರೂಪಗಳಲ್ಲಿ ಸಮಾನವಾಗಿ ವ್ಯಾಪಕವಾಗಿರುವುದನ್ನು ಗಮನಿಸಬೇಕು. ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳು ತಮ್ಮ ಮಹಾಕಾರ್ಯಗಳಾದ ಜಗತ್ತಿನ ಸೃಷ್ಟಿ, ರಕ್ಷಣೆ, ಉಪಸಂಹಾರಗಳನ್ನು ನೆರವೇರಿಸಲು ಶಕ್ತಿಯು ಬೇಕು. ಇವರ ಸಹಧರ್ಮಿಣಿಯರೂ ಇವರಿಗೆ ಸಹಾಯಕರೂ ಆಗಿರುವ ಉಮಾ, ಲಕ್ಷ್ಮೀ, ಸರಸ್ವತೀ ದೇವಿಯರೂ ಈ ಶಕ್ತ್ಯಂಶರಾಗಿಯೇ ಇರುತ್ತಾರೆ. ಶಕ್ತಿ ಇಲ್ಲದೆ ಯಾವ ಕೆಲಸವೂ, ದೊಡ್ಡದಾಗಲಿ ಚಿಕ್ಕದಾಗಲಿ, ಆಗುವುದಿಲ್ಲ. ಈ ಶಕ್ತಿ ತತ್ವದ ಭೌತರೂಪವು ಮೇಲೆ ೨೮೪ನೆಯ ಪುಟದಲ್ಲಿ ಸೂಚಿಸಿರುವ, ಆಧುನಿಕ ವಿಜ್ಞಾನಿಗಳೂ ವಿವರಿಸುತ್ತಿರುವ, Energy· vibration, radiation, light heat, Electricity ಮುಂತಾದ ಶಕ್ತಿ ರೂಪಗಳಲ್ಲಿ ಗುರುತಿಸಲ್ಪಟ್ಟಿರುವ ತತ್ವವೂ ಒಂದೇ ಆಗಿರಬಹುದೆಂದು ಊಹಿಸಲು ಅವಕಾಶವಿದೆ.

ವೇದಾಂತ ದೃಷ್ಟಿಯಿಂದ ಸೃಷ್ಟಿ ಕ್ರಮ.

ಏಕಮೇವಾದ್ವಿತೀಯವಾದ ಪರಬ್ರಹ್ಮ ತತ್ವವು ಅಪೇಕ್ಷಿಕವಾದ ಸೃಷ್ಟಿಯ ಆರಂಭದಲ್ಲಿ ಸೃಜ್ಯಮಾನವಾಗಿರುವ ಪ್ರಾಣಿಗಳ ಕರ್ಮಾನುಸಾರವಾಗಿ ಆ ಕರ್ಮಗಳ ಫಲಗಳಾದ ಸುಖದುಃಖಗಳನ್ನು ಆಯಾ ಪ್ರಾಣಿಗಳಿಗೆ ದೊರೆಯುವಂತೆ ಮಾಡಿ ಕೊಡುವುದಕ್ಕಾಗಿಯೂ, ಆ ಸುಖದುಃಖಾನುಭವಕ್ಕಾಗಿ ಶರೀರಗಳನ್ನು ಒದಗಿಸುವುದಕ್ಕಾಗಿಯೂ, ಈ ಪ್ರಪಂಚವನ್ನು ಸೃಜಿಸುವಾಗ ಮೊದಲು “ ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ ” ಎಂದು ಉಪನಿಷತ್ತಿನಲ್ಲೂ ಹೇಳಿರುವಂತೆ ಯೋಚಿಸಿದಾಗ ಆ ಬ್ರಹ್ಮತತ್ವದ ಇಚ್ಛಾಶಕ್ತಿಯು ಮುಂದಾಗುವಿಕೆ ಅಥವಾ ಆವಿರ್ಭಾವವಾಗುತ್ತದೆ. “ ಇಚ್ಛಾಶಕ್ತಿಃ ಉಮಾ ಕುಮಾರೀ ” ಎಂದು ವರ್ಣಿಸಿರುವ

ಶಕ್ತಿಯೇ ಈ ಇಚ್ಛಾಶಕ್ತಿಯಾಗಿರಬೇಕು. ಆಮೇಲೆ ಆ ಇಚ್ಛಾಪೂರ್ತಿಗಾಗಿ ಕ್ರಮವಾಗಿ ಆಲೋಚನೆಯನ್ನು ಮಾಡಿದ ಅಂಶವನ್ನು "ಸ ತಪೋಽತಪ್ಯತ" ಎಂದು ವಿವರಿಸುವ ಆ ಉಪನಿಷತ್ತಿನ ವಾಕ್ಯವು ಆ ಬ್ರಹ್ಮ ತತ್ವದ ಜ್ಞಾನಶಕ್ತಿಯು ಆವಿರ್ಭಾವವನ್ನು ಸೂಚಿಸುತ್ತದೆ. ಹಾಗೆಯೇ "ಸ ತಪಸ್ತಪ್ತ್ವಾ ಇದಂಸರ್ವಮಸೃಜತ" ಎಂಬ ಅದೇ ಉಪನಿಷತ್ತಿನ ವಾಕ್ಯದಿಂದ ಆ ಪರತತ್ವದ ಕ್ರಿಯಾಶಕ್ತಿಯು ಆವಿರ್ಭಾವವೂ ಜಗನ್ನಿರ್ಮಾಣವೂ ಕ್ರಮವಾಗಿ ರೂಪಗೊಂಡುದನ್ನು ಸೂಚಿಸುತ್ತದೆ. ಇದೆಲ್ಲಕ್ಕಿಂತಲೂ ಮೇಲಾಗಿ "ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್, ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್" ಎಂದರೆ, "ಈ ಪ್ರಪಂಚವನ್ನು ಸೃಜಿಸಿ, ಅದನ್ನು ತಾನೇ ಪ್ರವೇಶಿಸಿ, ತಾನೇ ಇದೆಲ್ಲವನ್ನೂ ವ್ಯಾಪಿಸಿತು", ಎಂದು ಆ ಉಪನಿಷತ್ತಿನಲ್ಲಿಯೂ ಹೇಳಿರುವುದು ಬಹುಮುಖ್ಯವಾದ ಅಂಶವಾಗಿದೆ. ಇದು ಇನ್ನೂ ವಿಮರ್ಶಿಸಿ ತಿಳಿಯಬೇಕಾದ ಸೂಕ್ಷ್ಮವೂ ರಹಸ್ಯವೂ ಆದ ವಿಷಯವಾಗಿದೆ.

> "ಸ್ತ್ರೀರೂಪಾಂ ಚಿಂತಯೇದ್ದೇವೀಂ ಪುಂರೂಪಾಂವಾ ವಿಂಚಿತಯೇತ್ ।
> ಅಥವಾ ನಿಷ್ಕಳಂ ಧ್ಯಾಯೇತ್ ಸಚ್ಚಿದಾನಂದ ಲಕ್ಷಣಂ ॥"

ಈ ಶಕ್ತಿಯು ಸಾಂಖ್ಯಯೋಗಶಾಸ್ತ್ರಗಳಲ್ಲಿ ವಿವರಿಸಿರುವ ಪ್ರಕೃತಿ ತತ್ವವಾಗಿರಬೇಕು. ವೇದಾಂತ ಶಾಸ್ತ್ರದಲ್ಲಿ ನಿರೂಪಿಸಿರುವ ಮಾಯಾ ತತ್ವವೂ, ಪುರಾಣಗಳಲ್ಲಿ ವರ್ಣಿಸಿರುವ ದೇವೀ ಜಗಜ್ಜನನೀ ತತ್ವವೂ, ತಂತ್ರಶಾಸ್ತ್ರಗಳಲ್ಲಿ ಪ್ರತಿವಾದಿಸಿರುವ ಚಿಚ್ಛಕ್ತಿತತ್ತ್ವವೂ ಒಂದೇ ಆಗಿರುತ್ತದೆ. ಇದನ್ನೇ—

> "ಸರ್ವ ಚೈತನ್ಯ ರೂಪಾಂ ತಾಂ ಆದ್ಯಾಂ ವಿದ್ಯಾಂ ಚ ಧೀಮಹಿ ।
> ಬುದ್ಧಿಂ ಯಾ ನಃ ಪ್ರಚೋದಯಾತ್ ।"

ಎಂಬ ಶಕ್ತಿ ಗಾಯತ್ರೀ ಮಂತ್ರದಲ್ಲಿ ನಿರೂಪಿಸಲಾಗಿದೆ. ಇದು ದೇವೀ ಭಾಗವತವೆಂಬ ಮಹಾಪುರಾಣದ ಮೊದಲಲ್ಲಿರುವ ಮಂಗಳ ಮಂತ್ರವಾಗಿದೆ. ಬ್ರಹ್ಮಚಾರಿಗಳಿಗೆ ಉಪನಯನ ಕಾಲದಲ್ಲಿ ಉಪ

ದೇಶಿಸುವ ಗಾಯತ್ರೀ ಮಂತ್ರಕ್ಕೆ ಬ್ರಹ್ಮಗಾಯತ್ರೀ ಎಂದು ವ್ಯವ ಹಾರವಿದೆ. ಇವೆರಡು ಮಂತ್ರಗಳಲ್ಲೂ ಧಾರ್ಮಿಕ ಬುದ್ಧಿಯನ್ನು ಪ್ರಚೋದಿಸುವಂತೆ ಪ್ರಾರ್ಥನೆ ಇದೆ. ಈ ದೈನಂದಿನ ಪ್ರಾರ್ಥನೆಯು ಇತರ ಜನರು ಎಂದರೆ, ಕ್ರಿಶ್ಚಿಯನ್ನರೂ, ಮುಸಲ್ಮಾನರೂ ಬೌದ್ಧರು ಮುಂತಾದವರು ಮಾಡುವ ಪ್ರಾರ್ಥನೆಗಿಂತ ಮೇಲಾದುದೆಂಬುದು ವಿಮರ್ಶಕರಿಗೆ ಸ್ಪಷ್ಟವಾಗುತ್ತದೆ.

ಜೀವನದ ಗುರಿಗಳು ಎರಡು.

ಬಾಹ್ಯ ಪ್ರಪಂಚದ ಸ್ವರೂಪವನ್ನೂ ತತ್ವವನ್ನೂ ನಮಗಿರುವ ಐದು ಜ್ಞಾನೇಂದ್ರಿಯಗಳಿಂದ ನಮಗೆ ಉಂಟಾಗುತ್ತಿರುವ ಅನುಭವಗಳ ಆಧಾರದ ಮೇಲೆ ವಿಮರ್ಶೆ ಊಹೆ ಇತ್ಯಾದಿ ರೀತಿಗಳಿಂದ ಗೊತ್ತುಮಾಡಿಕೊಳ್ಳುತ್ತಿರುತ್ತೇವೆ. ನಾವು ತಿಳಿಯಬೇಕಾದ ನಾಲ್ಕು ಅಂಶಗಳು ದೇವರು, ಜೀವರು, ಜಗತ್ತು, ಧರ್ಮ ಎಂಬಿವೇ ಆಗಿವೆ. ಈ ವಿಷಯಗಳು ಎಲ್ಲ ದರ್ಶನಗಳಲ್ಲಿಯೂ ವಿಮರ್ಶಿಸಿ ವಿವರಿಸಲ್ಪಡುತ್ತಿರುತ್ತವೆ. ಇವು ಎಲ್ಲ ದೇಶಗಳ ಪವಿತ್ರ ಗ್ರಂಥಗಳಲ್ಲಿ ಇವೆ. ಕೆಲವಲ್ಲಿ ಸೂಕ್ಷ್ಮವಾಗಿ ಸೂಚಿತವಾಗಿವೆ. ಕೆಲವಲ್ಲಿ ವಿವರವಾಗಿ ವಿಸ್ತಾರವಾಗಿ ಬೆಳೆಸಲ್ಪಟ್ಟಿವೆ. ಇವುಗಳಲ್ಲಿ ನಮ್ಮ ತಿಳಿವಳಿಕೆಯು ಮುಂದುವರಿದಿರುವಷ್ಟರಮಟ್ಟಿಗೆ, ಈ ತಿಳಿವಳಿಕೆಯನ್ನನುಸರಿಸಿ ನಮ್ಮ ನಡೆವಳಿಕೆಯು ಅಳವಟ್ಟಿರುವಷ್ಟರಮಟ್ಟಿಗೆ, ಇವುಗಳ ವಿಚಾರವನ್ನು ಮುಂದುವರಿಸುವುದರಲ್ಲಿ ನಮಗಿರುವ ಚಟುವಟಿಕೆ ಇರುವಷ್ಟರಮಟ್ಟಿಗೆ ಎಂದರೆ, ಈ ತಿಳಿವಳಿಕೆ, ನಡೆವಳಿಕೆ, ಚಟುವಟಿಕೆಗಳೇ ಸಂಸ್ಕೃತಿಯನ್ನು ರೂಪಿಸುತ್ತವೆ. ಮಾನವನು ತನ್ನ ಮನುಷ್ಯತ್ವವನ್ನು ಅರಿತು ಸಂಸ್ಕೃತಿಯಲ್ಲಿ ಧರ್ಮದ ನೆರವಿನಿಂದ ಮುಂದುವರಿಯಲು ಪ್ರಾರಂಭಿಸಿದಾಗಿನಿಂದಲೂ ಪ್ರೇಯಸ್ಸುಗಳ ಎಂದರೆ, ತಾತ್ಕಾಲಿಕ ಸುಖಪ್ರಾಪ್ತಿಗಾಗಿ ಮತ್ತು ದುಃಖ ನಿವೃತ್ತಿಗಾಗಿಯೂ ಮತ್ತು ಶ್ರೇಯಸ್ಸಿನ ಎಂದರೆ, ನಿತ್ಯನಿರ್ದುಷ್ಟ ನಿರತಿಶಯ ಸುಖಪ್ರಾಪ್ತಿಗಾಗಿಯೂ ಮತ್ತು ದುಃಖದ ಆತ್ಯಂತಿಕ ನಿವೃತ್ತಿಗಾಗಿಯೂ ಉಪಾಯ

ಗಳನ್ನು ಹುಡುಕುತ್ತಾ ಮನಗಾಣುತ್ತಾ ಆಚರಿಸುತ್ತಾ ಬರುತ್ತಿದ್ದಾನೆ.

ದುಃಖ ಸ್ಯಾತ್ಯಂತನಾಶಃ, ಸುಖಮಪಿ ಪರಮಂ, ಪ್ರಾರ್ಥನೀಯಂ
ಹಿ ಸರ್ವೈಃ।
ಸೌಖ್ಯಂ ಪ್ರಾಪ್ಯಂ ನ ತತ್ ಸ್ಯಾತ್, ಅನುಭವವಿದಿತಂ, ಸ್ವಾತ್ಮ
ರೂಪಂ, ಹಿ ಸಿದ್ಧಂ।
ಮೋಕ್ಷೋ ದುಃಖಸ್ಯ ನಾಶಃ, ಜನಿಮೃತಿ ಲಹರೀ ಪ್ರಾಪ್ತಿ ರೂಪಂಹಿ
ದುಃಖಂ।
ಜ್ಞಾನಾತ್ ಮೋಕ್ಷೋಽಭ್ಯುಪೇತಃ, ತತ ಇಹ ಹಿ ಭವೇತ್, ದುಃಖ
ಮಜ್ಞಾನರೂಪಂ ॥

ಸೂಕ್ಷ್ಮ ದೃಷ್ಟಿಯಲ್ಲಿ ಜೀವನದ ಗುರಿ ಒಂದೇ.

ದುಃಖದ ಅತ್ಯಂತನಾಶವೆಂದರೆ ನಿರ್ಮೂಲವಾಗಿ ಪುನಃ ಬರದೆ ಇರುವ ಹಾಗೆ ನಾಶವಾಗುವಿಕೆಯಾಗಿದೆ. ಸುಖಗಳಲ್ಲಿಯೂ ಪರಮ ಎಂದರೆ, ನಿತ್ಯವಾದುದೂ, ದೋಷರಹಿತವೂ ನಿರತಿಶಯವಾದುದೂ ಆಗಿರುವಂಥ ಸುಖವು. ಇವೆರಡನ್ನೇ ವಿವೇಕಿ ಮಾನವರು ಅಪೇಕ್ಷಿಸುತ್ತಾರೆ. ಇವುಗಳ ಪೈಕಿ ಆ ಪರಮ ಸುಖವು ಪ್ರಾಪ್ಯವಾದುದಲ್ಲವು ಎಂದರೆ, ಹೊರಗಿನಿಂದ ಪಡೆಯಬೇಕಾದುದಲ್ಲವು. ಅದು ಸ್ವಾತ್ಮರೂಪವಾದುದೆಂದೂ, ಸಿದ್ಧವಾದುದೆಂದೂ, ಸಾಧ್ಯವಾದುದಲ್ಲವೆಂದೂ, ಅನುಭವದಿಂದಲೂ ಗೊತ್ತಾಗುತ್ತದೆ. ಶ್ರುತಿಯೂ ಹಾಗೆಯೇ ಹೇಳಿರುತ್ತದೆ.

ಅಜ್ಞಾನ ನಿವೃತ್ತಿಯೇ ಏಕಮಾತ್ರ ಪುರುಷಾರ್ಥವು.

ಆದುದರಿಂದ ದುಃಖ ನಾಶವೇ ಮೋಕ್ಷವೆಂಬ ಪರಮಪುರುಷಾರ್ಥವೆಂದು ಹೇಳಿದ ಹಾಗಾಯಿತು. ಈ ದುಃಖವೂ ಜನನಮರಣ ಪ್ರವಾಹಪರಂಪರೆಯಲ್ಲಿ ಸಿಕ್ಕಿಕೊಂಡು ಸುಖದುಃಖಗಳನ್ನು ಅನುಭವಿಸಬೇಕಾಗಿರುವ ನಿರ್ಬಂಧವೆಂದೂ ಗೊತ್ತಾಗುತ್ತದೆ. ಶ್ರುತಿ ಸ್ಮೃತಿ ದರ್ಶನಗಳಲ್ಲಿ ಹೇಳಿರುವಂತೆ ಎಲ್ಲ ಪವಿತ್ರ ಗ್ರಂಥಗಳಲ್ಲೂ ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು

ಸಿದ್ಧಾಂತಪಡಿಸಿ ಹೇಳಲಾಗಿದೆ. ಜ್ಞಾನವು ಅಜ್ಞಾನವನ್ನು ಮಾತ್ರ ನಿರ್ಮೂಲವಾಗಿ ನಾಶಪಡಿಸಬಲ್ಲುದು ಎಂದು ಎಲ್ಲರೂ ಒಪ್ಪುತ್ತಾರೆ. ಈ ಕಾರಣದಿಂದ ಸಂಸಾರವು ಎಂದರೆ ಕರ್ತೃತ್ವ ಭೋಕ್ತೃತ್ವ ಹುಟ್ಟು ಸಾವು, ಪುಣ್ಯಪಾಪ, ಸುಖದುಃಖಗಳ ಅನುಭವ ಈ ಚಕ್ರದಲ್ಲಿ ನಿರ್ಬಂಧ ದಿಂದ ಬಳಸುತ್ತಾ ಬಳಲುತ್ತಿರುವಿಕೆಯು, ಆ ಜ್ಞಾನ ರೂಪವಾಗಿರ ಬೇಕು. ಈ ಸಂಸಾರ ಚಕ್ರದಲ್ಲಿ ಸಿಕ್ಕಿಕೊಂಡಿರುವಿಕೆಯು ಈ ತತ್ವದ ತಿಳಿವಳಿಕೆ ಇಲ್ಲದಿರುವಿಕೆಯಿಂದ, ನಾನು ನನ್ನದು ಎಂಬ ಅಭಿಮಾನ ದಿಂದ ಉಂಟಾಗಿದೆ. ಆತ್ಮವೂ ಈಶ್ವರನೂ ಸಚ್ಚಿದಾನಂದರೂಪದಲ್ಲಿ ಅಭಿನ್ನರು ಎಂಬ ತಿಳಿವಳಿಕೆ ಅನುಭವದಿಂದ ಈ ಅಜ್ಞಾನವು, ಅಭಿ ಮಾನವು, ನಷ್ಟವಾಗುತ್ತದೆ ಎಂದು ಈ ಪದ್ಯದ ಅರ್ಥವು. ಇದೇ ಪರಮಪುರುಷಾರ್ಥವಾದ ಮೋಕ್ಷವಾಗಿದೆ.

**ಸಂಸ್ಕೃತಿ, ಜೀವನ ಸಾಹಿತ್ಯ, ಭಾಷೆಗಳ ನಿಕಟ ಸಂಬಂಧ.**

ಧಾರ್ಮಿಕ ಸಂಸ್ಕೃತಿಯೂ ಧಾರ್ಮಿಕ ಜೀವನವೂ ಧಾರ್ಮಿಕ ಸಾಹಿತ್ಯವೂ ಸಂಸ್ಕೃತ ಭಾಷೆಯೂ ಹೀಗೆ ಪರಸ್ಪರವಾಗಿ ಪೂರಕಪೋಷಕ (Complementary and Supplementary) ಗಳಾಗಿ ಮುಂದುವರಿದುದರ ಫಲಪರಿಣಾಮ ಗಳನ್ನು ಇದುವರೆಗೆ ಸಂಗ್ರಹವಾಗಿ ನಿರೂಪಿಸಲಾಗಿದೆ. ಈ ಪ್ರಗತಿ ಮಾರ್ಗದಲ್ಲಿ ಧರ್ಮಕ್ಕೆ ಪ್ರಾಮುಖ್ಯವಿದೆ ಎಂಬ ಅಂಶವೂ ಸ್ಪಷ್ಟ ವಾಗಿದೆ. ಈ ಧಾರ್ಮಿಕ ಪ್ರಗತಿಯನ್ನು ತಿಳಿವಳಿಕೆ, ವಿವೇಚನೆ, ಮುಂದಾಲೋಚನೆಯುಳ್ಳವರೆಲ್ಲರೂ ಗಮನಿಸಿ ತಮ್ಮ ಜೀವನ ಕ್ರಮ ದಲ್ಲಿ ಅಳವಡಿಸಿಕೊಳ್ಳುತ್ತಾರೆಂಬುದು ಸ್ವಾಭಾವಿಕವೂ ಅನಿವಾರ್ಯವೂ ಆಗಿದೆ. ಈ ದೊಡ್ಡ ದಾರಿಯಲ್ಲಿ ಮುಂದುವರಿಯುತ್ತಿದ್ದರೆ ಪರಮ ಪುರುಷಾರ್ಥಲಾಭವು ತಪ್ಪದೆ ಎಲ್ಲರಿಗೂ ಆಗುತ್ತದೆ. ಉದಾತ್ತ ಭಾವನೆಯಿಂದ ಕೂಡಿದ ಸಂಸ್ಕೃತ ಜೀವನಕ್ಕೆ ಶೀಲ (Character) ಎಂದು ಹೆಸರು. ಇದನ್ನು ನಾನಾ ಬಗೆಗಳಲ್ಲಿ ವರ್ಣಿಸುವುದೂ ಇದರಲ್ಲಿ ಜನರಿಗೆ ಆದರವನ್ನು ಉಂಟುಮಾಡುವುದೂ ಸಾಹಿತ್ಯದ

ಮುಖ್ಯ ಕಾರ್ಯವಾಗಿದೆ. ಇದನ್ನು ಶ್ರುತಿ ಸ್ಮೃತಿಗಳೂ, ಇತಿಹಾಸ ಪುರಾಣಗಳೂ ಕಲಾಕಾವ್ಯ ನಾಟಕಗಳೂ ಸಂತತವಾಗಿ ನೆರವೇರಿ ಸುತ್ತಾ ಬರುತ್ತಿವೆ.

"ಅಯಂ ಹಿ ಪರಮೋ ಧರ್ಮಃ ಯದ್ಯೋಗೇನಾತ್ಮದರ್ಶನಂ ।"
—ಯಾಜ್ಞವಲ್ಕ್ಯಸ್ಮೃತಿ.

ಇದರ ಅರ್ಥವನ್ನು ಮೇಲೆ ವಿವರಿಸಿರುತ್ತದೆ.

ಸಂಸ್ಕೃತ ಸಾಹಿತ್ಯದ ವ್ಯಾಸಂಗದ ಪ್ರಯೋಜನ.

ಸಾಹಿತ್ಯದ, ಪುರಾಣಗಳ ಮತ್ತು ಕಾವ್ಯ ನಾಟಕಗಳ ವ್ಯಾಸಂಗ ದಿಂದ ಜನಸಾಮಾನ್ಯಕ್ಕೆ ಆಗಬೇಕಾದ ಪ್ರಯೋಜನಗಳು ಆಸ್ತಿಕತೆ, ಭಕ್ತಿ, ಧರ್ಮಾ ಚರಣೆಯಲ್ಲಿ ಆದರ, ಖಚಿತವಾದ ಶೀಲ, ಉತ್ತಮವಾದ ವಿದ್ಯಾನಂದದ ಅನುಭವ, ಇವೇ ಮುಂತಾದುವಾಗಿವೆ. ಆದರೆ, ಹದಿನೆಂಟು ಪುರಾಣಗಳನ್ನೂ ಉಪಪುರಾಣಗಳನ್ನೂ ರಚಿಸಿ ಪ್ರಚಾರಕ್ಕೆ ಬರುವಂತೆ ಮಾಡಿದ ವ್ಯಾಸಮಹರ್ಷಿಗಳ ಈ ಕಾರ್ಯದಿಂದ ಮೇಲಿನ ಉದ್ದೇಶದ ನೆರ ವೇರುವಿಕೆಗೆ ಅನುಕೂಲ್ಯಕ್ಕಿಂತ ಹೆಚ್ಚಾಗಿ ಅಡ್ಡಿ ಆತಂಕಗಳೇ ಉಂಟಾ ಗಿರುವಂತೆ ತೋರುತ್ತದೆ. ಹೇಗೆಂದರೆ ಪುರಾಣಗಳಲ್ಲಿ ಕೆಲವು ಶಿವ ಪಾರಮ್ಯವನ್ನು ಬೋಧಿಸುವ ಶೈವ ಪುರಾಣಗಳಾಗಿವೆ. ಕೆಲವು ವಿಷ್ಣು ಸರ್ವೋತ್ತಮತ್ವವನ್ನು ತಿಳಿಸುವ ವೈಷ್ಣವ ಪುರಾಣಗಳಾಗಿವೆ. ಇನ್ನು ಕೆಲವು ಶಕ್ತಿಯ ಪರಮೋತ್ಕರ್ಷವನ್ನು ವರ್ಣಿಸುವ ಶಾಕ್ತೇಯ ಪುರಾಣಗಳಾಗಿವೆ. ಶೈವ ಪುರಾಣಗಳಲ್ಲಿ ಶಿವನನ್ನೇ ಸರ್ವೋತ್ತಮ ನೆಂದೂ ವಿಷ್ಣು ಬ್ರಹ್ಮ ಮುಂತಾದವರು ಶಿವನಿಗೆ ಭಕ್ತರೂ ಸೇವ ಕರೂ ಆಗಿದ್ದಾರೆಂದೂ ವರ್ಣಿಸಿರುತ್ತದೆ. ಹಾಗೆಯೇ ವೈಷ್ಣವ ಪುರಾಣಗಳಲ್ಲಿ ವಿಷ್ಣುವೇ ಶ್ರೇಷ್ಠನೆಂದೂ ಬ್ರಹ್ಮನೂ ರುದ್ರನೂ ಅವ ನಿಂದ ಹುಟ್ಟಿದರೆಂದೂ, ಅವನ ಅಧೀನರೆಂದೂ ತಿಳಿಸಿರುತ್ತದೆ. ಅದ ರಂತೆಯೇ ಶಾಕ್ತೇಯ ಪುರಾಣಗಳಲ್ಲಿ ಶಕ್ತಿಯೇ ತ್ರಿಮೂರ್ತಿಗಳಿಗೂ ಮೂಲಕಾರಣ ತತ್ತ್ವವೆಂದೂ, ಆದಿಶಕ್ತಿಯ ಬೆಂಬಲದಿಂದಲೇ

ತ್ರಿಮೂರ್ತಿಗಳೂ ಎಲ್ಲರೂ ತಮ್ಮ ತಮ್ಮ ಕಾರ್ಯನಿರ್ವಾಹ ಮಾಡ ಬಲ್ಲವರಾಗಿರುವರೆಂದೂ ಆದುದರಿಂದ ಪರಾಶಕ್ತಿಯೇ ಎಲ್ಲರಿಗೂ ತಾಯಿಯಾದ ಮೂಲಭೂತವಾದ ಮೇಲಾದ ತತ್ತ್ವವೆಂದೂ ವರ್ಣಿಸಿರುತ್ತದೆ. ಈ ಪುರಾಣಗಳಗನ್ನು ಓದಿದ ಆಯಾ ಭಕ್ತ ಜನರು ತಮ್ಮ ದೇವರೇ ಹೆಚ್ಚೆಂದೂ ನಂಬಿರುವುದಲ್ಲದೆ ತಮ್ಮ ಪುರಾಣವೇ ಶ್ರೇಷ್ಠ ಪ್ರಮಾಣವೆಂದೂ, ಇತರ ದೇವತೆಗಳು ಕಡಿಮೆ ಎಂದೂ ಇತರ ಪುರಾಣಗಳು ತಾಮಸವೆಂದೂ ಅಲ್ಲಗಳೆಯುತ್ತಿರುತ್ತಾರೆ. ಇಂತಹ ಶ್ಲೋಕಗಳು ಈ ಪುರಾಣಗಳಲ್ಲಿಯೇ ದೊರೆಯುತ್ತಿವೆ. ಇದರಿಂದ ಸ್ವಮತಾಂಧತೆಯು ಮುಂದಾಗುತ್ತಲೂ ಇರುತ್ತದೆ. ಇದರಿಂದ ಶೈವರೂ ವೈಷ್ಣವರೂ ಜಗಳವಾಡಿ ಅನರ್ಥಗಳಿಗೆ ಗುರಿಯಾದ ಉದಾಹರಣೆಗಳೂ ಇವೆ. ಆದುದರಿಂದ ವ್ಯಾಸರು ಜನರಿಗೆ ಉಪಕಾರಕ್ಕಿಂತಲೂ ಹೆಚ್ಚಾಗಿ ಅಪಕಾರವನ್ನೇ ಮಾಡಿದಂತಾಗಿದೆ ಎಂದು ಆಕ್ಷೇಪಿಸುವವರೂ ಇದ್ದಾರೆ. ಅಲ್ಲದೆ ಇಂತಹ ಪುರಾಣಗಳಿಂದ ವ್ಯಾಸರ ತಾತ್ಪರ್ಯವನ್ನೇ ತಿಳಿಯಲು ಕಷ್ಟವಾಗಿರುತ್ತದೆ. ಅಷ್ಟೇ ಅಲ್ಲದೇ ಪರಾತ್ಪರ ತತ್ತ್ವವು ಪರಬ್ರಹ್ಮ ಸ್ವರೂಪವು ಏನೆಂಬುದನ್ನು ಈ ಮಾರ್ಗವನ್ನು ಅನುಸರಿಸುವವರು ತಿಳಿಯುವುದಂತೂ ತೀರ ಅಸಾಧ್ಯವೇ ಆಗಿದೆ.

ಪುರಾಣಗಳ ಮೇಲಿನ ಆಕ್ಷೇಪ, ಸಮಾಧಾನಗಳು.

ಇದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು, ಶ್ರೀವ್ಯಾಸ ಮಹರ್ಷಿಯು ಮೇಲಾದ ತಿಳಿವಳಿಕೆ ಇಲ್ಲದ ದಡ್ಡನಲ್ಲವೆಂದೂ, ಜನರನ್ನು ವಂಚಿಸುವುದಕ್ಕಾಗಿ ಅನೇಕ ಪುರಾಣಗಳನ್ನೂ ರಚಿಸಲಿಲ್ಲವೆಂದೂ, ಪರತತ್ತ್ವ ಒಂದೇ ಆಗಿದೆಯೇ ಹೊರತು ವಾಸ್ತವವಾಗಿ ಅನೇಕ ಬಗೆಯಾಗಿ ಇರಲಾರದೆಂಬ ಸಾಮಾನ್ಯ ಮೂಲತತ್ತ್ವವನ್ನು ಮನಗಂಡಿದ್ದನೆಂದೂ ನಂಬುವುದು ಅನುಚಿತವಾಗಲಾರದು. ಹಾಗಿದ್ದರೂ ಆಯಾ ಪುರಾಣಗಳಲ್ಲಿ ಆಯಾ ದೇವತೆಗಳನ್ನೇ ಸರ್ವೋತ್ಕೃಷ್ಟವೆಂದು ಹೇಳಿರುವುದು ತತ್ಸದೃಷ್ಟಿಯಿಂದ

ಹೇಗೆ ಸಂಗತವಾದೀತು ? ಎಂದರೆ, ಆಸ್ತಿಕರಾದ ಭಕ್ತ ಜನರಲ್ಲಿರುವ ಬಗೆ ಬಗೆಯಾದ ರುಚಿ, ಸಂಸ್ಕೃತಿ, ಸಹವಾಸ, ಸನ್ನಿವೇಶಗಳಿಗೆ ತಕ್ಕಂತೆ ಅವರವರಿಗೆ ಒಪ್ಪಿಬರುವ ಪುರಾಣಗಳನ್ನು ಅವರವರು ಹೆಚ್ಚು ಪ್ರಚಾರಕ್ಕೆ ತಂದುಕೊಂಡಿರುತ್ತಾರೆಂಬ ವಿಷಯವನ್ನು ಯಾವಾಗಲೂ ನೆನಪಿನಲ್ಲಿಡಬೇಕು. ಎರಡನೆಯದಾಗಿ, ದೇವ ದೇವೋತ್ತಮನ ಅಥವಾ ಪರಬ್ರಹ್ಮ ತತ್ವದ ಪಾರಮಾರ್ಥಿಕ ಸ್ವರೂಪವನ್ನು ಸಾಮಾನ್ಯ ಜನರು ತಿಳಿಯಲಾರರು. ಏಕೆಂದರೆ, ಅದು ಯಾವ ನಾಮರೂಪಗಳೂ ಇಲ್ಲದ, ಅವೆಲ್ಲವನ್ನೂ ಮೀರಿಯೂ ಇರುವ, ಸರ್ವಾಂತರ್ಯಾಮಿಯಾಗಿಯೂ ಇರುವ ಚೈತನ್ಯವಾಗಿದೆ. ಆಸ್ತಿಕರಾದ ಜನರಲ್ಲಿ ದೇವರನ್ನು ಪೂಜಿಸಿ ಒಲಿಸಿಕೊಂಡು ತಮ್ಮ ಇಷ್ಟಾರ್ಥಗಳನ್ನು ಪಡೆದುಕೊಳ್ಳಲು ಆಸೆಯುಳ್ಳವರೇ ಹೆಚ್ಚು. ಅವರಲ್ಲಿ ಧಾರ್ಮಿಕ ಸಂಸ್ಕೃತಿಯೂ ಹೆಚ್ಚುಕಡಮೆಯ ಮಟ್ಟಗಳಲ್ಲಿರುತ್ತದೆ. "ಭಿನ್ನರುಚಿರ್ಹಿಲೋಕಃ" ಎಂಬಂತೆ ಅವರ ರುಚಿಗಳೂ ಭಿನ್ನವಾಗಿರುತ್ತವೆ. ಈ ರುಚಿ ಸಂಸ್ಕೃತಿಗಳನ್ನು ಅನುಸರಿಸಿ ಒಪ್ಪಿಬರುವ ನಾಮರೂಪಗಳಲ್ಲಿ ದೇವರನ್ನು ಆರಾಧಿಸಿ ಕೃತಾರ್ಥರಾದ ಮಹನೀಯರ ಉದಾಹರಣೆಗಳನ್ನು ಪುರಾಣಗಳಲ್ಲಿ ಹೇರಳವಾಗಿ ಬಗೆ ಬಗೆಯಾಗಿ ವರ್ಣಿಸಿದೆ. ಇದು ಆಪೇಕ್ಷಿಕ (Relative view)ವೂ ವ್ಯಾವಹಾರಿಕವೂ ಆಗಿರುವ ದೃಷ್ಟಿಯಾಗಿರುತ್ತದೆ.

**ತತ್ವಜಿಜ್ಞಾಸುಗಳಲ್ಲಿ ಎರಡು ದೃಷ್ಟಿ.**

ಈ ಉಪಾಸನಾ ಮಾರ್ಗದಲ್ಲಿ ಮುಂದುವರೆದು ಕರ್ಮವನ್ನೂ ಫಲವನ್ನೂ ಈಶ್ವರಾರ್ಪಣೆಮಾಡಿ ನಿಷ್ಕಾಮ ಕರ್ಮಯೋಗದಿಂದ ಚಿತ್ತಶುದ್ಧಿಯನ್ನೂ ಏಕಾಗ್ರತೆಯನ್ನೂ ಪಡೆದಿರುವ ಪ್ರೌಢಾಧಿಕಾರಿಗಳು ಅಲ್ಪಫಲಗಳನ್ನು ಅಪೇಕ್ಷಿಸದೆ ಪರತತ್ವದ ಸ್ವರೂಪವನ್ನು ವಿಮರ್ಶಿಸುತ್ತಾ ಮುಂದುವರಿಯುತ್ತಿರುತ್ತಾರೆ. ಅವರಿಗೆ ಈ ಮೇಲಿನ ನಾಮರೂಪಗಳಿಗೂ ಮೂಲವಾದ, ಮೇಲಾದ ತತ್ವಸ್ವರೂಪದ ದರ್ಶನದಲ್ಲಿ ಆದರವೂ ಸಂತೋಷವೂ ಇರುತ್ತದೆ.

ಅಂಥವರು ಎಲ್ಲ ನಾಮರೂಪಗಳಲ್ಲಿ ವ್ಯಾಪಿಸಿ ಮೀರಿಯೂ ಇರುವ, ಮಾತಿಗೂ, ಮನಸ್ಸಿಗೂ ನಿಲುಕದೇ ಇರುವುದಾದರೂ ನಿಜತರವಾಗಿರುವ ತತ್ವರೂಪವನ್ನು ಅರಸುತ್ತಿರುತ್ತಾರೆ. ಇದು ಪಾರಮಾರ್ಥಿಕ (Absolute view) ದೃಷ್ಟಿಯಾಗಿರುತ್ತದೆ. ಇಂಥವರು ವೇದಾಂತ ವಾಕ್ಯಗಳ ಶ್ರವಣಮನನ ನಿದಿಧ್ಯಾಸನಗಳಿಂದಲೂ, ಧಾರಣಾಧ್ಯಾನ ಸಮಾಧಿಗಳಿಂದಲೂ, ಮುಂದುವರಿಯುತ್ತಾ ಸರ್ವವ್ಯಾಪಿಯೂ, ಸರ್ವಾಂತರ್ಯಾಮಿಯೂ ಆಗಿರುವ ನಿರ್ವಿಕಾರಿ ಸಚ್ಚಿದಾನಂದ ಚೈತನ್ಯ ಸ್ವರೂಪವನ್ನು ಅಪರೋಕ್ಷಾನುಭವ (Realisation) ರೂಪವಾಗಿ ಮಾಡಿಕೊಳ್ಳಬಹುದು. ಹಾಗೆಯೇ ಮಾಡುತ್ತಿರುತ್ತಾರೆ.

ಕೆಲವು ಪುರಾಣಗಳು ತಾಮಸವೆನ್ನುವುದು ಸಂಕುಚಿತ ಬುದ್ಧಿ.

ಈ ವಿವರಣೆಯಿಂದ ವ್ಯಾಸರು ಪುರಾಣಗಳಲ್ಲಿ ವರ್ಣಿಸಿರುವ ನಾಮರೂಪಗಳಿಂದ ಕೂಡಿರುವ ದೇವತೆಗಳಿಗೆಲ್ಲರಿಗೂ ಪರಮೋತ್ಕೃಷ್ಟತೆಯನ್ನು ವರ್ಣಿಸಿರುವುದರ ತಾತ್ಪರ್ಯವನ್ನು ಹೀಗೆ ಗೊತ್ತು ಮಾಡಿಕೊಳ್ಳಬಹುದು. ಏನೆಂದರೆ, ಪುರಾಣಗಳಲ್ಲಿ ವಿವರಿಸಿರುವ ನಾಮರೂಪ ವಿಶೇಷಗಳುಳ್ಳ ಶಿವ, ವಿಷ್ಣು, ಶಕ್ತಿ ಮುಂತಾದ ದೇವತಾ ವಿಶೇಷಗಳೇ ಒಂದೊಂದೂ ಪ್ರತ್ಯೇಕವಾಗಿ ಪರತತ್ವವಲ್ಲವು. ಮತ್ತೇನೆಂದರೆ, ಪರತತ್ವವೇ ಆ ಎಲ್ಲ ಬಗೆಯ ಭಕ್ತರನ್ನೂ ಉಪಾಸಕರನ್ನೂ ಅನುಗ್ರಹಿಸುವುದಕ್ಕಾಗಿ ಆ ಎಲ್ಲ ದೇವತೆಗಳ ನಾಮರೂಪ ವಿಶೇಷಗಳನ್ನು ಧರಿಸಿರುವಂತೆ ಆಯಾ ಭಕ್ತರಿಗೆ ದರ್ಶನವನ್ನು ಕೊಡುತ್ತಾ ಅವರ ಭಕ್ತಿಯೂ, ಉಪಾಸನೆಯೂ, ಸತ್ಯವೂ, ಸಫಲವೂ ಆಗಿ ಆ ಆಸ್ತಿಕರ ನಂಬಿಕೆಗಳನ್ನು ಬಲಪಡಿಸುತ್ತಾ ಅವರು ಪ್ರಗತಿ ಮಾರ್ಗದಲ್ಲಿ ಮುಂದುವರೆಯಲು ಉತ್ಸಾಹಶಾಲಿಗಳನ್ನಾಗಿ ಮಾಡುತ್ತಿರುತ್ತದೆ. ಹೀಗೆ ಅವರಿಗೆ ಕ್ರಮವಾಗಿ ಪರತತ್ವದ ಸಾಕ್ಷಾತ್ಕಾರ ಮತ್ತು ಅಪರೋಕ್ಷಾನುಭವವಾಗುವ ಮಾರ್ಗದಲ್ಲಿ ಆ ಭಕ್ತರೂ, ಉಪಾಸಕರೂ ಮುಂದುವರಿಯು

ವುದರಿಂದ ಪರಮ ಪುರುಷಾರ್ಥವಾದ ಮೋಕ್ಷವನ್ನೂ ಕಡೆಗೆ
ಪಡೆಯಲು ಸಹಾಯವಾಗುತ್ತಿರುತ್ತದೆ. ಈ ಅಂಶವನ್ನು ವ್ಯಾಸರು
ಎಲ್ಲ ಪುರಾಣಗಳಲ್ಲೂ ಸೂಕ್ಷ್ಮವಾಗಿ ಅಲ್ಲಲ್ಲಿ ಸೂಚಿಸಿರುವುದನ್ನೂ
ತಲಾವಗಾಹಿಯಾಗಿ ವಿಮರ್ಶೆ ಮಾಡುವವರು ಮನಗಾಣಬಹುದಾಗಿ
ರುತ್ತದೆ. ಹೇಗೆಂದರೆ, ಪುರಾಣಗಳಲ್ಲಿ ಮುಖ್ಯವಾಗಿ ಮುಂದಾಗಿ
ವಿಸ್ತಾರವಾಗಿ ವಿವರಿಸುತ್ತಿರುವವು ಕಥಾಂಶಗಳಾಗಿರುತ್ತವೆ. ಆ
ಕಥೆಗಳಲ್ಲಿ ಪಾತ್ರಗಳು, ವ್ಯಕ್ತಿಗಳು ಅನುಸರಿಸುವ ನಡೆವಳಿಕೆ
ಗಳಿಂದಲೂ ಆಡುವ ಮಾತುಗಳಿಂದಲೂ ವ್ಯಕ್ತವಾಗುವದು ಧರ್ಮದ
ಸ್ವರೂಪವೂ ತತ್ವವೂ ಆಗಿರುತ್ತದೆ. ಇದು ಎರಡನೆಯ ವಿಷಯವು.
ಮೊದಲನೆಯದಾದ ಕಥೆಗಳ ವೈವಿಧ್ಯ, ವೈಚಿತ್ರ್ಯಗಳಿಂದ ಓದುಗರಿಗೆ
ಸಾಮಾನ್ಯ ಜನರಿಗೆ ಸಂತೋಷವಾಗುತ್ತದೆ. ಎರಡನೆಯದಾದ
ಧರ್ಮದ ತಿಳಿವಳಿಕೆಯಿಂದ ಜನರ ಜೀವನ ಕ್ರಮವು ಸ್ವಲ್ಪಸ್ವಲ್ಪವಾಗಿ
ಮಾರ್ಪಡುತ್ತಿರುತ್ತದೆ. ಮೂರನೆಯದ್ದಾದ ತತ್ವ ಸ್ವರೂಪದ
ಬೋಧನೆಯು ಸಂಗ್ರಹವಾಗಿ ಅಲ್ಲಲ್ಲಿ ಸೂಚಿತವಾಗಿರುತ್ತದೆ. ಧರ್ಮಾ
ಚರಣೆಯಿಂದ ಶುದ್ಧವಾದ ಮನಸ್ಸುಳ್ಳ ಓದುಗರಿಗೆ ತತ್ವ ಸ್ವರೂಪವು
ಸಂಗ್ರಹವಾಗಿ ಸೂಚಿತವಾಗಿದ್ದರೂ ಮನಸ್ಸನ್ನು ಆ ಮೇಲೆ ಆಕರ್ಷಿ
ಸುತ್ತದೆ. ಇಂಥವರು ಪುರಾಣಗಳನ್ನು ಸೂಕ್ಷ್ಮವಾಗಿ ತಲಾವಗಾಹಿ
ಯಾಗಿ ವಿಮರ್ಶಿಸಲು ತೊಡಗುತ್ತಾರೆ; ಮತ್ತು ತತ್ವವನ್ನೇ ತಿಳಿ
ಸುವ ಪುರಾಣಗಳನ್ನು ಯೋಗವಾಸಿಷ್ಠ, ಭಾರತ ಶಾಂತಿಪರ್ವ, ಸೂತ
ಸಂಹಿತಾ ಮುಂತಾದ ಪುರಾಣೇತಿಹಾಸಗ್ರಂಥಗಳನ್ನೂ ಆದರದಿಂದ
ವ್ಯಾಸಂಗಮಾಡುತ್ತಾ ತತ್ವಗಳ, ಎಂದರೆ ದೇವರು, ಜೀವರು,
ಪ್ರಪಂಚ, ಧರ್ಮಕರ್ಮಗಳ, ಸ್ವರೂಪವನ್ನು ತಿಳಿಯಲು ಮುಂದುವರಿ
ಯುತ್ತಾರೆ. ಈ ವಿವರಣೆಯಿಂದ ಸರ್ವೋತ್ತಮವಾದ ಪರಬ್ರಹ್ಮ
ತತ್ವವು ಸಾಂಸಾರಿಕರಾದ ಆಸ್ತಿಕರೂ ಆಗಿರುವ ಜೀವರ ವ್ಯಾವ
ಹಾರಿಕವಾದ ದೃಷ್ಟಿಯಿಂದ ಸಗುಣವೂ, ಸಾಕಾರವೂ ಆಗಿರುವಂತೆ
ತೋರಿಕೊಳ್ಳುತ್ತಾ ಎಲ್ಲ ಬಗೆಯ ನಾಮರೂಪಗಳುಳ್ಳದ್ದಾಗಿರುತ್ತದೆ.

ಅಲ್ಲದೆ, ಆ ಪರತತ್ತ್ವವು ಪಾರಮಾರ್ಥಿಕ ದೃಷ್ಟಿಯಿಂದ ತನ್ನ ವಾಸ್ತವ ಸ್ವರೂಪದಲ್ಲಿ ನಿತ್ಯವೂ ನಿರ್ವಿಕಾರಿಯೂ, ನಿರ್ಗುಣವೂ ಆಗಿರಬೇಕಾದ ಶುದ್ಧ ಚೈತನ್ಯವಾಗಿರುತ್ತಾ ಯಾವ ನಾಮರೂಪವಿಶೇಷಗಳೂ ಇಲ್ಲದ್ದಾಗಿ, ಮಾತಿಗೂ, ಮನಸ್ಸಿಗೂ ನಿಲುಕದ ಪರಮೋತ್ತಮ ತತ್ತ್ವವಾಗಿಯೂ ಇರುತ್ತದೆ. ಎಂದು ಹೇಳಿದರೆ ಮೇಲೆ ತಿಳಿಸಿದ ಆಕ್ಷೇಪಣೆಗೆ ಸಮಾಧಾನವಾಗುತ್ತದೆ.

ಇದು ಸ್ವಾಭಾವಿಕವೂ, ಸಂಗತವೂ ಆಗಿರುತ್ತದೆ. ಹೇಗೆಂದರೆ:

ಸಾಧಕನ ಪ್ರಗತಿ ಮಾರ್ಗದಲ್ಲಿ ಮಜಲುಗಳು.

ಮಾನವನ, ಮಂದಾಧಿಕಾರಿಯಾದ ಭಕ್ತನ, ಉಪಾಸಕನ ಅಥವಾ ಜಿಜ್ಞಾಸುವಿನ ಮನಸ್ಸಿಗೆ ಮೊದಮೊದಲು ಸಗುಣವೂ ಸಾಕಾರವೂ ಆಗಿರುವ ನಾಮರೂಪಗಳುಳ್ಳ ದೇವತೆಯುನ್ನು ಪೂಜಿಸಿ, ಧ್ಯಾನಿಸುವುದು ಸಾಧ್ಯವಾಗಿರುತ್ತದೆ. ಆ ಭಕ್ತರು ಫಲ ಕಾಮನೆಯುಳ್ಳವರಾಗಿ ಆ ದೇವರನ್ನು ಆರಾಧಿಸಿದರೆ ಪರತತ್ತ್ವವು ಆ ರೂಪದಿಂದಲೇ ಅವರಿಗೆ ದರ್ಶನವನ್ನು ಕೊಡುತ್ತಾ ಅವರ ಕೋರಿಕೆಗಳನ್ನು ನೆರವೇರಿಸುತ್ತಿರುತ್ತದೆ.

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತು ಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ॥
ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನ ಮೀಹತೇ ।
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿತಾನ್ ॥
—ಭಗವದ್ಗೀತಾ

ಹಾಗಿಲ್ಲದೆ ಅವರು ಫಲಕಾಮನೆ ಇಲ್ಲದೆ ಕರ್ಮಯೋಗಿಗಳಾಗಿದ್ದರೆ ಅದರಿಂದ ಅವರ ಮನಸ್ಸು ಏಕಾಗ್ರವೂ, ಶುದ್ಧವೂ ಆಗುತ್ತಾ ಬರುತ್ತದೆ. ಆ ಮೇಲೆ ಆ ನಾಮ ರೂಪ ವಿಶೇಷಗಳಿಗೆ ಹಿನ್ನೆಲೆಯಾಗಿರುವ ದೇವತತ್ತ್ವವನ್ನು ಎಲ್ಲ ದೇವತೆಗಳಲ್ಲೂ ಸಮಾನವಾಗಿ ವ್ಯಾಪಿಸಿರುವ ನಿರಾಕಾರವಾಗಿಯಾದರೂ ಸಗುಣವಾಗಿರುವ ತತ್ತ್ವವನ್ನು ಧ್ಯಾನಿಸುವುದು ಆ ಎರಡನೆಯ ಸ್ಥಿತಿಯಲ್ಲಿ ಆ ಭಕ್ತರಿಗೆ ಸಾಧ್ಯವಾಗುತ್ತದೆ. ಆಗ, ಆ ಉಪಾಸನೆಯ

ಪುರಾಣಗಳ ವ್ಯಾಸಂಗದಿಂದ ಹೃದಯ ವೈಶಾಲ್ಯಫಲಿಸಬೇಕು.

ಉಪ್ಪರಿಗೆಯನ್ನು ಹತ್ತಿದಮೇಲೆ, ಆ ಭಕ್ತರು ನಾಮರೂಪಗಳುಳ್ಳ ಆ ಪ್ರತೀಕದ ಆವಶ್ಯಕತೆಯನ್ನು ಮೀರಿ, ಅದನ್ನೂ ಉದಾಸೀನವಾಗಿ ಅಮುಖ್ಯವೆಂದು ಮನಗಂಡು ಕೈಬಿಟ್ಟು, ಆ ಪ್ರತೀಕಗಳಲ್ಲೂ ಅಂತರ್ಯಾಮಿಯಾಗಿರುವ ಕೇವಲ ಸಗುಣತತ್ತ್ವೋಪಾಸನೆಯಲ್ಲಿ ಯೋಗ್ಯತೆಯೂ, ಶಕ್ತಿಯೂ ಉಳ್ಳವರಾಗಿರುತ್ತಾರೆ. ಆಮೇಲೆ ಆ ಸಗುಣ ತತ್ತ್ವೋಪಾಸನೆಯಲ್ಲೂ ಧಾರಣಾಧ್ಯಾನ ಸಮಾಧಿಗಳ ಸಹಾಯದಿಂದ ಸಿದ್ಧಿಯನ್ನು ಪಡೆದು, ಕಡೆಗೆ ಆಕಾರಗಳಂತೆ ಗುಣಗಳನ್ನೂ ಅಮುಖ್ಯಗಳೆಂದು ಮನಗಂಡು ಕೈಬಿಟ್ಟು, ಎಲ್ಲ ಮಾತಿಗೂ, ಮನಸ್ಸಿಗೂ, ನಿಲುಕದ, ನಿರಾಕಾರ ನಿರ್ಗುಣ ಪರಚೈತನ್ಯತತ್ತ್ವದ ಉಪಾಸನೆಯ ಶಿಖರಕ್ಕೆ ಏರಬಲ್ಲವರಾಗಿ ಇರುತ್ತಾರೆ. ಇದು ಸ್ವಾಭಾವಿಕವಾದ ಮಾರ್ಗವಾಗಿರುವುದರಿಂದ ಪುರಾಣಗಳ ವರ್ಣನೆಗಳಿಗೆ ಪರಸ್ಪರವಾಗಿ ವಿರೋಧವಿಲ್ಲವೆಂಬ ಅಂಶವನ್ನೂ, ಇದರಿಂದ ಎಲ್ಲ ಬಗೆಯ ಭಕ್ತರಿಗೂ ಉಪಾಸಕರಿಗೂ ಅವರವರ ಅಂತಸ್ತಿನಿಂದ ಮುಂದಕ್ಕೆ ಹೋಗುತ್ತಾ ಮುಂದುವರಿಯಲು ಅನುಕೂಲ್ಯವೇ ಆಗುತ್ತದೆಂಬುದನ್ನೂ, ಎಲ್ಲ ವಿಮರ್ಶಕರೂ ಮನಗಾಣಬಹುದಾಗಿರುತ್ತದೆ.

ಈ ವಿಷಯದಲ್ಲಿ ಲೌಕಿಕವಾದ ಒಂದು ದೃಷ್ಟಾಂತರವನ್ನೂ ತಿಳಿಸಬಹುದು. ಏನೆಂದರೆ, ಶ್ರೀಮಂತರಾದ ಒಬ್ಬ ಮಹನೀಯರ ಮನೆಯಲ್ಲಿ ತಂದೆತಾಯಿಯರಿಗೆ ನಾಲ್ಕು ಮಕ್ಕಳಿವೆ ಎಂದು ಇಟ್ಟುಕೊಳ್ಳೋಣ. ಅವರು ಆ ಮಕ್ಕಳ ವರ್ಧಂತೀ ಉತ್ಸವವನ್ನು ಪ್ರತ್ಯೇಕವಾಗಿ ಆಯಾ ಮಕ್ಕಳು ಹುಟ್ಟಿದ ದಿನಗಳಲ್ಲಿ ಪ್ರತಿವರ್ಷವೂ ವೈಭವದಿಂದ ನೆರವೇರಿಸುತ್ತಿರುತ್ತಾರೆ. ಈ ದಿವಸ ಒಂದು ಮಗುವಿನ ಜನ್ಮದಿನವಾಗಿರುತ್ತದೆ. ಈ ದಿವಸದ ಮಟ್ಟಿಗೆ ಈ ಮಗುವು, ಉಪಾಸ್ಯ ದೇವತೆಯಂತೆ, ಸರ್ವೋತ್ತಮವಾದ ಉಪಚಾರಗಳನ್ನು ಪಡೆಯುತ್ತದೆ. ಅದರಂತೆ ಮನೆಯ ಮಧ್ಯದಲ್ಲಿ ಕಲ್ಯಾಣಮಂಟಪದಲ್ಲಿ ಹಸೆಯ ಜಗುಲಿಯಮೇಲೆ ಭದ್ರಾಸನದಲ್ಲಿ ಆ ಮಗುವನ್ನು ಕೂರಿಸಿ, ಇತರ ಮಕ್ಕಳ ಮತ್ತು ತಾಯಿಯ ಆಭರಣಗಳನ್ನು ಇಟ್ಟು

ತೊಡಿಸಿ, ಅಲಂಕರಿಸಿ ಆರತಿಯನ್ನು ಬೆಳಗುತ್ತಾ ಎಲ್ಲರೂ ಆನಂದಿಸುವ ವಾಡಿಕೆಯು ಇರುತ್ತದೆ. ಈ ಸಂದರ್ಭದಲ್ಲಿ ತಾಯಿಯಾಗಲಿ ಇತರ ಮಕ್ಕಳಾಗಲಿ ತಮ್ಮ ಆಭರಣಗಳನ್ನು ಆ ಮಗುವಿನ ತಾತ್ಕಾಲಿಕವಾದ ಅಲಂಕಾರಕ್ಕಾಗಿ ಕೊಡಲು ಹಿಂಜರಿಯುವುದಿಲ್ಲ. ಅಸಮಾಧಾನ ಪಡುವುದೂ ಇಲ್ಲ. ಆ ವೇಷ ಭೂಷಣಗಳಿಂದ ಆ ಮಗುವು ಅಲಂಕೃತ ವಾಗಿರುವುದನ್ನು ನೋಡಿ ಅಸೂಯೆಯನ್ನೂ ಪಡುವುದಿಲ್ಲ. ಅಲ್ಲದೆ, ಇತರ ಮಕ್ಕಳೂ ಇದರಂತೆಯೇ ತಮ್ಮ ವರ್ಧಂತೀ ಉತ್ಸವವೂ ಬರುವುದೆಂದೂ, ಆಗ ಹೀಗೆಯೇ ಎಲ್ಲರ ಆಭರಣಗಳಿಂದ ತಾವೂ ಅಲಂಕಾರ ಉಪಚಾರಗಳನ್ನು ಪಡೆಯುವೆವೆಂದೂ ತಿಳಿದಿರುತ್ತವೆ. ಯಾರಾದರೂ ಇದನ್ನು ನೋಡಿ ಆ ತಾಯಿತಂದೆಗಳಿಗೆ ಪಕ್ಷಪಾತ ವನ್ನಾಗಲಿ, ಆ ಮಗುವಿಗೆ ಸ್ವಾರ್ಥಪರತೆಯನ್ನಾಗಲಿ, ಉತ್ಕರ್ಷಾ ಪಕರ್ಷಗಳನ್ನು ಆ ಮಕ್ಕಳಿಗಾಗಲಿ, ಹೇಳಿ ನಿಂದಿಸುವುದೂ ಇಲ್ಲ. ಅಲ್ಲದೆ, ಇದೆಲ್ಲವನ್ನೂ ಉಚಿತವೆಂದು ಅಭಿನಂದಿಸುತ್ತಾರೆ. ಹೀಗಿದ್ದರೂ ಆ ಎಲ್ಲರ ಉಡಿಗೆತೊಡಿಗೆಗಳೆಲ್ಲವೂ ತಂದೆಗೆ ಸೇರಿದುವೆಂಬುದನ್ನು ಎಲ್ಲರೂ ತಿಳಿದಿರುತ್ತಾರೆ. ತಂದೆಯಿಂದಲೇ ಅದೆಲ್ಲವೂ ತಮಗೂ ಬಂದಿವೆ ಎಂಬುದನ್ನೂ ಮನಗಂಡಿರುತ್ತಾರೆ. ಆ ವೇಷ ಭೂಷಣ ಗಳನ್ನು ಅವರವರೇ ಧರಿಸಿರಲಿ, ಅಥವಾ ಅವೆಲ್ಲವನ್ನೂ ಒಳಗೆ ಪೆಟ್ಟಿಗೆ ಯಲ್ಲಿಟ್ಟು ಬೀಗವನ್ನು ಹಾಕಿ ಬೀಗದ ಕೈಯನ್ನು ತಂದೆಯೇ ಇಟ್ಟು ಕೊಂಡಿರಲಿ, ಹೇಗಿದ್ದರೂ ಅವುಗಳ ಸ್ವಾಮಿತ್ವವು ತಂದೆಯದೇ ಆಗಿರುತ್ತದೆ. ಆದರೂ ಆ ತಂದೆಯು ಅವುಗಳನ್ನು ತಾನು ಯಾವಾಗಲೂ ಧರಿಸಿರುವುದೂ ಇಲ್ಲ. ಅಲ್ಲದೆ, ತಾನು ಧರಿಸಿರಬಹು ದಾದ ಒಂದು ಉಂಗುರ ಮುಂತಾದುವನ್ನೂ ಅವರಿಗೇ ಕೊಡಲೂ ಕೊಡುತ್ತಾನೆ. ಆ ಕಾಲದಲ್ಲಿ ಅವರವರೇ ಅವೆಲ್ಲಕ್ಕೂ ಸ್ವಾಮಿ ಯಾಗಿದ್ದರೆ ಹೇಗೋ ಹಾಗೆ ಅನುಭವಿಸುತ್ತಾರೆ. ಅದೆಲ್ಲವನ್ನೂ ನೋಡಿ ತಂದೆಯೂ ಸಾಕ್ಷಿಯಂತೆ ತೃಪ್ತನಾಗಿರುತ್ತಾನೆ.

ಹೀಗೆಯೇ ಆ ಪರಬ್ರಹ್ಮ ತತ್ವವು ಈ ತಂದೆಯಂತಿದೆ. ಅದು ತಾನಾಗಿ ವಾಸ್ತವವಾಗಿ ಯಾವ ಗುಣ ಕರ್ಮಗಳನ್ನೂ ನಾಮರೂಪ ವಿಶೇಷಗಳನ್ನೂ ಹೊಂದಿರುವ ವ್ಯಕ್ತಿ ವಿಶೇಷವಾಗಿರುವುದಿಲ್ಲ.

ಪುರಾಣಗಳ ಸ್ಥಾನ ಮಾನಗಳು.

ಆ ಗುಣಕರ್ಮಗಳೆಲ್ಲವೂ, ನಾಮರೂಪ ವಿಶೇಷಗಳೆಲ್ಲವೂ ತಾಯಿಯಂತಿರುವ ಮಾಯಾಶಕ್ತಿ ಅಥವಾ ದೇವಿಯಲ್ಲೂ, ಮಕ್ಕಳಂತಿರುವ ಬ್ರಹ್ಮಾ, ವಿಷ್ಣು, ರುದ್ರ, ಸರಸ್ವತೀ, ಲಕ್ಷ್ಮೀ, ಉಮಾ ಎಂಬ ತ್ರಿಮೂರ್ತಿ ದಂಪತಿಗಳಲ್ಲೂ, ಪರಂಪರಾಕ್ರಮದಿಂದ ಯಥೋಚಿತವಾಗಿ ಈ ಎಲ್ಲ ಚರಾಚರ ಪ್ರಪಂಚದಲ್ಲೂ ಅಭಿವ್ಯಕ್ತವಾಗಿ ಕಾಣುತ್ತಿರುತ್ತದೆ. ಒಂದೊಂದು ಪುರಾಣದಲ್ಲಿ, ಒಂದೊಂದು ಮಗುವಿನ ವರ್ಧಂತೀ ಉತ್ಸವದಲ್ಲಿ ಹೇಗೋ ಹಾಗೆ, ಶಿವನನ್ನೋ, ವಿಷ್ಣುವನ್ನೋ, ದೇವಿಯನ್ನೋ, ಸರ್ವೋತ್ಕೃಷ್ಟವೆಂದು ವರ್ಣಿಸಿರುತ್ತದೆ. ಇದು ಆಯಾ ಭಕ್ತವಿಶೇಷರ ರುಚಿ ಸಂಸ್ಕೃತಿಗಳಿಗೆ ತಕ್ಕಂತೆ ಇರುತ್ತಾ, ಅವರು ಪ್ರಗತಿಮಾರ್ಗದಲ್ಲಿ ಮುಂದುವರಿದು ಕ್ರಮವಾಗಿ ಪ್ರೇಯಸ್ಸುಗಳನ್ನೂ, ಕಡೆಗೆ ಶ್ರೇಯಸ್ಸನ್ನೂ ಪಡೆಯಲು ಅನುಕೂಲವಾಗಿರುತ್ತದೆ. ಹೀಗೆ ಆಯಾ ಪುರಾಣಗಳಲ್ಲಿ ಅವರವರ ಇಷ್ಟದೇವತೆಗಳನ್ನು ಸರ್ವೋತ್ತಮಗುಣಗಳಿಂದಲೂ ಇತರ ದೇವತೆಗಳ ಗುಣಮಹಿಮೆಗಳಿಂದಲೂ ಸಂಪನ್ನರಾಗಿರುವಂತೆ ವರ್ಣಿಸಿ ಎಲ್ಲಕ್ಕೂ ಮಿಗಿಲೆಂದು ಗೌರವಿಸಿ ಆರಾಧಿಸುವುದರಲ್ಲಿ ಯಾವ ದೋಷದ ಸಂಭವವೂ, ಸಂಪರ್ಕವೂ ಉಂಟಾಗುವುದಿಲ್ಲ. ಆಗ ಪರತತ್ವವೂ ಹಿನ್ನೆಲೆಯಲ್ಲಿರುತ್ತಾ ತನ್ನ ಅಂಶವಾದ ಆ ಇಷ್ಟದೇವತೆಯು ತಾತ್ಕಾಲಿಕವಾಗಿ ಪರಮೋತ್ಕೃಷ್ಟವೆಂದು ಪೂಜೆಗೊಳ್ಳುತ್ತಿರುವುದನ್ನೂ ಸಾಕ್ಷಿಯಂತೆ ನೋಡುತ್ತಾ ತೃಪ್ತಿಯಿಂದಿರುತ್ತದೆ. ಏಕೆಂದರೆ, ಆ ರೀತಿಯೇ ಆ ಎಲ್ಲ ಅಂತಸ್ತಿನ ಭಕ್ತರ ಕಲ್ಯಾಣ ಸಾಧನೆಯು ಕ್ರಮವಾಗಿ, ಶ್ರೇಯಃ ಪ್ರಾಪ್ತಿಯ ಮಾರ್ಗವಾಗಿ ಇರುತ್ತದೆ. ಇದೇ ಉತ್ತಮವಾದ ಎಲ್ಲರಿಗೂ ಶ್ರೇಯಸ್ಕರವಾದ, ಧಾರ್ಮಿಕ ನೀತಿಯಾಗಿರುತ್ತದೆ.

ಇದರಿಂದ ಶಾಂತಿ ನೆಮ್ಮದಿ ಸುಖಗಳು ಎಲ್ಲರಿಗೂ, ಎಲ್ಲ ಸ್ಥಿತಿಗಳಲ್ಲೂ ದೊರೆಯುವಂತಾಗಿರುತ್ತದೆ. "ಧರ್ಮ ಏವಹತೋಹಂತಿ ಧರ್ಮೋ ರಕ್ಷತಿ ರಕ್ಷಿತಃ" ಎಂಬುದಕ್ಕೆ ಇದೇ ತಾತ್ಪರ್ಯ.

"ನ ದೇವಾ ದಂಡ ಮಾದಾಯ ರಕ್ಷಂತಿ ಪಶುಪಾಲವತ್ ।
ಯಂ ತು ರಕ್ಷಿತುಮಿಚ್ಛಂತಿ ಸದ್ಬುದ್ಧ್ಯಾ ಯೋಜಯಂತಿ ತಂ॥

**ಪುರಾಣಗಳ ಸಾಮಂಜಸ್ಯ.**

ದೇವರು ಮಾನವನನ್ನು ಕಾಪಾಡುತ್ತಾನೆಂದು ಹೇಳುವುದರ ಅರ್ಥವು ಹೀಗಿದೆ. ದೇವರು, ದನವನ್ನು ಕಾಯುವವನು, ಅದನ್ನು ರಕ್ಷಿಸಲು ಹೆಗಲ ಮೇಲೆ ದೊಣ್ಣೆಯನ್ನು ಹೊತ್ತು ದನದ ಹಿಂದಿರುತ್ತಾ ಕಾಪಾಡುತ್ತಿರುವ ಹಾಗೆ, ಕಾಪಾಡುವುದಿಲ್ಲ. ಯಾರನ್ನು ಕಾಪಾಡಬೇಕೆಂದು ದೇವರ ಮನಸ್ಸಿಗೆ ಬರುತ್ತದೋ ಅಂಥವರಿಗೆ ಮನಸ್ಸಿನಲ್ಲಿ ಒಳ್ಳೆಯ ಬುದ್ಧಿಯು ಸ್ಫುರಿಸುತ್ತಿರುವಂತೆ ಅನುಗ್ರಹಿಸ್ತುತ್ತಾನೆ. ಆ ಸುಬುದ್ಧಿಯಿಂದ ಅವರು ಸನ್ಮಾರ್ಗವನ್ನು ಬಿಡದೆ ಧಾರ್ಮಿಕರಾಗಿರುತ್ತಾ ಸುರಕ್ಷಿತವಾಗಿರುತ್ತಾರೆ ಎಂದು ತಾತ್ಪರ್ಯವು.

**ಪುರಾಣಗಳಲ್ಲಿ ಧಾರ್ಮಿಕ ಸಂಸ್ಕೃತಿ.**

ಹೀಗೆ ಧರ್ಮದ ಸ್ವರೂಪ, ಧಾರ್ಮಿಕ ನಡೆವಳಿಕೆ, ಧರ್ಮನಿಷ್ಠಶೀಲ, ಧಾರ್ಮಿಕ ಸಂಸ್ಕೃತಿ-ಇವುಗಳನ್ನು ವಿವರಿಸಿದ ಮೇಲೆ ಇವುಗಳ ಉದಾಹರಣೆಗಳನ್ನು ಇತಿಹಾಸ ಪುರಾಣಗಳು ಕಾವ್ಯ ನಾಟಕಗಳು ಇವುಗಳಿಂದ ಆರಿಸಿ ಓದುಗರ ಅವಗಾಹನೆಗೆ ತರುವುದು ನ್ಯಾಯ ಪ್ರಾಪ್ತವಾಗುತ್ತದೆ. ಭಾರತವನ್ನು ಐದನೆಯ ವೇದವೆಂದು ತಿಳಿಸುವ "ಭಾರತಃ ಪಂಚಮೋ ವೇದಃ" ಎಂಬ ಸೂಕ್ತಿಯು ಬಳಕೆಯಲ್ಲಿದೆ. ಸಾಮಾನ್ಯವಾಗಿ ಎಲ್ಲ ಕಥೆಗಳಲ್ಲೂ ಗಂಡಹೆಂಡಿರು ಸಂಸಾರ ಮಾಡಿಕೊಂಡು ಧರ್ಮನಿಷ್ಠರಾಗಿರುತ್ತಾರೆ. ಆದರೂ ಯಾವುದೋ ಕಾರಣಗಳಿಂದ ಅವರಿಗೆ ಮಕ್ಕಳಾಗದೆ ಇರುತ್ತದೆ. ಮಕ್ಕಳಿಗಾಗಿ ಅವರು ಹಂಬಲಿಸುತ್ತಾ, ವ್ರತನಿಯಮಗಳನ್ನು ಹೆಚ್ಚಾಗಿ ಪಾಲಿಸುತ್ತಾ,

ಆವಶ್ಯಕವಾದ ವಿಶೇಷ ತಪಸ್ಸು ಮುಂತಾದುವುಗಳನ್ನು ಆಚರಿಸು ತ್ತಿರುತ್ತಾರೆ. ಕಡೆಗೆ ದೈವಾನುಗ್ರಹದಿಂದ ಮಕ್ಕಳಾಗುವುದು. ಇದು ಎಲ್ಲ ದೇಶಗಳ ಕಥೆಗಳಲ್ಲೂ ಸೇರಿರುತ್ತದೆ. ಪುತ್ರಕಾಮನೆಯು ಋಣ ತ್ರಯದಲ್ಲಿ ಒಂದಾದ ಪಿತೃಋಣವನ್ನು ತೀರಿಸುವ ಒಂದು ಧರ್ಮವಾಗಿದೆ ಎಂಬುದನ್ನು ಹಿಂದೆ ತಿಳಿಸಿದೆ. ಪುರುಷಾರ್ಥಗಳನ್ನು ಎಂದರೆ, ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಸಾಧಿಸಿ ಪಡೆಯುವುದು ಮಾನವನ ಧರ್ಮ. ಇವುಗಳಲ್ಲಿ ಅತ್ಯುತ್ತಮವಾದುದು ಮೋಕ್ಷ. "ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್" ಮನುಷ್ಯನು ಈ ಮೂರು ಸಾಲಗಳನ್ನು ತೀರಿಸಿದಮೇಲೆಯೇ ಮೋಕ್ಷವನ್ನು ಪಡೆಯು ಬಲ್ಲವನಾಗುತ್ತಾನೆ. ಆದುದರಿಂದ ಮಕ್ಕಳನ್ನು ಪಡೆಯಬಯಸು ವುದು ಎಲ್ಲ ಕಥೆಗಳಲ್ಲೂ ಕಾಣಬರುತ್ತದೆ. ಭಾರತದಲ್ಲಿ ಸತ್ಯವತಿಯು ವಂಶವು ಮುಂದುವರಿಯಲು ಎಲ್ಲ ಪ್ರಯತ್ನಗಳನ್ನೂ ಮಾಡುತ್ತಾಳೆ. ಪಾಂಡುರಾಜನು ಮಕ್ಕಳಿಗಾಗಿ ಹಂಬಲಿಸುತ್ತಾನೆ. ರಾಮಾಯಣ ದಲ್ಲಿ ದಶರಥನು ಮಕ್ಕಳಿಗಾಗಿ ಹಾತೊರೆಯುತ್ತಾನೆ. ಇವರೆಲ್ಲ ಏಕೆ ಹೀಗೆ ಆಶಿಸುತ್ತಾರೆ ? ಪುತ್‌ನಾಮಕ ನರಕದಿಂದ ಮಗನು ಪಿತೃ ಗಳನ್ನು ಉದ್ಧರಿಸುತ್ತಾನೆಂದು ಹೇಳಿರುವ ಧರ್ಮಶಾಸ್ತ್ರದ ಪಾಲನೆ ಗಾಗಿ. ಅಲ್ಲದೆ, ಮಾನವನಿಗೆ ಮಕ್ಕಳಿಂದ ಜೀವನವು ತುಂಬು ಜೀವನ ವಾಗುತ್ತದೆ. "ಪ್ರಜಯಾ ಹಿ ಮನುಷ್ಯಃ ಪೂರ್ಣಃ" ಎಂದು ವೇದವೂ ತಿಳಿಸುತ್ತದೆ. ಅಲ್ಲದೆ, ವೈಜ್ಞಾನಿಕರು ಸೃಷ್ಟ್ಯಾತ್ಮಕ ಪರಿವರ್ತನೆಯ

ಇತಿಹಾಸಗಳಲ್ಲಿ ಧಾರ್ಮಿಕ ಸಂಸ್ಕೃತಿ.

ದೃಷ್ಟಿಯಿಂದ ಹೇಳುವಂತೆ (creative evolution) ಆತ್ಮವಿಕಾಸ, ಉಪಾಧಿಗುಣ ಪರಿಣಾಮ ದೃಷ್ಟಿಯಿಂದ ಮಕ್ಕಳನ್ನು ಪಡೆ ಯಬೇಕೆಂಬ ಆಸೆಯು ನೈಸರ್ಗಿಕವಾದುದು. ಜಾಯಾ ಎಂದರೆ, ಹೆಂಡತಿಯು. ಈ ಪದದ ಅರ್ಥವು ಹೀಗಿದೆ. "ಜಾಯತೇ ಪತಿಃ ಅಸ್ಯಾಂ ಇತಿಜಾಯಾ" ಗಂಡನು ಹೆಂಡತಿಯಲ್ಲಿ ಹುಟ್ಟುತ್ತಾನೆ. ಆದುದರಿಂದ ಹೆಂಡತಿಗೆ ಜಾಯಾ ಎಂದು ಹೆಸರು. ಸಂತತಿಯನ್ನು

ಮುಂದುವರಿಸುವುದು ಸೃಷ್ಟಿನಿಯಮಗಳಲ್ಲಿ ಮುಖ್ಯವಾದುದು. ಮಕ್ಕಳಾಗದೆ ಹೋದರೆ ಮಾನವನು ಅಪೂರ್ಣನಾಗಿರುತ್ತಾನೆ. ಮಕ್ಕಳಾದ್ದರೆ ಮನುಷ್ಯನು ಪೂರ್ಣನಾಗುತ್ತಾನೆ. ಭಾರತದಲ್ಲಿ ಮಕ್ಕಳಿಗಾಗಿ ಕುಂತಿಯೂ ಮಾದ್ರಿಯೂ ಹಂಬಲಿಸಿದರು. ವ್ರತ ನಿಯಮ ಗಳನ್ನು ಆಚರಿಸಿ ದೇವತೆಗಳ ಅನುಗ್ರಹದಿಂದ ಮಕ್ಕಳನ್ನು ಪಡೆದರು. ರಾಮಾಯಣದಲ್ಲಿ ಕೌಸಲ್ಯಾ, ಕೈಕಯೀ, ಸುಮಿತ್ರಾ ದೇವಿಯರೂ ಹಾಗೆಯೇ ದೇವಾನುಗ್ರಹದಿಂದ ಸಂತಾನವನ್ನು ಪಡೆದರು. ಧರ್ಮಾ ಚರಣೆಯಲ್ಲಿ ಭಕ್ತಿಶ್ರದ್ಧೆಗಳಿಂದ ಕೂಡಿ ನಿರತರಾಗಿದ್ದರೆ ಒಳ್ಳೆಯ ಮಕ್ಕಳಾಗಿ ಇಹದಲ್ಲಿ ಸುಖವೂ, ಪರದಲ್ಲಿ ಸದ್ಗತಿಯೂ, ಕಡೆಗೆ ಮೋಕ್ಷವನ್ನು ಪಡೆಯಲು ಸಹಾಯವೂ ದೊರೆಯುತ್ತದೆ. ಎಂಬ ಧರ್ಮವು ಇತಿಹಾಸ ಪುರಾಣಗಳಲ್ಲಿ ಮುಂದಾಗಿರುವ ಕಥೆಯಾಗಿದೆ. ಭಾರತದಹಾಗೆ ರಾಮಾಯಣವೂ—

" ವೇದ ವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ |
ವೇದಃ ಪ್ರಾಚೇತಸಾದಾಸೀತ್ ಸಾಕ್ಷಾತ್ ರಾಮಾಯಣಾತ್ಮನಾ ||"

ಎಂದರೆ, ವೇದಗಳಿಂದ ಪ್ರತಿಪಾದಿಸಲ್ಪಡುವ, ತಿಳಿಯಬರುವ, ಪುರು ಷೋತ್ತಮನಾದ ವಿಷ್ಣುವು ದಶರಥನ ಮಗನಾಗಿ ಅವತರಿಸಲು, ವೇದವೂ ವಾಲ್ಮೀಕಿ ಋಷಿಯಿಂದ ರಾಮಾಯಣದ ರೂಪದಲ್ಲಿ ಅವತಾರ ವನ್ನು ಪಡೆದು ಬೆಳಗುತ್ತಿದೆ ಎಂದರೆ ಜನರಿಗೆ ಧರ್ಮದ ತಿಳಿವಳಿಕೆಯ ಬೆಳಕನ್ನು ಕೊಡುತ್ತಿದೆ. ಭಾರತವು ಐದನೆಯ ವೇದವಾದರೆ, ವೇದದ ಅವತಾರವೇ ರಾಮಾಯಣವಾಗಿರುತ್ತದೆ.

ರಾಮಾಯಣದಲ್ಲಿ ಸತ್ಯಧರ್ಮ ಶೀಲಗಳ ಪ್ರಾಮುಖ್ಯ.

ಶ್ರೀರಾಮನು ಮಹಾ ಪುರುಷನು. ಇವನು ತನ್ನನ್ನು ಸ್ವಲ್ಪವೂ ಅಹಂಕಾರವಿಲ್ಲದೆ

" ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ |"

ನಾನೂ ಒಬ್ಬ ಮನುಷ್ಯನು, ನವ್ಮ ತಂದೆಯು ದಶರಥನು, ನನ್ನ

ಹೆಸರು ರಾಮನು ಎಂದು ತಿಳಿಯುತ್ತೇನೆ. ಎಂದು ಅಗಸ್ತ್ಯಾದಿ ಮುನಿಗಳನ್ನು ಕುರಿತು ಹೇಳುತ್ತಾನೆ. ಅಹಂಭಾವವಿಲ್ಲದಿರುವುದು ದೊಡ್ಡವರ ಲಕ್ಷಣವಾಗಿದೆ. ಶ್ರೀರಾಮನ ಮಹಾನುಭಾವತೆಯು ಅವನು ಹುಡುಗನಾಗಿರುವಾಗಲೇ ಗೊತ್ತಾಗುತ್ತದೆ. ಹೇಗೆಂದರೆ "Child is the father of the man" ಎಂಬ ಸೂಕ್ತಿಯಂತೆಯೂ, ಬೆಳೆಯು ಮೊಳಕೆಯಲ್ಲೇ ಕಾಣಬರುತ್ತದೆ ಎಂಬ ಗಾದೆಯಂತೆಯೂ ಶ್ರೀರಾಮನ ಸದ್ಗುಣಗಳಲ್ಲಿ ಮುಖ್ಯವಾದ ಸೋದರ ಪ್ರೇಮವು ಬಾಲ್ಯದಿಂದಲೂ ಮುಂದಾಗಿಯೇ ಇದೆ.

"ಮಿಷ್ಟಮನ್ನ ಮುಪಾನೀತಂ ಅಶ್ನಾತಿ ನ ಚ ತೈರ್ವಿನಾ ।
ನ ಕ್ರೀಡೇತ್ ತೈರ್ವಿನಾಃ ರಾಮೋ ಮೃಗಯಾ ಕಂದುಕಾದಿಭಿಃ"

ಒಳ್ಳೆಯ ಆಹಾರವನ್ನು ತಿಂಡಿಯನ್ನು ರಾಮನಿಗೆ ಕೊಟ್ಟರೆ ಅವನು ಅದನ್ನು ತನ್ನ ತಮ್ಮಂದಿರಾದ ಭರತ, ಲಕ್ಷ್ಮಣ, ಶತ್ರುಘ್ನರೊಡನೆಯೇ ತಿನ್ನುತ್ತಿದ್ದನು. ಅವರಿಲ್ಲದೆ ಅವನು ಆಹಾರವನ್ನು ಬಾಲ್ಯದಲ್ಲೂ ಸೇವಿಸುತ್ತಿರಲಿಲ್ಲ. ಅಲ್ಲದೆ ಮನೆಯ ಹೊರಗಿನ ಆಟದಲ್ಲಿಯೂ ಎಂದರೆ, ಚೆಂಡಾಟ ಮುಂತಾದ ಕ್ರೀಡೆಗಳಲ್ಲೂ ಶ್ರೀರಾಮನು ತಮ್ಮಂದಿರಿಲ್ಲದೆ ಆಟವಾಡುತ್ತಿರಲಿಲ್ಲ. ಕ್ಷತ್ರಿಯ ರಾಜಪುತ್ರನಂತೆ ಧೈರ್ಯ, ಶೌರ್ಯ, ಸಾಹಸ ಪ್ರಧಾನವಾದ ಬೇಟೆಗೆ ಹೋದಾಗಲೂ ತಮ್ಮಂದಿರನ್ನು ಬಿಟ್ಟಿರುತ್ತಿರಲಿಲ್ಲ. ನಾವು ನಮ್ಮ ಮಕ್ಕಳಿಗೆ ಈ ಗುಣವನ್ನು ಹೆಚ್ಚಾಗಿ ಕಲಿಸಬೇಕು. ಅದನ್ನು ನಾವು ಮಾಡುತ್ತಿಲ್ಲ. ಮಕ್ಕಳಿಗೆ ತಿಂಡಿಯನ್ನು ಕೊಟ್ಟು ಯಾರಿಗೂ ಕಾಣದ ಹಾಗೆ ತಿನ್ನಹೇಳುವ, ಅವರೂ ಹಾಗೆ ಮಾಡುವ ಉದಾಹರಣೆಯೇ ಹೆಚ್ಚಾಗಿದೆ. ಮಕ್ಕಳಲ್ಲಿ ಸ್ವಾರ್ಥಪರತೆ, ಪರರ ಮೇಲ್ಮೆ ಸುಖಗಳಲ್ಲಿ ಅಸೂಯೆಯೂ ಬೆಳೆಯಲು ಅವಕಾಶವಾಗುತ್ತಿದೆ. ಇದನ್ನು ತಪ್ಪಿಸಬೇಕಾದರೆ ಮೇಲೆ ಹೇಳಿದ ರಾಮನ ಗುಣವನ್ನು ಬಾಲ್ಯದಿಂದಲೂ ನಮ್ಮ ಮಕ್ಕಳಲ್ಲೂ ಬೇರೂರಿ ಬೆಳೆಯುವಂತೆ ಮಾಡಬೇಕೆಂಬುದು ಸ್ಪಷ್ಟವಾಗಿದೆ.

ಶ್ರೀರಾಮನ ಶೀಲದ ವಿಷಯದಲ್ಲಿ ಹೀಗೆ ವರ್ಣನೆ ಇದೆ—

"ರಕ್ಷಿತಾ ಸ್ವ ಸ್ಯ ವೃತ್ತಸ್ಯ ಸ್ವಜನಸ್ಯಾಪಿ ರಕ್ಷಿತಾ।
ರಕ್ಷಿತಾ ಜೀವಲೋಕಸ್ಯ ಧರ್ಮಸ್ಯ ಪರಿರಕ್ಷಿತಾ॥"

ರಾಮನು ತನ್ನ ಶೀಲವನ್ನು, ಖಚಿತವಾದ ಧಾರ್ಮಿಕ ನಡೆವಳಿಕೆಯನ್ನು ಕಾಪಾಡುತ್ತಿದ್ದನು. ತಾನಾಗಿಯೇ ತನ್ನ ದಿನಗಟ್ಟಲೆಯ ಜೀವನ ಕ್ರಮದಲ್ಲಿ ಒಳ್ಳೆಯ ಧಾರ್ಮಿಕತೆಯು ಬೇರೂರಿ ಬಲಗೊಳ್ಳುತ್ತಿರುವಂತೆ ಮಾಡಿಕೊಳ್ಳುತ್ತಿದ್ದನು. "ಸ್ವಯಂ ತೀರ್ಣಃ ಪರಾನ್ ತಾರಯತಿ" ಎಂಬಂತೆ ತಾನು ಮೊದಲು ತನ್ನನ್ನು ಧರ್ಮಾಚರಣೆಯಿಂದ ಕಾಪಾಡಿಕೊಂಡು ತನ್ನ ಶೀಲವನ್ನು ಬಲಪಡಿಸಿಕೊಂಡು ತನ್ನವರು ನಂಟರಿಷ್ಟರು ಬಂಧು ಬಾಂಧವರೂ ಧರ್ಮಾಸಕ್ತರಾಗಿರುವಂತೆ ಮಾಡುತ್ತಾ ಅವರಿಗೆ ಮಾದರಿಯ ಉದಾಹರಣೆಯನ್ನು ಮೇಲುಪಂಕ್ತಿಯನ್ನು ಹಾಕಿಕೊಡುತ್ತಾ ಸಹಾಯಮಾಡಿ ಆ ಧರ್ಮದಿಂದಲೇ ಅವರನ್ನೂ ಕಾಪಾಡುತ್ತಿದ್ದನು. ಅವನ ಸಹಾನುಭೂತಿ ಸಹಕಾರಗಳ ಕಾರ್ಯಕ್ಷೇತ್ರವು ಹೀಗೆ ವಿಸ್ತಾರವನ್ನು ಪಡೆಯುತ್ತಿತ್ತು. ಅಷ್ಟೇ ಅಲ್ಲದೆ ರಾಮನು ಮನುಷ್ಯ ಸಾಮಾನ್ಯರನ್ನೂ ಅಷ್ಟೇ ಏಕೆ ಪ್ರಾಣಿ ಸಾಮಾನ್ಯವನ್ನೂ ತನ್ನ ರಕ್ಷಣೆಗೆ ಪಾತ್ರವಾಗುವಂತೆ ಮಾಡುತ್ತಿದ್ದನು.

ಶ್ರೀರಾಮನಲ್ಲಿ ಸತ್ಯ ಧರ್ಮಗಳ ವಜ್ರಶೀಲ.

"Example is better than precept" ಎಂದರೆ ಉಪದೇಶಕ್ಕಿಂತಲೂ ಉದಾಹರಣೆಯೇ ಮೇಲಾದುದು. ಎಂಬಂತೆ ಧರ್ಮವನ್ನು ಉಪದೇಶಿಸುವುದಕ್ಕೆ ಬದಲಾಗಿ, ಹೆಚ್ಚಾಗಿ ಧರ್ಮವನ್ನು ಆಚರಿಸಿ ತೋರಿಸುವುದು ಹೆಚ್ಚು ಫಲಕಾರಿಯೂ, ಪ್ರಭಾವಶಾಲಿಯೂ ಆಗಿರುವಂತೆ ಮಾಡುತ್ತಿದ್ದನು, ಇದೆಲ್ಲಕ್ಕೂ ಮೇಲಾಗಿ "ರಾಮೋ ವಿಗ್ರಹವಾನ್ ಧರ್ಮಃ" ಎಂದರೆ ಧರ್ಮವನ್ನು ತಿಳಿದು, ತಿಳಿಸಿ, ಆಚರಿಸಿ, ಇತರರೂ ಆಚರಿಸುವಂತೆ ಮಾಡಿ ಪ್ರಚಾರ ಕಾರ್ಯವನ್ನು ಸಫಲವಾಗಿ ಮಾಡುತ್ತಿದ್ದನು. ಧರ್ಮವು ಜಗತ್ತಿಗೇ ಮೂಲಾಧಾರವಾದ ನಿಯಮವು. "ಧರ್ಮೋ ವಿಶ್ವಸ್ಯ ಜಗತಃಪ್ರತಿಷ್ಠಾ" ಎಂಬಂತೆ ಪ್ರಪಂಚವು

ಚೆನ್ನಾಗಿದ್ದು ಮುಂದುವರಿಯಬೇಕಾದರೆ ಎಲ್ಲವೂ ಧರ್ಮಾನುಸಾರಿಯಾಗಿರಬೇಕೆಂಬುದು ಈಶ್ವರೇಚ್ಛೆಯೂ, ಕಟ್ಟಳೆಯೂ ಆಗಿದೆ. ಅದನ್ನು ಶ್ರೀರಾಮನೂ ಕಾಪಾಡುತ್ತಿದ್ದನು. ಇದು ಅವನಿಗೆ ಸಹಜವಾಗಿತ್ತು ಆದುದರಿಂದಲೇ—

"ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷಿತ ರಕ್ಷಿತಃ ।"

ಎಂಬಂತೆ ಧರ್ಮವನ್ನು ನಾವು ಆಚರಿಸುತ್ತಾ ಕಾಪಾಡುತ್ತಿದ್ದರೆ ಅದು ನಮ್ಮನ್ನು ಕಾಪಾಡುತ್ತದೆ. ಇದರಿಂದ ದೇಶದಲ್ಲಿ ಶಾಂತಿ, ಸುಖ, ಸಮೃದ್ಧಿ, ಮಳೆ, ಬೆಳೆ, ಸುಭಿಕ್ಷೆಗಳು, ಕಾಪಾಡಲ್ಪಟ್ಟಿದ್ದುವು. ಇಂತಹ ರೀತಿಯಲ್ಲಿ ಧರ್ಮಪಾಲನೆಯುಳ್ಳ ರಾಜ್ಯಕ್ಕೆ "ರಾಮರಾಜ್ಯ" ವೆಂಬ ಹೆಸರು ಪ್ರಸಿದ್ಧವಾಗಿರುತ್ತದೆ. ಶ್ರೀರಾಮನೂ, ಲಕ್ಷ್ಮಣನೂ, ಭರತನೂ, ಶತ್ರುಘ್ನನೂ ಸಮವಾಗಿಯೇ ವಿದ್ಯಾಭ್ಯಾಸದಲ್ಲೂ ಧನುರ್ವೇದ ಶಸ್ತ್ರಾಸ್ತ್ರ ವಿದ್ಯೆಯಲ್ಲೂ ಪ್ರಾವೀಣ್ಯವನ್ನು ಪಡೆಯುತ್ತಿದ್ದರು. ವಿಶ್ವಾಮಿತ್ರನು ರಾಮನ ಮಹಿಮೆಯನ್ನು ಅರಿತವನಾಗಿ ಅವನ ಮೂಲಕವಾಗಿಯೇ ಯಾಗಸಂರಕ್ಷಣ,ದುಷ್ಟನಿಗ್ರಹ,ಧರ್ಮಸಂಸ್ಥಾಪನ ಕಾರ್ಯವನ್ನು ನೆರವೇರಿಸುವುದಕ್ಕಾಗಿ ರಾಮನನ್ನೂ, ಲಕ್ಷ್ಮಣನನ್ನೂ ಕರೆದುಕೊಂಡು ಹೋಗಲು ಅಯೋಧ್ಯಾ ರಾಜಧಾನಿಗೆ ಬಂದನು. ದಶರಥನು

ವಜ್ರಶೀಲದ ಸತ್ಪರಿಣಾಮಗಳು.

ರಾಮಲಕ್ಷ್ಮಣರನ್ನು ಕಳುಹಿಸಿಕೊಡಲು ಪುತ್ರಪ್ರೇಮ, ಮಕ್ಕಳ ಚಿಕ್ಕವಯಸ್ಸು ಮುಂತಾದ ಕಾರಣಗಳಿಂದ ಹಿಂದುಮುಂದು ನೋಡುತ್ತಿರಲು ಜ್ಞಾನಿಗಳಾದ ಪುರೋಹಿತರಾದ ವಸಿಷ್ಠರು ಹೇಳಿದಂತೆ ರಾಮನನ್ನು ವಿಶ್ವಾಮಿತ್ರನೊಡನೆ ಯಜ್ಞರಕ್ಷಣೆಗಾಗಿ ಕಳುಹಿಸಿದನು. ವಿಶ್ವಾಮಿತ್ರನಿಂದ ಬಲಾ, ಅತಿಬಲಾ ಮುಂತಾದ ವಿದ್ಯೆಗಳನ್ನೂ ರಾಮನು ಪಡೆದುಕೊಂಡನು. ತಾಟಕಿ ಸುಬಾಹು ಇವರನ್ನು ಸಂಹರಿಸಿ ಮಾರೀಚನನ್ನು ಓಡಿಸಿ ಯಾಗಾಚರಣೆಯು ನೆರವೇರಲು ಸಹಾಯಮಾಡಿದನು. ರಾಮನ ಮುಂದಿನ ಕಲ್ಯಾಣ ಸಾಧನೆಗಾಗಿ ವಿಶ್ವಾಮಿತ್ರನು ಜನಕರಾಜನಲ್ಲಿದ್ದ ಶಿವಧನು

ಸ್ಸಿನ ಶಕ್ತಿ ಮಹಿಮೆಗಳನ್ನು ರಾಮನಿಗೆ ತಿಳಿಸಿದನು. ಅಲ್ಲದೆ ಸೀತೆಯನ್ನು ರಾಮನು ಪತ್ನಿಯಾಗಿ ಪರಿಗ್ರಹಿಸುವಂತಾಗಲು, ರಾಮಲಕ್ಷ್ಮಣರೊಡನೆ ಮಿಥಿಲಾನಗರಕ್ಕೆ ಪ್ರಯಾಣ ಮಾಡಿದನು. ದಾರಿಯಲ್ಲಿ ಗೌತಮರ ಆಶ್ರಮದಲ್ಲಿ ಶಾಪದಿಂದ ಶಿಲೆಯಾಗಿದ್ದ ಅಹಲ್ಯೆಯು ರಾಮಪಾದಧೂಳಿಸ್ಪರ್ಶದಿಂದ ಶಾಪನಿವೃತ್ತಿಯಾಗಲು ಸ್ವಸ್ವರೂಪವನ್ನು ಪಡೆದು, ರಾಮನನ್ನು ಕೃತಜ್ಞತೆಯಿಂದ ಸತ್ಕರಿಸಿ ಪತಿಯನ್ನು ಪಡೆಯಲು ಸಹಾಯವಾಯಿತು. ಮಿಥಿಲಾ ನಗರಕ್ಕೆ ಹೋಗಿ ಅಲ್ಲಿದ್ದ ಶಿವಧನುಸ್ಸು ಹೆದೆ ಏರಿಸುವಾಗಲೇ ಮುರಿದು ಹೋಗಲು, ಸೀತಾ ರಾಮರ ವಿವಾಹವು ನಿಷ್ಕರ್ಷೆಯಾಗಲು, ಲಕ್ಷ್ಮಣಾದಿಗಳಿಗೂ ವಿವಾಹವು ನೆರವೇರಿತು. ಅಯೋಧ್ಯೆಗೆ ಹಿಂತಿರುಗಿ ಬರುತ್ತಾ ದಾರಿಯಲ್ಲಿ ಪರಶುರಾಮನನ್ನು ಸಂಧಿಸಿ ರಾಮನು ಅವನ ಅಹಂಕಾರವನ್ನು ಮುರಿದು ಅನುಗ್ರಹಿಸಿ ಅವನಲ್ಲಿದ್ದ ವೈಷ್ಣವ ತೇಜಸ್ಸನ್ನೂ ಗ್ರಹಿಸಿದನು ಶ್ರೀರಾಮಾದಿ ನಾಲ್ವರೂ ಸಮವಾಗಿ ಗುಣಶಕ್ತಿಗಳಿಂದ ಜನಪ್ರಿಯರೂ ಆದರು. ಅದರಲ್ಲೂ ರಾಮನು ಸರ್ವಪ್ರಿಯನಾಗಿದ್ದುದನ್ನು ಈ ಶ್ಲೋಕದಲ್ಲಿ ವ್ಯಾಖ್ಯಾನ ಕೌಶಲದಿಂದ ವಿವರಿಸಲಾಗಿದೆ.

" ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥ "

ಈ ಶ್ಲೋಕವನ್ನು ಹಿರಿಯರು ಕಿರಿಯರಿಗೆ ಬಾಲ್ಯದಲ್ಲಿರುವಾಗಲೇ ಹೇಳಿ ಕೊಡುತ್ತಾರೆ, ಸರ್ವಪ್ರಿಯನಾದ ರಾಮನನ್ನು ಯಾರು ಯಾರು ಯಾವ ಯಾವ ರೀತಿಯಲ್ಲಿ ಸಂಬೋಧಿಸುತ್ತಿದ್ದರೆಂಬುದನ್ನು ಇಲ್ಲಿ ತಿಳಿಸಿದೆ. ಹಿರಿಯರಾದ ದಶರಥ, ಕೌಸಲ್ಯಾ, ಕೈಕಯೀ, ಸುಮಿತ್ರಾ ಮುಂತಾದವರು 'ರಾಮನೇ' ಎಂದು ಸಂಬೋಧಿಸುತ್ತಿದ್ದರು.

ಇಹ ಜೀವನದಲ್ಲಿ ಆದರ್ಶ ಸುಖ.

ಅರಮನೆಯಲ್ಲಿದ್ದ ರಾಮನನ್ನು ಮಗುವಾಗಿದ್ದಾಗಿನಿಂದಲೂ ಎತ್ತಿ ಆಡಿಸಿಯೂ ಇದ್ದ ಹಿರಿಯ ಅಧಿಕಾರಿಗಳು "ರಾಮಭದ್ರ" ಮಂಗಳಕರನಾದ ರಾಮನೇ ಎಂದು ಪ್ರೀತಿ ಗೌರವಗಳಿಂದ ಕೂಡಿ ಸಂಬೋಧಿಸುತ್ತಿದ್ದರು. ಜನಸಾಮಾನ್ಯದವರು ತಮಗೆ ಚಂದ್ರನಂತೆ ಆಹ್ಲಾದಕರನಾಗಿದ್ದ ರಾಮನನ್ನು ಪ್ರೇಮಾದರಗಳಿಂದ "ರಾಮಚಂದ್ರ" ಎಂದು ಆಹ್ವಾನಿಸುತ್ತಿದ್ದರು. ಜ್ಞಾನಿಗಳಲ್ಲಿ ಶ್ರೇಷ್ಠರಾದ ವಸಿಷ್ಠಾದಿ ಮಹರ್ಷಿಗಳು ರಾಮನ ದೈವೀಸಂಪತ್ತನ್ನೂ ದಿವ್ಯಾಂಶವನ್ನೂ ಮನಗಂಡು "ವೇಧಾಃ" ವಿದಧಾತೀತಿವೇಧಾಃ ಎಂದರೆ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಕಾರಣನಾದ ಪರಮೇಶ್ವರನ ವಿಶೇಷಾಂಶವನ್ನು ಮನಗಂಡವರಾಗಿ 'ವೇಧಾಃ' ಎಂದು ಕರೆಯುತ್ತಿದ್ದರು. ರಾಜಸಂಬಂಧಿಗಳಾದ ರಾಜಪಿಂಡೆಯವರೆನ್ನಿಸಿಕೊಂಡಿದ್ದ ನಂಟರು ತಮ್ಮ ಸಂಬಂಧವನ್ನು ಮುಂದುಮಾಡಿ "ರಘುನಾಥ' ಎಂದರೆ, ರಘುವಂಶದಲ್ಲಿ ಹುಟ್ಟಿದವರಾದ ನಮಗೆಲ್ಲರಿಗೂ ವಿಶಿಷ್ಟ ರೀತಿಯ ಸ್ವಾಮಿಯಾದವನೇ ಎಂದು ವ್ಯವಹರಿಸುತ್ತಿದ್ದರು. ಧರ್ಮಪತ್ನಿಯಾದ ಸೀತಾದೇವಿಯು ತನ್ನ ಹೃದಯೇಶ್ವರನಾದ ರಾಮನನ್ನು "ನಾಥ" ಎಂದರೆ, ಪ್ರಭುವೇ ಎಂದು ಪ್ರೇಮ ಗೌರವಗಳಿಂದ ಸಂಬೋಧಿಸುತ್ತಿದ್ದಳು. ಇದರಂತೆಯೇ ಜನಕರಾಜನ ಕಡೆಯುವರಾದ ನಂಟರು "ಸೀತಾಯಾಃಪತಿ" ಎಂದರೆ 'ನಮ್ಮ ಸೀತಮ್ಮನ ಗಂಡ' ನಮ್ಮ ಸೀತಾದೇವಿಯ ಯಜಮಾನರು, ಎಂದು ಮುಂತಾಗಿ ತಮ್ಮ ಸಂಬಂಧ ಕಾರಣಳಾದ ಸೀತೆಯ ಹೆಸರಿನೊಡನೆ ಸೀತಾಪತಿ ಎಂದು ಸಂಬೋಧಿಸುತ್ತಿದ್ದರು. ಹೀಗೆ ರಾಮನು ಗುಣಗಳಿಂದ ಸರ್ವ ಪ್ರೇಮ ಪಾತ್ರನೂ ಮಾನ್ಯನೂ ಆಗಿದ್ದನು. ಈ ಭಾವವು ಗೃಹದಲ್ಲಿ ಶಾಂತಿ ರಕ್ಷಕವು.

ಅಯೋಧ್ಯೆಯಲ್ಲಿ ನಾಲ್ವರು ಸಹೋದರ ದಂಪತಿಗಳೂ ಉತ್ತಮ ಸೌಖ್ಯವನ್ನು ಅನುಭವಿಸುತ್ತಿದ್ದರು. ಆಗ ರಾಮನು ಸುಖವನ್ನು

ಹೇಗೆ ಅನುಭವಿಸುತ್ತಿದ್ದನೆಂಬ ರೀತಿಯನ್ನು ಲಕ್ಷ್ಮಣನಿಗೆ ವಿವರಿಸಿದ ಬಗೆಯನ್ನು ಭವಭೂತಿ ಕವಿಯು ಹೀಗೆ ವರ್ಣಿಸಿರುತ್ತಾನೆ.

"ಜೀವತ್ಸು ತಾತಪಾದೇಷು ನೂತನೇ ದಾರ ಸಂಗ್ರಹೇ ।
ಮಾತೃಭಿಃ ಚಿಂತ್ಯಮಾನಾನಾಂ ತೇ ಹಿ ನೋ ದಿವಸಾ ಗತಾಃ ॥"

ನಮ್ಮ ಪೂಜ್ಯರಾದ ತಂದೆಯವರು ಬದುಕಿರುವಾಗ ಎಂದರೆ ರಾಜ್ಯದ ಮತ್ತು ಮನೆಯ ಯೋಗಕ್ಷೇಮಗಳ ಸಂಪಾದನೆಯ ಭಾರವನ್ನು ತಾವೇ ವಹಿಸಿ ನಮಗೆ ಆತಂಕವಿಲ್ಲದಂತೆ ಮಾಡಿರುವಾಗ, ಹೊಸದಾಗಿ ನಾವು ನಮ್ಮ ಧರ್ಮಪತ್ನಿಯರನ್ನು ಪಡೆದು ಸುಖಿಸುತ್ತಿದ್ದಾಗ, ನಮ್ಮ ತಾಯಿಯರು ನಮ್ಮ ಸುಖ ಸೌಕರ್ಯಗಳನ್ನು ಮುಂದಾಗಿ ಯೋಚಿಸುತ್ತಾ ಅವನ್ನು ನಮ್ಮೆಲ್ಲರಿಗೂ ಒದಗಿಸುವ ಭಾರವನ್ನು ಹೊತ್ತಿದ್ದಾಗ, ನಾವೆಲ್ಲರೂ ಆ ಸುಖಮಯವಾದ ದಿನಗಳನ್ನು ಸಂತೋಷದಿಂದ ತೃಪ್ತರಾಗಿ ಕಳೆದವು. ಆ ದಿನಗಳು ಕಳೆದುಹೋದುವು. ಪುನಃ ಅಂತಹ ದಿನಗಳನ್ನು ಕಾಣುವ ಭಾಗ್ಯವು ನಮಗಿಲ್ಲವಾಯಿತೆನಿಸುತ್ತಿದೆ. ಎಂದು ಹೇಳುತ್ತಾನೆ. ಗೃಹಸ್ಥ ಜೀವನದಲ್ಲಿ ನೂತನ ದಂಪತಿಗಳು ಅನುಭವಿಸುವ ಆದರ್ಶ ಸುಖದ ಚಿತ್ರವಿದೆನ್ನಬಹುದು. ಸುಖದ ದಿನಗಳು, ವರ್ಷಗಳೂ ದಿನಗಳ ಹಾಗೆ ಬಹು ಬೇಗ ಕಳೆದುಹೋಗುತ್ತವೆ, ಎಂಬುದನ್ನೂ ದಿವಸ ಪದದಿಂದ ಸೂಚಿಸಲಾಗಿದೆ.

ರಾಮನು ಸ್ಥಿತ ಪ್ರಜ್ಞನು.

ಶ್ರೀರಾಮನಲ್ಲಿ ದೊರೆಯಲ್ಲಿರಬೇಕಾದ ಗುಣಗಳನ್ನು ಮನಗಂಡು ದಶರಥನು ರಾಜ್ಯಭಾರವನ್ನು ರಾಮನಿಗೆ ವಹಿಸಲು ಸೂಚಿಸುತ್ತಾನೆ. ಪ್ರಜೆಗಳೂ, ಮಂತ್ರಿಗಳೂ ಆನಂದದಿಂದ ಒಪ್ಪುತ್ತಾರೆ. ಈ ಅಂಶವನ್ನು ತಂದೆಯು ಮಗನನ್ನು ಕರೆದು ತಿಳಿಸುತ್ತಾನೆ. ಮಗನು ಮೌನದಿಂದ ವಿಧೇಯತೆಯನ್ನು ತಿಳಿಸುತ್ತಾನೆ. ರಾಮನ ಶೀಲದ ಮಹಿಮೆಯು, ಸ್ಥಿತಪ್ರಜ್ಞನ ಲಕ್ಷಣವು, ಇಲ್ಲಿ ಪ್ರಕಟವಾಗುತ್ತದೆ. ರಾಮನಿಗೆ ತಕ್ಕ ಹೆಂಡತಿ ಸೀತೆ. ಸೀತೆಗೆ ತಕ್ಕ ಗಂಡ ರಾಮ.

ದಾಂಪತ್ಯದಲ್ಲಿ ಅನುರೂಪ್ಯವನ್ನೂ ಇಲ್ಲಿ ಕಾಣಬಹುದು. ಸೀತೆಗೆ ರಾಮನು ತನ್ನ ಪಟ್ಟಾಭಿಷೇಕದ ವಿಷಯವನ್ನು ತಿಳಿಸಿದ ಕೂಡಲೆ ಸೀತೆಯು "ಮಾವನವರು ಸುಖವಾಗಿದ್ದಾರೆ ತಾನೆ?" ಎಂದು ಕೇಳುತ್ತಾಳೆ. ಉತ್ತರಾಧಿಕಾರಿಯನ್ನು ಗೊತ್ತುಮಾಡಿದ ಪ್ರಸಂಗ ದಿಂದ ಹಿಂದಿನ ದೊರೆಗೆ ಆರೋಗ್ಯವು ತಪ್ಪಿದೆಯೋ ಎಂದು ಆತಂಕ ವನ್ನು ಸೂಚಿಸುತ್ತಾಳೆ. ಮಾರನೆಯ ದಿನ ಮಂಥರೆಯ ಉಪದೇಶ ದಿಂದ ಕೈಕಯಿಯ ಹೃದಯವು ತಾತ್ಕಾಲಿಕವಾಗಿ ಬದಲಾಗಿ, ಅವಳು ತನಗೆ ದಶರಥನು ಹಿಂದೆ ವಾಗ್ದಾನ ಮಾಡಿದ್ದ ಎರಡು ವರಗಳನ್ನು ಕೇಳುತ್ತಾಳೆ. ಪಟ್ಟಾಭಿಷೇಕವು ತಪ್ಪಿ ರಾಮನು ವನವಾಸಕ್ಕೆ ಹೋಗ ಬೇಕೆಂಬುದನ್ನು ಕೇಳಿದಾಗಲೂ ರಾಮನು ಉದ್ವೇಗವಿಲ್ಲದೆ ವಿಧೇಯ ತೆಯಿಂದಲೇ ವರ್ತಿಸುತ್ತಾನೆ. ಈ ವಿಷಯವನ್ನು ಸೀತೆಗೆ ಅವನು ತಿಳಿಸಿದಾಗ ಸೀತೆಯೂ ವಿಷಣ್ಣಳಾಗದೆ "ನನ್ನ ರಾಮನು ನನಗೇ ಉಳಿದ ಹಾಗಾಯಿತು" ಎಂದು ಹೇಳಿ ತೃಪ್ತಿಯನ್ನೇ ಸೂಚಿಸು ತ್ತಾಳೆ. ಪಟ್ಟಾಭಿಷೇಕವಾಗಿದ್ದರೆ ರಾಮನು ರಾಜ್ಯಭಾರ ಕಾರ್ಯ ಕಲಾಪಗಳಲ್ಲಿ ತೊಡಗಲು ತಾನು ಮುಂಚಿನಂತೆ ಪತಿಯೊಡನೆ ವಿಲಾಸ ವಿನೋದಗಳಿಂದ ಇರಬಹುದಾದ ಕಾಲವು ತುಂಬ ಕಡಿಮೆಯಾಗು ತ್ತಿದ್ದುದು ತಪ್ಪಿತೆಂದು ಅವಳು ಸಂತೋಷ ತೃಪ್ತಿಯನ್ನೇ ಸೂಚಿಸು ತ್ತಾಳೆ.

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯ ಕ್ರೋಧಃ ಸ್ಥಿತಧೀಃ ಮುನಿರುಚ್ಯತೇ ॥ ಭ.ಗೀ. ೨. ೫೬.

ದುಃಖ ಸಂಭವಿಸಿದರೆ ಉದ್ವೇಗವನ್ನು ಪಡೆಯದೆ, ಸುಖ ಬಂದಾಗ ಆಶೆಯನ್ನೂ ತೋರದೆ, ಸಂತೋಷ ಬಂದಾಗ ಹಿಗ್ಗಿ ಮೆರೆಯದೆ, ಆಶಾ ಭಂಗವಾದಾಗ ಕುಗ್ಗಿ ಸೊರಗದೆ, ಮನಸ್ಸನ್ನು ಏರುಪೇರಿಲ್ಲದೆ ಸಮಾಧಾನ ಸ್ಥಿತಿಯಲ್ಲಿಟ್ಟುಕೊಂಡಿರುವುದು ಸ್ಥಿತಪ್ರಜ್ಞನ ಸ್ವಭಾವವು. ಹಾಗೆ ರಾಗ, ಎಂದರೆ ಸುಖದಲ್ಲಿ ಅತಿ ಆಸೆ, ಅದು ತಪ್ಪಿಹೋದೀತೋ

ಏನೋ ಎಂದು ಭಯ, ಆತಂಕ, ಸುಖಕ್ಕೆ ಅಡ್ಡಿಬಂದವರಲ್ಲಿ ಕ್ರೋಧ ಎಂದರೆ ಪ್ರತೀಕಾರಬುದ್ಧಿ, ಇವು ಒಂದೂ ಇಲ್ಲದೆ ಬುದ್ಧಿಯನ್ನು ತನ್ನ ಹತೋಟಿಯಲ್ಲಿ, ಸ್ತಿಮಿತದಲ್ಲಿಟ್ಟುಕೊಂಡಿರುವವರಿಗೆ ಸ್ಥಿತಪ್ರಜ್ಞರೆಂದು ಹೆಸರಿದೆ. ರಾಮನಲ್ಲೂ, ಸೀತೆಯಲ್ಲೂ ಈ ಗುಣವು ಚೆನ್ನಾಗಿ ಕಾಣ ಬರುತ್ತದೆ.

ವನವಾಸಕ್ಕೆ ಹೋಗಲು ನಿಶ್ಚಯಿಸಿದ ಮೇಲೆ ರಾಮನು ಪ್ರಾರ್ಥಿಸಲು ತಾಯಿ ಕೌಸಲ್ಯಾದೇವಿಯು "ಮಯಾರ್ಚಿತಾ ದೇವಗಣಾಶ್ಶಿವಾದಯಃ" ಎಂದು ಹೇಳಿ ವಿಶಾಲಮನೋಭಾವದ ರೀತಿಯಿಂದ ಸ್ವಸ್ತಿವಾಚನ ಆಶೀರ್ವಾದವನ್ನು ಮಾಡಿದಳು. ಹಾಗೆಯೇ ತಾಯಿಯಾದ ಕೈಕಯಿಯ ಸಮೀಪಕ್ಕೂ ಹೋಗಿ ರಾಮನು ಆಶೀರ್ವಾದ ಮಾಡೆಂದು ಮುಂಚಿನಂತೆಯೇ ಮಾತೃಭಕ್ತಿಯಿಂದ ಪ್ರಾರ್ಥಿಸುತ್ತಾನೆ.

"ಉಪಕಾರಿಣಿ ಯಸ್ಸಾಧುಃ ಸಾಧುತ್ವೇ ತಸ್ಯ ಕೋ ಗುಣಃ ।
ಅಪಕಾರಿಣಿ ಯಸ್ಸಾಧುಃ ಸ ಸಾಧುಸ್ಸದ್ಭಿರುಚ್ಯತೇ ॥"

ಎಂದರೆ, ನಮಗೆ ಉಪಕಾರ ಮಾಡಿದವರಲ್ಲಿ ನಾವು ಒಳ್ಳೆಯ ನಡತೆಯಿಂದ ಇದ್ದರೆ ಆ ನಡತೆಯಲ್ಲಿ ವಿಶೇಷ ಮಹತ್ತ್ವವೇನೂ ಇಲ್ಲವು. ಅಪಕಾರ ಮಾಡಿದವರ ವಿಷಯದಲ್ಲೂ ಯಾರು ಒಳ್ಳೆಯ ರೀತಿಯಲ್ಲೇ ನಡೆದುಕೊಳ್ಳುತ್ತಾರೋ ಅವರೇ ಶ್ಲಾಘ್ಯರಾದ ಸತ್ಪುರುಷರು. ಅದರಂತೆ ರಾಮನು ತನ್ನಲ್ಲಿ ಮುಂಚಿನಂತೆಯೇ ಭಕ್ತಿ, ಪ್ರೀತಿಗಳುಳ್ಳವನಾಗಿರುವುದನ್ನು ನೋಡಿ ಕೈಕಯಿಗೂ ಸಂಕೋಚವಾಗುತ್ತದೆ. ಅದನ್ನು ಗಮನಿಸಿ ರಾಮನು ಹೀಗೆ ಹೇಳುತ್ತಾನೆ.

"ವನಭುವಿ ತನು ಮಾತ್ರತ್ರಾಣ ಮಾಜ್ಞಾಪಿತಂ ಮೇ
ಸಕಲಭುವನಭಾರಃ ಸ್ಥಾಪಿತೋ ವತ್ಸಮೂರ್ಧ್ನಿ ।
ತದಿಹ ಸುಕರತಾಯಾಂ ಆವಯೋಸ್ತರ್ಕಿತಾಯಾಂ
ಮಯಿ ಪತತಿ ಗರೀಯಾನ್ ಅಂಬ ತೇ ಪಕ್ಷಪಾತಃ ॥"

ಎಂದರೆ ಓ ತಾಯಿಯೇ ನೀನು ಸಂಕೋಚಪಡಬೇಕಾಗಿಲ್ಲ. ಏಕೆಂದರೆ ನನ್ನನ್ನು ವನವಾಸಕ್ಕೆ ಕಳುಹಿಸುವುದರಿಂದ ನನ್ನ ಶರೀರರಕ್ಷಣೆಯಷ್ಟು

ಸ್ವಲ್ಪ ಭಾರವನ್ನು ಮಾತ್ರ ನನಗೆ ವಹಿಸಿರುವೆ. ಆದರೆ ವತ್ಸನಾದ ಭರತನ ತಲೆಯ ಮೇಲೆ ಇಡೀ ಸಾಮ್ರಾಜ್ಯದ ಮಹಾ ಕಾರ್ಯಭಾರವನ್ನು ಹೇರಿರುತ್ತೀಯೆ. ನಮ್ಮಿಬ್ಬರ ಕಾರ್ಯಗಳಲ್ಲಿ ಯಾವುದು ಹೆಚ್ಚು ಸುಕರವಾದುದು ? ಎಂದು ವಿಮರ್ಶಿಸಿ ನೋಡಿದರೆ, ನಿನಗೆ ಭರತನಲ್ಲಿರುವ ಪ್ರೀತಿಗಿಂತ ಹೆಚ್ಚು ವಾತ್ಸಲ್ಯವು ನನ್ನ ವಿಷಯದಲ್ಲಿರುತ್ತೆಂದು ನಾನು ತಿಳಿಯುತ್ತೇನೆ. ಆದುದರಿಂದ ಪ್ರೇಮಪೂರ್ವಕವಾಗಿ ಆಶೀರ್ವದಿಸಿ ಕಳುಹಿಸಿಕೊಡು. ಎಂದು ಬೇಡುತ್ತಾನೆ. ಇದು ಧಾರ್ಮಿಕ ಸಂಸ್ಕೃತಿಯ ಉತ್ತಮೋದಾಹರಣವೆನ್ನಬಹುದು.

ಸೋದರಸ್ನೇಹ

ಲಕ್ಷ್ಮಣನು ಈ ನಡೆವಳಿಕೆಯನ್ನು ಒಪ್ಪುವುದಿಲ್ಲ. ಅಣ್ಣನಮೇಲಿನ ಪ್ರೀತಿಗೌರವಗಳಿಂದ ಹೀಗೆ ಹೇಳುತ್ತಾನೆ.— "ಅಣ್ಣ ರಾಮನೇ, ನೀನು ದೊರೆಗೆ ಹಿರಿಯ ಮಗನಾಗಿದ್ದೀಯೆ, ಕ್ಷತ್ರಿಯ ರಾಜನಿಗೆ ಇರಬೇಕಾದ ಗುಣಗಳೆಲ್ಲವೂ ನಿನ್ನಲ್ಲಿವೆ. ನೀನು ದೊರೆಯಾಗಬೇಕಾದುದು ನ್ಯಾಯವಾಗಿದೆ. ದೊರೆಯೂ ತಂದೆಯೂ ಮೊದಲು ಹಾಗೆಯೇ ಹೇಳಿದ್ದನು. ಪುರೋಹಿತರೂ, ಮಂತ್ರಿಗಳೂ ಸಂತೋಷದಿಂದ ಒಪ್ಪಿದ್ದರು. ಪ್ರಜೆಗಳ ಅಭಿಪ್ರಾಯದಿಂದ ನೀನೇ ದೊರೆಯಾಗಬೇಕೆಂದು ಉತ್ಸಾಹಪೂರ್ವಕ ಪ್ರಾರ್ಥನೆಯೂ ತಿಳಿಯಿತು. ಕಡೆಯ ಕ್ಷಣದಲ್ಲಿ ದೊರೆಯ ಅರುಳು ಮರುಳುನಿಂದ, ಕಿರಿಯ ಹೆಂಡತಿಯ ಒತ್ತಾಯಕ್ಕೆ ಪರವಶನಾಗಿ, ಧಾರ್ಮಿಕವಾದ ನಿಶ್ಚಯವನ್ನು ಬದಲಾಯಿಸಬೇಕಾಗಿ ಬಂದರೆ ಅದಕ್ಕೆ ಮಣಿಯುವುದು ಕ್ಷತ್ರಿಯ ವೀರರಿಗೆ ಉಚಿತವಾಗಿರುವುದಿಲ್ಲ. ನಿನಗೆ ದಾಕ್ಷಿಣ್ಯದ ಬಾಧೆ ಇರುವುದಾದರೆ ನಾನು ಧನುರ್ಬಾಣಗಳನ್ನು ಧರಿಸಿ ನಿನ್ನ ಪಟ್ಟಾಭಿಷೇಕಕ್ಕೆ ಬರಬಹುದಾದ ಅಡ್ಡಿಗಳನ್ನು ನಿವಾರಿಸಬಲ್ಲವನಾಗಿದ್ದೇನೆ. ಹಾಗೆ ಮಾಡಲು ನೀನು ದಯೆಯಿಟ್ಟು ಅನುಮತಿಯನ್ನು ಕೊಡು. ಎಂದು ಬೇಡಿದನು. ಆಗ ರಾಮನು ಸಮಾಧಾನದ ಮನಸ್ಸಿನಿಂದಲೇ ಹೀಗೆ ಬುದ್ಧಿವಾದವನ್ನು ಹೇಳಿದನು.

" ಭರತೋ ವಾ ಭವೇತ್ ರಾಜಾ ವಯಂ ವಾ ನನು ತತ್ಸಮಂ ।
ಯದಿ ತೇಽಸ್ತಿ ಧನುಶ್ಶ್ಲಾಘಾ ಸುರಾಜಾ ಪರಿಪಾಲ್ಯತಾಂ ॥ "

ಕ್ಷಮೆಯೇ ಕವಚ, ಧರ್ಮವೇ ರಕ್ಷಕ.

ಎಂದರೆ " ಪ್ರಿಯ ತಮ್ಮ, ಲಕ್ಷ್ಮಣನೇ, ಭರತನಾದರೂ ರಾಜನಾಗಲಿ, ನಾನಾದರೂ ರಾಜನಾಗಲಿ, ಇವೆರಡೂ ಒಂದೇ ಸಮವಲ್ಲವೆ ? ಧನುರ್ಬಾಣಗಳಲ್ಲಿ ನಿನಗಿರುವ ಶ್ಲಾಘ್ಯವಾದ ಭರವಸೆ ಸಾಮರ್ಥ್ಯಗಳನ್ನು ನಮ್ಮೆಲ್ಲರ ತಂದೆಯಾದ ರಾಜನ ಅಪ್ಪಣೆಯಂತೆ ದೊರೆಯಾಗಿರುವ ಭರತನ ರಾಜ್ಯಭಾರವು ಯಶಸ್ವಿಯಾಗುವಂತೆ ಮಾಡುವುದರಲ್ಲಿ ಉಪಯೋಗಿಸಬೇಕಾದುದು ಅವನ ಪ್ರಜೆಯಾಗಿರುವ ನಿನ್ನ ಕರ್ತವ್ಯ ಧರ್ಮವಲ್ಲವೇ ? ಆದುದರಿಂದ ನೀನೂ ಭರತನಿಗೆ ಒತ್ತಾಸೆಯಾಗಿ ನಿಲ್ಲಬೇಕಾದುದು ನ್ಯಾಯವಾಗಿದೆ. ಹಾಗೆ ಮಾಡು " ಎಂದನು. ಏಕೆಂದರೆ ಭರತನೂ ನಾನೂ ಸಮಾನವಾಗಿರುವ ರಾಜಗುಣಗಳುಳ್ಳವರಾಗಿರುವುದರಿಂದ ಯಾರು ರಾಜರಾದರೂ ಒಂದೇ ಪ್ರಯೋಜನ. ಗುಣಹೀನರಿಗೆ ರಾಜ್ಯವು ಸೇರುವಹಾಗಿದ್ದರೆ ನೀನು ಹೇಳಿದಂತೆ ಪ್ರತಿಭಟಿಸುವುದು ನ್ಯಾಯವಾಗುತ್ತಿತ್ತು. ನಾವೆಲ್ಲರೂ ಗುಣಶಕ್ತಿಗಳಲ್ಲಿ ಸಮಾನರಾಗಿರುವಾಗ ಪ್ರಿಯ ಸಹೋದರನೂ ನನ್ನ ವಾತ್ಸಲ್ಯಕ್ಕೂ ಪಾತ್ರನೂ ಆಗಿರುವ ಭರತನಿಗೆ ವಿರೋಧವಾಗಿ ವರ್ತಿಸುವುದು ಅಧಾರ್ಮಿಕವಾದ ನಡೆವಳಿಕೆಯಾಗುತ್ತದೆ ಎಂದು ಹೇಳಿದನು. ಆದರೂ ಲಕ್ಷ್ಮಣನ ಮನಸ್ಸಿಗೆ ತೃಪ್ತಿ ಸಮಾಧಾನಗಳು ಬರಲಿಲ್ಲ. ಆಗ ರಾಮನು ಬೇಸರಗೊಳ್ಳದೆ ಪುನಃ ಹೀಗೆ ಅನುನಯಪೂರ್ವಕವಾಗಿ ಹೇಳಿದನು.

" ತಾತೇ ಧನುರ್ನ ಮಯಿ ಸತ್ಯಮವೇಕ್ಷಮಾಣೇ
ಮುಂಚಾನಿ ಮಾತರಿ ಶರಂ ಸ್ವಧನಂ ಹರಂತ್ಯಾಂ।
ದೋಷೇಷು ದೂರಮನುಜಂ ಭರತಂ ಹನಾನಿ
ಕಿಂ ರೋಷಣಾಯ ರುಚಿರಂ ತ್ರಿಷು ಪಾತಕೇಷು ॥"

ಧರ್ಮಸ್ಯಸೂಕ್ಷ್ಮಾಗತಿಃ

"ಅಪ್ಪ ಲಕ್ಷ್ಮಣ, ಈಗಿನ ಈ ಪರಿಸ್ಥಿತಿಗೆ ಕಾರಣವಾಗಿರುವವರು ಮೂರು ಜನರೆನ್ನಬಹುದು. ಇವರಲ್ಲಿ ಯಾರ ಮೇಲೆ ಕತ್ತಿಯನ್ನೆತ್ತಿ ಪ್ರತೀಕಾರವನ್ನು ಮಾಡಲಾದೀತು ? ಮೊದಲನೆಯದಾಗಿ ಯಾವ ನಿಯಮವೂ ಇಲ್ಲದೆ ವರಗಳನ್ನು ಕೊಟ್ಟ ದಶರಥನು. ಅವನು ನಮಗೆಲ್ಲರಿಗೂ ತಂದೆಯು. ಮೇಲಾಗಿ ನನ್ನಲ್ಲಿ ಸತ್ಯಪಾಲನ ರೂಪವಾದ ಧರ್ಮವನ್ನು ನಿರೀಕ್ಷಿಸುತ್ತಿದ್ದಾನೆ. ಇಂತಹ ತಂದೆಯಮೇಲೆ ಧನುರ್ಬಾಣಗಳಿಂದ ಪ್ರತೀಕಾರವನ್ನು ಮಾಡಬಹುದೆ ? ಎರಡನೆಯದಾಗಿ ಕೈಕಯೀದೇವೀ, ಇವಳು ನಮ್ಮ ತಾಯಿ, ಮೇಲಾಗಿ ದೇವಾಸುರರಿಗೆ ಸಂಭವಿಸಿದ್ದ ಯುದ್ಧದಲ್ಲಿ ದೇವತೆಗಳಿಗೆ ಸಹಾಯಾರ್ಥವಾಗಿ ಹೋಗಿದ್ದ ತನ್ನ ಪತಿಗೆ ಕ್ಷತ್ರಿಯ ರಮಣಿಯಂತೆ ಧೈರ್ಯಸಾಹಸಗಳಿಂದ ಸಹಾಯಮಾಡಿ ಸೋಲನ್ನು ತಪ್ಪಿಸಿ ಜಯವಾಗುವಂತೆ ಮಾಡಲು ಸಂತುಷ್ಟನಾದ ಪತಿಯಿಂದ ಸಂಪಾದಿಸಿದ್ದ ವರದಿಂದ ಸ್ವಯಾರ್ಜಿತ ಫಲವನ್ನು ಗುಣಶಾಲಿಯಾದ ಮಗನಿಗಾಗಿ ರಾಜ್ಯವನ್ನು ತೆಗೆದುಕೊಳ್ಳುತ್ತಿರುವ ತಾಯಿಯ ಮೇಲೆ ನಾನು ಬಾಣವನ್ನು ಬಿಟ್ಟು ಪ್ರತೀಕಾರವನ್ನು ಮಾಡಲೇ ? ಮೂರನೆಯದಾಗಿ ದೋಷಗಳ ಸಂಪರ್ಕವೇ ಇಲ್ಲದ ಭರತ. ಮೇಲೆಹೇಳಿದ ಇಬ್ಬರಲ್ಲಿ ಹೇಗೋ ಹಾಗೆ ಸ್ವಲ್ಪ ದೋಷವನ್ನೂ ಎಣಿಸಬಹುದು. ದೊರೆಯು ಮುಂದಾಲೋಚನೆ ವಿವೇಕಗಳಿಲ್ಲದೆ, ಯಾವಾಗಬೇಕಾದರೂ ಎಷ್ಟು ಬೇಕಾದರೂ ಕೊಡಲು ಒಪ್ಪಿ ವರಗಳನ್ನು, ಬ್ಲ್ಯಾಂಕ್ ಚೆಕ್ಕನ್ನು ರುಜುಮಾಡಿ ಕೊಡುವಂತೆ, ಕೊಟ್ಟದ್ದು ಸ್ವಲ್ಪ ಅನುಚಿತವಾಯಿತೆನ್ನಬಹುದು. ಆದರೂ ರಾಣಿಯು ಈ ಇಕ್ಕಟ್ಟಿನ ಸಂದರ್ಭ ಒದಗುವ ಹಾಗೆ ರಾಮನನ್ನು ಕಾಡಿಗೆ ಕಳುಹಿಸುವ ವರವನ್ನು ನಿರ್ದಯಳಾಗಿ ಬೇಡಿದುದು ಅನುಚಿತವೆನ್ನಬಹುದು. ಆದರೆ ಯಾವ ದೋಷವೂ ಇಲ್ಲದೆ ಇದೊಂದನ್ನೂ ಕನಸು ಮನಸಿನಲ್ಲೂ ಅಪೇಕ್ಷಿಸದೆ ಇರುವ ಗುಣಶಾಲಿಯಾಗಿರುವ ನನಗೂ ವಾತ್ಸಲ್ಯಕ್ಕೆ ಪಾತ್ರನಾದ ತಮ್ಮನಮೇಲೆ ಪ್ರತೀಕಾರವನ್ನೆಸಗಲು ಅವನನ್ನು

ಸಂಹರಿಸಬಹುದೇ? ಈ ಮೂರೂ ಪಾಪಗಳೇ ಆಗಿವೆ. ಇವಲ್ಲಿ ಯಾವುದನ್ನು ಉದ್ದೇಶಿಸಿ ನಾವು ಕೋಪಗೊಂಡು ಪ್ರತೀಕಾರವನ್ನು ಮಾಡಲು ಚೆನ್ನಾಗಿರುತ್ತದೆ? ಹೇಳು." ಎಂದು ಅನುನಯದಿಂದ ಶಾಂತ ಮನಸ್ಕನಾಗಿ ರಾಮನು ಹೇಳಲು ಲಕ್ಷ್ಮಣನು ತಾನು ಆತುರ ವಾಗಿ ಹೇಳಿದ ಸಲಹೆಯಲ್ಲಿನ ದೋಷಗಳನ್ನು ಮನಗಂಡು ನಾಚಿದನು. ಅಣ್ಣನಲ್ಲಿ ಧಾರ್ಮಿಕ ಸಂಸ್ಕೃತಿಯ ಪರಿಣಾಮವಾಗಿ ಉಂಟಾಗಿದ್ದ ಶೀಲದ ಮಹಿಮೆಯನ್ನು ಮನಸ್ಸಿನಲ್ಲಿ ಕೊಂಡಾಡುತ್ತಾ ಮಣಿದನು. ಶ್ರೀರಾಮನ ಈ ಒಳ್ಳೆಯ ಆಲೋಚನೆ, ಮೃದುವಾದ ಮಾತು, ಉದಾತ್ತ ವಾದ ನಡೆವಳಿಕೆ, ಈ ಭಾವ, ನುಡಿ, ನಡೆಗಳ ತ್ರಿವೇಣೀ ಸಂಗಮದಲ್ಲಿ ಮಿಂದು ಶುದ್ಧನೂ ತೃಪ್ತನೂ ಆದನು. "ಧರ್ಮಸ್ಯ ಸೂಕ್ಷ್ಮಾ ಗತಿಃ" ಎಂಬ ಸೂಕ್ತಿಗೆ ಇದೂ ಒಂದು ಉದಾಹರಣೆಯಂತಿದೆ. ಆಮೇಲೆ ರಾಮನು ವನವಾಸದಲ್ಲಿರುವ ಕಷ್ಟ ಅಪಾಯಗಳನ್ನು ವರ್ಣಿಸಿ ಸೀತೆ ಯನ್ನು ಅಯೋಧ್ಯೆಯಲ್ಲಿಯೇ ಇರಹೇಳಲು ಸೀತೆಯು

> "ಕಿಂ ತ್ವಾಮನ್ಯತ ವೈದೇಹಃ ಪಿತಾ ಮೇ ಮಿಥಿಲಾಧಿಪಃ |
> ರಾಮ ಜಾಮಾತರಂ ಪ್ರಾಪ್ಯ ಸ್ತ್ರಿಯಂ ಪುರುಷವಿಗ್ರಹಂ ||"
> "ಸ್ವಯಂ ತು ಭಾರ್ಯಾಂ ಕೌಮಾರೀಂ ಚಿರಮಧ್ಯುಷಿತಾಂ ಸತೀಂ |
> ಶೈಲೂಷ ಇವ ಮಾಂ ರಾಮ ಪರೇಭ್ಯೋ ದಾತು ಮಿಚ್ಛಸಿ ||"

ಎಂದು ಆಕ್ಷೇಪಿಸಿ ಹೇಳಿದಾಗಲೂ ರಾಮನು ಕೋಪಗೊಳ್ಳದೆ, "ನಘುವರಂತೆ ನನ್ನನ್ನು ಪರರ ಕೈಗೆ ಕೊಟ್ಟುಹೋಗಬೇಕೆಂದಿ ದೀಯಾ?" ಎಂಬ ಮೂದಲಿಸುವ ಮಾತನ್ನೂ ಕ್ಷಮಿಸಿ, ಅವಳು ಅಂತಹ ಮಾತನ್ನಾಡಿದುದಕ್ಕೆ ಪತಿಪ್ರೇಮವೂ ಧರ್ಮಶ್ರದ್ಧೆಯೂ, ವಿಯೋಗಾ ಸಹನೆಯೂ ಕಾರಣವೆಂಬುದನ್ನು ಮನಸ್ಸಿನಲ್ಲಿ ಭಾವಿ ಸುತ್ತಾ ಅವಳನ್ನು ತನ್ನೊಡನೆ ಕರೆದುಕೊಂಡುಹೋಗಲು ಒಪ್ಪಿದನು.

ಆಮೇಲೆ ಲಕ್ಷ್ಮಣನೂ ತಾಯಿಯಾದ ಸುಮಿತ್ರಾದೇವಿಯ ಸಮೀಪಕ್ಕೆ ಹೋಗಿ ಆಶೀರ್ವಾದವನ್ನು ಮಾಡೆಂದು ಪ್ರಾರ್ಥಿಸಿ ನಮ ಸ್ಕರಿಸಲು, ತಾಯಿಯು

" ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ|
ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾಸುಖಂ॥"

ಎಂದು ಹರಸುತ್ತಾಳೆ.

ಸುಖ ದುಃಖಪ್ರಾಪ್ತಿಗಳಲ್ಲಿ ಏರುಪೇರಿಲ್ಲದಿರುವಿಕೆ.

ಕಡೆಗೆ ರಾಮನು ಸೀತಾ ಲಕ್ಷ್ಮಣರೊಡನೆ ವನವಾಸಕ್ಕೆ ತೆರಳಿದನು. ಪಂಚವಟಿಯಲ್ಲಿ ಆಶ್ರಮವನ್ನು ಮಾಡಿಕೊಂಡು ಸರಳವೂ ಋಜುವೂ ಸಾತ್ವಿಕವೂ ಧಾರ್ಮಿಕವೂ ಆಗಿರುವ ರೀತಿಯಲ್ಲಿ ಕಾಲಕ್ಷೇಪಮಾಡುತ್ತಿದ್ದಾರೆ.

" ಪಂಚವಟೀಕೆ ಛಾಯಾ ಮೇ ಜೋ ಖೇಲ್ ಖಗೋಂಸೆ ಕರತೀ ಹೈ
ಮಮಃತಾಮೂರ್ತಿ ಸಮಾನಮೃಗೋಂಕೆ ಮಧ್ಯಸಮೋದ ವಿಚರತೀ ಹೈ|
ಮುಸ್ಕುರಾಕರ್ ರಹೆ ರಾಘುವದೇಖ್‌ಕರ್ ಜಿಸ್‌ಕೀ ಏ ಅದ್ಭುತಲೀಲಾ
ವಹೀ ವಿದೇಹನಂದಿನೀ ಹಮ್‌ಪರ್ ಸದಾ ರಹೇ ಕರುಣಾ ಶೀಲಾ॥"

ಗುಂಪಾಗಿ ಸೊಂಪಾಗಿ ಬೆಳೆದಿರುವ ಐದು ಆಲದ ಮರಗಳ ನೆರಳಿನಲ್ಲಿ ಹಕ್ಕಿಪಕ್ಷಿಗಳೊಡನೆ ವಿನೋದದಿಂದ ಆಟವಾಡುತ್ತಿರುವ, ಪ್ರೇಮವೇ ಶರೀರವನ್ನು ಧರಿಸಿದೆಯೋ ಎನ್ನುವಂತಿರುವ ಹುಲ್ಲೆ ಕರುಗಳ ಮಧ್ಯದಲ್ಲಿ ಸಂತೋಷವಾಗಿ ಓಡಾಡುತ್ತಿರುವ ಸೀತಾದೇವಿಯ ಈ ಅದ್ಭುತವಾದ ಕ್ರೀಡಾ ರೀತಿಯನ್ನು ನೋಡಿ ಶ್ರೀರಾಮನು ಮೆಚ್ಚಿಕೊಂಡು ಮುಗುಳು ನಗೆಯಿಂದ ಕೂಡಿದಾನೆ. ಇಂತಹ ವಿದೇಹ ರಾಜನ ಮಗಳಾದ ಜಾನಕೀ ದೇವಿಯು ನನ್ನ ವಿಷಯದಲ್ಲಿ ಯಾವಾಗಲೂ ದಯೆಯುಳ್ಳವಳಾಗಿರಲಿ ಎಂದು ಕವಿಯು ಪ್ರಾರ್ಥಿಸುತ್ತಾನೆ.

" ಗತಾರ್ಥಾನ್ನಾನು ಶೋಚಂತೇ ನಾರ್ಥಯೇಂತ್ಯಪ್ಯನಾಗತಾನ್ |
ವರ್ತಮಾನೇನ ವರ್ತಂತೇ ಧಾರ್ಮಿಕಾಃ ಸಾತ್ವಿಕಾಃ ಜನಾಃ॥ "

ಧರ್ಮ ಪ್ರಧಾನವಾದ ಶೀಲವುಳ್ಳ, ಸತ್ವಗುಣವು ಮೇಲಾಗಿರುವ ಸ್ವಭಾವವುಳ್ಳ ಜನರು ಕಳೆದುಹೋದ ವಿಷಯಗಳನ್ನು ಕುರಿತು ಆಶಾಭಂಗದಿಂದ ಚಿಂತಿಸುವುದಿಲ್ಲ. ದೊರೆಯದೆ ಇರುವ ವಿಷಯಗಳನ್ನು ಆಶಿಸುವುದೂ ಇಲ್ಲ. ಇರುವಷ್ಟರಲ್ಲಿ ತೃಪ್ತರಾಗಿರುತ್ತಾರೆ.

ಅನಿರೀಕ್ಷಿತವಾಗಿ ಬಂದಿದ್ದ ಶಾಪದ ಫಲವಾಗಿ, ಪುತ್ರವಿಯೋಗ ದುಃಖದಿಂದ ದಶರಥನು ಮರಣವನ್ನು ಪಡೆದನು. ಭರತನನ್ನು ಸೋದರಮಾವನ ಮನೆಯಿಂದ ಕರೆಸಲಾಯಿತು. ತಾಯಿಯು ಮಗನಿಗಾಗಿ ಸಂಪಾದಿಸಿದ್ದ ರಾಜ್ಯ ಐಶ್ವರ್ಯ ಕಂಟಕನಿವೃತ್ತಿಗಳನ್ನು ಮಗನಿಗೆ ಅಭಿನಂದನೆ ಕೃತಜ್ಞತೆಗಳನ್ನು ನಿರೀಕ್ಷಿಸುತ್ತಾ ನಿವೇದಿಸಿದಳು. ಭರತನೂ ರಾಮನಿಗೆ ತಕ್ಕ ತಮ್ಮನು. ತಾತ್ಕಾಲಿಕವಾಗಿ ದುಃಖ ಭರದಿಂದ ತಾಯಿಯ ವರ್ತನೆಯನ್ನು ಖಂಡಿಸಿ ಬಿರುನುಡಿಗಳನ್ನಾಡಿದನು. ತಾಯಿಯು ಮಗನ ಹಿತಕ್ಕಾಗಿ ಮಾಡಿದ್ದ ಕೆಲಸದಲ್ಲಿನ ದೋಷಗಳನ್ನು ಗಮನಿಸಿರಲಿಲ್ಲ. ನಾನು ಮಾಡಬಾರದಂತಹ ಕಾರ್ಯವನ್ನೇನನ್ನೂ ಮಾಡಿಲ್ಲವೆಂದು ನಂಬಿದ್ದಳು. ನಾನು ಮಾಡಿದ ಅಕಾರ್ಯವೇನು ? ನೀನೇಕೆ ಆಕ್ಷೇಪಿಸುತ್ತಿರುವೆ ? ಎಂದು ಕೇಳಲು ರಾಮನಿಗೆ ತಕ್ಕ ತಮ್ಮನಾದ ಭರತನು ಹೀಗೆ ಹೇಳಿದನು. ಏನೆಂದರೆ ಈ ನಿನ್ನ ಕಾರ್ಯದಿಂದ ಯಾರಿಗೂ ಹಿತವಾಗಲಿಲ್ಲ. ನಿನಗೆ, ನನಗೆ, ರಾಜಕುಟುಂಬಕ್ಕೆ, ಪ್ರಜಾ ಸಾಮಾನ್ಯಕ್ಕೆ, ಎಲ್ಲಕ್ಕೂ ಮೇಲಾಗಿ ಧರ್ಮಕ್ಕೂ ದೊಡ್ಡ ಆಘಾತವಾಯಿತು. ಹೇಗೆಂದರೆ,

"ವಯಮಯಶಸಾ ಚೀರೇಣಾರ್ಯಃ ಸ್ನುಷಾಧ್ವ ಪರಿಶ್ರಮೈಃ
ದಯಿತತನಯಾಃ ಶೋಕೇನಾಂಬಾಃ ನೃಪೋ ಗೃಹಮೃತ್ಯುನಾ ।
ಸತತರುದಿತೈಃ ಕೃತ್ಸ್ನಾಯೋಧ್ಯಾ ಮೃಗೈಸ್ಸಹಲಕ್ಷ್ಮಣಃ
ಧಿಗಿತಿ ವಚಸಾಚೋಗ್ರೇಣಾತ್ಮಾ ತ್ವಯಾ ನನುಯೋಜಿತಾಃ॥"

**ರಾಮಾಯಣದಲ್ಲಿ ಧಾರ್ಮಿಕ ಸಂಸ್ಕೃತಿ**

ಎಂದರೆ, ನಿನ್ನ ಅಧಾರ್ಮಿಕವಾದ ಆಶೆಯಿಂದ ಬುದ್ಧಿಗೆಟ್ಟು ಮುಂದಾಲೋಚನೆ ತಪ್ಪಿ ಆತುರಪಟ್ಟು ಮಾಡಿದ ಈ ಕೆಲಸದಿಂದ ಇಷ್ಟು ದುಷ್ಪರಿಣಾಮಗಳಾಗಿವೆ. "ನಮಗೆ ಕೆಟ್ಟಹೆಸರು ನಿಷ್ಕಾರಣವಾಗಿ ಗಂಟುಬಿತ್ತು. ಪೂಜ್ಯ ಅಣ್ಣ ರಾಮನು ನಾರುಮಡಿಯನ್ನುಡಬೇಕಾಯಿತು. ಮನೆಗೆ ಸೊಸೆಯಾಗಿ ಬಂದ ಜಾನಕೀ ದೇವಿಯೂ ಕಾಡುದಾರಿಯಲ್ಲಿ ನಡೆದು ಶ್ರಮಪಡಬೇಕಾಯಿತು. ಮಕ್ಕಳಲ್ಲಿ ತುಂಬ ಪ್ರೀತಿಯುಳ್ಳ

ತಾಯಿಯರು ಪುತ್ರವಿಯೋಗದಿಂದಲೂ ಪತಿಯ ಮರಣದಿಂದಲೂ ದುಃಖಿಸುವಂತಾಯಿತು. ದೊರೆಗೆ ಮರಣವು ಬೇಗ ಸಂಭವಿಸಿತು. ಇಡೀ ಅಯೋಧ್ಯಾ ನಗರವೆಲ್ಲವೂ ಸರ್ವದಾ ಶೋಕಿಸುವಂತಾಯಿತು. ಅಲ್ಲದೆ ಕಡೆಗೆ ನಿನಗೂ ಶಾಶ್ವತವಾದ ಲೋಕನಿಂದೆಯೂ ಭಯಂಕರ ವಾದ ಕೆಟ್ಟಹೆಸರೂ ಗಂಟುಬಿತ್ತು!" ಎಂದನು. ಕೈಕಯಿಯು ಕಣ್ಣು ತೆರೆಯಿತು. ತನ್ನ ತಪ್ಪನ್ನು ತಿಳಿದಳು, ಆದ ದುಷ್ಫಲ ಕ್ಕಾಗಿ ಪಶ್ಚಾತ್ತಾಪಗೊಂಡಳು. ದೊರೆಗೆ ಉತ್ತರಕ್ರಿಯೆಗಳನ್ನು ನೆರವೇರಿಸಿದಮೇಲೆ ಧಾರ್ಮಿಕನಾದ ಭರತನು ಹೀಗೆ ಯೋಚಿಸಿದನು. ತನ್ನ ತಾಯಿಯು ವರಗಳನ್ನು ಪಡೆದುದಾಯಿತು. ತನ್ನ ಅಣ್ಣನು ಪಿತೃವಾಕ್ಯ ಪರಿಪಾಲನೆಯನ್ನು ನೆರವೇರಿಸಿದುದೂ ಆಯಿತು. ಈಗ ತನ್ನದಾಗಿರುವ ರಾಜ್ಯವನ್ನು ತಾನಾಗಿಯೇ ಶ್ರೀರಾಮನಿಗೆ ಸಮರ್ಪಿ ಸಿದರೆ ಎಲ್ಲವನ್ನೂ ತಿದ್ದಿ ಸರಿಪಡಿಸಿದ ಹಾಗಾಗುತ್ತದೆ. ತನ್ನ ರಾಜ್ಯ ವನ್ನು ಕೊಡಲು ಹಕ್ಕು ತನಗಿದೆ. ರಾಮನು ಸ್ವೀಕರಿಸಿದರೆ ಎಲ್ಲವೂ ಸಂತೋಷದಲ್ಲಿ ಪರ್ಯವಸಾನವಾಗುತ್ತದೆ. ತಾನೂ ಧರ್ಮವನ್ನು ಪುನರುಜ್ಜೀವನಗೊಳಿಸಿದಂತೆಯೂ ಆಗುತ್ತದೆ. ಅಜ್ಞಾನದಿಂದ ಮಾಡಿದ ಕಾರ್ಯಕ್ಕೆ ಪ್ರಾಯಶ್ಚಿತ್ತವೂ ಆಗುತ್ತದೆ ಎಂದು ನಿರ್ಧರಿಸಿ

"ನಾಯೋಧ್ಯಾ ತಂ ವಿನಾಽಯೋಧ್ಯಾ ಸಾಽಯೋಧ್ಯಾ ಯತ್ರರಾಘವಃ |"

ಎಂಬ ಭಾವನೆಯು ಬಲವಾಗುತ್ತಿರಲು ಭರತನು ಎಲ್ಲರೊಡನೆ ಹೊರಟು ಶ್ರೀರಾಮನನ್ನು ಪಂಚವಟಿಯಲ್ಲಿ ಕಂಡು ಪ್ರಾರ್ಥಿಸಿದನು. ತಂದೆಯ ಮರಣವನ್ನು ಕೇಳಿ ರಾಮನು ದುಃಖವನ್ನು ತಡೆದುಕೊಂಡು ಉತ್ತರಕ್ರಿಯೆಗಳನ್ನು ನೆರವೇರಿಸಿದ ಮೇಲೆ ಭರತನನ್ನು ಕುರಿತು ಪಿತೃವಾಕ್ಯ ಪರಿಪಾಲನೆಯು ನಮಗೆಲ್ಲರಿಗೂ ಕರ್ತವ್ಯ ಧರ್ಮವಾ ಗಿದೆ. ಹದಿನಾಲ್ಕು ವರ್ಷಗಳು ಕಳೆದಮೇಲೆ ನಿನ್ನ ಕೋರಿಕೆಯನ್ನು ಸಲ್ಲಿಸುವೆನು. ಎಂದು ಸಮಾಧಾನವನ್ನು ಹೇಳಿ, ಅವನ ಕೋರಿಕೆ ಯಂತೆ ತನ್ನ ಪ್ರತಿನಿಧಿಯಾಗಿ ಪಾದುಕೆಗಳನ್ನೂ ಕೊಟ್ಟು ಅವರೆಲ್ಲ

ರನ್ನೂ ಬೀಳ್ಕೊಟ್ಟನು. ಭರತನೂ ಅಣ್ಣನಂತೆಯೇ ತಾಪಸ ವೇಷದಲ್ಲಿ ವ್ರತ ನಿಯಮವನ್ನು ಅನುಸರಿಸುತ್ತಾ ಸಿಂಹಾಸನದಲ್ಲಿ ಆ ರಾಮನ ಪಾದುಕೆಗಳನ್ನಿಟ್ಟು ರಾಜ್ಯಕಾರ್ಯವನ್ನು ರಾಮನ ಪರವಾಗಿ ನೆರವೇರಿಸುತ್ತಿದ್ದನು.

ವನವಾಸದಲ್ಲೂ ರಾಮನು ಧಾರ್ಮಿಕ ರಕ್ಷಕ.

ಶ್ರೀರಾಮನು ದುಷ್ಟನಿಗ್ರಹದಿಂದ ಅರಣ್ಯದಲ್ಲಿರುವ ಋಷಿಗಳ ಧರ್ಮಾಚರಣೆಗೆ ಅಡ್ಡಿ ಆತಂಕಗಳನ್ನು ನಿರ್ಮೂಲಮಾಡುವುದು ಅಲ್ಲೂ ತನಗೆ ಧರ್ಮವೆಂದು ತಿಳಿದು, ವಿರಾಧನೆಂಬ ರಾಕ್ಷಸನನ್ನು ಸಂಹರಿಸಿದನು. ಶೂರ್ಪಣಖಿಯು ದುಷ್ಟ ಕಾಮಕ್ಕಾಗಿ ಅವಳನ್ನು ವಿರೂಪಗೊಳಿಸಿ ಕಳುಹಿಸಿದ ಮೇಲೆ ಯುದ್ಧಕ್ಕೆ ಬಂದ ಅವಳ ಸೋದರರಾದ ಖರದೂಷಣರನ್ನು ಸಂಹರಿಸಿದನು. ಬಳಿಕ ಶೂರ್ಪಣಖಿಯಿಂದ ಪ್ರೇರಿತನಾದ ರಾವಣನು ಮಾರೀಚನ ಸಹಾಯದಿಂದ ರಾಮಲಕ್ಷ್ಮಣರು ಆಶ್ರಮವನ್ನು ಬಿಟ್ಟುಹೋದ ಸಮಯದಲ್ಲಿ ಸೀತಾದೇವಿಯನ್ನು ಅಪಹರಿಸಿಕೊಂಡು ಹೋಗುತ್ತಾ ದಾರಿಯಲ್ಲಿ ಅಡ್ಡಗಿಸಿದ ಜಟಾಯುವನ್ನು ಸಂಹರಿಸಿ ಲಂಕೆಗೆ ಹೋಗಿ ಅಶೋಕವನದಲ್ಲಿ ರಾಕ್ಷಸಿಯರ ಕಾವಲಿನಲ್ಲಿ ಸೀತೆಯನ್ನು ಇಟ್ಟು ತನ್ನನ್ನು ಪತಿಯಾಗಿ ಸ್ವೀಕರಿಸೆಂದು ನಯಭಯಗಳಿಂದ ಪೀಡಿಸುತ್ತಿದ್ದನು. ರಾಮಲಕ್ಷ್ಮಣರು ಆಶ್ರಮಕ್ಕೆ ಹಿಂತಿರುಗಿ ಬಂದು ಸೀತೆಯು ಇಲ್ಲದಿದ್ದುದನ್ನು ನೋಡಿ ಅವಳನ್ನು ಹುಡುಕುತ್ತಾ ದಾರಿಯಲ್ಲಿ ಜಟಾಯುವನ್ನು ಕಂಡು ರಾವಣನು ಸೀತೆಯನ್ನು ಕದ್ದುಕೊಂಡು ಹೋದುದನ್ನು ಕೇಳಿ ದುಃಖವನ್ನು ತಡೆದುಕೊಂಡು, ಆ ಜಟಾಯುವಿಗೆ ಸದ್ಗತಿಯಾಗುವಂತೆ ಉತ್ತರಕ್ರಿಯೆಗಳನ್ನು ಮಾಡಿ ಮುಂದುವರೆದನು. ದಾರಿಯಲ್ಲಿ ಹನುಮಂತನನ್ನು ಸಂಧಿಸಿ ಸುಗ್ರೀವನ ವೃತ್ತಾಂತವನ್ನು ಕೇಳಿದನು. ಅಲ್ಲದೆ ಹನುಮಂತನ ಮಾತನ್ನು ಚೆನ್ನಾಗಿ ಸಾವಧಾನವಾಗಿ ಬಹು ಹೊತ್ತು ಕೇಳಿ ರಾಮನು ಅವನ ಗುಣಗಳನ್ನು ಹೀಗೆ ಅಭಿನಂದಿಸಿದನು.

" ಬಹು ವ್ಯಾಹರತಾsನೇನ ನ ಕಿಂ ಚಿದಪಶಬ್ದಿತಂ ।
ಗುಣೈಸ್ಸದಾ ಸಂಪನ್ನೋsಯಂ ಪ್ರಜ್ಞಾವಿಕ್ರಮ ಭಕ್ತಿಭಿಃ॥ "

ಎಂದರೆ ಈ ಹನುಮಂತನು ಇಷ್ಟುಹೊತ್ತು ತುಂಬ ಮಾತನಾಡಿದ್ದಾನೆ. ಆದರೂ ಒಂದಾದರೂ ಅನುಚಿತವಾದ ಮಾತನಾಡಲಿಲ್ಲ. ದೋಷವುಳ್ಳ ಪದವನ್ನು ಒಂದನ್ನೂ ಉಪಯೋಗಿಸಲಿಲ್ಲ. ಅಲ್ಲದೆ, ದೂತನಲ್ಲಿರಬೇಕಾದ ಮಾದರಿಯ ಒಳ್ಳೆಯ ಗುಣಗಳು ಎಂದರೆ ಪ್ರಜ್ಞಾವಿಕ್ರಮ ಭಕ್ತಿ ಎಂಬ ಸದ್ಗುಣಗಳ ಸಂಪತ್ತಿನಿಂದಲೂ ಕೂಡಿ ಶೋಭಿಸುತ್ತಿದ್ದಾನೆಂದು ಅಭಿನಂದಿಸಿದನು. ಅನಂತರದಲ್ಲಿ ತನ್ನ ದುಃಖವನ್ನು ಮುಂದುಮಾಡದೆ ಆ ಸುಗ್ರೀವನ ದುಃಖವನ್ನು ಪರಿಹರಿಸಲು ಒಪ್ಪಿದನು. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾಗ ಸೀತೆಯು ತನ್ನನ್ನು ಹುಡುಕುತ್ತಾ ಬರುವ ರಾಮಲಕ್ಷ್ಮಣರಿಗೆ ತಲಪಿಸಬೇಕೆಂದು ತನ್ನ ಆಭರಣಗಳನ್ನು ಕೆಳಗೆ ಯಾರಾದರೂ ಇರುವುದನ್ನು ನೋಡಿದಾಗ ಎಸೆಯುತ್ತಿದ್ದಳು. ಹಾಗೆಯೇ ಸುಗ್ರೀವಾದಿಗಳು ಋಶ್ಯಮೂಕಪರ್ವತದಲ್ಲಿರುವುದನ್ನು ನೋಡಿ ಅಲ್ಲಿಗೆ ಬೀಳುವಂತೆ ಎಸೆದಿದ್ದ ಆಭರಣಗಳನ್ನು ಸುಗ್ರೀವಾದಿಗಳು ಕಂಡು ತೆಗೆದಿಟ್ಟಿದ್ದರು. ಅದನ್ನು ಅವರು ರಾಮನಿಗೆ ತೋರಿಸಲು ಆಗ ರಾಮನು ಆ ಆಭರಣಗಳನ್ನು ನೋಡಿ ಅವು ಸೀತೆಯವೆಂಬುದನ್ನು ಗುರುತಿಸಬಲ್ಲೆಯಾ ? ಎಂದು ಲಕ್ಷ್ಮಣನನ್ನು ಕೇಳಲು, ಅವನು

" ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ ।
ನೂಪುರೇ ತ್ವಭಿಜಾನಾಮಿ ನಿತ್ಯಂ ಪಾದಾಭಿವಂದನಾತ್॥ "

ಲಕ್ಷ್ಮಣನ ಇಂದ್ರಿಯ ನಿಗ್ರಹ ಬ್ರಹ್ಮಚರ್ಯ ಸ್ವರೂಪ.

ಎಂದರೆ " ನಾನು ಆ ಸೀತಾದೇವಿಯು ಧರಿಸುತ್ತಿದ್ದ ಬಾಹುಪುರಿ, ಕರ್ಣಾಭರಣಗಳನ್ನು ಗುರುತಿಸಲಾರೆನು. ನಾನು ಕತ್ತೆತ್ತಿ ಅವಳನ್ನು ನೋಡದೆ ಇದ್ದುದೇ ಅದಕ್ಕೆ ಕಾರಣವಾಗಿದೆ. ಆದರೆ ಆ ದೇವಿಯು ಧರಿಸುತ್ತಿದ್ದ ಕಾಲ್ಕಡಗಗಳನ್ನು ಮಾತ್ರ ಗುರುತಿಸಬಲ್ಲೆನು. ಏಕೆಂದರೆ ಪ್ರತಿದಿನವೂ ನಾನು ಅವಳಿಗೆ

ನಮಸ್ಕಾರಮಾಡುವಾಗ ಅವನ್ನು ಮಾತ್ರ ನೋಡುತ್ತಿದ್ದೆನು. ಎಂದು ಉತ್ತರಿಸಿದನು. ರಾಮನು ಒಪ್ಪಿದಂತೆ ವಾಲಿಯನ್ನು ಸಂಹರಿಸಿ, ಕಿಷ್ಕಿಂಧಾ ರಾಜ್ಯದಲ್ಲಿ ಸುಗ್ರೀವನಿಗೆ ಪಟ್ಟಾಭಿಷೇಕವನ್ನು ಮಾಡಿಸಿದನು. ಆಗ ವರ್ಷಾಕಾಲವಾಗಿದ್ದುದರಿಂದ ಮಳೆಗಾಲವು ಕಳೆದು ಶರತ್ಕಾಲವು ಬರುವವರೆಗೂ ಅಲ್ಲಿದ್ದನು.

"ಯಾಂತಿ ನ್ಯಾಯ್ಯಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಂ।
ಅಪಂಥಾನಂ ತು ಗಚ್ಛಂತಂ ಸೋದರೋಽಪಿ ವಿಮುಂಚತಿ॥"

ಎಂದರೆ ನ್ಯಾಯ ಧರ್ಮಗಳಿಂದ ಕೂಡಿದ ರೀತಿಯಲ್ಲಿ ಯಾರು ನಡೆಯುತ್ತಿರುತ್ತಾರೋ ಅಂಥ ಧಾರ್ಮಿಕರಿಗೆ ತಿರ್ಯಕ್ ಪ್ರಾಣಿಗಳೂ ಸಹಾಯಕವಾಗಿ ನಿಲ್ಲುತ್ತವೆ. ಅದರಂತೆ ಸತ್ಯ, ಧರ್ಮ ನಿಷ್ಠನಾದ ರಾಮನಿಗೆ ತಿರ್ಯಕ್ ಪ್ರಾಣಿಗಳಾದ ಕಪಿಗಳೂ ಸಹಾಯವನ್ನು ಮಾಡಲು ಒದಗಿದರು. ಮತ್ತು ಅನುಚಿತವಾದ ಅಧರ್ಮದ ಪಾಪದ ಮಾರ್ಗದಲ್ಲಿರುವವರಿಗೆ ಸಹೋದರನ ಸಹಾಯವೂ ತಪ್ಪಿಹೋಗುತ್ತದೆ. ಅದರಂತೆ ವಿಭೀಷಣನು ರಾವಣನು ಅಣ್ಣನಾಗಿದ್ದರೂ ಅಧಾರ್ಮಿಕನೂ ಪಾಪಿಯೂ ಆಗಿದ್ದುದರಿಂದ ಅವನನ್ನು ತ್ಯಜಿಸಿದನು. ಕಡೆಗೆ ಧರ್ಮಕ್ಕೆ ಜಯವೂ ಅಧರ್ಮಕ್ಕೆ ಅಪಜಯವೂ ಉಂಟಾಯಿತು.

ಅನಂತರ ಸೀತೆಯನ್ನು ಹುಡುಕಲು ಕಪಿ ವೀರರು ಎಲ್ಲ ದಿಕ್ಕುಗಳಿಗೂ ಹೋದರು. ದಕ್ಷಿಣದಿಕ್ಕಿಗೆ ಹೊರಟ ಹನುಮಂತನಿಗೆ ರಾಮನು ತನ್ನ ಮುದ್ರೆಯುಂಗುರವನ್ನು ಕೊಟ್ಟು ಕಾಕಾಸುರನ ವೃತ್ತಾಂತವನ್ನೂ ಹೇಳಿ ಸೀತೆಯನ್ನು ಕಂಡಾಗ ಅವಳು ಹನುಮಂತನನ್ನು ರಾಮನ ಕಡೆಯವನೆಂದು ಗುರುತಿಸಲು ಅನುಕೂಲವಾಗಲೆಂದು ಹೇಳಿ ಕಳುಹಿಸಿದನು. ಹನುಮಂತನೆ ಮುಂತಾದವರು ದಕ್ಷಿಣದ ಕಡೆಯಲ್ಲಿ ಮುಂದುವರೆಯುತ್ತಾ ದಾರಿಯಲ್ಲಿ ಸಂಪಾತಿ ಎಂಬ ಜಟಾಯುವಿನ ಸೋದರನಾದ ಪಕ್ಷಿರಾಜನನ್ನು ಕಂಡು ಅವನಿಗೆ ಜಟಾಯುವಿನ ವೃತ್ತಾಂತವನ್ನು ತಿಳಿಸಿ, ಅವನಿಂದ ಸೀತೆಯು ಲಂಕೆಯಲ್ಲಿರುವ ಅಶೋಕವನದಲ್ಲಿ ರಾವಣನು ಏರ್ಪಡಿಸಿದ್ದ ರಾಕ್ಷಸಿಯರ ಕಾವಲಿನಲ್ಲಿ

ದ್ದಾಳೆಂದು ತಿಳಿದರು. ಅಲ್ಲಿ ಅವಳು ತಾಪಸಿಯಂತೆ ಕಂದಮೂಲ ಫಲಪುಷ್ಪಗಳಿಂದ ಪ್ರಾಣಧಾರಣೆಯನ್ನು ಮಾಡುತ್ತಾ ರಾಮಧ್ಯಾನ ನಿರತಳಾಗಿದ್ದಳು. ಕಾವಲಿನ ರಾಕ್ಷಸಿಯರಲ್ಲಿ ತ್ರಿಜಟೆ ಎಂಬವಳು ಮಾತ್ರ ಧರ್ಮಜ್ಞಳಾಗಿದ್ದುದರಿಂದ ಇತರ ರಾಕ್ಷಸಿಯರು ಇಲ್ಲದಿದ್ದ ಸಮಯದಲ್ಲಿ ಅವಳು ಸೀತೆಯ ಪಾತಿವ್ರತ್ಯವನ್ನು ಗೌರವಿಸಿ ಅವಳಿಗೆ ಸಮಾಧಾನದ ಮಾತುಗಳನ್ನು ಹೇಳುತ್ತಿದ್ದಳು. ಅವಿಂಧ್ಯನೆಂಬ ವೃದ್ಧ ರಾಕ್ಷಸನು ತಿಳಿಸಿದ ರಾಮಲಕ್ಷ್ಮಣರ ಯೋಗಕ್ಷೇಮಗಳನ್ನೂ, ನಳಕೂಬರನ ಶಾಪದಿಂದ ರಾವಣನು ಸೀತೆಯನ್ನು ಬಲಾತ್ಕಾರದಿಂದ ಭೋಗಿಸುವ ಹಾಗಿರಲಿಲ್ಲವೆಂಬ ಅಂಶವನ್ನೂ, ತನಗಾದ ಸುಸ್ವಪ್ನ ಗಳನ್ನೂ ತಿಳಿಸುತ್ತಾ ಸಮಾಧಾನಪಡಿಸುತ್ತಿದ್ದಳು ಮತ್ತು ಧೈರ್ಯ ವನ್ನೂ ತಿಳಿಯಹೇಳುತ್ತಿದ್ದಳು. ಸರ್ವದಾ ರಾಮಧ್ಯಾನ ನಿರತಳಾ ಗಿದ್ದ ಸೀತೆಯು ತನ್ನ ಸಖಿಯಾದ ತ್ರಿಜಟೆಯನ್ನು ಕುರಿತು ಹೀಗೆ ಹೇಳಿದಳು, ಅವರ ಸಲ್ಲಾಪವನ್ನು ಹೀಗೆ ಕವಿಯು ವರ್ಣಿಸಿದ್ದಾನೆ.—

> "ತ್ರಸ್ತಾಽಹಂ ಸಖಿ ಭೃಂಗಕೀಟಕ ನಯಂ ಸಂವೀಕ್ಷ್ಯ ಸೀತೇ ಕುತಃ
> ಶ್ರೀರಾಮಾರ್ಪಿತ ಚಿತ್ತವೃತ್ತಿರಧುನಾ ರಾಮೋ ಭವಿಷ್ಯಾಮ್ಯಹಂ।
> ಸಾಯುಜ್ಯ ಲಾಭೇ ಪುನಃ
> ತತ್ಕಿಂತೇನ ಭವೇತ್ ಕುತೋಮಮರತಿಃ ಧ್ಯಾನೇಽನುರಾಗೇಽಸಮೋ
> ಸೋಽಪಿತ್ವಂ ಭವಿತಾತತಶ್ಚಯುವಯೋಃ ಸಾಂಗತ್ಯಲಾಭಃ ಸ್ಥಿರಃ॥"

ಉಪಾಸನೆಯಿಂದ ಉಪಾಸ್ಯಸಾಯುಜ್ಯ.

ಓ ಸಖಿಯೇ, ಭೃಂಗಕೀಟಕನ್ಯಾಯವನ್ನು ಆಲೋಚಿಸಿದರೆ ನನಗೆ ಭಯವಾಗುತ್ತದೆ. ಸೀತೆಯೇ, ಏಕೆ ಹಾಗೆ ಭಯಪಡುವೆ ? ಸಖಿಯೆ, ಈಗ ನಾನು ಶ್ರೀರಾಮನಲ್ಲಿ ನೆಲೆನಿಂತ ಮನಸ್ಸುಳ್ಳವಳಾಗಿ ದೇನೆ. ಆದುದರಿಂದ ಧಾರಣಾಧ್ಯಾನಗಳಿಂದ ಲಭಿಸುವ ಸಮಾಧಿಯಲ್ಲಿ ಹೇಗೆ ಉಪಾಸ್ಯದೇವತಾಸಾಯುಜ್ಯವು ದೊರೆಯುವುದೋ ಹಾಗೆ ನನಗೂ ಆಗಿ ನಾನೂ ರಾಮನೇ ಆಗಿಬಿಡುವೆನೇನೋ ಎಂದು ಆತಂಕ ವಾಗುತ್ತಿದೆ. ಸೀತೆಯೇ ಹಾಗೆ ಸಾಯುಜ್ಯ ಲಾಭವಾದರೂ ಅದರಿಂದ

ನಿನಗೆ ಆಗುವ ನಷ್ಟವೇನು ? ಸಖಿಯೇ, ಸಾಯುಜ್ಯವಾಗಿಬಿಟ್ಟ ಮೇಲೆ ನನ್ನ ಪತಿದೇವನನ್ನು ನೋಡುವುದು, ಸಲ್ಲಾಪವನ್ನು ಮಾಡುವುದು, ಆಲಿಂಗಿಸುವುದು ಈ ಮುಂತಾದ ರೀತಿಯಲ್ಲಿ ನಾನು ಅನುಭವಿಸುತ್ತಿದ್ದ ರತಿಯು ಎಂದರೆ ಸಂತೋಷಕರವಾದ ವಿಲಾಸವಿನೋದ ವ್ಯಾಪಾರಗಳು ತಪ್ಪಿಹೋಗುವುವಲ್ಲವೇ ? ಆ ನಷ್ಟವನ್ನು ಯೋಚಿಸಿದರೆ ಭಯವಾಗುತ್ತದೆ. ಸೀತೆಯೇ, ಆದರೂ ನೀನು ಹೆದರಬೇಕಾಗಿಲ್ಲ. ಏಕೆಂದರೆ ನಿನ್ನಹಾಗೆಯೇ ನಿನ್ನ ಪತಿದೇವನೂ ನಿನ್ನನ್ನು ಧ್ಯಾನಿಸುತ್ತಿರುತ್ತಾನಲ್ಲವೆ ? ಹಾಗೆ ಧ್ಯಾನವೂ ಅನುರಾಗವೂ ಇಬ್ಬರಲ್ಲೂ ಸಮಾನವಾಗಿರುವುದರಿಂದ, ಈ ಭ್ರಂಗಕೀಟಕ ನ್ಯಾಯದಿಂದಲೇ ಆ ನಿನ್ನ ಪತಿದೇವನೂ ನೀನೇ ಆಗಿಬಿಡುವನಲ್ಲವೇ ? ಆಗ ನಿಮ್ಮಿಬ್ಬರಿಗೂ ಸಮಾಗಮ ಸಲ್ಲಾಪಾದಿ ಸುಖಕರಗಳಾದ ವ್ಯಾಪಾರಗಳು ಶಾಶ್ವತವಾಗಿಯೇ ಇರುತ್ತವೆಂಬುದನ್ನು ಗಮನಿಸಿ ಧೈರ್ಯದಿಂದಿರು ಎಂದು ಸಖಿಯು ಹೇಳಿ ಸೀತೆಗೆ ಮನಸ್ಸಮಾಧಾನವನ್ನುಂಟುಮಾಡಿದಳೆಂದು ಕವಿಯು ಚಮತ್ಕಾರದಿಂದ ವರ್ಣಿಸಿರುತ್ತಾನೆ. ಉಪಾಸನಾ ಧರ್ಮದಿಂದ ಉಪಾಸ್ಯದೇವತಾ ಸಾಕ್ಷಾತ್ಕಾರ ಸಾಯುಜ್ಯಗಳು ದೊರೆಯುತ್ತವೆಂಬುದು ಯೋಗಶಾಸ್ತ್ರ ಪ್ರಸಿದ್ಧವಾಗಿದೆ ಎಂಬುದನ್ನೂ ಗಮನಿಸಬಹುದು.

ಹನುಮಂತನು ಸೀತಾದೇವಿಯನ್ನು ಕಂಡು, ರಾಮಲಕ್ಷ್ಮಣರ ವೃತ್ತಾಂತವನ್ನು ವಿಜ್ಞಾಪಿಸಿ, ರಾಮನ ಮುದ್ರೆಯುಂಗುರವನ್ನೂ ಕೊಟ್ಟು, ಕಾಕಾಸುರನ ವೃತ್ತಾಂತವನ್ನೂ ಹೇಳಿದಮೇಲೆ ಸೀತೆಯು ನಂಬಿಕೆಯನ್ನು ಪಡೆದು ಸಂತೋಷಪಡುತ್ತಾಳೆ. ಮುದ್ರೆಯುಂಗುರವನ್ನು ನೋಡುತ್ತಾ ರಾಮನನ್ನೇ ನೋಡಿದ್ದರೆ ಎಷ್ಟು ಸಂತೋಷವೋ ಅಷ್ಟು ಸಂತೋಷವನ್ನು ಅನುಭವಿಸುತ್ತಾ ಹೀಗೆ ಹೇಳುತ್ತಾಳೆ.—

" ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ ।
ಏತಿ ಜೀವಂತ ಮಾನಂದೋ ನರಂ ವರ್ಷಶತಾದಪಿ ॥ "

ಗಾದೆಯ ಮಾತು ಸತ್ಯ.

ಲೋಕದಲ್ಲಿ ಪ್ರಸಿದ್ಧವಾಗಿರುವ, ಮಂಗಳಕರವಾದ, ನಿಜವಾದ ಈ ಗಾದೆಯ ಮಾತು ನನ್ನ ಮನಸ್ಸಿನಲ್ಲಿ ಹೊಳೆಯುತ್ತಾ ಸಂತೋಷವನ್ನುಂಟುಮಾಡುತ್ತಿದೆ. ಏನೆಂದರೆ, ಮಾನವನು ಕಷ್ಟಗಳು ಸಂಭವಿಸಿದಾಗ ದೇವರಲ್ಲಿ ನಂಬಿಕೆಯನ್ನೂ, ಧರ್ಮದಲ್ಲಿ ಆದರವನ್ನೂ ಬಿಡದೆ ಬದುಕಿರುವುದಾದರೆ ನೂರು ಎಂದರೆ ಅನೇಕ ವರ್ಷಗಳು ಕಳೆದುಹೋದಮೇಲಾದರೂ ಅವನಿಗೆ ಸುಖವು ಲಭಿಸುವುದು ಖಚಿತವಾದುದು ಎಂಬುದೇ ಆ ಗಾದೆಯ ಅರ್ಥವಾಗಿದೆ.

ಸೀತಾದೇವಿಯು ಹನುಮಂತನ ಮೂಲಕ ಶ್ರೀರಾಮನ ಯೋಗಕ್ಷೇಮ ಸಮಾಚಾರಗಳನ್ನು ಕೇಳಿ, ಮುದ್ರೆಯುಂಗುರವನ್ನು ನೋಡಿ ಸಂತುಷ್ಟಳಾಗಿ, ಪುನಃ ಅವನ ಪ್ರಾರ್ಥನೆಯಂತೆ ಗುರುತಿಗಾಗಿ ತನ್ನಲ್ಲಿದ್ದ ಚೂಡಾಮಣಿಯನ್ನು ಅವನಿಗೆ ಕೊಡುತ್ತಾ ಇದನ್ನು ಶ್ರೀರಾಮನಿಗೆ ತಲಪಿಸಿ ಕೂಡಲೇ ತನ್ನನ್ನು ಬಿಡುಗಡೆಮಾಡಿ ಪರಿಗ್ರಹಿಸಬೇಕೆಂದು ವಿಜ್ಞಾಪಿಸಹೇಳಿ ಆಶೀರ್ವದಿಸಿ ಅವನನ್ನು ಬೀಳ್ಕೊಟ್ಟಳು. ಅವನು ರಾಮನ ಅಪ್ಪಣೆಯನ್ನು ನೆರವೇರಿಸಿದ್ದಾಗಿದ್ದರೂ, ಮಾದರಿಯ ದೂತನಂತೆ ವಿಶೇಷ ಕಾರ್ಯವನ್ನೂ ನೆರವೇರಿಸಿ ತಿಳಿಯಬೇಕಾದ ಹೆಚ್ಚಿಗೆಯ ಮುಖ್ಯ ವಿಷಯಗಳನ್ನೂ ತಿಳಿಯಬೇಕೆಂದು ಹೀಗೆ ಯೋಚಿಸಿದನೆಂದು ಕವಿಯು ವರ್ಣಿಸಿರುತ್ತಾನೆ. ಆದರ್ಶದೂತನಲ್ಲಿರಬೇಕಾದ ಗುಣಗಳನ್ನು ಎಂದರೆ ಪ್ರಜ್ಞಾವಿಕ್ರಮ ಭಕ್ತಿಗಳನ್ನು ಮೆರೆಯಿಸುತ್ತಾನೆ.

“ ನ ಸಾಮ ರಕ್ಷಸ್ಸು ಫಲಾಯ ಕಲ್ಪತೇ
ನ ದಾನಮರ್ಥೋ ಪಚಿತೇಷು ಯುಜ್ಯತೇ ।
ನ ಭೇದಯೋಗಃ ಕಿತವೇಷು ಶಸ್ಯತೇ
ಪರಾಕ್ರಮಸ್ತ್ವತ್ರ ಮಮೇಹ ರೋಚತೇ ॥ ”

ರಾಜನೀತಿಯಲ್ಲಿ ಸಾಮ, ದಾನ, ಭೇದ, ದಂಡ ಎಂದು ನಾಲ್ಕು ಉಪಾಯಗಳನ್ನು ಯಥೋಚಿತವಾಗಿ ಪ್ರಯೋಗಿಸುತ್ತಾ ಕಾರ್ಯಸಾ

ಧನೆಯನ್ನು ಮಾಡಬೇಕೆಂದು ಹೇಳಿದೆ. ಒಳ್ಳೆಯ ದೂತನು ಪ್ರಭುವು ಅಪ್ಪಣೆಮಾಡಿರುವಷ್ಟೇ ಕೆಲಸವನ್ನು ನೆರವೇರಿಸಿ ನಿಲ್ಲಬಾರದು, ಸಾಧ್ಯವಾದರೆ ಹೆಚ್ಚಿನ ಕಾರ್ಯಗಳನ್ನೂ ನೆರವೇರಿಸಿ, ಶತ್ರುವಿನ ಶಕ್ತಿ ಪರಿಸ್ಥಿತಿಗಳನ್ನೂ ತಿಳಿದು ಹೋಗಿ ಪ್ರಭುವಿಗೆ ತಿಳಿಸಿ ಸೇವೆಯನ್ನು ಸಲ್ಲಿಸಬೇಕು. ಆದುದರಿಂದ ಮಾರುತಿಯು ಹೀಗೆ ಯೋಚಿಸಿದನು. ರಾವಣನ ರಾಜಧಾನಿಯಲ್ಲಿರುವ ಬಲಾಬಲಗಳನ್ನು ತಿಳಿಯಬೇಕು. ಇದಕ್ಕಾಗಿ ಈ ರಾಕ್ಷಸರ ವಿಷಯದಲ್ಲಿ ಸಾಮೋಪಾಯವನ್ನು ಉಪಯೋಗಿಸುವುದು ಫಲಕಾರಿಯಾಗುವುದಿಲ್ಲ. ಏಕೆಂದರೆ, ಅವರು ದುಷ್ಟರೂ, ಶಕ್ತರೂ ಆಗಿರುತ್ತಾರಾದುದರಿಂದ ಸೌಮ್ಯಗುಣವಾದ ಸಾಮದ ಉಪಾಯಕ್ಕೆ ಅವರು ಮಣಿಯುವುದಿಲ್ಲ. ದಾನೋಪಾಯವನ್ನು ಬಡವರಲ್ಲಿ ಉಪಯೋಗಿಸಬಹುದು. ಇಲ್ಲಿರುವ ರಾಕ್ಷಸರು ತೃಪ್ತರೂ ಐಶ್ವರ್ಯವಂತರೂ ಆಗಿರುವಂತಿದೆ. ಅದರಂತೆಯೇ ಇವರು ಧೂರ್ತರೂ ವಂಚಕರೂ ಆಗಿರುವುದರಿಂದ ಭೇದೋಪಾಯವನ್ನು ಇವರಲ್ಲಿ ಪ್ರಯೋಗಿಸುವುದು ಉಚಿತವಾಗಲಾರದು. ಆದುದರಿಂದ ಈ ವಿಷಯದಲ್ಲಿ ಪರಾಕ್ರಮದಿಂದ ದಂಡೋಪಾಯವನ್ನೇ ಅನುಸರಿಸುವುದು ಸೂಕ್ತವಾಗಿರುವಂತೆ ನನಗೆ ತೋರುತ್ತದೆ. ನನ್ನ ಮನಸ್ಸಿಗೆ ಒಪ್ಪಿಬರುತ್ತಿದೆ. ಎಂದು ಹನುಮಂತನು ವಿಮರ್ಶಿಸಿ ನಿಶ್ಚಯಿಸುತ್ತಾನೆ. ಕೂಡಲೆ ಅಶೋಕವನವನ್ನು ನಾಶಪಡಿಸಲು ಪ್ರಾರಂಭಿಸಿದನು. ಅಡ್ಡಗಿಸಿಬಂದ ಕಾವಲುಗಾರರನ್ನು ಸಂಹರಿಸಿದನು. ಇದನ್ನು ತಿಳಿದು ರಾವಣನು ಸೇನೆಯನ್ನೂ ಸೇನಾನಾಯಕರನ್ನೂ ಕಳುಹಿಸಿದನು. ಅವರನ್ನೂ ಹನುಮಂತನು ಸದೆಬಡೆದನು. ಕಡೆಗೆ ರಾವಣನ ಮಗನಾದ ಅಕ್ಷಯಕುಮಾರನನ್ನೇ ಕಳುಹಿಸಬೇಕಾಗಿ ಬಂದು ಅವನನ್ನೂ ಕಳುಹಿಸಲು ಹನುಮಂತನು ಅವನನ್ನೂ ಸಂಹರಿಸಿದನು. ಕಟ್ಟಕಡೆಗೆ ಇಂದ್ರಜಿತುವನ್ನೇ ಕಳುಹಿಸಬೇಕಾಗಿ ಬಂದಿತು. ಅವನೂ ಬ್ರಹ್ಮಾಸ್ತ್ರವನ್ನೇ ಉಪಯೋಗಿಸಬೇಕಾಗಿ ಬರಲು, ಆ ಅಸ್ತ್ರಕ್ಕೆ ಮನ್ನಣೆಯನ್ನು, ಮಾರುತಿಯು ಕೊಡಲೋಸ್ಕರ ಬದ್ಧನಂತಾಗಿ ರಾವಣನ ದರ್ಬಾರಿಗೆ

ಹೋಗುತ್ತಾನೆ. ನೀನು ಯಾರೆಂದು ರಾವಣನು ಕೇಳಲು, ಹನುಮಂತನು ಪ್ರಜ್ಞಾವಿಕ್ರಮ ಭಕ್ತಿಗಳುಳ್ಳವನಾದರೂ ನಿರಹಂಕಾರ ಭಾವದಿಂದ

"ಮತ್ತಃ ಪ್ರತ್ಯವರಃ ಕಶ್ಚಿನ್ನಾಸ್ತಿ ಸುಗ್ರೀವಸನ್ನಿಧೌ।"

ಎಂದರೆ ನಾನು ಸುಗ್ರೀವ ಸನ್ನಿಧಿಯಲ್ಲಿರುವ ಸೇವಕರಲ್ಲಿ ಒಬ್ಬನು. ಅಲ್ಲಿ ನನಗಿಂತಲೂ ಕಡಿಮೆಯಾಗಿರುವವರು ಯಾರೂ ಇಲ್ಲ. ಅಲ್ಲಿರುವವರೆಲ್ಲರೂ ನನಗಿಂತ ಗುಣಶಕ್ತಿಗಳಲ್ಲಿ ಮೇಲಾದವರೇ ಆಗಿರುತ್ತಾರೆ ಎಂದು ಉತ್ತರಿಸಿದನು. ಈ ನೀತಿಯ ಪ್ರತಿಧ್ವನಿಯು ಬಸವಣ್ಣನವರ ಈ ವಚನದಲ್ಲೂ ಇದೆ ಎಂಬುದನ್ನು ನೆನೆಯಬಹುದು.

ಹನುಮಂತನು ಆದರ್ಶ ದೂತನು.

"ನನಗಿಂತ ಕಿರಿಯರಿಲ್ಲ ಶಿವಶರಣರಿಗಿಂತ ಹಿರಿಯರಿಲ್ಲ"

ರಾವಣನು ಕೋಪದಿಂದ ಅವನನ್ನು ಸಂಹರಿಸಲು ಆಜ್ಞೆಮಾಡಲು, ಧರ್ಮಪರಾಯಣನಾದ ವಿಭೀಷಣನು ದೂತನನ್ನು ವಧಿಸುವುದು ರಾಜಧರ್ಮಕ್ಕೆ ವಿರುದ್ಧವಾದ ಕಾರ್ಯವೆನ್ನಲು, ಅದನ್ನು ಒಪ್ಪಿ ಕಪಿಗೆ ಬಾಲವನ್ನು ಸುಟ್ಟು ಅವಮಾನಪಡಿಸಿ ಓಡಿಸಿಬಿಡಬಹುದೆಂದು ತೀರ್ಮಾನವಾಗುತ್ತದೆ. ಅದರಂತೆ ಅವನ ಬಾಲಕ್ಕೆ ಬಟ್ಟೆಯನ್ನು ಸುತ್ತಿ, ಎಣ್ಣೆ ತುಪ್ಪಗಳಲ್ಲಿ ನೆನೆಸಿ ಬೆಂಕಿಯನ್ನು ಹತ್ತಿಸಿ ಊರಲ್ಲಿ ಮೆರವಣಿಗೆ ಮಾಡಲು ಹೊರಟಾಗ ಹನುಮಂತನು ಆ ಬೆಂಕಿಯಿಂದ ಊರಿನ ಮನೆಗಳಿಗೆ ಬೆಂಕಿಯನ್ನು ಹತ್ತಿಸಿಬಿಡುತ್ತಾನೆ. ಈ ವಿಷಯವನ್ನು ಕೇಳಿ ಸೀತಾದೇವಿಯು ಅಗ್ನಿದೇವನನ್ನು ಪ್ರಾರ್ಥಿಸಿ ಬೆಂಕಿಯಿಂದ ಹನುಮಂತನಿಗೆ ಯಾವ ಬಾಧೆಯೂ ಆಗದಂತೆ ಪ್ರಾರ್ಥನೆಮಾಡುತ್ತಾಳೆ. ಪಾತಿವ್ರತ್ಯಧರ್ಮನಿಷ್ಠಳಾದ ಸೀತೆಯ ಪ್ರಾರ್ಥನೆಯು ಸಫಲವಾಗುತ್ತದೆ.

ಯಾಂತಿ ನ್ಯಾಯ ಪ್ರವೃತ್ತಸ್ಯ ತಿರ್ಯಂಚೋಽಪಿ ಸಹಾಯತಾಂ ।
ಅಪಂಥಾನಂ ತು ಗಚ್ಛಂತಂ ಸೋದರೋಽಪಿ ವಿಮುಂಚತಿ ॥

ಕಡೆಗೆ ಹನುಮಂತನು ರಾವಣನ ಬಲಾಬಲಗಳನ್ನೂ ಅನುಕೂಲ ಪ್ರತಿಕೂಲರನ್ನೂ ತಿಳಿದು, ಸೀತಾದೇವಿಗೆ ಪುನಃ ವಂದಿಸಿ ಹಿಂತಿರುಗಿ ಸಮುದ್ರವನ್ನು ದಾಟಿ ಬಂದು ಅಂಗದ ಜಾಂಬುವಂತ ಮುಂತಾದವರೊಡನೆ ರಾಮನಲ್ಲಿಗೆ ಬಂದು ವಂದಿಸಿ ಚೂಡಾಮಣಿಯನ್ನೂ ಸಮರ್ಪಿಸಿ ತಾನು ಗಮನಿಸಿದ್ದ ಶತ್ರುವಿನ ಬಲಾಬಲಗಳನ್ನು ಅರಿಕೆಮಾಡಿದನು. ಯುದ್ಧಕ್ಕೆ ಸಿದ್ಧತೆಗಳಾದುವು. ಕೋಟ್ಯಾನುಕೋಟಿ ಕಪಿಸೈನಿಕರು ಸೇರಿದರು. ದಕ್ಷಿಣಸಮುದ್ರದ ದಡದಲ್ಲಿ ಸೇನೆಯ ಬಿಡಾರವನ್ನು ರಾಮನೂ, ಸುಗ್ರೀವನೂ. ಮಾಡಿದರು. ಪಾಪಿ ರಾವಣನು ಹಿತೋಕ್ತಿಯನ್ನು ಕೇಳದಿರಲು ಧರ್ಮಿಷ್ಠನಾದ ವಿಭೀಷಣನು ಅಣ್ಣನ ಸಹವಾಸವನ್ನು ಬಿಟ್ಟುಬಂದು ರಾಮನಲ್ಲಿ ಆಶ್ರಯವನ್ನು ಬೇಡಿದನು. ಸುಗ್ರೀವಾದಿಗಳು ಇವನು ಶತ್ರುವಿನ ತಮ್ಮನಾದುದರಿಂದ ಅಪಾಯ ಸಂಭವವಿರುತ್ತದೆ. ಆಶ್ರಯವನ್ನು ಕೊಡಬಾರದೆಂದು ಸಲಹೆಮಾಡಿದರು. ಆದರೂ ಧರ್ಮಾತ್ಮನೂ ಸತ್ಯಸಂಧನೂ ಆಗಿರುವ ರಾಮನು ಹೀಗೆ ಹೇಳಿ ಆಶ್ರಯವನ್ನು ಕೊಟ್ಟನು. "ಯತೋ ಧರ್ಮಸ್ತತೋ ಜಯಃ" ಎಂಬ ಬರವಸೆಯಿಂದ

"ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ದದಾಮೀತಿ ವ್ರತಂ ಮಮ ॥

ರಾಮನು ಸತ್ಯವ್ರತನು.

ಎಂದರೆ ಶ್ರೀರಾಮನು ಆಗ "ಯಾರೇ ಆಗಲಿ ಒಂದಾವರ್ತಿ ನನ್ನ ಮರೆಹೊಕ್ಕು ನಾನು ನಿನ್ನವನಾಗಿದ್ದೇನೆ, ನನ್ನನ್ನು ಪರಿಗ್ರಹಿಸಿ ಕಾಪಾಡು ಎಂದು ಪ್ರಾರ್ಥಿಸಿದರೆ ಅಂಥವನಿಗೆ ಎಲ್ಲ ಭೂತಗಳಿಂದಲೂ ಸಂಭವಿಸಬಹುದಾದ ತೊಂದರೆಗಳಿಂದ ಕಾಪಾಡುತ್ತೇನೆಂದು ಅಭಯಪ್ರದಾನವನ್ನು ಮಾಡುವುದು ನನ್ನ ಖಚಿತವಾದ ನಿಯಮವೂ, ಪಾಲಿಸಬೇಕಾದ ವ್ರತವೂ ಆಗಿದೆ" ಎಂದು ಸಾರಿ ಹೇಳುತ್ತಾನೆ. ಅದರಂತೆ ವಿಭೀಷಣನನ್ನು ಪರಿಗ್ರಹಿಸಿ ಅವನಿಗೆ ರಾವಣನ ರಾಜ್ಯದ ಪಟ್ಟಾಭಿಷೇಕವನ್ನು ಮಾಡಿಸುತ್ತಾನೆ. ಆಮೇಲೆ

ಎಲ್ಲರ ಕಲ್ಯಾಣಕ್ಕಾಗಿ ಶಿವನನ್ನು ಆರಾಧಿಸಿ, ಸಮುದ್ರವನ್ನು ದಾಟಲು ಸಮುದ್ರದೇವನ ಸಹಾಯಕ್ಕಾಗಿ ದರ್ಭಶಯನದಲ್ಲಿ ಧ್ಯಾನಾಸಕ್ತನಾಗಿದ್ದನು. ಸಮುದ್ರರಾಜನ ಸಲಹೆಯಂತೆ ನಳನ ಸಹಾಯದಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಲಂಕೆಗೆ ಕಪಿಸೈನ್ಯ ಸಮೇತನಾಗಿ ಹೋಗಿ ರಾಕ್ಷಸರ ಸೈನ್ಯವನ್ನೂ, ನಾಯಕರನ್ನೂ ಸಂಹರಿಸಿದನು. ಎಲ್ಲರೂ ಯುದ್ಧದಲ್ಲಿ ಮಡಿದರು. ಅಸಹಾಯನಾಗಿ ರಾವಣನು ಕುಂಭಕರ್ಣನನ್ನು ಅವನ ಇಚ್ಛೆಗೆ ವಿರೋಧವಾದರೂ ಅರ್ಧನಿದ್ರೆಯಲ್ಲಿರುವಾಗಲೇ ಎಬ್ಬಿಸಬೇಕಾಗಿ ಬಂದು ಎಚ್ಚರಗೊಳಿಸಿದನು. ಅವನು ನಿದ್ರೆಯಲ್ಲಿದ್ದುದರಿಂದ ನಡೆದಿದ್ದ ಸಮಾಚಾರವೆಲ್ಲವನ್ನೂ ತಿಳಿಸಿ ಮುಂದೆ ಅವನ ಸಹಾಯವನ್ನು ಪಡೆಯಲು ಆಶಿಸಿದಾಗ ಅವರಿಬ್ಬರಿಗೂ ನಡೆದ ಸಂಭಾಷಣೆಯನ್ನು ಕವಿಯು ಹೀಗೆ ವರ್ಣಿಸಿರುತ್ತಾನೆ. ಧರ್ಮಾತ್ಮನೂ, ಸತ್ಯಸಂಧನೂ ಆದ ರಾಮನ ಖಚಿತವಾದ ಶೀಲವು ಸುತ್ತಮುತ್ತಲಿರುವ ಜನರ, ಲಕ್ಷ್ಮಣ ಕೈಕಯಿ ಮುಂತಾದವರ ಮೇಲೆಯೂ ಹೇಗೆ ಧಾರ್ಮಿಕವಾದ ಸತ್ಪರಿಣಾಮಗಳನ್ನುಂಟುಮಾಡಿತೆಂಬುದನ್ನು ಮೇಲೆ ಸ್ವಲ್ಪಮಟ್ಟಿಗೆ ವಿವರಿಸಲಾಗಿದೆ. ಈಗ ಅದರ ಪರಿಣಾಮವು ಶತ್ರುವಿನ ಮೇಲೂ ಹೇಗೆ ಆಗುತ್ತದೆಂಬುದನ್ನು ಈ ಪದ್ಯದಲ್ಲಿ ಕವಿಯು ಸೂಚಿಸಿರುತ್ತಾನೆ.

> "ಕಿಂ ಕಾರ್ಯಂ ಪ್ರತಿ ಬೋಧನೇ ವದ ಸಖೇ, ರಾವಣಾಂಗನಾ ಮೇ ಹೃತಾ,
> ಕಿಂ ಭುಕ್ತಾ, ಪತಿದೇವತಾ ನ ಭಜತೇ ರಾಮಾತ್ಪರಂ ಜಾನಕೀ ।
> ರಾಮಃ ಕಿಂ ಭವಿತಾಸಿ ನೋ, ಶೃಣು ರಹಃ ತಾಳೀದಳಶ್ಯಾಮಲಂ
> ಧರ್ಮೈಕನಿಷ್ಠಂ ಪರಂ
> ರಾವಣಾಂಗಂ ಭಜತೋ ಮಮಾಪಿ ಕುಟಿ ಲೋ ಭಾವೋ
> ನ ಸಂಜಾಯತೇ ॥"

ಎಂದರೆ "ನನ್ನನ್ನು ಎಬ್ಬಿಸಿದುದರ ಉದ್ದೇಶವೇನು ? ನನ್ನಿಂದ ಆಗಬೇಕಾಗಿರುವ ಕಾರ್ಯವೇನು? ಸ್ನೇಹಿತನೂ ಆಗಿರುವ ರಾವಣನೇ, ಹೇಳು" ಎಂದು ಕುಂಭಕರ್ಣನು ಕೇಳಲು, "ನಾನು ರಾಮನ

ಧಾರ್ಮಿಕ ಶೀಲದ ಪ್ರಭಾವವು ಶತ್ರುವಿನ ಮೇಲೂ ಉಂಟು.

ಹೆಂಡತಿಯಾದ ಸೀತೆಯನ್ನು ಅಪಹರಿಸಿಕೊಂಡು ಬಂದಿರುವೆನು" ಎಂದನು. "ಅವಳನ್ನು ಅನುಭವಿಸಿದೆಯಾ?" ಎಂದು ಕೇಳಲು "ಗಂಡನನ್ನೇ ದೇವರೆಂದು ಭಾವಿಸುತ್ತಿರುವ ಆ ಜನಕರಾಜನ ಮಗಳಾದ ಸೀತೆಯು ರಾಮನನ್ನು ಹೊರತು ಮತ್ತೆ ಯಾರನ್ನೂ ಸೇವಿಸಲು ಒಪ್ಪದೆ ಇದ್ದಾಳೆ" ಎಂದು ಹೇಳಿದನು. "ನಿನ್ನ ಮಾಯಾಶಕ್ತಿಯಿಂದ ನೀನೇ ರಾಮನ ರೂಪವನ್ನು ತಳೆದು ಅವಳನ್ನು ಮೋಹಗೊಳಿಸಿ ಏಕೆ ಅನುಭವಿಸದೆ ಇರುವೆ?" ಎಂದು ಕೇಳಲು "(ಧರ್ಮಾಚರಣೆಯೊಂದರಲ್ಲಿಯೇ ಸಂತತವಾಗಿ ನೆಲೆಸಿರುವ) ತಾಳೆಗರಿಯಂತೆ ಶ್ಯಾಮಲವರ್ಣದಿಂದ ಕೂಡಿರುವ ರಾಮನ ರೂಪವನ್ನು ಪಡೆದರೆ ದುಷ್ಟನಾದ ನನ್ನ ಹೃದಯದಲ್ಲೂ ಕೆಟ್ಟ ಭಾವನೆಯು (ಪರಸ್ತ್ರೀಯನ್ನು ಭೋಗಿಸಬೇಕೆಂಬ ದುರಾಶೆಯು) ಹುಟ್ಟುವುದೇ ಇಲ್ಲವಲ್ಲ ಏನು ಮಾಡಲಿ?" ಎಂದು ತನ್ನ ಗುಟ್ಟಿನ ಅನುಭವವನ್ನು ರಾವಣನು ಕುಂಭಕರ್ಣನಿಗೆ ತಿಳಿಸುತ್ತಾನೆ. ಇದರಿಂದಲೂ ಶ್ರೀರಾಮನ ಧಾರ್ಮಿಕ ಶೀಲದ ಪ್ರಭಾವವು ಶತ್ರುವಾದ ರಾವಣನ ಹೃದಯದ ಮೇಲೂ ಎಂತಹ ಸತ್ಪರಿಣಾಮವನ್ನು ಉಂಟು ಮಾಡಬಲ್ಲದ್ದಾಗಿದೆ ಎಂಬುದು ಹೃದಯಂಗಮವಾಗಿ ವರ್ಣಿತವಾಗಿದೆ. ಈ ಸಂಭಾಷಣೆಯ ಪ್ರಸಂಗದಿಂದ ಧರ್ಮಿಷ್ಠನಾದ ವಿಭೀಷಣನ ಮತ್ತು ರಾಕ್ಷಸನಾದ ಕುಂಭಕರ್ಣನ ಸ್ವಭಾವಗಳೂ, ಭಾವನುಡಿ ನಡೆಗಳೂ, ಸಂಸ್ಕೃತಿಯೂ ಚನ್ನಾಗಿಯೇ ಗೊತ್ತಾಗುತ್ತವೆ.

ಸತ್ಯಧರ್ಮಶೀಲದ ಸತ್ಪರಿಣಾಮಗಳು.

ಕುಂಭಕರ್ಣನೂ ಯುದ್ಧದಲ್ಲಿ ಸಾಯಲು, ರಾವಣನು ಕಡೆಗೆ ತನಗೆ ಉಳಿದಿದ್ದ ಏಕಮಾತ್ರ ಸಹಾಯಕನಾದ ಇಂದ್ರಜಿತುವನ್ನೂ ಯುದ್ಧಕ್ಕೆ ಕಳುಹಿಸುತ್ತಾನೆ. ಹದಿನಾಲ್ಕು ವರ್ಷಗಳಿಂದಲೂ ಬ್ರಹ್ಮಚರ್ಯ ವ್ರತವನ್ನು ನೆರವೇರಿಸಿದ್ದ ಲಕ್ಷ್ಮಣನೇ ಅವನನ್ನು ಕೊಲ್ಲಲು ಸಮರ್ಥನು. ಆದರೂ ಆ ಲಕ್ಷ್ಮಣನು ಯುದ್ಧದಲ್ಲಿ ಇಂದ್ರಜಿತುವಿನಮೇಲೆ ಕಡೆಗೆ ಅಮೋಘವಾಗುವ ಬಾಣವನ್ನು ಪ್ರಯೋಗಿಸುವಾಗ ತನ್ನ ಪೌರುಷದ ಅಹಂಭಾವವಿಲ್ಲದೆ ಈ ಮಾತನ್ನು ಹೇಳಿದಾನೆ.

"ಧರ್ಮಾತ್ಮಾ ಸತ್ಯಸಂಧಶ್ಚರಾಮೋ ದಾಶರಥಿರ್ಯದಿ ।
ಪೌರುಷೇ ಚಾಪ್ರತಿ ದ್ವಂದ್ವಃ ಶರೈನಂ ಜಹಿ ರಾವಣಿಂ ॥"

ಎಂದರೆ "ದಶರಥಪುತ್ರನಾದ ಶ್ರೀರಾಮನು ಧರ್ಮಾತ್ಮನೂ ಸತ್ಯಸಂಧನೂ ಆಗಿರುವುದು ನಿಜವಾಗಿದ್ದರೆ, ಪರಾಕ್ರಮದಲ್ಲಿ ಅವನಿಗೆ ಎದುರಿಸಬಲ್ಲವರಿಲ್ಲವೆಂಬುದೂ ನಿಜವಾಗಿದ್ದರೆ, ಎಲೈ ಬಾಣವೇ, ರಾವಣನ ಮಗನಾದ (ಅಧರ್ಮಶೀಲನಾದ) ಇಂದ್ರಜಿತುವನ್ನು ಸಂಹರಿಸು" ಎಂದು ಜಪಿಸುತ್ತಾ ಆ ಬಾಣದಲ್ಲಿ ಶ್ರೀರಾಮನ ಧಾರ್ಮಿಕ ಶಕ್ತಿಯನ್ನೂ ಅನುಗೊಳಿಸಿ ಬಿಡುತ್ತಾನೆ.

"ಯತೋ ಧರ್ಮಃ ತತೋ ಜಯಃ, ಯತಃ ಅಧರ್ಮಃ ತತಃ ಅಜಯಃ"

ಎಂದರೆ ಯಾರಲ್ಲಿ ಧರ್ಮನಿಷ್ಠೆಯು ಇದೆಯೋ ಅವರಿಗೆ ಕಡೆಗೆ ಜಯವು ತಪ್ಪದೆ ಆಗುತ್ತದೆ. ಯಾರಲ್ಲಿ ಅಧರ್ಮ, ಪಾಪಾಚರಣೆಗಳು ಇವೆಯೋ ಅಂಥವರಿಗೆ ಅಪಜಯವೂ ಸೋಲೂ ಮರಣವೂ ದುರ್ಗತಿಯೂ ಕಡೆಗೆ ತಪ್ಪದೆ ಆಗುತ್ತದೆ.

"ಸತ್ಯಮೇವ ಜಯತೇ ನಾನೃತಂ"

ಎಂದರೆ ಸತ್ಯಶೀಲರಿಗೆ ಜಯಲಾಭವಾಗುತ್ತದೆ. ಋತವೆಂದರೆ ಈ ಜಗತ್ತಿನಲ್ಲಿರುವ ಶಿಸ್ತು, ಕ್ರಮ, ವ್ಯವಸ್ಥೆ. ಅದೇ ಧರ್ಮವೂ, ಈಶ್ವರೇಚ್ಛೆಯೂ ಅದೇ ಆಗಿದೆ. ಅದೇ ಗೆಲ್ಲುತ್ತದೆ. ಅಧರ್ಮವು ಗೆಲ್ಲದು.

**ರಾಮರಾಜ್ಯಕ್ಕೆ ಸತ್ಯ ಧರ್ಮಗಳೇ ಮೂಲ**

ಈ ಧರ್ಮಕ್ರಮವನ್ನು ಅತಿಕ್ರಮಿಸುವವರಿಗೆ ಪರಾಜಯವು ಸಿದ್ಧವು. ಎಂದು ಅರ್ಥವು. ಕಡೆಗೆ ಇಂದ್ರಜಿತುವೂ ಯುದ್ಧದಲ್ಲಿ ಸಾಯುತ್ತಾನೆ. ಕಟ್ಟಕಡೆಗೆ ರಾವಣನೇ ಯುದ್ಧಕ್ಕೆ ಬರುತ್ತಾನೆ, ಶ್ರೀರಾಮನ ಬಾಣದಿಂದ ಸಾಯುತ್ತಾನೆ. ರಣಾಂಗಣದಲ್ಲಿ ಸತ್ತು ಬಿದ್ದಿರುವ ರಾವಣನನ್ನು ನೋಡಿ ಮಂಡೋದರಿಯು, ಪತಿವ್ರತೆಯ ಧರ್ಮದಲ್ಲಿ ಅಗ್ರಗಣ್ಯಳೂ ಆದ ಮಂಡೋದರಿಯು ಧರ್ಮದ ಪ್ರಾಬಲ್ಯ ಪ್ರಭಾವಗಳನ್ನು ಮನಗಂಡು ದುಃಖವನ್ನು ಬಿಗಿ ಹಿಡಿದುಕೊಂಡು

"ಇಂದ್ರಿಯಾಣಿ ಪುರಾ ಜಿತ್ವಾ ಜಿತಂ ತ್ರಿಭುವನಂ ತ್ವಯಾ ।
ಸ್ಮರದ್ಭಿರಿವ ತದ್ವೈರಂ ಇಂದ್ರಿಯೈರೇವ ನಿರ್ಜಿತಃ ॥"

ಎಂದರೆ, "ಓ ಪತಿದೇವನೇ, ನೀನು ಮೊದಲು ಎಂದರೆ ಇಂದ್ರಿಯಗಳನ್ನು ಜಯಿಸಿ ತಪಸ್ಸನ್ನಾಚರಿಸಿ ಧಾರ್ಮಿಕ ಶಕ್ತಿಯನ್ನು ಗಳಿಸಿಕೊಂಡಿದ್ದಾಗ, ನೀನು ಮೂರು ಲೋಕಗಳಲ್ಲೂ ಜಯಶಾಲಿಯಾಗುತ್ತಿದ್ದೆ. ಈಚೆಗೆ ನೀನು ಇಂದ್ರಿಯ ಪರವಶನಾದ ಮೇಲೆ ವಿಷಯಲಂಪಟನಾಗಿ ಧಾರ್ಮಿಕ ಶಕ್ತಿಯನ್ನು ಕಳೆದುಕೊಂಡಮೇಲೆ, ಆ ಇಂದ್ರಿಯಗಳಿಂದ ಸೇಡುತೀರಿಸುವುದಕ್ಕೋ ಎಂಬಂತೆ, ನೀನು ಜಯಿಸಲ್ಪಟ್ಟಿರುವೆ. ಸೋಲನ್ನೂ ಮರಣವನ್ನೂ ಪಡೆದಿರುವೆ?" ಎಂದು ದುಃಖಿಸುತ್ತಾಳೆ.

ವಿಭೀಷಣನು ಅಣ್ಣ ಮುಂತಾದವರಿಗೆ ಉತ್ತರ ಕ್ರಿಯೆಗಳನ್ನು ನೆರವೇರಿಸಿದ ಮೇಲೆ, ಶ್ರೀರಾಮನು ಅವನಿಗೆ ರಾಜ್ಯಪಟ್ಟಾಭಿಷೇಕವನ್ನು ಮಾಡಿಸಿ ಸೀತಾದೇವಿಯನ್ನು ಪರೀಕ್ಷಿಸಿ ಪರಿಗ್ರಹಿಸಿ ಎಲ್ಲರೊಡನೆ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾಗಿ "ರಾಮರಾಜ್ಯ" ವನ್ನು ಸತ್ಯಧರ್ಮಗಳ ಆಧಾರದ ಮೇಲೆ ಸ್ಥಾಪಿಸುತ್ತಾನೆ.

ನಮಗೆ ಈಗ ದೊರೆತಿರುವ ಸ್ವರಾಜ್ಯವನ್ನು ರಾಮರಾಜ್ಯವನ್ನಾಗಿಯೂ ಧರ್ಮರಾಜ್ಯವನ್ನಾಗಿಯೂ ಮಾಡಬೇಕಾಗಿದೆ. ರಾಜಕೀಯ ಸ್ವರಾಜ್ಯವನ್ನು ಬಲಪಡಿಸಬೇಕಾಗಿದೆ. ಆರ್ಥಿಕ ಸ್ವರಾಜ್ಯವನ್ನು ಸಂಪೂರ್ಣಗೊಳಿಸಬೇಕಾಗಿದೆ. ಇದು ಧರ್ಮದ ತಿಳಿವಳಿಕೆ ನಡೆವಳಿಕೆಗಳನ್ನು ಜನರಲ್ಲಿ ಬೇರೂರಿಬಲಗೊಳ್ಳುವಂತೆ ಮಾಡಿದ ಹೊರತು ಬೇರೆ ದಾರಿಯಿಂದ ಸಾಧ್ಯವಾಗುವುದಿಲ್ಲವೆಂಬ ಅಂಶವನ್ನು ನಮ್ಮ ಮುಖಂಡರೂ ನಾಯಕರೂ ಮನಗಂಡು ಸಹಾಯಮಾಡಬೇಕು. ಎಲ್ಲರಲ್ಲೂ ಧರ್ಮಶಕ್ತಿಯು ಪ್ರಬಲವಾಗಲೆಂದು ದೇವರಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾ ಈ ವಿಷಯವನ್ನು ಇಲ್ಲಿಗೆ ಮುಗಿಸಿದೆ.

ಮಹಾಭಾರತದಲ್ಲಿ ಧಾರ್ಮಿಕ ಸಂಸ್ಕೃತಿ.

ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ವಿಷಯದಲ್ಲಿ ಹತ್ತು ಹನ್ನೆರಡು ಉದಾಹರಣೆಗಳನ್ನು ಶ್ರೀಮದ್ರಾಮಾಯಣದಿಂದಲೂ ಮತ್ತು ಕಾವ್ಯ, ನಾಟಕ ಮುಂತಾದ ಗ್ರಂಥಗಳಿಂದಲೂ ಆರಿಸಿ ಓದುಗರ ಮುಂದಿಡಲಾಗಿದೆ. ಈಗ ಮಹಾಭಾರತ ಮುಂತಾದ ಗ್ರಂಥಗಳಿಂದಲೂ ದೃಷ್ಟಾಂತರಗಳನ್ನು ಗ್ರಂಥ ವಿಸ್ತಾರಭಯದಿಂದ ಮೂರು ನಾಲ್ಕನ್ನು ಮಾತ್ರ ಆರಿಸಿ ಬರೆಯುತ್ತೇನೆ.

ಶ್ರೀರಾಮನು ರಾಮಾಯಣದಲ್ಲಿ ಹೇಗೆ ಕಥಾನಾಯಕನೋ ಹಾಗೆಯೇ ಧರ್ಮರಾಯನು ಮಹಾಭಾರತದಲ್ಲಿ ಕಥಾನಾಯಕನಾಗಿರಲು ತಕ್ಕ ಅರ್ಹತೆಯನ್ನು ತನ್ನ ಗುಣಶಕ್ತಿಗಳಿಂದ ಮೆರೆದಿದಾನೆ. ಆದರೂ ಶ್ರೀಕೃಷ್ಣ, ಭೀಷ್ಮ, ದ್ರೋಣ, ಅರ್ಜುನ, ಭೀಮ, ದುರ್ಯೋಧನ, ಕರ್ಣ ಮುಂತಾದವರ ಕಥೆ ಮಹಿಮೆ ಗುಣಶಕ್ತಿಗಳಿಂದ ಧರ್ಮರಾಯನ ಕಥೆಯು ರಾಮನಷ್ಟು ಎದ್ದು ಮುಂದಾಗಿ ಕಾಣುವುದಿಲ್ಲವೆಂದು ಅಭಿಪ್ರಾಯವು ರೂಢಿಯಲ್ಲಿದೆ. ದ್ರೌಪದೀ ಪ್ರಾಪ್ತಿ, ಶಿವಸಾಕ್ಷಾತ್ಕಾರ, ಪಾಶುಪತಾಸ್ತ್ರ ಪ್ರಾಪ್ತಿ, ಸ್ವರ್ಗಕ್ಕೆ ಹೋಗಿ ಇಂದ್ರನಿಗೆ ಸಹಾಯಮಾಡಿ ಶಸ್ತ್ರಾಸ್ತ್ರಗಳನ್ನು ಪಡೆದುದು, ಕರ್ಣ ಸಂಹಾರ, "ಪಾಂಡವಾನಾಂ ಧನಂಜಯಃ" ಎಂಬ ಬಿರುದು, ಕೃಷ್ಣಪ್ರೀತಿಪಾತ್ರತೆ, ಇವು ಅರ್ಜುನವಿಶೇಷಗುಣಗಳು. ದುರ್ಯೋಧನ, ದುಶ್ಶಾಸನರ ವಧೆ ಭೀಮನ ವಿಶೇಷಕಾರ್ಯ, ಆದರೂ ರಾಮರಾಜ್ಯವು ಹೇಗೆ ಶ್ಲಾಘ್ಯವೂ ಅಪೇಕ್ಷಣೀಯವೂ ಆಗಿದೆಯೋ ಹಾಗೆಯೇ ಧರ್ಮರಾಜ್ಯವೂ ಮಾನ್ಯವೂ ಆದರಣೀಯವೂ ಆಗಿದೆ ಎಂಬ ಅಂಶದಲ್ಲಿ ಮತಭೇದವಿರದು. ಏಕೆಂದರೆ ಶ್ರೀರಾಮನಂತೆಯೇ ಧರ್ಮರಾಯನೂ ಧರ್ಮಾತ್ಮನೂ ಸತ್ಯ ಸಂಧನೂ ಆಗಿದಾನೆ. ಕ್ಷಮಾ, ಸಹನೆ, ಎಂಬ ಗುಣಗಳಲ್ಲಿ ಇವರಿಬ್ಬರಲ್ಲಿ ಯಾರು ಮಿಗಿಲು ಎಂಬುದನ್ನು ನಿರ್ಣಯಿಸಲಾಗದಂತೆ ಇದೆ. ಭಾರತದಲ್ಲಿ ಕಾಣಬರುವ ಕಥಾ ವೈಚಿತ್ರ್ಯ, ಪಾತ್ರ ವೈವಿಧ್ಯ, ಭಾವಸಂಪತ್ತು, ರಸಪ್ರವಾಹ, ಜೀವನ ವಿಮರ್ಶೆಗಳಲ್ಲಿ

ಧಾರ್ಮಿಕ ಸಂಸ್ಕೃತಿಯ ವಿಶ್ವರೂಪವನ್ನು ಕಾಣಬಹುದಾಗಿದೆ. ಧರ್ಮರಾಯನಲ್ಲಿ ಕ್ಷತ್ರಿಯಗುಣಗಳು ಯುಧಿಷ್ಠಿರತ್ವವನ್ನು ಮೆರೆಯಿಸುವಷ್ಟು ಇದ್ದರೂ, ಧಾರ್ಮಿಕ ಸಂಸ್ಕೃತಿಯ ಅವಲಂಬನವಾಗಿರುವ ಧರ್ಮ, ಶಾಂತಿ ಕ್ಷಮಾಗುಣಗಳು ಮುಂದಾಗಿ ಇತರಾತಿಶಾಯಿಯಾಗಿ ಅನ್ಯಾದೃಶವಾಗಿವೆ. ಲಾಕ್ಷಾಗೃಹ, ಅರಗಿನ ಅರಮನೆಯಲ್ಲಿ ಮಲಗಿದ್ದ ಅಣ್ಣತಮ್ಮಂದಿರನ್ನೂ ತಾಯಿಯನ್ನೂ ಭೀಮನು ಕಾಪಾಡಿದರೆ, ಕೀಚಕ, ಜರಾಸಂಧ, ಕಿರ್ಮೀರ, ಹಿಡಿಂಬ, ಬಕ ಎಂಬ ಅಸುರರನ್ನು ಸಂಹರಿಸಿದರೆ, ಧರ್ಮರಾಯನು ಆ ಭೀಮನನ್ನು ಅಜಗರನಿಂದ ಕಾಪಾಡುತ್ತಾನೆ. ಅಷ್ಟೇ ಅಲ್ಲವು. ಮುಂದಾಗಿ ಮೆರೆಯದೆ ಇದ್ದರೂ ಧರ್ಮರಾಯನಲ್ಲಿ ಅವಿನಾಭಾವದಿಂದ ನೆಲೆಸಿದ್ದ ಸತ್ಯಧರ್ಮನಿಷ್ಠೆಯ ಪ್ರಭಾವವು ಭೀಮಾರ್ಜುನರನ್ನೂ ಅತ್ಯಂತ ಉದ್ವೇಜಕವಾದ ದ್ರೌಪದೀ ವಸ್ತ್ರಾಪಹರಣ, ಕೀಚಕನಿಂದ ಒದೆ, ಜಯದ್ರಥನಿಂದ ಪೀಡೆ, ಮುಂತಾದ ಸನ್ನಿವೇಶಗಳಲ್ಲೂ ಅಣ್ಣನ ಆಜ್ಞೆಯನ್ನು ಮೀರದಂತೆ ಅಂಕೆಯಲ್ಲಿಡಬಲ್ಲದ್ದಾಗಿರುತ್ತದೆ.

ಧರ್ಮರಾಯನಿಂದ ಭೀಮನ ರಕ್ಷಣೆ ಅಜಗರ ವೃತ್ತಾಂತ.

ಪಾಂಡವರು ಗಂಧಮಾದನ ಪರ್ವತದ ಸಮೀಪದಲ್ಲಿ ವಾಸವಾಗಿದ್ದಾಗ ಒಂದು ದಿನ ಬೇಟೆಯ ಪ್ರಸಂಗದಿಂದ ಕಾಡಿನಲ್ಲಿ ಅಲೆಯುತ್ತಿದ್ದ ಭೀಮನನ್ನು ಕಂಡು ಒಂದು ದೊಡ್ಡ ಅಜಗರ ಸರ್ಪವು ಅವನನ್ನು ಸುತ್ತಿ ಬಿಗಿದು ಕದಲದಂತೆ ಮಾಡಿತು. ಅವನ ಅತಿಮಾನುಷ ಸಾಹಸಬಲಗಳೇನೂ ಪ್ರಯೋಜನಕ್ಕೆ ಬರಲಿಲ್ಲ. ಆಗ ಧರ್ಮರಾಯನು ಅವನನ್ನು ಹುಡುಕುತ್ತ ಬಂದು ಆ ಸ್ಥಿತಿಯಲ್ಲಿದ್ದ ಭೀಮನನ್ನು ಕಂಡನು. ಆ ಸರ್ಪವು ತಾನು ನಹುಷಚಕ್ರವರ್ತಿ ಎಂದೂ, ಐಶ್ವರ್ಯಮದಗರ್ವಿತನಾಗಿದ್ದ ಅವನಿಗೆ ಅಗಸ್ತ್ಯರ ಶಾಪದಿಂದ ಸರ್ಪಜನ್ಮ ಬಂದಿತ್ತೆಂದೂ, ಅದು ಕೇಳುವ ಪ್ರಶ್ನೆಗಳಿಗೆ ಸದುತ್ತರವನ್ನು ಕೊಟ್ಟರೆ ಮಾತ್ರ ಭೀಮನನ್ನು ಬಿಡುವುದಾಗಿಯೂ ಹೇಳಿತು. ಸೋದರಪ್ರೇಮ ಪ್ರತೀಕಾರೇಚ್ಛೆಗಳನ್ನು ಬಿಗಿಹಿಡಿದು

ತಾಳ್ಮೆಯಿಂದ ಧರ್ಮರಾಯನು ಉತ್ತರಗಳನ್ನು ಹೀಗೆ ಕೊಟ್ಟನು. ಬ್ರಾಹ್ಮಣನು ಯಾರು? ಅವನು ತಿಳಿದುಕೊಳ್ಳಬೇಕಾದುದೇನು? ಸತ್ಯ, ಧರ್ಮ, ತಾಳ್ಮೆ, ಶೀಲ, ಅಹಿಂಸೆ, ದಾನ, ದಮ, ದಯೆ ಎಂಬ ಗುಣಗಳುಳ್ಳವನು ಬ್ರಾಹ್ಮಣನು. ಸುಖದುಃಖಗಳನ್ನು ಮೀರಿರುವ ಪರಬ್ರಹ್ಮವನ್ನು ಅವನು ತಿಳಿಯಬೇಕು. ಶೂದ್ರನಲ್ಲಿ ಈ ಗುಣಗಳಿದ್ದರೆ ಅವನು ಶೂದ್ರನಲ್ಲ. ಬ್ರಾಹ್ಮಣನಲ್ಲಿ ಇವು ಇಲ್ಲದಿದ್ದರೆ ಅವನು ಬ್ರಾಹ್ಮಣನೂ ಅಲ್ಲ. ಈ ಗುಣಗಳಿಂದಲೇ ಬ್ರಾಹ್ಮಣ್ಯವನ್ನು ನಿರ್ಣಯಿಸಬೇಕಾದರೆ ಜಾತಿಯ ಸ್ಥಾನವಾವುದು? ಎಲ್ಲರಲ್ಲಿಯೂ ಎಲ್ಲರೂ ಮಕ್ಕಳನ್ನು ಪಡೆಯುತ್ತಿರುವುದರಿಂದ ಜಾತಿಗಳು ಬೆರೆದಿವೆ. ಜಾತಿಯಿಂದಲೇ ನಿರ್ಣಯಿಸಲಾಗುವುದಿಲ್ಲ. ಶೀಲವೇ ಮುಖ್ಯವಾದುದು. ಬ್ರಾಹ್ಮಣನಿಗೆ ಗಾಯತ್ರಿಯೇ ತಾಯಿ, ಆಚಾರ್ಯನೇ ತಂದೆ. ವೇದಾಭ್ಯಾಸಮಾಡುವುದರಿಂದಲೇ ಬ್ರಾಹ್ಮಣ್ಯವು. ಹೀಗೆ ಸತ್ಯ, ಧರ್ಮ, ದಮ, ದಾನ, ದಯೆಗಳೇ ಸದ್ಗತಿಗೆ ಕಾರಣಗಳು. ಎಂದು ಹೇಳಿದ ಧರ್ಮರಾಯನನ್ನು ಮೆಚ್ಚಿ, ಭೀಮನನ್ನು ಬಿಟ್ಟು ನಹುಷನು ಶಾಪದಿಂದ ಬಿಡುಗಡೆಹೊಂದಿ, ಹೊರಟುಹೋದನು. ಧರ್ಮರಾಯನು ಭೀಮನನ್ನು ಕರೆದುಕೊಂಡು ಮನೆಗೆ ಬಂದನು.

ಪಾಂಡವರು ದ್ವೈತವನದಲ್ಲಿದ್ದಾಗ ಅವರೆದುರಿನಲ್ಲಿ ತನ್ನ ಸಂಪತ್ತುಗಳನ್ನು ಮೆರೆಯಿಸಿ ಅವರಿಗೆ ನೋವನ್ನುಂಟುಮಾಡಲು ಬಂದ ದುರ್ಯೋಧನ ಮುಂತಾದವರಿಂದ ಅಲ್ಲಿಗೆ ವಿಹಾರಕ್ಕೆ ಬಂದಿದ್ದ ಗಂಧರ್ವರಿಗೆ ಅಪರಾಧವಾಗಲು ಅವರು ದುರ್ಯೋಧನ ಮುಂತಾದವರನ್ನು ಯುದ್ಧದಲ್ಲಿ ಸೋಲಿಸಿ ಸೆರೆಹಿಡಿದುಕೊಂಡು ಹೋಗುತ್ತಿದ್ದರು. ಆಗ ಧರ್ಮರಾಯನು

"ಅಪಕಾರಿಣಿ ಯಸ್ಸಾಧುಃ ಸ ಸಾಧು ಸ್ಸದ್ಭಿರುಚ್ಯತೇ ‖"

ಎಂಬಂತೆ ಧರ್ಮರಾಯನು ಭೀಮಾರ್ಜುನರನ್ನು ಕುರಿತು ದುರ್ಯೋಧನನನ್ನು ಬಿಡಿಸಲು ಹೇಳಿದನು. ಭೀಮನು ಒಪ್ಪದಿರಲು

"ಸ್ವವ್ಯೂಹಕಲಹೇ ಪ್ರಾಪ್ತೇ ವಯಂ ಪಂಚೈವ ತೇ ಶತಂ।
ಪರೈಃ ಪರಿಭವೇ ಪ್ರಾಪ್ತೇ ವಯಂ ಪಂಚೋತ್ತರಂ ಶತಂ ॥"

ಎಂದರೆ "ನಮ್ಮ ನಮ್ಮಲ್ಲಿಯೇ ಜಗಳವಾದರೆ ನಾವು ಐದು ಜನರೇ ಒಂದು. ಕೌರವರು ನೂರು ಜನರೇ ಒಂದು. ಆದರೆ ಇತರರಿಂದ ನಮ್ಮ ವಂಶಕ್ಕೆ ಅವಮಾನವು ಬರುವುದಾದರೆ, ನಾವು ನೂರೈದು ಜನರೂ ಒಂದೇ ಗುಂಪಾಗಿ ಕೆಲಸಮಾಡಬೇಕು" ಎಂದು ಹೇಳಿ ಭೀಮಾರ್ಜುನರನ್ನು ಕಳುಹಿಸಿ ಅವನನ್ನು ಬಿಡಿಸಿ ಕ್ಷಮಿಸಿ ಬುದ್ಧಿವಾದ ವನ್ನೂ ಹೇಳಿ ಊರಿಗೆ ಕಳುಹಿಸಿದನು.

ಪಾಂಡವರು ಕಾಮ್ಯಕವನದಲ್ಲಿದ್ದಾಗ ಅವರು ಒಂದು ದಿನ ಬೇಟೆಗೆ ಹೋಗಿದ್ದಾಗ ದುಶ್ಶಲೆಯ ಗಂಡನೂ ದುರ್ಯೋಧನನ ಭಾವ ಮೈದುನನೂ ಆದ ಜಯದ್ರಥನು ಆ ಮಾರ್ಗವಾಗಿ ಹೋಗುತ್ತಾ ದ್ರೌಪದಿಯನ್ನು ಕಂಡು ಮೋಹಿಸಿ ಒಬ್ಬಳೇ ಇರುವ ಅವಳನ್ನು ಬಲಾತ್ಕಾರವಾಗಿ ರಥದಲ್ಲಿ ಕೂರಿಸಿಕೊಂಡು ಹೋಗುತ್ತಿದ್ದನು. ಅಷ್ಟರಲ್ಲಿ ಪಾಂಡವರು ಬರಲು ಅವಳನ್ನು ಬಿಟ್ಟು ಓಡಿಹೋದನು. ಭೀಮಾರ್ಜುನರು ಅವನನ್ನು ಬೆನ್ನಟ್ಟಿ ಹೋಗಿ ಹಿಡಿದು ಶಿಕ್ಷಿಸಿ ಅಣ್ಣನ ಸಮೀಪಕ್ಕೆ ಕಟ್ಟಿತಂದರು. ಧರ್ಮರಾಯನು ಅವನು ತಮ್ಮ ಸಂಬಂಧಿ ಎಂದು ಕ್ಷಮಿಸಿ ಬಿಡಿಸಿ ಕಳುಹಿಸಿದನು.

ಯಕ್ಷ ಪ್ರಶ್ನೆಗಳಿಗೆ ಧರ್ಮರಾಯನ ಉತ್ತರಗಳು.

ಪಾಂಡವರು ದ್ವೈತವನದಲ್ಲಿದ್ದಾಗ ಬ್ರಾಹ್ಮಣನೊಬ್ಬನು ಮರಕ್ಕೆ ತಗಲುಹಾಕಿದ್ದ ತನ್ನ ಶ್ರೌತಾಗ್ನಿಯನ್ನು ಸಮಾರೋಪಣೆ ಮಾಡಿದ್ದ ಯಜ್ಞಾರಣಿ ಯನ್ನು ಜಿಂಕೆಯೊಂದು ಆ ಮರಕ್ಕೆ ಮೈಯುಜ್ಜುತ್ತಾ ತನ್ನ ಕೊಂಬಿಗೆ ಸಿಕ್ಕಿಕೊಂಡ ಅದನ್ನು ತೆಗೆದುಕೊಂಡು ಹೋಯಿತೆಂದೂ ಅದರಿಂದ ತನ್ನ ಅಗ್ನಿ ಹೋತ್ರ ಧರ್ಮಾಚರಣೆಗೆ ಅಡ್ಡಿಯಾಗಿದೆ ಎಂದೂ ಅದನ್ನು ತಂದುಕೊಡ ಬೇಕೆಂದೂ ಪಾಂಡವರನ್ನು ಪ್ರಾರ್ಥಿಸಿದನು. ಪಾಂಡವರು ಧನು ರ್ಬಾಣಗಳನ್ನು ತೆಗೆದುಕೊಂಡು ಜಿಂಕೆಯನ್ನು ಬೆನ್ನಟ್ಟಿಹೋದರು.

ಬಹುದೂರ ಹೋದಮೇಲೆ ಬಾಣವನ್ನು ಬಿಟ್ಟರು. ಬಾಣಗಳು ಆ ಜಿಂಕೆಗೆ ತಗುಲಲೊಲ್ಲವು. ಜಿಂಕೆಯು ಕಣ್ಮರೆಯಾಯಿತು. ಬಳಲಿದ್ದ ಪಾಂಡವರು ಬಾಯಾರಿಕೆಯನ್ನು ನಿವಾರಿಸಲು ನೀರನ್ನು ತರಲು ನಕುಲನನ್ನು ಕಳುಹಿಸಿದರು. ಸಮೀಪದಲ್ಲಿದ್ದ ಕೊಳಕ್ಕೆ ಹೋಗಿ ನೀರು ಕುಡಿಯಲು ಬಗ್ಗಿದ ನಕುಲನನ್ನು ಅಶರೀರವಾಣಿಯು ತಡೆಯು ಹೇಳಿ ತನ್ನ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಟ್ಟಮೇಲೆಯೇ ನೀರನ್ನು ಕುಡಿಯಬಹುದೆಂದು ಹೇಳಲು, ಅದನ್ನು ಲಕ್ಷಿಸದೇ ನೀರನ್ನು ನಕುಲನು ಕುಡಿಯಲು ಸತ್ತುಬಿದ್ದನು. ಆಮೇಲೆ ಸಹದೇವನು ಬಂದು ನೋಡಿ ಬಾಯಾರಿಕೆ ಮತ್ತು ಸೋದರನ ಮರಣದುಃಖ ಇವುಗಳಿಗೆ ಪರವಶನಾಗಿ ಆ ಆಕಾಶವಾಣಿಯನ್ನು ಲಕ್ಷಿಸದೇ ನೀರು ಕುಡಿದು ಸತ್ತವನಂತೆ ಬಿದ್ದನು. ಹಾಗೆಯೇ ಅರ್ಜುನನೂ ಅಲ್ಲಿಗೆ ಬಂದು ಸೋದರರ ಮರಣ ದುಃಖ, ಬಾಯಾರಿಕೆಗಳಿಂದ ತಾಳ್ಮೆಯನ್ನು ಕಳೆದುಕೊಂಡು ಆ ಅಶರೀರವಾಣಿಯನ್ನು ಲೆಕ್ಕಿಸದೇ ನೀರನ್ನು ಕುಡಿದು ಸತ್ತವನಂತೆ ದಡದಲ್ಲಿ ಬಿದ್ದನು. ಕಡೆಗೆ ಭೀಮನನ್ನು ಕಳುಹಿಸಲು ಅವನೂ ಸಹನೆಯಿಲ್ಲದೆ ನೀರನ್ನು ಕುಡಿದು ಮೂರ್ಛಿತನಾಗಿ ಮೆಟ್ಟಿಲಮೇಲೆ ಬಿದ್ದನು. ಕಟ್ಟಕಡೆಗೆ ಧರ್ಮರಾಯನೇಬಂದು ನೋಡಿದನು. ಬಾಯಾರಿಕೆಯೂ ಸೋದರರ ಮರಣ ದುಃಖವೂ ಹೆಚ್ಚಾಯಿತು. ಆದರೂ ಅದನ್ನು ತಾಳ್ಮೆಯಿಂದ ಸಹಿಸಿಕೊಂಡು ಆ ಯಕ್ಷನ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲೊಪ್ಪಿದನು. ಸೂರ್ಯೋದಯಾಸ್ತಗಳು ಯಾರಿಂದ ಕ್ಲಪ್ತವಾಗಿ ನಡೆಯುತ್ತಿವೆ? ಪರಬ್ರಹ್ಮತತ್ವದ ಶಕ್ತಿಯಿಂದ ಸೂರ್ಯೋದಯಾಸ್ತಗಳಾಗುತ್ತವೆ. ಪ್ರಪಂಚದಲ್ಲಿನ ಕ್ರಮಶಿಸ್ತುಗಳು ಬ್ರಹ್ಮನ ಕಟ್ಟಲೆಯಂತೆ ತಪ್ಪದೆ ಇವೆ. ಇದರ ನೆಲೆಯು ಸತ್ಯಧರ್ಮದಲ್ಲಿದೆ.

ಲೋಕದಲ್ಲಿ ಆಶ್ಚರ್ಯಕರವಾದುದು ಯಾವುದು? ಪ್ರತಿದಿನವೂ ಜನರು ಸಾಯುತ್ತಿರುವುದನ್ನು ನೋಡುತ್ತಿದ್ದರೂ ಇತರ ಜನರು ತಾವು ಮಾತ್ರ ಶಾಶ್ವತವಾಗಿರುವೆವೆಂದು ಕುರುಡು ನಂಬಿಕೆಯುಳ್ಳವರಾಗಿರುವುದು ಆಶ್ಚರ್ಯಕರವಾದ ಸಂಗತಿಯು.

ಬ್ರಾಹ್ಮಣರಿಗೆ ದೇವತನವು ಜ್ಞಾನಾರ್ಜನ ಪ್ರಸಾರಣಗಳಿಂದ ಉಂಟಾಗುತ್ತದೆ. ಕ್ಷತ್ರಿಯರಿಗೆ ದೇವತನವು ಶಸ್ತ್ರಾಸ್ತ್ರ ಪರಾಕ್ರಮಗಳಿಂದ, ಮರೆಹೊಕ್ಕವರನ್ನು ಕೈಬಿಡದೆ ಕಾಪಾಡುವುದರಿಂದ ಉಂಟಾಗುತ್ತದೆ. ಭೂಮಿಗಿಂತ ದೊಡ್ಡವಸ್ತುವು ತಾಯಿ. ಅಂತರಿಕ್ಷಕ್ಕಿಂತ ಎತ್ತರವಾದುದು ತಂದೆ. ಗಾಳಿಗಿಂತ ವೇಗವುಳ್ಳದ್ದು ಮನಸ್ಸು. ಮನುಷ್ಯನಿಗೆ ಹೆಚ್ಚಾಗಿರುವುದು ಚಿಂತೆ.

ಧರ್ಮವು ದಕ್ಷತೆಯಲ್ಲೂ, ಯಶಸ್ಸು ದಾನದಲ್ಲೂ, ಸ್ವರ್ಗವು ಸತ್ಯದಲ್ಲೂ, ಸುಖವು ಶೀಲದಲ್ಲೂ ಮುಖ್ಯವಾಗಿ ಇರುತ್ತದೆ. ಧನ ಸಾಧನಗಳಲ್ಲಿ ದಕ್ಷತೆಯೂ, ಧನಗಳಲ್ಲಿ ವಿದ್ಯೆಯೂ, ಲಾಭಗಳಲ್ಲಿ ಆರೋಗ್ಯವೂ, ಸುಖಗಳಲ್ಲಿ ತೃಪ್ತಿಯೂ, ಉತ್ತಮವಾದುದಾಗಿರುತ್ತದೆ. ಕ್ರೋಧವನ್ನು ಬಿಟ್ಟರೆ ಮಾನವನು ದುಃಖಿಯಾಗುವುದಿಲ್ಲ. ಗರ್ವವನ್ನು ಬಿಟ್ಟರೆ ಪ್ರಿಯನೂ, ಕಾಮವನ್ನು ಬಿಟ್ಟರೆ ಧನವಂತನೂ, ಲೋಭವನ್ನು ಬಿಟ್ಟರೆ ಸುಖಿಯೂ ಆಗುತ್ತಾನೆ.

ಈ ಉತ್ತರಗಳಿಂದ ತೃಪ್ತನಾದ ಯಕ್ಷನು "ನಿನ್ನ ತಮ್ಮಂದಿರಲ್ಲಿ ಯಾರು ಬದುಕಬೇಕೆಂದು ಆಶಿಸುತ್ತೀಯೆ?" ಎಂದು ಕೇಳಲು ಧರ್ಮರಾಯನು "ನಕುಲನು ಬದುಕಲಿ" ಎಂದನು. "ಭೀಮನು ನಿನಗೆ ತುಂಬ ಪ್ರೀತಿಪಾತ್ರನು, ಅರ್ಜುನನು ನಿಮಗೆಲ್ಲರಿಗೂ ದಿಕ್ಕು, ಹೀಗಿದ್ದರೂ ನಕುಲನು ಬದುಕಲೆಂದು ಆಶಿಸಿದ್ದೇಕೆ?" ಎನ್ನಲು, ಆನೃಶಂಸ್ಯ (ದಯಾಶೀಲತೆ)ವೇ ಉತ್ತಮ ಧರ್ಮ. ನಾನು ನನ್ನ ಧರ್ಮದಿಂದ ಕದಲಲಾರೆ, ನನಗೆ ಕುಂತಿಯು ಹೇಗೋ ಮಾದ್ರಿಯೂ ಹಾಗೆಯೇ, ಅವರಿಬ್ಬರನ್ನೂ ಸಮನಾಗಿ ಕಾಣಬಯಸುತ್ತೇನೆ. ಆದುದರಿಂದ ನಕುಲನು ಬದುಕಲಿ ಎಂದು ಆಶಿಸುತ್ತೇನೆ. ಎಂದನು. ಯಕ್ಷನು ಸುಪ್ರೀತನಾಗಿ "ನಿನ್ನ ತಮ್ಮಂದಿರೆಲ್ಲರೂ ಬದುಕಲಿ!" ಎಂದು ಹೇಳಿ, ನಾನು "ನಿನ್ನ ತಂದೆಯಾದ ಧರ್ಮನು. ನಿನ್ನನ್ನು ನೋಡಿಹೋಗಲು ಬಂದೆನು. ನಿನ್ನ ಗುಣಗಳನ್ನು ಮೆಚ್ಚಿದೇನೆ. ನಿನಗೆ ಬೇಕಾದ ವರವನ್ನು ಬೇಡು." ಎನ್ನಲು, ಧರ್ಮರಾಯನು ಅರಣಿಯನ್ನೂ, ಅಜ್ಞಾತ

ವಾಸದಲ್ಲಿ ಯಾರೂ ನಮ್ಮನ್ನು ಗುರುತಿಸದಿರಲೆಂದೂ, ನಾನು ಲೋಭ ಮೋಹ ಕ್ರೋಧಗಳನ್ನು ಜಯಿಸಿರುವಂತೆಯೂ, ನನ್ನ ಮನಸ್ಸು ದಾನ ತಪಸ್ಸು ಸತ್ಯಗಳಲ್ಲಿ ನೆಲಸಿರುವಂತೆ ಆಗಲೆಂದೂ ಬೇಡಿದನು. ಹಾಗೆಯೇ ಆಗಲೆಂದು ಹೇಳಿ ಆ ಧರ್ಮಪುರುಷನು ಕಣ್ಮರೆಯಾದನು. ತಮ್ಮಂದಿರೊಡನೆ ಧರ್ಮರಾಯನು ಆಶ್ರಮಕ್ಕೆ ಬಂದನು. ಬ್ರಾಹ್ಮಣನಿಗೆ ಅರಣಿ ದೊರಕಿತು. ಹೀಗೆ ಧರ್ಮರಾಯನ ಧರ್ಮನಿಷ್ಠೆ ಸಹನೆ ಮುಂತಾದ ಗುಣಗಳು ಎಲ್ಲರನ್ನೂ ಕಾಪಾಡಿದುವು.

ಮಹಾಪ್ರಸ್ಥಾನ.

ಕಡೆಗೆ ಮಹಾ ಪ್ರಸ್ಥಾನಕಾಲವು ಬರಲು ದರ್ಮರಾಯನು ಯುಯುತ್ಸುವನ್ನು ಕೌರವ ರಾಜ್ಯದಲ್ಲೂ ಪರಿಕ್ಷಿತ್ತನ್ನು ಪಾಂಡವರಾಜ್ಯದಲ್ಲೂ ಅಭಿಷೇಕ ಮಾಡಿ, ಕೃಪಾಚಾರ್ಯನನ್ನು ಪರೀಕ್ಷಿತ್ತಿಗೆ ಗುರುವನ್ನಾಗಿಮಾಡಿ, ಸುಭದ್ರೆಗೆ ಯಾದವ ರಾಜನಾಗುವ ವಜ್ರನನ್ನು ಕಾಪಾಡುವಂತೆಯೂ, ಧರ್ಮವನ್ನು ಬಿಡದೆ ಎಲ್ಲವನ್ನೂ ಎಲ್ಲರನ್ನೂ ನೋಡಿಕೊಳ್ಳಲು ಹೇಳಿ ದಾನಧರ್ಮಗಳನ್ನು ಆಚರಿಸಿ "ಯೋಗೇನಾಂತೇ ತನುತ್ಯಜಾಂ" ಎಂಬಂತೆ ತಮ್ಮಂದಿರು ದ್ರೌಪದಿಯೊಡನೆ ಹೊರಟನು. ನಾಯಿಯೊಂದು ಅವನನ್ನು ಬಿಡದೆ ಹಿಂಬಾಲಿಸಿತು. ಏನು ಮಾಡಿದರೂ ಬಿಟ್ಟುಹೋಗಲಿಲ್ಲ. ದಾರಿಯಲ್ಲಿ ದ್ರೌಪದಿಯು ಮೊದಲು ಬಿದ್ದುದಕ್ಕೆ ಅವಳು ಅರ್ಜುನನಲ್ಲಿ ಹೆಚ್ಚು ಪಕ್ಷಪಾತಿಯಾಗಿದ್ದಳೆಂದೂ, ಆ ಮೇಲೆ ಸಹದೇವನು ಬಿದ್ದುದಕ್ಕೆ ಅವನು ಯಾರೂ ತನ್ನಷ್ಟು ಬುದ್ಧಿವಂತರಲ್ಲವೆಂದು ತಿಳಿದಿದ್ದುದು ಕಾರಣವೆಂದೂ, ಆ ಮೇಲೆ ನಕುಲನು ತನ್ನಷ್ಟು ರೂಪವಂತರು ಯಾರೂ ಇಲ್ಲವೆಂದು ಅಹಂಕಾರವಿದ್ದುದರಿಂದ ಬಿದ್ದನೆಂದೂ, ಅನಂತರದಲ್ಲಿ ಅರ್ಜುನನು ತಾನೇ ಶೂರನೆಂದೂ ಎಲ್ಲ ಶತ್ರುಗಳನ್ನೂ ತಾನೊಬ್ಬನೇ ಸಂಹರಿಸಬಲ್ಲನೆಂದು ಹೇಳಿದರೂ ಹಾಗೆ ಮಾಡದೆ ಹೋದುದೂ ಇತರ ಬಿಲ್ಲುಗಾರರನ್ನು ಅಲ್ಲಗಳೆಯುತ್ತಿದ್ದುದೂ ಈ ಮುಂತಾದುವು ಅವನ ಪತನಕಾರಣವೆಂದೂ, ತರುವಾಯ ಕಡೆಗೆ ಭೀಮನೂ ಬೀಳಲು ಕಾರಣವು ಅವನು

ಇತರರನ್ನು ಲೆಕ್ಕಿಸದೇ ಅತಿಯಾಗಿ ತಿನ್ನುತ್ತಿದ್ದುದೂ, ಆತ್ಮಸುತ್ತಿಯೂ ಆಗಿತ್ತೆಂದು ಧರ್ಮರಾಯನು ವಿವರಿಸುತ್ತಾ ಮುಂದುವರೆದನು. ಇಂದ್ರನು ಬಂದು ಧರ್ಮರಾಯನನ್ನು ಕುರಿತು ಧರ್ಮಿಷ್ಠನಾದ ನೀನು ಸ್ವರ್ಗಕ್ಕೆ ಬರಬೇಕೆಂದು ಕರೆದನು. ತಮ್ಮಂದಿರಿಗೂ ದ್ರೌಪದಿಗೂ ದೊರೆಯದ ಸ್ವರ್ಗವು ತನಗೂ ಬೇಡವೆಂದನು. ಅವರು ಮುಂಚಿತವಾಗಿ ಸ್ವರ್ಗಕ್ಕೆ ಹೋಗಿದಾರೆ. ಅಲ್ಲಿಗೆ ನೀನೂ ಬರ ಬೇಕೆನ್ನಲು, ನನ್ನನ್ನು ಬಿಡದೆ ಹಿಂಬಾಲಿಸಿ ಬರುತ್ತಿರುವ ಈ ನಾಯಿ ಯನ್ನು ಬಿಟ್ಟುಬರಲಾರೆನೆಂದನು. ನಾಯಿ ನೋಡಿದ್ದು ನಷ್ಟ. ಆದುದರಿಂದ ಅದಕ್ಕೆ ಸ್ವರ್ಗಕ್ಕೆ ಬರುವ ಅರ್ಹತೆ ಇಲ್ಲ. ತಮ್ಮಂದಿ ರನ್ನೂ ಹೆಂಡತಿಯನ್ನೂ ಬಿಟ್ಟು ಬಂದಿರುವವನಿಗೆ ನಾಯಿಯಲ್ಲಿ ಮೋಹವೇಕೆ ? ಎನ್ನಲು ಸತ್ತವರೊಡನೆ ಸ್ನೇಹವಿಲ್ಲ, ಜಗಳವೂ ಇಲ್ಲ. ಅವರನ್ನು ಬದುಕಿಸುವ ಹಾಗೂ ಇಲ್ಲ. ಆದುದರಿಂದ ಅವರನ್ನು ತೊರೆದುದಾಯಿತು. ಬದುಕಿರುವ ಭಕ್ತನೂ ಆಶ್ರಿತನೂ ಆಗಿರುವ ನಾಯಿಯನ್ನಾದರೂ ಬಿಡಲಾರೆ. ಇದಿಲ್ಲದೆ ಸ್ವರ್ಗವು ನನಗೂ ಬೇಡವೆಂದು ಉತ್ತರಿಸಿದನು. ಆಗ ಧರ್ಮದೇವನು ಮೆಚ್ಚಿ ಪ್ರತ್ಯಕ್ಷ ನಾಗಿ "ಧರ್ಮರಾಯ, ರಾಜಶ್ರೇಷ್ಠ, ಸತ್ಕುಲಪ್ರಸೂತ, ಶೀಲ ಪ್ರಜ್ಞಾ ಭೂತದಯೆಗಳಿಂದ ಸಂಪನ್ನ, ನಿನ್ನನ್ನು ಮೆಚ್ಚಿರುತ್ತೇನೆ" ಎಂದನು. ಮಹಾಪ್ರಸ್ಥಾನವು ಮುಗಿದು ಸ್ವರ್ಗಾರೋಹಣವು ಮೊದಲಾಯಿತು. ಅಲ್ಲಿ ಧರ್ಮರಾಯನು ಮೊದಲು ದುರ್ಯೋಧನ ನನ್ನು ನೋಡಿ ಸರ್ವಾನರ್ಥಕಾರಣನೂ ಪಾಪಿಯೂ ಆದ ಅವನಿಗೆ ಸ್ವರ್ಗ ಪ್ರಾಪ್ತಿಯಾದರೆ ತನ್ನ ತಮ್ಮಂದಿರೂ ಮುಂತಾದವರು ಅವನಿ ಗಿಂತ ಮೇಲಾದವರ ಲೋಕವನ್ನು ಪಡೆದಿದ್ದುದನ್ನು ನೋಡಬಯಸಿ ದನು. ಆದರೆ ಅವರಿರುವ ನರಕಲೋಕವನ್ನು ನೋಡಿ ಅವರ ದುಃಖ ದಲ್ಲಿ ದುಃಖಿಯಾಗಿ, ಪಾಪಿಗೆ ಸ್ವರ್ಗವೂ, ಸುಗುಣಿಗಳಿಗೆ ನರಕವೂ ಲಭಿಸುವಂತೆ ಮಾಡುವ ದೈವ ಚೇಷ್ಟೆಯನ್ನು ತಿಳಿಯಲಾರದೆ ಇದ್ದರೂ, ಧರ್ಮರಾಯನು ಅಲ್ಲಿಗೆ ಬಂದುದರಿಂದ ಅವರ ಯಾತನೆಗಳು ಕಡಿಮೆ

ಯಾದವು. ತನ್ನ ತಮ್ಮಂದಿರು ಮುಂತಾದ ಬಂಧುಮಿತ್ರರೂ ಅವನನ್ನು ಅಲ್ಲಿಯೇ ಇರಲು ಬೇಡಿದರು. ಧರ್ಮರಾಯನು ಅವರೆಲ್ಲರೂ ದುಃಖಿಗಳಾಗಿರುವಾಗ ಅವರಿಗಿಲ್ಲದ ಸ್ವರ್ಗ ತನಗೆ ಬೇಡವೆಂದು ಹೇಳಿ, ಅವರ ದುಃಖವನ್ನು ಕಡಿಮೆಮಾಡಲಾಗುತ್ತಿದ್ದುದರಿಂದ ತಾನೂ ಅಲ್ಲಿಯೇ ಇರುವುದಾಗಿ ನಿಶ್ಚಯಿಸಿ ಮುಂದೆ ಬರದೆ ಹೋದನು. ದೇವದೂತರು ಈ ಸಂಗತಿಯನ್ನು ಇಂದ್ರನಿಗೆ ವಿಜ್ಞಾಪಿಸಿದರು. ಸ್ವಲ್ಪ ಹೊತ್ತಿನಲ್ಲಿಯೇ ಇಂದ್ರನೂ ಧರ್ಮಪುರುಷನೂ ಮುಂತಾದವರೆಲ್ಲರೂ ಅಲ್ಲಿಗೆ ಬಂದರು. ಆ ದಿವ್ಯದೇಹಿಗಳೂ ಪುಣ್ಯಕರ್ಮಿಗಳೂ ಅಲ್ಲಿಗೆ ಬಂದಕೂಡಲೆ ಅಲ್ಲಿನ ಕತ್ತಲೆ ಹರಿಯಿತು. ಯಾತನೆ ಪಡುತ್ತಿದ್ದವರು ಯಾರೂ ಅಲ್ಲಿ ಕಾಣಬರಲಿಲ್ಲ. ಆಗ ಇಂದ್ರನು ಯುಧಿಷ್ಠಿರನನ್ನು ಕುರಿತು "ಅಪ್ಪ, ದೇವತೆಗಳ ಈ ಏರ್ಪಾಡಿಗೆ ಕೋಪಗೊಳ್ಳಬೇಡ. ನಿನ್ನ ತಮ್ಮಂದಿರು ಮುಂತಾದವರಿಗೆ ಮೇಲಾದ ಸ್ವರ್ಗವೇ ದೊರೆತಿದೆ. ರಾಜರೆಲ್ಲರೂ ನರಕವನ್ನು ನೋಡಲೇಬೇಕು. ಪ್ರತಿಯೊಬ್ಬನಲ್ಲೂ ಪುಣ್ಯದ ಮತ್ತು ಪಾಪದ ರಾಶಿಗಳಿರುತ್ತವೆ. ದುಃಖವನ್ನು ಮೊದಲು ಅನುಭವಿಸಿಬಿಟ್ಟರೆ ಆ ಮೇಲೆ ಸುಖಾನುಭವವು ಹಿತಕರವಾಗುತ್ತದೆ. ದುರ್ಯೋಧನನಿಗೆ ಹಾಗಾಗಲಿಲ್ಲ. ನೀನು ಒಂದು ನೆಪವಿಟ್ಟುಕೊಂಡು ದ್ರೋಣನಿಗೆ ಸುಳ್ಳನ್ನು ಹೇಳಬೇಕಾಯಿತು. ಅದಕ್ಕೆ ತಕ್ಕಂತೆ ನಿನಗೂ ಮತ್ತೊಬ್ಬರ ನೆಪದಿಂದ ನರಕದರ್ಶನವಾಯಿತು. ನಿನ್ನಂತೆಯೇ ಒಂದೊಂದು ಕಾರಣದಿಂದ ಭೀಮ ಮುಂತಾದವರೂ ನರಕಕ್ಕೆ ಹೋಗಿದ್ದರು. ಅದನ್ನು ನೀನೂ ನೋಡಿದೆ. ಈಗ ಅವರೆಲ್ಲರೂ ಮುಕ್ತರಾಗಿ ಸುಖಿಗಳಾಗಿದಾರೆ. ಅವರನ್ನೂ ಈಗ ನೀನು ನೋಡು. ಮನಸ್ಸಮಾಧಾನವನ್ನು ಪಡೆ. 'ಧರ್ಮಸ್ಯ ಸೂಕ್ಷ್ಮಾ ಗತಿ;' ಎಂಬುದು ನಿನ್ನ ಮನಸ್ಸಿನಲ್ಲೂ ಇದೆ." ಎಂದು ಹೇಳಿ ಸಂತಯಿಸಿದನು. ಧರ್ಮಪುರುಷನು ಅವನನ್ನು ಕುರಿತು "ಅಪ್ಪ, ಮಗ, ಯುಧಿಷ್ಠಿರ, ನಿನ್ನ ಧರ್ಮನಿಷ್ಠೆ, ಸತ್ಯವ್ರತ, ದಮ, ದಾನ, ದಯೆಗಳನ್ನು ನೋಡಿ ನನ್ನ ಮನಸ್ಸಿಗೆ ತುಂಬ ಸಂತೃಪ್ತಿಯಾಗಿದೆ. ಇದು

ನಿನಗೆ ನಾನು ಕೊಟ್ಟ ಮೂರನೆಯ ಪರೀಕ್ಷೆ. ಮೊದಲನೆಯದು ಯಕ್ಷ ಪ್ರಶ್ನೋತ್ತರ ಪ್ರಸಂಗ, ಎರಡನೆಯದು ನಾಯಿಯು ನಿನಗೆ ಒಡ್ಡಿದ ಧರ್ಮ ಸೂಕ್ಷ್ಮದ ಸಮಸ್ಯೆ. ಇದೇ ಮೂರನೆಯದು. ನೀನು ಈ ಮೂರರಲ್ಲೂ ಶ್ಲಾಘ್ಯವಾದ ರೀತಿಯಲ್ಲಿ ತೇರ್ಗಡೆಯಾಗಿ ಯಶಸ್ವಿಯಾಗಿರುವೆ. ನಿನ್ನ ತಮ್ಮಂದಿರೇ ಮುಂತಾದವರಿಗೆ ನರಕವಾದೀತೇ? ಇದೆಲ್ಲ ನಿನ್ನ ಪರೀಕ್ಷೆಗಾಗಿ ಇಂದ್ರನು ತೋರಿಸಿದ ಮಾಯೆ. ರಾಜರೆಲ್ಲರೂ ನರಕವನ್ನು ನೋಡಲೇ ಬೇಕು. ಆದುದರಿಂದ ನೀನೂ ಒಂದುಗಳಿಗೆ ಯಾತನೆಯನ್ನು ಅನುಭವಿಸಬೇಕಾಯಿತು. ಎಂದು ವಿವರಿಸಿದನು. ಯುಧಿಷ್ಠಿರನು ಗಂಗಾಸ್ನಾನದಿಂದ ದಿವ್ಯದೇಹವನ್ನೂ ಪಡೆದು ತಮ್ಮಂದಿರೊಡನೆ ಸೇರಿ ಸುಖವಾಗಿ ಇದ್ದನು.

ಆಮೇಲೆ ಕೌರವ ಪಾಂಡವರು ತಾವು ಯಾರ ಯಾರ ಅಂಶಗಳಿಂದ ಹುಟ್ಟಿ ಬಂದಿದ್ದರೋ ಎಲ್ಲೆಲ್ಲಿಂದ ಬಂದಿದ್ದರೋ ಅಲ್ಲಲ್ಲಿ ಐಕ್ಯ ಹೊಂದಿದರು. ಕೃಷ್ಣನೂ ನಾರಾಯಣನಲ್ಲಿ ಐಕ್ಯ ಹೊಂದಿದನು.

“ಯತೋ ಧರ್ಮಃ ತತಃ ಜಯಃ” ಇಂತಹ ಉದಾಹರಣೆಗಳು ನಮ್ಮ ಸಾಹಿತ್ಯದಲ್ಲಿ ಅಸಂಖ್ಯಾತಗಳಾಗಿವೆ. ಈ ಧರ್ಮವು ಮಾನವ ಸಾಮಾನ್ಯಕ್ಕೇ ಹೃದಯಂಗಮವಾಗಿ ಶ್ರೇಯಸ್ಕರವಾಗಿದೆ.

---

# ಕಲೆ ಸಾಹಿತ್ಯಗಳಲ್ಲಿ ಧಾರ್ಮಿಕ ಸಂಸ್ಕೃತಿ

## ನಾಲ್ಕನೆಯ ಅಧ್ಯಾಯ

ಗ್ರಂಥಗಳ ಪರಿಶೀಲನೆಯಲ್ಲಿ ಮೂರು ದೃಷ್ಟಿ.

ವೈದಿಕ ಕಾಲದಲ್ಲಿ ೧–೧೨೦ ಮತ್ತು ಪುರಾಣೇತಿಹಾಸ ನಾಟಕದರ್ಶನಗಳ ಕಾಲದಲ್ಲಿ ೧೨೧-೩೪೭ ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯು ಕ್ರಮವಾಗಿ ಬೇರೂರಿ ಬಲಗೊಂಡು ಬೆಳೆಯಿತೆಂದೂ, ಇತರ ಸಂಸ್ಕೃತಿಗಳ ಆಘಾತ ಸಂಪರ್ಕಗಳಿಂದ ಅಳಿಯುವೆ ಉಳಿದು ಊರ್ಜಿತವಾಗುತ್ತಿದೆಯೆಂದೂ ಆಯಾ ಕಾಲದ ಸಾಹಿತ್ಯ ಗ್ರಂಥಗಳ ಆಧಾರದಮೇಲೆ ಸಂಗ್ರಹವಾಗಿ ವಿವರಿಸಲಾಗಿದೆ. ಸೌಂದರ್ಯ, ಧರ್ಮ, ತತ್ತ್ವ ಇವುಗಳ ತಿಳಿವಳಿಕೆಗೇ ಜ್ಞಾನವೆಂದು ಹೆಸರಿದೆ. ಈ ತಿಳಿವಳಿಕೆಯು ಮಹಾ ಸಮುದ್ರದಂತೆ ಅಗಾಧವೂ ಅನಂತವೂ ಆಗಿರುತ್ತದೆ. ಜಿಜ್ಞಾಸುವಾದ ಮಾನವನು ತನ್ನ ಜೀವನದ ಅನುಭವ, ಸಂಸ್ಕೃತಿಯ ಅಂತಸ್ತು ಮತ್ತು ಸನ್ನಿವೇಶ ಇವುಗಳ ಸಹಾಯದಿಂದ ಈ ಜ್ಞಾನಸಾಗರವನ್ನು ಮಥಿಸುತ್ತಲೇ ಇರುತ್ತಾನೆ. ಇದರಿಂದ ದೊರೆಯುವ ಮೇಲು ಮೇಲಾದ ಸಂಸ್ಕೃತಿಯೇ ಜಿಜ್ಞಾಸುವು ಪಡೆಯುವ ಅಮೃತವಾಗಿರುತ್ತದೆ. ಈ ಅಮೃತವನ್ನು ಎಲ್ಲ ದೇಶಕಾಲಗಳ "ಜನರಿಗೂ ಹಂಚಿಕೊಡುವ ಮೋಹಿನಿಯೇ ಸಾಹಿತ್ಯ ಸರಸ್ವತಿಯು." ಉತ್ತಮ ಗ್ರಂಥಗಳ ಸಮುದಾಯಕ್ಕೆ ಸಾಹಿತ್ಯವೆಂದು ಹೆಸರಿದೆ. ಗ್ರಂಥಗಳ ಉತ್ತಮತೆಯು ಕಾಲದೇಶಗಳು ಬದಲಾಯಿಸಿದರೂ ಎಲ್ಲರ ಪ್ರೀತ್ಯಾದರಗಳಿಗೆ ಪಾತ್ರವಾಗಿರಬಲ್ಲ ಗುಣವಿಶೇಷಗಳಿಂದ ಕೂಡಿರುವಿಕೆಯೇ ಆಗಿದೆ. ಗ್ರಂಥಗಳನ್ನು ಮೂರುದೃಷ್ಟಿಗಳಿಂದ ವಿಮರ್ಶಿಸಿ ಜನರು ಅಭಿನಂದಿಸುತ್ತಾರೆ. ಮೊದಲನೆಯದು ಕಥಾದೃಷ್ಟಿ. ಎರಡನೆಯದು ಸೌಂದರ್ಯಭಾವದ ದೃಷ್ಟಿ, ಮೂರನೆಯದು ಧರ್ಮತತ್ತ್ವಗಳ ದೃಷ್ಟಿ.

ಕಥಾದೃಷ್ಟಿ, ಸೌಂದರ್ಯ ದೃಷ್ಟಿ, ಧರ್ಮ ದೃಷ್ಟಿ.

ಕಥೆಯು ಮಕ್ಕಳಿಗೆ ಸಂತೋಷಕರವಾಗಿರುತ್ತದೆ. ಅದರಲ್ಲೂ ಕೇವಲ ಕಲ್ಪನಾ ಪ್ರಪಂಚದ ಕಟ್ಟುಕಥೆಗಳು ಅವರಿಗೆ ತುಂಬ ಪ್ರಿಯವಾಗಿರುತ್ತವೆ. ಮಕ್ಕಳು ದೊಡ್ಡವರಾದ ಹಾಗೆಲ್ಲ, ಸಮಾಜ ಜೀವನವು ಆವಶ್ಯಕವಾದ ಹಾಗೆಲ್ಲ, ಅವರ ಮನಸ್ಸು ಧರ್ಮದಕಡೆಗೂ ತಿರುಗುತ್ತದೆ. ಸೌಂದರ್ಯವು ಅವರ ಮನಸ್ಸಿಗೆ ತಗಲುತ್ತದೆ. " ಸುಷ್ಠು ಉಂದತಿಕ್ಲೇದಯತಿ ಹೃದಯಂ ಇತಿ ಸೌಂದರ್ಯಂ," ಎಂದರೆ ಮನಸ್ಸನ್ನು ಕರಗಿಸುವ, ಹೃದಯವನ್ನು ದ್ರವಿಸುವಂತೆ ಮಾಡುವ, ಧರ್ಮಕ್ಕೆ ಸೌಂದರ್ಯವೆಂದು ವ್ಯವಹಾರವಿದೆ. ಇದು ಬಾಹ್ಯವಾದ ಪ್ರಕೃತಿಯಲ್ಲಿ ಕಾಣಬರುವ ಸೌಂದರ್ಯ ಮತ್ತು ಆಂತರವಾದ ಜೀವನದಲ್ಲಿ ಮನಗಾಣಬಹುದಾದ ಸೌಂದರ್ಯ, ಎಂದು ಎರಡು ಬಗೆಯಾಗಿದೆ. ಈ ಸೌಂದರ್ಯವನ್ನು ಕವಿಗಳು ಹೃದಯಂಗಮವಾಗಿ ಸಾಹಿತ್ಯದಲ್ಲಿ ವರ್ಣಿಸಿರುತ್ತಾರೆ. ಸೌಂದರ್ಯವನ್ನು ಎಲ್ಲರೂ ಕಾಣುತ್ತೇವೆ. ಆದರೆ ಅದನ್ನು ತಕ್ಕಮಾತಿನಲ್ಲಿ ವಿವರಿಸಿ ತಿಳಿಸುವ ಶಕ್ತಿ ನಮ್ಮಲ್ಲಿ ಇಲ್ಲವು. ಕವಿಗಳು ಹಿತವೂ ಮಿತವೂ ಆದ ತಕ್ಕಮಾತು ಗಳಿಂದ ಆ ಸೌಂದರ್ಯವನ್ನು ವರ್ಣಿಸಬಲ್ಲವರಾಗಿರುತ್ತಾರೆ. ಸೌಂದರ್ಯದ ತಿಳಿವಳಿಕೆಯು ಸಂತೋಷಕರವಾಗಿರುತ್ತದೆ. ಸೌಂದರ್ಯದ ಅನುಭವವೂ ಧರ್ಮದ ಉಪದೇಶವೂ ಸಾಹಿತ್ಯದಿಂದ ಜನರಿಗೆ ಲಭಿಸುತ್ತವೆ. ಸಾಹಿತ್ಯವು ಧರ್ಮೋಪದೇಶವನ್ನು ಮಾಡ ಬೇಕೇ ? ಬೇಡವೇ ? ಮಾಡುತ್ತದೆಯೇ ? ಇಲ್ಲವೇ ? ಎಂಬ ವಿಷಯ ದಲ್ಲಿ ಭಿನ್ನವಾದ ಅಭಿಪ್ರಾಯಗಳಿವೆ. ಕಾವ್ಯಪ್ರಕಾಶಕಾರನು ಹೀಗೆ ಹೇಳಿದಾನೆ :

ಕಾವ್ಯಂ ಯಶಸೇ ಅರ್ಥಕೃತೇ ವ್ಯವಹಾರ ವಿದೇ ಶಿವೇತರ ಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾ ಸಮ್ಮಿತತಯೋಪ ದೇಶಯುಜೇ ॥

ಕಾವ್ಯದಿಂದ ಕೂಡಲೆ ಉತ್ತಮ ಸುಖಾನುಭವವೆಂಬ ಮುಖ್ಯ ಪ್ರಯೋಜನದ ಲಾಭವೂ, ಧರ್ಮವನ್ನು ಆಚರಿಸು, ಅಧರ್ಮವನ್ನು ಆಚರಿಸಬೇಡ, ಎಂಬ ಉಪದೇಶದ ಲಾಭವೂ ಆಗುತ್ತದೆ. ಧರ್ಮೋಪದೇಶ ಮಾಡುವ ಕಾವ್ಯವು ಉತ್ತಮ ಕಾವ್ಯವಲ್ಲವೆಂಬ ಮಾತಿಗೆ ಅರ್ಥವೂ ಇದೆ. ಧರ್ಮಶಾಸ್ತ್ರ ನೀತಿಶಾಸ್ತ್ರಗಳಂತೆ ಕಾವ್ಯವು ಧರ್ಮೋಪದೇಶಮಾಡುವುದಕ್ಕಾಗಿಯೇ ಉಂಟಾಗುವುದಿಲ್ಲ. ಆದರೆ ಕಾವ್ಯವು ಉಪದೇಶಮಾಡುವ ರೀತಿಯು ಅನ್ಯಾದೃಶವಾಗಿದೆ ಎಂಬುದು ತಾತ್ಪರ್ಯವೆಂದರೆ ತಪ್ಪಾಗಲಾರದು. ಈ ದೃಷ್ಟಿಯಿಂದಲೇ ಸಾಹಿತ್ಯದಲ್ಲಿ ಮೂರು ಬಗೆಯನ್ನು ಭಾರತೀಯ ವಿಮರ್ಶಕರು ತಿಳಿಸಿರುತ್ತಾರೆ. ಸಾಹಿತ್ಯವಿಮರ್ಶಕನಾದ ವಿದ್ಯಾನಾಥನು ಹೀಗೆ ಹೇಳುತ್ತಾನೆ:

ವೇದ ಸಾಹಿತ್ಯವು ಪ್ರಭುಸಮ್ಮಿತ, ಇತಿಹಾಸವು ಮಿತ್ರಸಮ್ಮಿತ, ಕಾವ್ಯವು ಕಾಂತಾ ಸಮ್ಮಿತ.

ಯದ್ವೇದಾತ್ ಪ್ರಭುಸಮ್ಮಿತಾದಧಿಗತಂ ಶಬ್ದಪ್ರಧಾನಾಚ್ಚಿರಂ
ಯಚ್ಚಾರ್ಥಪ್ರವಣಾತ್ ಪುರಾಣವಚನಾತ್ ಇಷ್ಟಂ
ಸುಹೃತ್ಸಮ್ಮಿತಾತ್ ।
ಕಾಂತಾಸಮ್ಮಿತಯಾ ಯಯಾ ಸರಸತಾಮಾಪಾದ್ಯಕಾವ್ಯಶ್ರಿಯಾ
ಕರ್ತವ್ಯೇ ಕುತುಕೀ ಬುಧೋವಿರಚಿತಃ ತಸ್ಯೈಸ್ಪೃಹಾಂ ಕುರ್ಮಹೇ॥

ವೇದಗಳಲ್ಲಿ ಧರ್ಮಾಧರ್ಮಗಳ ಸ್ವರೂಪವನ್ನು ತಿಳಿಸಿ, ಧರ್ಮವನ್ನು ಆಚರಿಸಬೇಕೆಂದೂ, ಅಧರ್ಮವನ್ನು ಆಚರಿಸಬಾರದೆಂದೂ, ಶಬ್ದ ಪ್ರಾಧಾನ್ಯದಿಂದ, ಪ್ರಭುವಿನಂತೆ ಅಪ್ಪಣೆಮಾಡಿ ವಿಧಿಸಲಾಗಿದೆ. ಅಲ್ಲಿ ಯುಕ್ತಿವಾದಗಳಿಗೆ ಅವಕಾಶವನ್ನು ಕೊಟ್ಟಿಲ್ಲವು. ಇತಿಹಾಸಪುರಾಣಗಳಾದರೋ ಮಿತ್ರನಂತೆ ಬೋಧಿಸುತ್ತವೆ. ಧರ್ಮಾಚರಣೆಗೆ ಕಾರಣಗಳನ್ನೂ, ಅದರಿಂದಾದ ಒಳ್ಳೆಯ ಫಲಗಳನ್ನೂ ಅವನ್ನು ಸಾಧಿಸಿದ ಹಿಂದಿನ

ಪ್ರಭುಸಮ್ಮಿತ, ಮಿತ್ರಸಮ್ಮಿತ, ಕಾಂತಾ ಸಮ್ಮಿತ ರೀತಿಗಳು.

ಕಾಲದ ಮಹಾಪುರುಷರ ಕಥೆಗಳನ್ನೂ ಉದಾಹರಿಸುತ್ತವೆ. ಹಾಗೆಯೇ ಅಧರ್ಮಾಚರಣೆಯಿಂದ ಇಹಪರ ಸುಖಗಳನ್ನು ಕಳೆದು ಕೊಂಡು ದುಃಖಾಪಯಶಸ್ಸುಗಳಿಗೆ ಗುರಿಯಾಗಿರುವವರ ಉದಾಹರಣೆ ಯನ್ನೂ ಕೊಡುತ್ತವೆ. ಹೀಗೆ ಮಿತ್ರನಂತೆ ಅನುನಯದಿಂದ ವಿಶದವಾಗಿ ವಿಸ್ತಾರವಾಗಿ ವಿವರಗಳೊಡನೆ ತಿಳಿಯಹೇಳುತ್ತಿವೆ. ಕಾವ್ಯಗಳಾ ದರೋ ಧರ್ಮದಲ್ಲಿ ಆಸಕ್ತಿಯನ್ನೂ ಅಧರ್ಮದಲ್ಲಿ ಅನಾದರವನ್ನೂ ಜನರಿಗೆ ಹೃದಯಂಗಮವಾಗಿ ಮನೋಹರವಾಗಿ ಪ್ರಿಯಸತಿಯಂತೆ ಉಂಟುಮಾಡುತ್ತಿವೆ. ಇದರಿಂದ ಜನರು ತಾವಾಗಿಯೇ ಸರಸ ವಾಗಿ "ರಾಮಾದಿಗಳ ಹಾಗೆ ಇರಬೇಕು. ರಾವಣಾದಿಗಳ ಹಾಗೆ ಮಾಡಬಾರದು" ಎಂದು ಮನಗಾಣುತ್ತಾ ನಡೆದುಕೊಳ್ಳುತ್ತಾರೆ. "ವೇದೋಪನಿಷತ್ತುಗಳ ಕಾಲದಿಂದ ನಮ್ಮಲ್ಲಿ ಬೆಳೆದು ಬಂದಿರುವ ಸಾಹಿತ್ಯದಲ್ಲಿ ನಮ್ಮ ಜನಾಂಗದ ಜೀವನಾಡಿಯು ಮಿಡಿಯುತ್ತಿದೆ. ನಮ್ಮ ರಾಮಾಯಣ ಮಹಾಭಾರತಗಳಂಥ ಕಾವ್ಯಗಳನ್ನು ನೋಡಿ ದರೆ ಅದಕ್ಕಿಂತ ಹೆಚ್ಚು ಮಹತ್ವವುಳ್ಳ ಕಥೆಗಳನ್ನು ಮತ್ತೆ ಯಾರೂ ಕಟ್ಟಿಲ್ಲವೆನಿಸುತ್ತದೆ. ಆ ಕಥೆಗಳು ಸಾವಿರಾರು ವರ್ಷಗಳ ಕಾಲ ದಿಂದ ನಮ್ಮ ಜನಾಂಗದ ಪ್ರತಿಭೆಯಲ್ಲಿ ನೆನೆದು ಅನುಪಮವಾದ ಅರ್ಥ ಸಂಪತ್ತನ್ನೂ ಭಾವ ಸಂಪತ್ತನ್ನೂ ಗಳಿಸಿಕೊಂಡಿವೆ. ಆದುದ ರಿಂದಲೇ ಅವು ನಮ್ಮ ಜೀವನದಲ್ಲಿ ಬೇರ್ಪಡಿಸಲಾಗದಂತೆ ಬೆರೆದು ಇಂದಿಗೂ ಜನಜೀವನವನ್ನು ರೂಪುಗೊಳಿಸುತ್ತಿವೆ. ಇದರಿಂದ ನಮ್ಮ ಜೀವನವನ್ನು ತಿದ್ದಿಕೊಂಡು ಸಂಸ್ಕೃತರಾಗುವುದೂ ಸುಲಭವೇ ಆಗಿದೆ. "ಪ್ರೀತಿಪಾತ್ರಳಾದ ಪತ್ನಿಯು ಗಂಡನ ಅರಿವಿಲ್ಲದೆಯೇ ಅವನ ಸ್ವಭಾವವನ್ನು ಮಾರ್ಪಡಿಸುವಂತೆ ಸಾಹಿತ್ಯವೂ ನಮಗೆ ತಿಳಿಯದಂತೆಯೇ ನಮ್ಮ ಜೀವನಕ್ಕೆ ಸಂಸ್ಕೃತಿಯ ಮೆರುಗನ್ನು ಕೊಡುತ್ತದೆ." ಸಾಹಿತ್ಯವು ಧರ್ಮೋಪದೇಶವನ್ನು ಮಾಡುವ ರೀತಿಯು ಹೀಗಿರುತ್ತದೆ.

ಕಾವ್ಯನಾಟಕಗಳನ್ನು ಓದುವುದರಿಂದ ಸಹೃದಯರಾದ ಓದುಗರಿಗೆ ಮೊದಲು ಆನಂದವಾಗುತ್ತದೆಂದು ಪಾಶ್ಚಾತ್ಯ ಮತ್ತು ಪೌರ್ವಾತ್ಯ ವಿಮರ್ಶಕರೆಲ್ಲರೂ ಒಪ್ಪಿರುತ್ತಾರೆ. ಆದರೆ ಭಾರತೀಯ ವಿಮರ್ಶಕರು ಕಾವ್ಯನಾಟಕಗಳ ವ್ಯಾಸಂಗದಿಂದ ನೀತಿಧರ್ಮಗಳ ಉಪದೇಶವೂ ತಪ್ಪದೆ ಆಗುತ್ತದೆಂದು ಹೇಳುತ್ತಾರೆ. ಇದು ಎಲ್ಲರ ಅನುಭವದಲ್ಲೂ ಇದೆ. ಕವಿಯು ನೀತಿ ಧರ್ಮಗಳನ್ನು ಬೋಧಿಸುವ ಉದ್ದೇಶವುಳ್ಳವನಾಗಿರುವುದಿಲ್ಲವೆಂಬುದೂ ನಿಜ. ಕವಿಯ ಮನಸ್ಸು ಭಾವಪೂರ್ಣವಾಗಿ ರಸ ಸಮಾಧಿಯಸ್ಥಿತಿಯಲ್ಲಿರುವಾಗ ಕಾವ್ಯವಾಣಿಯು ಹೊರ ಹೊಮ್ಮುತ್ತದೆಂಬುದೂ ನಿಜ. ಆದರೆ ಗ್ರಂಥ ವ್ಯಾಸಂಗದಿಂದ ಭಾವುಕರ ಓದುಗರ ಮನಸ್ಸಿನ ಮೇಲೆ ಸತ್ಪರಿಣಾಮವಾಗಬೇಕಾದುದೂ, ಅದರಿಂದ ಓದುಗರ ಜೀವನದಲ್ಲಿ ಉತ್ತಮ ಸಂಸ್ಕೃತಿಯನ್ನು ಉಂಟುಮಾಡಿ ಅವರ ಜೀವನಕ್ರಮವು ಹಸನಾಗಬೇಕಾದುದು ಎಲ್ಲರೂ, ಕವಿಗಳೂ, ಓದುಗರೂ, ನಿರೀಕ್ಷಿಸುವ ಫಲವಾಗಿರುತ್ತದೆ ಎಂಬುದನ್ನು ಪಾಶ್ಚಾತ್ಯರೂ ಪೌರ್ವಾತ್ಯರೂ ಎಲ್ಲರೂ ಒಪ್ಪಿರುವ ಸಂಗತಿಯಾಗಿದೆ.

ಈ ದೃಷ್ಟಿಯಿಂದ ನೋಡಿದರೆ ಕವಿಯು ತಾನು ರಚಿಸುವ ಕಾವ್ಯಕ್ಕೆ ತಕ್ಕ ವಸ್ತುವನ್ನು ಎಂದರೆ ಓದುಗರ ಬಾಳನ್ನು ಹಸನು ಮಾಡಬಲ್ಲ ಕಥಾ ಸಂದರ್ಭವನ್ನು ಆರಿಸಿಕೊಂಡು ಕಾವ್ಯ ನಾಟಕಗಳನ್ನು ರಚಿಸಬೇಕಾದುದು ಸ್ವಾಭಾವಿಕವೂ ಆಗಿರುತ್ತದೆ. ಈ ರೀತಿಯ ವಿಮರ್ಶೆಯು ನಾಟಕಗಳನ್ನು ವಿಷಾದಾಂತ, ದುಃಖಾಂತ, ದುರಂತವಾಗಿ ಪರ್ಯವಸಾನವಾಗುವ ವಸ್ತುವನ್ನು ಆರಿಸಿಕೊಂಡು ಬರೆದಿರುವುದರಿಂದ ಆ ಕವಿಗಳು ಬರೆದು ಪ್ರಕಟಿಸಿರುವ ನಾಟಕಗಳು ಮೇಲೆ ವಿವರಿಸಿದ ಫಲ ಪರಿಣಾಮಗಳನ್ನು ಉಂಟುಮಾಡುತ್ತಿವೆಯೇ? ಆ ಕವಿಕಾವ್ಯಗಳಿಂದ ಓದುಗರ ಬಾಳೂ ಹಸನಾಗಿ ಮೇಲ್ಮೆಯನ್ನು ಪಡೆಯುತ್ತಿದೆಯೇ ? ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದು ನ್ಯಾಯವಾಗುತ್ತದೆ ಎಂಬುದನ್ನು ನೆನಪಿನಲ್ಲಿಡಬೇಕು.

ಕಾವ್ಯದಿಂದ ಆನಂದವೂ ಧರ್ಮೋಪದೇಶವೂ ಫಲ.

ಹೀಗೆ ವೈದಿಕ ಸಾಹಿತ್ಯದಲ್ಲಿ ಧರ್ಮದ ಉಪದೇಶವನ್ನು ಪ್ರಭುವಿನ ರೀತಿಯಿಂದಲೂ, ಇತಿಹಾಸ ಪುರಾಣಗಳಲ್ಲಿ ಮಿತ್ರನ ರೀತಿಯಿಂದಲೂ, ಕಾವ್ಯನಾಟಕಗಳಲ್ಲಿ ಕಾಂತಾ ಸಮ್ಮಿತ ರೀತಿಯಿಂದಲೂ ಮಾಡಲಾಗುತ್ತಿದೆ. ಕಾವ್ಯಕಲೆಯಿಂದ ಪರನಿರ್ವೃತಿಯು, ಉತ್ತಮಾನಂದದ ಅನುಭವವು ಮುಖ್ಯವಾಗಿ ಉಂಟಾಗುತ್ತದೆ. ಧರ್ಮಾಚರಣೆಯಲ್ಲಿ ಪ್ರವೃತ್ತಿಯಿಂದಲೇ ಕ್ರಮವಾಗಿ ಕಡೆಗೆ ಸುಖಲಾಭವಾಗುತ್ತದೆ. ಅಧರ್ಮಾಚರಣೆಯಿಂದ ದುಃಖವೇ ಕಡೆಗೆ ಲಭಿಸುತ್ತದೆ. ಆದುದರಿಂದ ವಿವೇಕಿಗಳು ಅಧರ್ಮಾಚರಣೆಯಿಂದ ನಿವೃತ್ತರಾಗುತ್ತಾರೆ. ಸುಖ ಪ್ರಾಪ್ತಿಯೂ ದುಃಖ ನಿವೃತ್ತಿಯೂ ಮಾನವನ ಪುರುಷಾರ್ಥವಾಗಿದೆ. ಅಧರ್ಮವನ್ನು ಬಿಟ್ಟು ಧರ್ಮದ ಆಚರಣೆಯಿಂದ ಜೀವನವು ಹಸನಾಗುತ್ತದೆ. ಇದರಿಂದ ಸಂಸ್ಕೃತಿಯು ಮೇಲ್ಪಡುತ್ತಿರುತ್ತದೆ. ಇದರಿಂದ ಧರ್ಮಾಚರಣೆಯಲ್ಲಿ ಪ್ರೀತಿಯೂ ಅಧರ್ಮಾಚರಣೆಯಲ್ಲಿ ಭೀತಿಯೂ ಬಲಗೊಳ್ಳುತ್ತಿರುತ್ತದೆ. ನಮ್ಮ ಜೀವನವು ಹಸನಾಗುತ್ತಾ ಸಾರ್ಥಕವಾಗುತ್ತದೆ. ನಮ್ಮ ಪ್ರಗತಿಯ ಮಾರ್ಗದಲ್ಲಿ ನಾವು ಮುಂದುವರಿಯುತ್ತಿದ್ದೇವೆಂಬುದು ಖಚಿತವಾಗಿ ಗೊತ್ತಾಗುತ್ತದೆ. ಕಾವ್ಯಸಾಹಿತ್ಯದಿಂದ ಆಗುವ ಉಪಕಾರಗಳನ್ನು ಕಾವ್ಯಪ್ರಕಾಶದಲ್ಲಿ ಹೀಗೆ ಹೇಳಿದೆ.

ಕಾವ್ಯಂ ಯಶಸೇಽರ್ಥ ಕ ತೆ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾ ಸಮ್ಮಿತತಯೋಽಪದೇಶಯುಜೇ ॥

ಕಾವ್ಯ ರಚನೆಯಿಂದ ಕವಿಗೆ ಯಶಸ್ಸೂ, ಪುರುಷಾರ್ಥಗಳ ಲಾಭವೂ, ಓದುವ ಅಭಿನಂದಿಸುವ ಜನರಿಗೆ ವ್ಯವಹಾರ ಜ್ಞಾನವೂ, ಅಮಂಗಳದ ನಿವಾರಣೆಯೂ, ಕೂಡಲೆ ಉತ್ತಮಾನಂದದ ಅನುಭವವೂ, ಧರ್ಮದಲ್ಲಿ ಪ್ರವೃತ್ತಿಯೂ, ಅಧರ್ಮದಿಂದ ನಿವೃತ್ತಿಯೂ ದೊರೆಯುತ್ತದೆ.

ಇವುಗಳಲ್ಲಿ ಮುಖ್ಯತಮವಾದ ಫಲವು ಕಾವ್ಯವನ್ನು ಓದಿದ ಕೂಡಲೆ ಸಹೃದಯರಿಗೆ ವಿಗಳಿತ ವೇದ್ಯಾಂತರವಾದ ಬ್ರಹ್ಮಾನಂದ ಸದೃಶವಾದ ಸುಖವು ಅನುಭವಕ್ಕೆ ಬರುತ್ತದೆ. ಕಡೆಗೆ ಕಾವ್ಯದ ನಾಯಕನಂತೆ ಧರ್ಮಾಚರಣೆಯಲ್ಲಿ ಓದುಗರು ಆಸಕ್ತರಾಗುತ್ತಾರೆ. ಹಾಗೆಯೇ ಪ್ರತಿನಾಯಕರಂತೆ ಅಧರ್ಮದಲ್ಲಿ ಪ್ರವರ್ತಿಸುವುದಿಲ್ಲ. ಇದರಿಂದ ಓದುಗರ ಜೀವನವು ಹಸನಾಗುತ್ತದೆ ; ಮತ್ತು ಸರ್ವದಾ ಸುಖಶಾಂತಿಗಳು ಎಲ್ಲರಲ್ಲೂ ನೆಲಸುವಂತಾಗುತ್ತದೆ, ಸುಖಪ್ರಾಪ್ತಿಯೂ ದುಃಖನಿವೃತ್ತಿಯೂ ಮಾನವ ಸಾಮಾನ್ಯರಿಗೂ ಅತ್ಯವಶ್ಯಕವಾಗಿ ಬೇಕಾಗಿರುವ ಪುರುಷಾರ್ಥಲಾಭವು ಕಡೆಗೆ ತಪ್ಪದೆ ಉಂಟಾಗುತ್ತದೆ. ಈ ಪ್ರಯೋಜನವನ್ನು ಯಾರೂ ಇಲ್ಲವೆನ್ನಲಾಗುವುದಿಲ್ಲ. ಜನಜೀವನವು ಹಸನಾಗಬೇಕಾದರೆ ಧರ್ಮದಲ್ಲಿ ಎಲ್ಲರಿಗೂ ಪ್ರವೃತ್ತಿಯೂ ಅಧರ್ಮದಿಂದ ಎಲ್ಲರಿಗೂ ನಿವೃತ್ತಿಯೂ ಆಗಲೇಬೇಕು. ಬೇರೆ ದಾರಿ ಇಲ್ಲವು. ಈ ಧರ್ಮಾಸಕ್ತಿಯು ಜನಸಾಮಾನ್ಯದಲ್ಲಿ ಹೃದಯಂಗಮವಾಗಿ ಮನೋಹರವಾಗಿ ಕಾವ್ಯಸಾಹಿತ್ಯದಿಂದ ಉಂಟಾಗುತ್ತದೆ. ಭಾರತೀಯ ಸಂಸ್ಕೃತಿಯು ಧರ್ಮ ಪ್ರಧಾನವಾದುದರಿಂದ ಭಾರತೀಯ ಕವಿಗಳೂ ಅಂತಹ ಕಾವ್ಯಗಳನ್ನೇ ಬರೆದಿರುತ್ತಾರೆ. ಇತರ ಗ್ರಂಥಗಳು ಕಾಲಕ್ರಮದಲ್ಲಿ ನಷ್ಟವಾಗಿವೆ. ಧಾರ್ಮಿಕ ಸಂಸ್ಕೃತಿಯುಳ್ಳವರಾದುದರಿಂದಲೆ ಭಾರತಾರ್ಯರ ಜನಾಂಗವು ಈಗಿನವರೆಗೂ ಉಳಿದಿದೆ. ಇತರ ಜನಾಂಗಗಳಂತೆ ನಷ್ಟವಾಗಿಲ್ಲ. ಗುರುತಿಸಲಾರದಷ್ಟು ಮಟ್ಟಿಗೆ ಇತರ ಜನಾಂಗಗಳ ಆಘಾತಸಂಪರ್ಕಗಳಿಂದ ಬದಲಾಯಿಸಿಯೂ ಇಲ್ಲ. ಈ ಧಾರ್ಮಿಕ ಸಂಸ್ಕೃತಿಯ ಬಲದಿಂದಲೇ ನಮ್ಮ ಈ ಜನಾಂಗವು ಮುಂದಿನ ಕಾಲದಲ್ಲೂ ಉಳಿದು ಊರ್ಜಿತವಾಗಿರಬೇಕಾಗಿದೆ. ಆದುದರಿಂದಲೇ ಕಾವ್ಯ ಸಾಹಿತ್ಯದಿಂದ ಓದುಗರಿಗೆ ದೊರೆಯುವ ಸಕಲ ಪ್ರಯೋಜನಗಳಲ್ಲಿ ಶಿಖರಪ್ರಾಯವೆಂದೂ, ಧರ್ಮೋಪದೇಶವು ಪಾರ್ಯಂತಿಕ ಪ್ರಯೋಜನವೆಂದೂ ಸಹೃದಯ

ರಾದ ವಿಮರ್ಶಕರು ಹೇಳಿರುತ್ತಾರೆ. ಬಾಹ್ಯಪ್ರಕೃತಿಯಲ್ಲೂ ಜನಜೀವನ ದಲ್ಲೂ ಸೌಂದರ್ಯವನ್ನು ಮನಗಂಡು ಕವಿಯ ಹೃದಯವು ಭಾವ ಪೂರ್ಣವಾಗಿರುವಾಗ, ಸೌಂದರ್ಯಾನುಭವದ ಸಮಾಧಿಯಲ್ಲಿರುವಾಗ ಮಾತೂ ನಿಂತುಹೋಗಿರುವುದರಿಂದ ಕಾವ್ಯವು ಹೊರಹೊಮ್ಮುವುದಿಲ್ಲ. ಭಾವದ ಕಾವು ಸ್ವಲ್ಪಮಟ್ಟಿಗೆ ಇಳಿದಾಗಲೇ ಕವಿಮುಖದಿಂದ ಕಾವ್ಯವು ವಾಗ್ರೂಪದಲ್ಲಿ ಹೊರಹೊಮ್ಮುತ್ತದೆ. ರಸಾವೇಶವು, ಭಾವದಕಾವು, ಸಂಪೂರ್ಣವಾಗಿ ತಣ್ಣಗಾದ ಮೇಲೆ ಉತ್ತಮಕಾವ್ಯ ವನ್ನು ಕವಿಯು ರಚಿಸಲಾರದೆ ಹೋಗುತ್ತಾನೆ ಆಗ ವಿಮರ್ಶ ಗ್ರಂಥಗಳು ಸಾಮಾನ್ಯವಾಗಿ ರಚಿಸಲ್ಪಡುತ್ತವೆ ಎನ್ನಬಹುದು. ವಿಮರ್ಶಕನು ಸಹೃದಯನಾಗಿ ಎಂದರೆ ಕವಿಯೊಡನೆ ಸಮಾನ ವಾಗಿರುವ ಹೃದಯವುಳ್ಳವನಾಗಿ ಇರುತ್ತಾನೆ.

"ಅಷ್ಟಾದಶ ಪುರಾಣಾನಾಂ ಕರ್ತಾ ಸತ್ಯವತೀಸುತಃ ।
ಸ್ತ್ರೀ ಶೂದ್ರದ್ವಿಜ ಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಂ ॥"

ಪುರಾಣಗಳು ಮಿಶ್ರ ಸಮ್ಮಿತ ಗ್ರಂಥಗಳು.

ಎಂದು ದೇವೀ ಭಾಗವತ ಮಹಾಪುರಾಣದ ಮೊದಲನೆಯ ಸ್ಕಂಧದ ಮೂರನೆಯ ಅಧ್ಯಾಯದಲ್ಲೂ, ವಿಷ್ಣು ಭಾಗ ವತ ಮೊದಲನೆಯ ಸ್ಕಂಧದ ನಾಲ್ಕನೆಯ ಅಧ್ಯಾಯದಲ್ಲೂ ಹೇಳಿದೆ. ಇದರಿಂದ ವ್ಯಾಸರು ವೇದಗಳನ್ನು ವಿಂಗಡಿಸಿ ವೇದಾಂತ ಸೂತ್ರಗ ಳನ್ನು ರಚಿಸಿರುವುದಲ್ಲದೆ, ಹದಿನೆಂಟು ಮಹಾ ಪುರಾಣಗಳನ್ನೂ, ಇನ್ನೂ ಹೆಚ್ಚಿನ ಸಂಖ್ಯೆಯ ಉಪಪುರಾಣಗಳನ್ನೂ, ಆಮೇಲೆ ಮಹಾ ಭಾರತವನ್ನೂ ಆ ಬಳಿಕ ವಿಷ್ಣುಭಾಗವತವನ್ನೂ ರಚಿಸಿದರೆಂದು ಗೊತ್ತಾಗುತ್ತದೆ. ವೇದಗಳಲ್ಲಿ ಕಥೆಗಳನ್ನೂ ನೀತಿಗಳನ್ನೂ ಗಹನ ವಾದ ತತ್ವಗಳನ್ನೂ ಸಂಗ್ರಹವಾಗಿ ಸೂಕ್ಷ್ಮವಾಗಿ ಸೂಚಿಸಿರುವುದ ರಿಂದ, ಅವುಗಳನ್ನು ಸಾಮಾನ್ಯ ಜನರು ತಿಳಿದುಕೊಳ್ಳುವುದು ಸುಲಭ ಸಾಧ್ಯವಲ್ಲವೆಂಬುದನ್ನು ಅರಿತು, ದಯಾಳುವಾದ ವ್ಯಾಸ ಮಹರ್ಷಿಯು

ನೀತಿ ತತ್ವಗಳನ್ನು ಪಂಡಿತ ಪಾಮರರೆಲ್ಲರೂ ಸುಲಭವಾಗಿ ತಿಳಿಯಲು ಸಾಧ್ಯವಾಗುವಂತೆ ಇತಿಹಾಸ ಪುರಾಣಗಳಲ್ಲಿ ವಿಸ್ತರಿಸಿ ಜನಸಾಮಾನ್ಯಕ್ಕೆ ತಿಳಿಯುವಂತೆ ವಿವರಿಸಿರುತ್ತಾರೆ. ಈ ಅಂಶವನ್ನು ಆ ಮಹಾಪುರುಷನು,

ಇತಿಹಾಸ ಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ।

ಎಂಬಂತೆ, ಕಥೆಗಳಿಗೆ ವಿವರಗಳನ್ನು ಸೇರಿಸಿ, ನೀತಿಗಳಿಗೆ ಉದಾಹರಣೆ ದೃಷ್ಟಾಂತರಗಳನ್ನು ಕೊಟ್ಟು, ತತ್ವಜ್ಞಾನಕ್ಕೆ ಬೇಕಾದ ಸೋಪಾನಗಳನ್ನು ನಾನಾಬಗೆಗಳಿಂದ ಸ್ವಾಭಾವಿಕವಾದ ಕ್ರಮದೊಡನೆ ವಿವರಿಸಿ, ಪುರಾಣೇತಿಹಾಸಗಳಲ್ಲಿ ತಿಳಿಯಹೇಳಿರುವುದನ್ನು ನೋಡಿದರೆ ನಾವೂ ಅದನ್ನು ಗೊತ್ತುಮಾಡಿಕೊಳ್ಳಬಹುದು. ಆದುದರಿಂದ ಆ ಮಹಾನುಭಾವನು—

" ಕರ್ಮಣ್ಯೇಕಂ ವಚಸ್ಯೇಕಂ ಮನಸ್ಯೇಕಂ ಮಹಾತ್ಮನಾಂ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥"

ಎಂದು ಮುಂತಾಗಿ ಪುರಾಣಗಳಲ್ಲಿ ಮಾಡಿರುವ ವಿಶ್ವಧರ್ಮದ ಉಪದೇಶಗಳನ್ನು ತಾನೂ ಅನುಸರಿಸಿ ಮೇಲುಪಂಕ್ತಿಯನ್ನು ಹಾಕಿಕೊಟ್ಟು, ಉಪದೇಶ ಉದಾಹರಣೆಗಳಿಂದ ನಮ್ಮೆಲ್ಲರಿಗೂ ಪರಮಾಚಾರ್ಯನಾಗಿದಾನೆಂದರೆ ಸ್ವಲ್ಪವೂ ಅತಿಶಯೋಕ್ತಿಯಾಗಲಾರದು.

ಕಾವ್ಯ ಅಥವಾ ಗ್ರಂಥ ರಚನೆಗೆ ಕಾರಣಗಳು.

ಈ ರೀತಿಯಾಗಿರುವ ಇವರ ಈ ಮಹಾಪ್ರಯತ್ನಕ್ಕೆ ಕಾರಣವೇನೆಂದು ವಿಮರ್ಶಿಸಿದರೆ ಇದಕ್ಕೆ ಕೆಲವು ಕಾರಣಗಳೂ ಇವೆ ಎಂಬುದು ಗೊತ್ತಾಗುತ್ತದೆ. ಅದು ಧಾರ್ಮಿಕ ಮನೋವೃತ್ತಿಯಾಗಿದೆ ಎಂಬುದು ಗಮನಾರ್ಹವಾಗಿದೆ. ಮೊದಲನೆಯದಾಗಿ ತಿಳಿವಳಿಕೆಯನ್ನು ಪಡೆಯಲೂ, ಅದನ್ನು ಹೆಚ್ಚಿಸಿಕೊಳ್ಳಲೂ ಮತ್ತು ಅದನ್ನು ಇತರರಲ್ಲೂ ಹರವುದು ಮಾನವನ ಹುಟ್ಟುಗುಣವಾಗಿದೆ. ಹುಟ್ಟುವಾಗಿ

ನಿಂದಲೇ ಬಂದಿರುವ ಗುಣಕ್ಕೆ ಹುಟ್ಟುಗುಣವೆಂದು ಹೆಸರಿದೆ ; ಆದುದ ರಿಂದಲೇ ಈ ಗುಣವು, ಈ ಕುತೂಹಲವು, ಮಕ್ಕಳಲ್ಲೂ ಕಂಡುಬರುತ್ತದೆ. ಮಕ್ಕಳಿಗೆ ಮಾತು ಬಂದಕೂಡಲೆ ಅವು ತಮಗಿಂತಲೂ ದೊಡ್ಡವರನ್ನು ಅಥವಾ ಸಂಗಡಿಗರನ್ನು ಕುರಿತು “ ಇದು ಏನು ? ಅದು ಏಕೆ ? ಇದು ಹೇಗೆ ?” ಎಂದು ಮುಂತಾಗಿ ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತವೆ. ಅವು ಕೇಳುವ ಪ್ರಶ್ನೆಗಳನ್ನು ವಿಂಗಡಿಸಿ ನೋಡಿದರೆ ಅವು ಸ್ವರೂಪ, ಕಾರಣ, ಫಲ, ಉದ್ದೇಶ, ಪ್ರಕಾರಗಳ ವಿಷಯವಾಗಿರುವುದೂ ಕಂಡು ಬರುತ್ತದೆ. ಅವು ಒಂದುಸಲ ಕೇಳಿದ ಪ್ರಶ್ನೆಗಳಿಗೆ ತಕ್ಕ ಉತ್ತರಗ ಳನ್ನು ಒಪ್ಪುವಂತೆ ಹೇಳಿದರೆ, ಅಷ್ಟರಲ್ಲಿ ತೃಪ್ತರಾಗಿ ಸುಮ್ಮನಿರದೆ, ಹೊಸ ಹೊಸ ವಿಷಯಗಳಲ್ಲಿ ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತವೆ, ಹೊಸ ವಿಷಯಗಳನ್ನು ಕೇಳಿ ತಿಳಿದುಕೊಳ್ಳಬೇಕೆಂದು ಯಾರೂ ಆ ಮಕ್ಕ ಳಿಗೆ ಹೇಳಿಕೊಟ್ಟಿರುವುದೂ ಇಲ್ಲವು. ಆದರೂ ಅವರ ವಿಷಯದಲ್ಲಿ ಹಿರಿ ಯರು ಅನೇಕ ಸಂದರ್ಭಗಳಲ್ಲಿ ಔದಾಸೀನ್ಯವನ್ನು ತೋರುವುದೂ ಉಂಟು. ಅವರ ಪ್ರಶ್ನೆಗಳು ಹೆಚ್ಚಾದಾಗ ಕೆಲವುವೇಳೆ ಬೇಸರಪಡು ವುದೂ ಉಂಟು. ಅಷ್ಟೇ ಅಲ್ಲದೆ ಕೆಲವು ಸಂದರ್ಭಗಳಲ್ಲಿ ಆ ಪ್ರಶ್ನೆಗ ಳಿಗೆ ಸರಿಯಾದ ಉತ್ತರಗಳನ್ನು ಒಪ್ಪುವಂತೆ ಹೇಳಲು ಆಗದೆಹೋ ದಾಗ, ಹಿರಿಯರು ತಮ್ಮ ಅಜ್ಞಾನ, ಅಶಕ್ತಿ, ನಾಚಿಕೆಗಳನ್ನು ಮುಚ್ಚಿ ಕೊಳ್ಳಲು ಹಾಗೆಲ್ಲ ಕೇಳಬಾರದೆಂದು ಹೇಳಿ ಬೆದರಿಸುವುದೂ ಉಂಟು. ಆದರೆ ಹಾಗೆಮಾಡದೆ ತಿಳಿಯಹೇಳುವವರನ್ನು ಪಡೆದರಂತು ಆ ಮಕ್ಕಳ ಪ್ರಶ್ನೆಗಳಿಗೂ, ಸಂತೋಷಕ್ಕೂ ಪಾರವೇ ಇರುವುದಿಲ್ಲವೆಂಬುದನ್ನು ಗಮನಿಸಬೇಕು.

ಜಿಜ್ಞಾಸೆಯು ಮಾನವನ ಹುಟ್ಟುಗುಣ.

ಇದರಂತೆಯೇ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳುವುದರಲ್ಲೂ. ಅದನ್ನು ಇತರರಲ್ಲಿ ಹರಡುವುದರಲ್ಲೂ ಮಾನ ವರಿಗೆ ಆದರವು ಸಹಜವಾಗಿರುತ್ತದೆ ಎನ್ನ ಬೇಕು. ಏಕೆಂದರೆ ಇದನ್ನೂ ನಾವು ಮಕ್ಕಳಲ್ಲಿ ಕಾಣಬಹುದು. ಅವರು ತಾವು ಪಡೆದಷ್ಟು

ತಿಳಿವಳಿಕೆಯಲ್ಲಿ ತೃಪ್ತರಾಗಿ ಸುಮ್ಮನಿರದೆ ಬೇರೆ ಬೇರೆ ಪ್ರಶ್ನೆಗಳನ್ನು ಮುಂದುವರಿಯಿಸುತ್ತಲೇ ಇರುತ್ತವೆ. ಅಲ್ಲದೆ ಅವು ತಮಗೆ ತಿಳಿದುದನ್ನು ತಮ್ಮ ಜತೆಗಾರರಿಗೆ, ಯಾರಿಗೂ ಹೇಳಬೇಡವೆಂದು ಒಂದು ವೇಳೆ ಹಿರಿಯರು ಅವರಿಗೆ ಹೇಳಿದ್ದರೂ ಅದನ್ನು ಲಕ್ಷಿಸದೇ, ತಿಳಿಸಿಬಿಡುತ್ತಾರೆ. "ಮೂರು ವರ್ಷಕ್ಕೆ ಬಂದುದು ನೂರು ವರ್ಷದವರೆಗೂ ಬರುತ್ತದೆ" ಎಂಬ ನಾಡುನುಡಿಯಂತೆ, ಪ್ರಾಯಶಃ ತಿಳಿವಳಿಕೆಯಿಂದ ತುಂಬಿರುವ ಗುರುವು, ಸ್ತನ್ಯವು ತುಂಬಿರುವ ತಾಯಿಯು ಮಗುವಿಗೆ ಹಾಲು ಕೊಟ್ಟು, ಹಗುರ, ಸಂತೋಷ, ಧನ್ಯತೆಗಳನ್ನು ತಿಳಿಯುತ್ತಾ ಆನಂದಿಸುವಂತೆ, ಶಿಷ್ಯರಿಗೆ ಉಪದೇಶಗಳನ್ನು ಮಾಡಿ, ಪಾಠಪ್ರವಚನಗಳನ್ನು ನಡೆಸಿ, ಉಪನ್ಯಾಸಗಳನ್ನು ಹೇಳಿ, ಗ್ರಂಥಗಳನ್ನು ಬರೆದು, ಕೃತಕೃತ್ಯನಾದಂತೆ, ತನ್ನ ಕರ್ತವ್ಯ ಧರ್ಮವನ್ನು ತಾನು ನೆರವೇರಿಸಿದಂತೆ, ಆನಂದಿಸುತ್ತಾನೆ. ಈ ತತ್ವ ಜಿಜ್ಞಾಸೆಯ, ಜ್ಞಾನಪ್ರಸಾರದ, ಸೇವಾಕಾರ್ಯದಲ್ಲಿ ಆದರದ ಫಲವಾಗಿ ಗ್ರಂಥರಚನೆಯು ರೂಢಿಗೆ ಬಂದಿದೆ ಎಂದರೆ ತಪ್ಪಾಗಲಾರದು.

ಎರಡನೆಯದಾಗಿ ಮಾನವನು ವಿಚಾರಶೀಲನಾದ ಮನುಷ್ಯನು. ಇಹಜೀವನದಲ್ಲಿ ತನ್ನ ಪೂರ್ವಜನ್ಮ ಸಂಸ್ಕಾರ, ಸನ್ನಿವೇಶ ಮತ್ತು ವಯಸ್ಸುಗಳಿಗೆ ಅನುಗುಣವಾಗಿ ನಾನಾಬಗೆಯ ಅನುಭವಗಳನ್ನು ಪಡೆಯುತ್ತಿರುತ್ತಾನೆ. ತನ್ನ ಐದು ಜ್ಞಾನೇಂದ್ರಿಯಗಳ ಮೂಲಕವಾಗಿ ಈ ಬಾಹ್ಯ ಪ್ರಪಂಚದ ವಿಷಯಗಳನ್ನು ತಿಳಿಯುತ್ತಿರುತ್ತಾನೆ. ಬದಲಾಯಿಸುತ್ತಿರುವ ಈ ಪ್ರಪಂಚದ ವಾಸ್ತವ ಸ್ವರೂಪವೇನಿರಬಹುದು ? ಇದಕ್ಕೆ ಮೂಲಭೂತವಾದ ತತ್ವವೇನಾದರೂ ಇದೆಯೋ ? ಇದ್ದರೆ ಆ ತತ್ವದ ಸ್ವಭಾವವೇನು ? ಎಂದು ಮುಂತಾಗಿ ವಿಮರ್ಶಿಸುತ್ತಿರುತ್ತಾನೆ. ತತ್ವಗಳನ್ನು ಹುಡುಕಿ ತಿಳಿಯಬಯಸುವುದು ಮಾನವನ ಹುಟ್ಟುಗುಣವಾಗಿದೆ. ಅಲ್ಲದೆ ವಿಶೇಷ ಗುಣವೂ ಆಗಿರುತ್ತದೆ. ಏಕೆಂದರೆ ಅದಕ್ಕೆ ಬೇರೆ ಕಾರಣವಾಗಲಿ ಫಲವಾಗಲಿ ಕಂಡುಬರುತ್ತಿಲ್ಲ; ಅದು ಮಾನವೇತರ ಪ್ರಾಣಿಗಳಲ್ಲಿ ಕಂಡುಬರುತ್ತಿಲ್ಲ; ಅದು ಸ್ವತಃ ಫಲ

ವಾಗಿದೆ. ಈ ಅಂಶವನ್ನು ಜಿಜ್ಞಾಸುಗಳಾದ ವೈದಿಕ ಋಷಿಗಳು ಮಾಡಿರುವ ಈ ಪ್ರಾರ್ಥನೆಯಲ್ಲೂ ಮನಗಾಣಬಹುದಾಗಿದೆ.

"ತಮಸೋ ಮಾ ಜ್ಯೋತಿರ್ಗಮಯ; ಮೃತ್ಯೋರ್ಮಾಽಮೃತಂಗಮಯ, ಅಸತೋ ಮಾ ಸದ್ಗಮಯ"—ಬೃ.ಉ. ೧-೩-೨೮ ; ಅಕ್ಷ್ಯುಪ. ೨.೨,

ಜ್ಞಾನಪ್ರಚಾರಣದ ಅಪೇಕ್ಷೆಯು ಮಾನವನ ಶಿಷ್ಟಗುಣ.

ಇದರ ಅರ್ಥವು ಹೀಗಿದೆ. ಅಜ್ಞಾನವೆಂಬ ಕತ್ತಲೆಯಿಂದ ನನ್ನನ್ನು ತಿಳಿವಳಿಕೆಯು, ಅಪರೋಕ್ಷಾನುಭವದ ಬೆಳಕಿಗೆ ತಲಪಿಸು ; ಬದಲಾಯಿಸುತ್ತಿರುವ, ನಾಶವಾಗುವ ಈ ಸ್ಥಿತಿಯಿಂದ ಮರಣವಿಲ್ಲದೆ ಶಾಶ್ವತವಾದ ಸ್ಥಿತಿಗೆ ನನ್ನನ್ನು ನಡೆಯಿಸು ; ವಿಕಾರಗಳನ್ನು ಪಡೆಯುತ್ತಾ, ನಿತ್ಯವಲ್ಲದ, ಅಸತ್ತಾದ ಕಾರ್ಯ ಪರಿಣಾಮಗಳ [ ಅವಸ್ಥೆಯಿಂದ ಸದ್ರೂಪವಾದ, ಎಲ್ಲಕ್ಕೂ ಕಾರಣವಾದ, ಅಧಿಷ್ಠಾನವಾದ, ತ್ರಿಕಾಲಾಬಾಧ್ಯವಾದ ತತ್ವಕ್ಕೆ ನನ್ನನ್ನು ನಡೆಯಿಸು ; ಎಂದು ಚಿತ್ಪ್ರಕಾಶಸ್ವರೂಪನಾದ ಪರಮಾತ್ಮನನ್ನು ಕುರಿತು ಜಿಜ್ಞಾಸುವಾದ ಜೀವಾತ್ಮನು ತನ್ನ ಅಂತರಾತ್ಮನಲ್ಲಿ ಯಾವಾಗಲೂ ಪ್ರಾರ್ಥಿಸುತ್ತಿರುತ್ತಾನೆ. ಮಾನವರಲ್ಲಿ ಸರ್ವಸಮಾನವಾಗಿರುವ ಸ್ವಾಭಾವಿಕವೂ ಅನಿವಾರ್ಯವೂ ಆಗಿರುವ, ಈ ಮನೋವೃತ್ತಿಯನ್ನು ವಿವೇಕಿಗಳಾದವರು ಸಾಧ್ಯವಾದಷ್ಟುಮಟ್ಟಿಗೆ ಮುಂದುವರಿಯಿಸುತ್ತಿರಬೇಕು. ಈ ಮನೋಭಾವವನ್ನು ಯಾರೂ ಯಾವಾಗಲೂ ಉದಾಸೀನವಾಗಿ ಬೆಳೆಯಿಸದಿರಬಾರದು. ಅದನ್ನು ತಡೆದು ಅದುಮಲೂಬಾರದು. ಈ ವೃತ್ತಿಯನ್ನೇ (Innerurge) ಎಂದು ವೈಜ್ಞಾನಿಕರೂ ದಾರ್ಶನಿಕರೂ (Scientists and Philosophers) ಹೇಳುತ್ತಾರೆ. ಇದನ್ನು ಪೋಷಿಸದೇಹೋದರೆ ಮಾನವನ ಮನಸ್ಸು, ಉಪಯೋಗಿಸದಿರುವ ಉಕ್ಕಿನ ಕತ್ತಿಯಂತೆ ತುಕ್ಕು ಹಿಡಿದು ತನ್ನ ಶಕ್ತಿಯನ್ನೇ ಕಳೆದುಕೊಳ್ಳುವಂತೆ, ದುರ್ಬಲವಾಗುತ್ತಾ ಬಂದು ಕಡೆಗೆ ಅದರ ಶಕ್ತಿಯೇ ಲುಪ್ತವಾಗಿಹೋಗುವ

ಅಪಾಯದ ಸಂಭವವಿರುತ್ತದೆ. ಮಾನವ ಜನ್ಮದ ಈ ಅಮೂಲ್ಯವೂ ವಿಶಿಷ್ಟವೂ ಆಗಿರುವ ಶಕ್ತಿ ವಿಶೇಷವನ್ನು ಪರಿಮಿತವಾದ ಆಯುಸ್ಸಿನ ಕಾಲವನ್ನೂ ವ್ಯರ್ಥಮಾಡಿಕೊಳ್ಳುವುದರಿಂದ ತುಂಬ ನಷ್ಟವಾಗುತ್ತದೆಂದು ಕೇನೋಪನಿಷತ್ತಿನಲ್ಲಿ—

"ಇಹಚೇದವೇದೀದಥ ಸತ್ಯಮಸ್ತಿ ।
ನ ಚೇದಿಹಾವೇದೀನ್ಮಹತೀ ವಿನಷ್ಟಿಃ ॥"—ಕೇನೋಪನಿಷತ್

ಋಣತ್ರಯವೂ, ಸಂಸ್ಕೃತಿಯೂ, ದೇಶ ಭಕ್ತಿಯೂ.

ಇಹ ಇಲ್ಲಿ ಈಗ ಎಂದರೆ ತಿಳಿವಳಿಕೆಯನ್ನು ಪಡೆಯಲು ಉತ್ತಮವಾದ ಮಾನವ ಜನ್ಮದಲ್ಲಿ ಮತ್ತು ತಿಳಿವಳಿಕೆಗೆ ಆವಶ್ಯಕವಾದ ಸಾಧನ ಸೌಕರ್ಯಗಳು ಎಂದರೆ, ಗ್ರಂಥಗಳೂ ಗುರುಗಳೂ ದೊರೆತಿರುವಾಗ, ತತ್ವಜ್ಞಾನವನ್ನು ಮಾನವನು ಪಡೆದುಕೊಂಡರೆ ಸತ್ಯ ತತ್ವವು ಅವನ ಪಾಲಿಗೂ ಇದ್ದಹಾಗಾಗುತ್ತದೆ. ಹಾಗೆ ಮಾಡದೆಹೋದರೆ ಮಾನವನಿಗೆ ಆಗುವ ನಷ್ಟವು ಅಪಾರವಾಗಿರುತ್ತದೆ. ಎಂದು ಎಲ್ಲ ಮಾನವರನ್ನೂ ಕುರಿತು ಎಚ್ಚರಿಕೆಯ ಬುದ್ಧಿವಾದವನ್ನು ಸಾರಿ ಹೇಳಿದೆ.

ಮೂರನೆಯದಾಗಿ ಮಾನವರೆಲ್ಲರೂ, ಅವರಲ್ಲೂ ವಿಶೇಷವಾಗಿ ಬ್ರಾಹ್ಮಣರು, ಹುಟ್ಟುತ್ತಿರುವಹಾಗೆಯೇ ಮೂರು ಬಗೆಯ ಸಾಲಗಳನ್ನು ಹೊತ್ತುಕೊಂಡೇ ಬರುತ್ತಾರೆ ಎಂದು ಶ್ರುತಿಯು ಹೇಳುತ್ತದೆ. ಈ ಋಣತ್ರಯದ ಸ್ವರೂಪವನ್ನೂ ಅದರ ಪರಿಹಾರದ ಕ್ರಮವನ್ನೂ ಹಿಂದೆ ಪುಟ ೬೭-೭೨ರವರೆಗೆ ನಿರೂಪಿಸಲಾಗಿದೆ.

"ಅಯಂ ಹಿ ಪರಮೋ ಧರ್ಮಃ ಯದ್ಯೋಗೇನಾತ್ಮದರ್ಶನಂ ।"
—ಯಾಜ್ಞವಲ್ಕ್ಯಸ್ಮೃತಿ

ಎಂದರೆ, ಮನಸ್ಸಿನ ಏಕಾಗ್ರತೆಯಿಂದ ಹೃದಯದ ಪರಿಶುದ್ಧತೆಯಿಂದ ಆತ್ಮಸ್ವರೂಪವನ್ನು ತಿಳಿದುಕೊಳ್ಳುವುದೂ, ತಿಳಿಸುವುದೂ, ಧರ್ಮ

ಗಳಲ್ಲಿ ಅತ್ಯುತ್ತಮವಾದುದು ಎಂದು ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೇಳಿದೆ.

"ಆತ್ಮಲಾಭಾನ್ನ ಪರಂ ವಿದ್ಯತೇ" —ಆಪಸ್ತಂಭ ಧರ್ಮಸೂತ್ರ

ಆತ್ಮಜ್ಞಾನವನ್ನು ಪಡೆಯುವುದಕ್ಕಿಂತ ಮಿಗಿಲಾದ ಲಾಭವಿಲ್ಲವು. ಹೀಗೆ ಆತ್ಮೋನ್ನತಿ, ಪರೋನ್ನತಿ ಎಂಬ ಎರಡು ಫಲಗಳೂ ಗ್ರಂಥ ರಚನೆಯಿಂದ ಆಗುತ್ತವೆ.

ಸಂಸ್ಕೃತಿ ಎಂಬ ಪದದ ಬಳಕೆಯು ವಿಷಯವು ಹೊಸದಲ್ಲವೆಂದು ಮೊದಲಿನಲ್ಲಿಯೇ ತಿಳಿಸಿದೆ. ಹಾಗೆಯೇ ದೇಶಭಕ್ತಿಯೂ ಹೊಸ ವಿಷಯವಲ್ಲವು. ಭರತವರ್ಷ, ಭರತಖಂಡ ಎಂದು ಇಡೀ ಇಂಡಿಯಾ ದೇಶವನ್ನೇ ಒಂದು ರಾಷ್ಟ್ರವಾಗಿ ಭಾವಿಸುವುದು ಪ್ರಾಚೀನ ಕಾಲದಿಂದಲೂ ಬಂದಿರುವ ಗುಣವಾಗಿದೆ.

"ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ ।"

ಎಂಬ ಮಾತು ಬಹು ಹಿಂದಿನಕಾಲದಿಂದಲೂ ಜನರಲ್ಲಿ ರೂಢಿಗೆ ಬಂದಿದೆ.

"ಆರ್ಯಾವರ್ತಃ ಪುಣ್ಯಭೂಮಿಃ ಮಧ್ಯಂ ವಿಂಧ್ಯಹಿಮಾಗಯೋಃ ।"

ಎಂದು ಹಿಮಾಲಯ ಮತ್ತು ವಿಂಧ್ಯಪರ್ವತಗಳ ಮಧ್ಯದಲ್ಲಿರುವ ದೇಶವನ್ನು ಪುಣ್ಯಭೂಮಿ ಎಂದು ಗೌರವ ಭಕ್ತಿಗಳಿಂದ ಸ್ಮರಿಸುವುದು ಹಿಂದಿನಿಂದಲೂ ಬಂದಿರುವ ಸಂಪ್ರದಾಯವಾಗಿದೆ.

ಅಯೋಧ್ಯಾ ಮಧುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ ।
ಪುರೀ ದ್ವಾರವತೀ ಚೈವ ಸಪ್ತೈತೇ ಮೋಕ್ಷದಾಯಕಾಃ ॥

ವಿಶ್ವೇಶಂ ಮಾಧವಂ ಧುಂಡಿಂ ದಂಡಪಾಣಿಂ ಚ ಭೈರವಂ ।
ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಂ ॥

ಗೋಕರ್ಣ, ಸೇತೂ, ಹಿಮವಾನ್, ಪ್ರಯಾಗ, ಕಾಶ್ಮೀರ,
ಸೋಮೇಶ್ವರ, ರುದ್ರಪಾದಾಃ ।
ಶ್ರೀರಂಗ, ಕೇದಾರ, ಮನಂತ, ಕನ್ಯಾ, ಸ್ವಾಮಿನ್, ಕುರುಕ್ಷೇತ್ರ,
ಸದಾ ಸಮಸ್ತೇ ॥

ವಿಶ್ವಧರ್ಮದಿಂದ ರಾಷ್ಟ್ರೀಯ ಮನೋಭಾವ ಬೆಳೆಸಿದ ರೀತಿ.

ಹಿಮಾಲಯದಿಂದ ಕನ್ಯಾಕುಮಾರೀವರೆಗೂ, ಸಿಂಧೂನದಿಯಿಂದ ಬ್ರಹ್ಮಪುತ್ರಾವರೆಗೂ ಇರುವ ಇಡೀ ಇಂಡಿಯಾ ದೇಶವನ್ನು ಅದರಲ್ಲಿರುವ ಪುಣ್ಯಕ್ಷೇತ್ರಗಳನ್ನೂ, ಪಾವನ ನದಿಗಳನ್ನೂ, ಪವಿತ್ರ ಭಾವನೆಯಿಂದ ಸ್ಮರಿಸುವುದೂ, ಕ್ಷೇತ್ರಗಳಿಗೆ ಯಾತ್ರೆ, ತೀರ್ಥಗಳಲ್ಲಿ ಸ್ನಾನ, ದೇವಮೂರ್ತಿಗಳ ದರ್ಶನ, ಇವು ಜನ್ಮ ಸಾರ್ಥಕವನ್ನುಂಟುಮಾಡುವ ಧರ್ಮಗಳಾಗಿವೆ ಎಂದು ಭಾವಿಸಿ ಆಚರಿಸುತ್ತಿರುವುದೂ ಸಾವಿರಾರು ವರ್ಷಗಳ ಹಿಂದಿನಿಂದಲೂ ಬಂದಿರುವ ಆಚರಣೆಯಾಗಿದೆ. ದೇಶಾಭಿಮಾನವನ್ನು ಧರ್ಮದ ಕವಚದಲ್ಲಿ ಅಳವಡಿಸಿ ತಿಳಿಸಿದೆ ಎಂಬುದನ್ನು ಗಮನಿಸಬೇಕು. ಈ ದೇಶಾಭಿಮಾನವು ಧರ್ಮದ ಹದ್ದುಬಸ್ತಿನಲ್ಲಿರುವುದು ನಮ್ಮ ಸಂಸ್ಕೃತಿಯಲ್ಲಿ ಗಮನಿಸಬೇಕಾದ ಅಂಶವಾಗಿದೆ. ಧರ್ಮದ ಮೊದಲನೆಯ ಸರಳವಾದ ಸ್ವರೂಪವು "ನಮ್ಮಂತೆಯೇ ಇತರರು. ನಾವು ಹೇಗೆ ನಮ್ಮ ಇಷ್ಟಪ್ರಾಪ್ತಿಗೂ, ಅನಿಷ್ಟಪರಿಹಾರಕ್ಕೂ ಪ್ರಯತ್ನಿಸುತ್ತೇವೋ ಇತರರೂ ಹಾಗೆಯೇ ಮಾಡುತ್ತಿರುತ್ತಾರೆ. ಈ ವಿಷಯದಲ್ಲಿ ನಮಗೆ ಸ್ವಾತಂತ್ರ್ಯವಿರಬೇಕು. ಇತರರಿಂದ ಅಡ್ಡಿ ಬರಬಾರದೆಂದು ಹೇಗೆ ನಮಗೆ ಅಪೇಕ್ಷೆ ಇದೆಯೋ ಹಾಗೆಯೇ ಇತರರಿಗೂ ಅಪೇಕ್ಷೆ ಇದೆ. ಇತರರಿಂದ ನಮಗೆ ಸಹಾಯ ದೊರೆತರೆ ನಮಗೆ ಹೇಗೆ ಸಂತೋಷವಾಗುತ್ತದೆಯೋ, ಅಡ್ಡಿಬಂದರೆ ದುಃಖವಾಗುತ್ತದೆಯೋ ಹಾಗೆಯೇ ಇತರರಿಗೂ ಸುಖದುಃಖಗಳಾಗುತ್ತವೆ. ನಮಗೆ ಇಷ್ಟವಾದುದನ್ನು ಇತರರಿಗೂ ನಾವು ಮಾಡಬೇಕು. ಅನಿಷ್ಟವಾದುದನ್ನು ಮಾಡಬಾರದು" ಎಂಬುದೇ ಆಗಿದೆ. ಈ ಧರ್ಮವನ್ನು, ವಿಶ್ವಧರ್ಮವನ್ನು, ಅಂತರರಾಷ್ಟ್ರೀಯ ಧರ್ಮವನ್ನು ನಾವು ಬಿಡದೆ ಆಚರಿಸುತ್ತಿದ್ದರೆ ಅದು ನಮ್ಮನ್ನು ಕಾಪಾಡುತ್ತದೆ. ಈ ಧರ್ಮವನ್ನು ನಾವು ಕೈಬಿಟ್ಟು ತುಳಿದರೆ

ಅದು ನಮ್ಮನ್ನು ಉಳಿಯಗೊಡುವುದಿಲ್ಲ. ಈ ಅಂಶವನ್ನು ಹೀಗೆ ಹೇಳಿದೆ:

"ಆತ್ಮವತ್ಸರ್ವ ಭೂತಾನಿ ಯಃ ಪಶ್ಯತಿ ಸ ಪಶ್ಯತಿ |"
"ಆತ್ಮನೋ ಯದ್ಯದಿಷ್ಟಂ ಸ್ಯಾತ್ ಪರೇಷಾಂ ತತ್ತದಾಚರೇತ್ |"
"ಆತ್ಮನಃ ಪ್ರತಿಕೂಲಾನಿ ಪರೇಷಾಂ ತಾನಿ ನಾಚರೇತ್ |"
"ಅಯಂ ನಿಜಃ ಪರೋ ವೇತಿ ಗಣನಾ ಲಘುಚೇತಸಾಂ |
ಉದಾರಚರಿತಾನಾಂ ತು ವಸುಧೈವ ಕುಟುಂಬಕಂ ||"
"ಸಂತೋಷಂ ಜನಯೇತ್ಪ್ರಾಜ್ಞಃ ತದೇವೇಶ್ವರಪೂಜನಂ ||"

ತನ್ನಂತೆಯೇ ಎಲ್ಲರನ್ನೂ ಎಲ್ಲವನ್ನೂ ಯಾವನು ಕಾಣುತ್ತಾನೋ ಅಂಥವನೇ ನಿಜವಾಗಿ ನೋಡುತ್ತಾನೆ. ತನಗೆ ಯಾವ ಯಾವುದು ಇಷ್ಟವೋ ಅದದನ್ನೇ ಇತರರಿಗೂ ಮಾಡಬೇಕು. ತನಗೆ ಇಷ್ಟವಲ್ಲದ್ದನ್ನು, ಪ್ರತಿಕೂಲವಾಗಿರುವುದನ್ನು, ಇತರರಿಗೂ ಮಾಡಬಾರದು. ಇವನು ನಮ್ಮವನು, ಇವನು ಪರಕೀಯನು ಎಂಬ ಭೇದ ಭಾವನೆಯು ಸಣ್ಣ ಮನಸ್ಸಿನವರಿಗೆ ಮಾತ್ರ ಉಂಟಾಗುತ್ತದೆ. ಉದಾರವಾದ ನಡತೆಯುಳ್ಳ ದೊಡ್ಡ ಜನರಿಗೆ ಇಡಿಯ ಪ್ರಪಂಚವೇ ಕುಟುಂಬವೆಂದರೆ ಪೋಷ್ಯವರ್ಗಕ್ಕೆ ಸೇರಿದುದೆಂಬ ಭಾವನೆಯು ಇರುತ್ತದೆ. ಜನರು ಇತರರಿಗೆ ಸಂತೋಷವನ್ನುಂಟುಮಾಡುತ್ತಿರಬೇಕು. ಅದೇ ಈಶ್ವರ ಪೂಜೆ ಎನಿಸುತ್ತದೆ. ಇದೇ ಧಾರ್ಮಿಕ ಸಂಸ್ಕೃತಿಯ ಸ್ವರೂಪವಾಗಿದೆ. ಇದರ ಅವಲಂಬನದಿಂದಲೇ ಭಾರತೀಯರು ಇನ್ನೂ ಒಂದು ಜನಾಂಗವಾಗಿ ಉಳಿದಿದ್ದಾರೆ. ಇಂತಹ ನಡೆವಳಿಕೆಯಿಂದಲೇ ನಾವು ಮುಂದಿನ ಕಾಲದಲ್ಲೂ ಉಳಿದಿರಲು ಮುಂದುವರಿಯಲೂ ಸಾಧ್ಯವು.

**ರಾಜಕೀಯವೂ ಸಂಸ್ಕೃತಿಯೂ.**

ಈಗ ಸ್ವರಾಜ್ಯವು ದೊರೆತಿರುತ್ತದೆ. ಇದು ರಕ್ಷಿತವಾಗಿರಬೇಕಾದರೆ ಭಾರತೀಯ ಜನರೆಲ್ಲರ ಐಕಮತ್ಯವು ಆವಶ್ಯಕವಾದುದು. ಈ ಐಕಮತ್ಯವನ್ನು ನಮ್ಮ ಮತಧರ್ಮಗಳ ವಿಶಿಷ್ಟವಾಗಿರುವ ಆಚರಣೆಗಳ ಆಧಾರದಮೇಲೆ ಬೆಳೆಸ

ಲಾಗುವುದಿಲ್ಲ. ವೈದಿಕಾರ್ಯರು ಸಾಧಿಸಿದಂತೆ ಎಲ್ಲ ಮತಧರ್ಮ ಗಳಲ್ಲೂ ಸಮಾನವಾಗಿರುವ ತತ್ವದ ಅವಲಂಬನದಮೇಲೆ ನಾವೂ ಸಾಧಿಸಬೇಕಾಗಿದೆ. ಈಗ ಈ ನಮ್ಮ ದೇಶದಲ್ಲಿ ಈ ಪ್ರಪಂಚದಲ್ಲಿ ರುವ ಎಲ್ಲ ಮತಧರ್ಮಗಳ ಅನುಯಾಯಿಗಳೂ ನೆಲೆಸಿರುತ್ತಾರೆ. ಈ ಎಲ್ಲ ಮತಧರ್ಮಗಳಲ್ಲೂ ಸಮಾನವಾಗಿರುವ ಮೇಲೆ ವಿವರಿ ಸಿರುವ ವಿಶ್ವವಿಶಾಲವಾಗಿರುವ ಧಾರ್ಮಿಕ ಸಂಸ್ಕೃತಿಯ ಬೆಂಬಲದಿಂ ದಲೇ ನಾವೂ ಐಕಮತ್ಯವನ್ನು ಬಲಗೊಳಿಸಬೇಕಾಗಿದೆ. "ಏಕಂ ಸತ್ ವಿಪ್ರಾಬಹುಧಾ ವದಂತಿ" ಎಂಬ ನೀತಿಯನ್ನು ವೈದಿಕಕಾಲದ ಆರ್ಯರು ಅನುಸರಿಸಿ ಆಗಿದ್ದ ಎಲ್ಲ ಮತಗಳ ವಿಷಯದಲ್ಲಿ ಸಹನೆ, ಗೌರವ, ಆದರಗಳಿಂದ ಅವರು ಪ್ರಗತಿಮಾರ್ಗದಲ್ಲಿ ಮುಂದುವರಿದು ದನ್ನು ಮೇಲೆ ವಿವರಿಸಲಾಗಿದೆ. ನಾವೂ ಅದೇ ಮೇಲುಪಂಕ್ತಿ ಯನ್ನು ಅನುಸರಿಸಿ ಮುಂದುವರಿಯಬೇಕು. ವಿಶ್ವ ವಿಶಾಲವಾದ, ಸರ್ವಸಮಾನವಾದ, ಧರ್ಮದ ಆಧಾರದಮೇಲೆ ನಮ್ಮ ನಡೆನುಡಿ ಭಾವಗಳನ್ನು ತಿದ್ದಿಕೊಂಡರೆ ಐಕಮತ್ಯ, ಸಹಾನುಭೂತಿ, ಸಹಕಾರ ಗಳು ಪರಸ್ಪರವಾಗಿ ನಮ್ಮ ದೇಶದ ಎಲ್ಲ ಮತೀಯರಲ್ಲೂ ಬಲಗೊಳ್ಳು ವಂತೆ ಮಾಡಬಹುದೆಂದು ತೋರುತ್ತದೆ. ಹಾಗಾದರೆ ಸ್ವರಾಜ್ಯವು ರಾಮರಾಜ್ಯವೂ, ಧರ್ಮರಾಜ್ಯವೂ ಆಗಿ ನಮ್ಮೆಲ್ಲರನೂ ಕಾಪಾಡು ತ್ತದೆ.

**ದೇಶದ ಆಡಳಿತದ ಬಗೆಗಳು, ರಾಜ್ಯಭಾರ ನಿರ್ವಾಹಪ್ರಕಾರಗಳು.**

ನಮ್ಮ ದೇಶದಲ್ಲೂ ಹಿಂದಿನ ಕಾಲದಲ್ಲಿ ಅನೇಕ ಬಗೆಯ ಸರ್ಕಾರಗಳು ಸ್ಥಾಪಿತವಾಗಿ ಕೆಲವುಕಾಲ ಒಳ್ಳೆಯ ಸ್ಥಿತಿಯಲ್ಲಿದ್ದು ಆಮೇಲೆ ನಷ್ಟವಾ ಗಿರಬಹುದೆಂದು ಊಹಿಸಲು ಅವಕಾಶವಿದೆ.

ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂ ವೈರಾಜ್ಯಂ
ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಂ
ಅಯಂಸಮಂತ ಪರ್ಯಾಯೀ ಸ್ಯಾತ್ ಸಾರ್ವಭೌಮಸ್ಸಾರ್ವಾಯುಷಃ
ಆಂತಾದಾಪರಾರ್ಧಾತ್ । ಪೃಥಿವ್ಯೈ ಸಮುದ್ರ ಪರ್ಯಂತಾಯಾ
ಏಕರಾಳಿತಿ ।

ಬೌಜ್ಯಂ ಸಾಮ್ರಾಜ್ಯಂ—Benevolent monarchy; ಸ್ವಾರಾಜ್ಯಂ—Self government; ವೈರಾಜ್ಯ—Republic; ಪಾರಮೇಷ್ಠ್ಯಂ ರಾಜ್ಯಂ—Imperialistic government; ಶ್ರೀರಾಮನನ್ನು ಯುವರಾಜನನ್ನಾಗಿ ಮಾಡಿ ಪಟ್ಟಾಭಿಷೇಕವನ್ನು ಮಾಡಲು ಪ್ರಜೆಗಳ, ನಾಗರಿಕರ ಸಭೆಯನ್ನು ಸೇರಿಸಿ, ಅವರ ಅಭಿಪ್ರಾಯವನ್ನು ದಶರಥನು ಕೇಳಿದನೆಂದೂ, ಅದಕ್ಕೆ ಅವರು ಸಮ್ಮತಿಯನ್ನು ಕೊಟ್ಟರೆಂದೂ ವರ್ಣನೆ ಇರುತ್ತದೆ. ಆದರೆ ಕೈಕಯಿಯು ರಾಮನನ್ನು ಕಾಡಿಗೆ ಹೋಗಬೇಕೆಂದೂ ಭರತನಿಗೆ ರಾಜ್ಯಾಭಿಷೇಕವಾಗಬೇಕೆಂದೂ ಕೇಳಲು ಅದನ್ನು ಒಪ್ಪಿದಾಗ ಆ ವಿಷಯದಲ್ಲಿ ಪ್ರಜಾಭಿಪ್ರಾಯವನ್ನು ಕೇಳಿದ ಉಲ್ಲೇಖವಿಲ್ಲವು. ವೇನ, ಅಸಮಂಜ ಮುಂತಾದವರು ಪ್ರಜಾ ಯೋಗಕ್ಷೇಮಗಳಿಗೆ ವಿರೋಧಿಗಳಾಗಿದ್ದುದರಿಂದ ರಾಜ್ಯವನ್ನು ಕಳೆದುಕೊಂಡರು ಎಂದು ಮುಂತಾದ ರಾಜಕೀಯ ಸಂಗತಿಗಳ ಉಲ್ಲೇಖನಗಳೂ ಇವೆ.

ಜನರಿಂದ ಕಾಲ,
ಕಾಲದಿಂದ ಜನ.

ಇದರಿಂದ ನಮ್ಮ ಪೂರ್ವಜರಾದ ಆರ್ಯರು ಸರ್ಕಾರದ ಏರ್ಪಾಡಿನಲ್ಲಿ ಉದಾಸೀನರಾಗಿರಲಿಲ್ಲವೆಂಬಷ್ಟನ್ನು ಒಪ್ಪಬಹುದೆಂದು ತೋರುತ್ತದೆ. ಏಕೆಂದರೆ ಮಹಾಭಾರತದ ಶಾಂತಿಪರ್ವದಲ್ಲಿ ಯುಧಿಷ್ಠಿರನನ್ನು ಕುರಿತು ಭೀಷ್ಮನು ಹೀಗೆ ಹೇಳಿದ್ದಾನೆ.—

"ಕಾಲಸ್ಯ ಕಾರಣಂ ರಾಜಾ ರಾಜಾ ವಾ ಕಾಲ ಕಾರಣಃ ।
ಇತಿ ತೇ ಸಂಶಯೋ ಮಾಭೂತ್ ರಾಜಾ ಕಾಲಸ್ಯ ಕಾರಣಂ ॥"

ಎಂದರೆ, ಒಂದು ಕಾಲದಲ್ಲಿರುವ ಜನರ ಮತ್ತು ಸರ್ಕಾರದ ಸ್ವಭಾವಗಳು ರಾಜನಿಂದ ಉಂಟಾಗುತ್ತಲೂ ಮಾರ್ಪಡುತ್ತಲೂ ಇರುತ್ತವೆ; ಅಥವಾ ಜನರ ಮತ್ತು ಸನ್ನಿವೇಶಗಳ ಸ್ವಭಾವವನ್ನು ಅನುಸರಿಸಿ ಆದಕ್ಕೆ ತಕ್ಕಂತೆ ರಾಜನೂ ಆಡಳಿತವೂ ಉಂಟಾಗುತ್ತಲೂ, ಮಾರ್ಪಡುತ್ತಲೂ ಇರುತ್ತವೆ. ಹೀಗೆಂಬ ಎರಡು ಪಕ್ಷಗಳಲ್ಲಿ ರಾಜನೇ

ಕಾಲಕ್ಕೆ ಕಾರಣನಾಗುತ್ತಾನೆಂಬುದೇ ಸರಿಯಾದ ಸಿದ್ಧಾಂತವೆಂದು ಈ ಪದ್ಯದ ತಾತ್ಪರ್ಯವಾಗಿದೆ.

ಹಿಂದೂ ಮತವೂ ಇತರ ಧರ್ಮಗಳೂ; ಅತಿಯಾದರೆ ಗುಣವೂ ದೋಷವಾಗುತ್ತದೆ.

ದೇಶಾಭಿಮಾನ (Patriotism) ಮತ್ತು ಕುಲಾಭಿಮಾನ (Nationalism) ಇವೆರಡೂ ಗುಣಗಳೆಂಬುದು ನಿಜ. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ|" ಎಂದು ನಮ್ಮ ಋಷಿಗಳೂ ಹೇಳಿರುತ್ತಾರೆ. ಆದರೆ ಅವು ಒಂದು ಮಿತಿಯಲ್ಲಿರಬೇಕು. ಹಾಗಿಲ್ಲದೆ ಅವು ಅತಿಯಾದರೆ ದೋಷವಾಗಿ ಪರಿಣಮಿಸುತ್ತವೆ. ಪಾಶ್ಚಾತ್ಯರಲ್ಲಿ ಈ ಗುಣವನ್ನು ಜನರಲ್ಲಿ, ಅವರು ವಿದ್ಯಾರ್ಥಿಗಳಾಗಿರುವಾಗಲೇ ವಿದ್ಯಾಭ್ಯಾಸ ಕ್ರಮದಲ್ಲಿ ಪಠ್ಯಪುಸ್ತಕಗಳಲ್ಲಿ ಪ್ರಮುಖವಾಗಿರುವಂತೆ ಮಾಡಿ ಬೋಧಿಸಿ ಬೆಳೆಸಿದರು. ಇದರಿಂದ ಅವರ ದೇಶಕ್ಕೆ ಪರಕೀಯರಿಂದ ತೊಂದರೆಗಳು ಸಂಭವಿಸಿದಾಗ ಜನರು ಒಕ್ಕಟ್ಟಿನಿಂದ ದೇಶವನ್ನೂ, ಜನಾಂಗವನ್ನೂ ಕಾಪಾಡಿಕೊಳ್ಳಲು ಅನುಕೂಲವಾಯಿತು. ತಮ್ಮ ಜನಾಂಗದ ಐಶ್ವರ್ಯವನ್ನು ಹೆಚ್ಚಿಸಬೇಕು; ಅಧಿಕಾರ ವ್ಯಾಪ್ತಿಯನ್ನು ವಿಸ್ತರಿಸಬೇಕು; ಇತರ ದೇಶಗಳನ್ನು ಆಕ್ರಮಿಸಿ ತಮ್ಮ ಚಕ್ರಾಧಿಪತ್ಯವನ್ನು ಸ್ಥಾಪಿಸಬೇಕು; ತಮ್ಮ ದೇಶದಲ್ಲಿ ತಯಾರಿಸಿದ ವಸ್ತುಗಳ ಮಾರಾಟಕ್ಕೆ ಇತರ ದೇಶಗಳನ್ನು ಮಾರುಕಟ್ಟೆಗಳನ್ನಾಗಿ ಪರಿವರ್ತಿಸಿಕೊಂಡಿರಬೇಕು; ಇತರ ದೇಶಗಳ ಕೈಗಾರಿಕೆಗಳು ಹಿಂದೆ ಬೀಳುವಂತಾಗಬೇಕು; ವ್ಯಾಪಾರ ವಾಣಿಜ್ಯಗಳು ತಮ್ಮ ರೈಲು ಹಡಗು ಮುಂತಾದ ವಾಹನಗಳ ಮೂಲಕವಾಗಿಯೇ ನಡೆಯಬೇಕು. ಇವೇ ಮುಂತಾದ ಆಶೆಗಳೆಲ್ಲ ಅತಿಯಾದ ದೇಶಾಭಿಮಾನದ ಕುಲಾಭಿಮಾನದ ಮರಿಗಳು. ಇತರ ದೇಶಗಳು ತಿಳಿವಳಿಕೆಯಲ್ಲೂ ಹಿಂದಾಗಿದ್ದುದು ಇವರಿಗೆ ತುಂಬ ಅನುಕೂಲವಾಯಿತು. ತಮ್ಮ ಚಕ್ರಾಧಿಪತ್ಯ ಸ್ಥಾಪನೆ, ಐಶ್ವರ್ಯಾಭಿವೃದ್ಧಿಗಳು ಮುಂದುವರಿದುವು. ತಮ್ಮ ದೇಶದ ಮೇಲ್ಮೆಗಾಗಿ, ತಮ್ಮ ಜನಾಂಗದ ಅಭಿವೃದ್ಧಿಗಾಗಿ, ಇತರ ದೇಶಗಳನ್ನೂ ಅವುಗಳ ಆಯವ್ಯಯಗಳನ್ನೂ ತಮ್ಮ ಹತೋಟಿಯಲ್ಲಿಟ್ಟುಕೊಳ್ಳುವುದೂ

ಸರಿ ಎಂದು ತೋರಿತು. ಹೀಗೆ ಬ್ರಿಟನ್, ಫ್ರಾನ್ಸ್, ಸ್ಪೈಯಿನ್, ಜರ್ಮನಿ, ಹಾಲಂಡ್, ರಷ್ಯಾ, ಅಮೆರಿಕಾ ದೇಶಗಳು ಈ ರೀತಿಯಲ್ಲಿ ಮುಂದುವರೆದುವು. ಈ ಭೂಲೋಕದಲ್ಲಿ ಎಲ್ಲ ದೇಶಗಳನ್ನೂ ತಮ್ಮ ಪ್ರಭಾವಕ್ಕೆ ಒಳಗುಮಾಡಿಕೊಂಡರು. ಬ್ರಿಟಿಷ್ ಚಕ್ರಾಧಿಪತ್ಯದ ಮೇಲೆ ಸೂರ್ಯನು ಯಾವಾಗಲೂ ಅಸ್ತನಾಗಿರುವುದೇ ಇಲ್ಲ. "The sun never sets upon the British Empire" ಎಂದು ಹೆಮ್ಮೆಪಡುವಂತೆಯೂ ಆಯಿತು. ಆದರೆ ಅವರಲ್ಲಿಯೇ ಅಧಾರ್ಮಿಕ ಸ್ಪರ್ಧೆಯೂ ಬಲಗೊಂಡಿತು. ಇದರ ಜೊತೆಗೆ ಮತಪರಿವರ್ತನದಲ್ಲಿ ಆದರವುಳ್ಳ ಕ್ರಿಶ್ಚಿಯನ್ ಪಾದ್ರಿಗಳೂ ಸಹಕರಿಸಿದರು. ಇವರು ಮುಸಲ್ಮಾನರಷ್ಟು ಸ್ವಮತಾಂಧರಲ್ಲದಿದ್ದರೂ, ಅವರಷ್ಟು ಕ್ರೌರ್ಯ ದಿಂದ ವರ್ತಿಸದೆ ಇದ್ದರೂ, ಆಕರ್ಷಣೆ, ಆವರ್ಜನೆ, ಆವಶ್ಯಕತೆ, ವೈದ್ಯ ಶಾಲೆ, ವಿದ್ಯಾಶಾಲೆಗಳ ಮೂಲಕ ಪ್ರಲೋಭನೆ, ಅಧಿಕಾರಗಳ ಪ್ರರೋ ಚನೆ, ಪ್ರತಾರಣೆ, ಭಯ ಪ್ರದರ್ಶನಗಳನ್ನೂ ಮತಪರಿವರ್ತನೆಯಲ್ಲಿ ಉಪಯೋಗಿಸಿಕೊಳ್ಳಲು ಹಿಂಜರಿಯಲಿಲ್ಲ. ಹೀಗೆ ದೇಶಾಭಿಮಾನ, ಮತಾಭಿಮಾನ, ಕುಲಾಭಿಮಾನಗಳು ಗುಣಗಳಾದರೂ ಅತಿಯಾದುದ ರಿಂದ ದೋಷವಾಗಿ ಪರಿಣಮಿಸಿದುವು.

ಭಾರತಾರ್ಯರು ಪರದೇಶಗಳಿಗೂ ಹೋದುದು ಧರ್ಮ ಪ್ರಚಾರಕ್ಕೆ ಮಾತ್ರ.

ಭಾರತಾರ್ಯರು ಅಶೋಕ ಚಕ್ರವರ್ತಿಯ ಕಾಲದಲ್ಲಿ (ಕ್ರಿ.ಪೂ. 273–232) ; ಮತಧರ್ಮ ಪ್ರಚಾರಕರನ್ನು ಇತರ ದೇಶಗಳಿಗೂ ಕಳುಹಿಸಿದರು. ಪಶ್ಚಿಮ ದಲ್ಲಿ ಪರ್ಷಿಯಾ ಅರೇಬಿಯಾವರೆಗೂ, ಉತ್ತ ರದಲ್ಲಿ ಚೀಣಾ ಜಪಾನ್‌ವರೆಗೂ, ಪೂರ್ವ ದಲ್ಲಿ ಸುಮಾತ್ರಾ, ಜಾವಾ ಬೋರ್ನಿಯೋ ವರೆಗೂ ಮತಧರ್ಮ ಪ್ರಚಾರವನ್ನು ಮಾಡಿದರು. ಮತಪರಿವರ್ತನೆ ಯನ್ನು ಮಾಡಲಿಲ್ಲ. "ಏಕಂ ಸದ್ವಿಪ್ರಾ ಬಹುಧಾ ವದಂತಿ" "ಯೋಯೋಯಾಂಯಾಂ ತನುಂಭಕ್ತಃ........" "ಯದ್ಯದ್ವಿಭೂತಿ ಮತ್ಸತ್ವಂ........" ಈ ಉಪದೇಶಗಳನ್ನೊಳಗೊಂಡಿರುವ ಭಾರತಾ

ರ್ಯರ ಧರ್ಮವು ಮತ ಪರಿವರ್ತನೆಯನ್ನು ಆವಶ್ಯಕವೆಂದು ಹೇಳುವು ದಿಲ್ಲ. ಇತರರ ಮತಧರ್ಮಗಳನ್ನು ಕೀಳೆಂದು ಭಾವಿಸುವುದೂ ಧರ್ಮ ವಲ್ಲ. ಎಲ್ಲ ಮತಗಳೂ ಅವರವರಿಗೆ ಒಳ್ಳೆಯವೇ ಆಗಿರುತ್ತವೆ. "ಇತರರ ಮತಗಳನ್ನು ಗೌರವಿಸಿದರೆ ನಮ್ಮ ಮತದ ಮೇಲ್ಮೆಯನ್ನೇ ಸಾಧಿಸಿ ದಂತಾಗುತ್ತದೆ. ಇತರ ಮತಗಳನ್ನು ತೆಗಳಿದರೆ ನಮ್ಮ ಮತಕ್ಕೇ ನಾವು ಅವಮಾನ ಮಾಡಿದಂತಾಗುತ್ತದೆ. ಇತರ ಮತಗಳಲ್ಲಿರುವ ಗುಣಗಳನ್ನು ತೆರೆದ ಮನಸ್ಸಿನಿಂದ ಅಂಗೀಕರಿಸುವುದು ಪ್ರಗತಿಯ ಗುರುತಾಗಿದೆ." ಎಂದು ಅಶೋಕನ ಶಿಲಾಶಾಸನಗಳಲ್ಲಿ ಹೇಳಿರುವು ದನ್ನು ನಮ್ಮ ನಾಯಕ ಶ್ರೇಷ್ಠರಾದ ಪಂಡಿತ ನೆಹರೂರವರೇ ಸಾರಿ ಸಾರಿ ಹೇಳಿದಾರೆ. ಪರಧರ್ಮಗಳನ್ನು ನಾವು ಗೌರವಿಸು ವುದರಿಂದ ಸ್ವಧರ್ಮಕ್ಕೇ ಮೇಲ್ಮೆಯನ್ನೂ ಸಾಧಿಸಿದಂತಾಗುತ್ತದೆ. ಇದು ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ಉತ್ತಮವಾದ ಚಿಹ್ನೆ ಯಾಗಿದೆ. ನಮ್ಮಂತೆಯೇ ಇತರರೂ ಸುಖಪ್ರಾಪ್ತಿಗೂ, ದುಃಖ ನಿವೃತ್ತಿಗೂ ಆಪೇಕ್ಷಿಸುವುದು ನ್ಯಾಯವಾಗಿದೆ. ಇತರರಿಗೆ ಸಹಾಯ ವನ್ನು ಮಾಡುವುದು ಪುಣ್ಯಕರವೆಂದೂ, ಇತರರಿಗೆ ಪೀಡೆಯನ್ನುಂಟು ಮಾಡುವುದು ಪಾಪಕರವೆಂದೂ, ಈ ರೀತಿಯಲ್ಲಿ ಇತರರನ್ನೂ ತನ್ನಂ ತೆಯೇ ನೋಡಬೇಕೆಂದು ಹೇಳಿದೆ. ಇದೇ ವಿಶ್ವಧರ್ಮವು.

" ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ |"
" ಆತ್ಮವತ್ಸರ್ವ ಭೂತಾನಿ ಯಃ ಪಶ್ಯತಿ ಸ ಪಶ್ಯತಿ ||"
" ಸಂತೋಷಂ ಜನಯೇತ್ ಪ್ರಾಜ್ಞಃ ತದೇ ವೇಶ್ವರ ಪೂಜನಂ ||"

ರಾಜ್ಯಭಾರದಲ್ಲೂ ಧರ್ಮಕ್ಕೆ ಪ್ರಾಮುಖ್ಯ ವಿರಬೇಕು.

ಇದೇ ವಿಶ್ವಧರ್ಮದ ಮೊದಲನೆಯ ಸರಳವಾದ ಸ್ವರೂಪ ವಾಗಿದೆ. ಇದೇ ಮಾನವರೆಲ್ಲರೂ ಅನುಸರಿಸ ಬೇಕಾದ ಧರ್ಮವಾಗಿದೆ. ಇದನ್ನು ಆಚರಿಸು ವವರು ಇತರ ದೇಶಗಳನ್ನು ಆಕ್ರಮಿಸಲು ಹೋಗುವುದಿಲ್ಲ. ಇತರ ಮತೀಯರನ್ನು ಪರಿವರ್ತನಗೊಳಿಸಲು ಮುನ್ನುಗ್ಗುವುದಿಲ್ಲ.

ಇತರರಿಗೂ ಸಂತೋಷವನ್ನುಂಟುಮಾಡಿದರೆ ಅದೇ ಈಶ್ವರ ಪೂಜೆಯೂ ಆಗುತ್ತದೆ. ಈ ಧರ್ಮವನ್ನು ಕಾಪಾಡಿದರೆ ಇದು ಎಲ್ಲರನ್ನೂ ಸುಖ, ಶಾಂತಿ, ನೆಮ್ಮದಿಗಳಿಂದ ಕಾಪಾಡುತ್ತದೆ. ಇದನ್ನು ಕೈಬಿಟ್ಟು ತುಳಿದರೆ ಅವರನ್ನು ಇದೂ ಕೈಬಿಡುತ್ತದೆ. ಅಂಥವರು ಹಾಳಾಗುತ್ತಾರೆ. ಭಾರತಾರ್ಯರು ಉಳಿದಿರುವುದು ಈ ಧರ್ಮದ ಮಹಿಮೆಯಿಂದಲೇ, ಮುಂದೆ ಉಳಿಯಬೇಕಾದರೂ ಈ ಧರ್ಮದ ಪ್ರಭಾವದಿಂದಲೇ, ಎಂಬುದನ್ನು ನಮ್ಮ ಮುಖಂಡರೂ, ಮುಂದಾಳುಗಳೂ, ನಾಯಕರೂ ಎಷ್ಟು ಬೇಗ ಮನಗಂಡು ಅದರಂತೆ ನಡೆದರೆ ಅಷ್ಟು ಜಾಗ್ರತೆಯಾಗಿ ದೇಶದಲ್ಲಿ ಶಾಂತಿಯೂ ನೆಲೆಸಿ ಜನರಿಗೆ ಸುಖವೂ ದೊರೆಯುವಂತಾಗುತ್ತದೆ.

" ನ ದೇವಾ ದಂಡ ಮಾದಾಯ ರಕ್ಷಂತಿ ಪಶುಪಾಲವತ್ ।
ಯಂ ತು ರಕ್ಷಿತುಮಿಚ್ಛಂತಿ ಸದ್ಬುದ್ಧ್ಯಾ ಯೋಜಯಂತಿ ತಂ ॥ "

ದೇವರು ಜನರನ್ನು ರಕ್ಷಿಸುವ ಬಗೆ.

ದೇವರು ಜನರನ್ನು ಕಾಪಾಡುತ್ತಾನೆಂದು ಶಾಸ್ತ್ರಗಳಲ್ಲಿ ಹೇಳಿದೆ. ಜನರೂ ಅದನ್ನು ನಂಬಿದ್ದಾರೆ. ಆದರೆ ದೇವರು ಜನರನ್ನು ಕಾಪಾಡುವ ರೀತಿಯನ್ನು ಜನರು ತಿಳಿಯಬೇಕು. " ದನವನ್ನು ಕಾಯುವವನು ಹೆಗಲಿನಮೇಲೆ ದೊಣ್ಣೆಯನ್ನಿಟ್ಟುಕೊಂಡು ದನದಹಿಂದೆ ಹೋಗುತ್ತಾ, ಅದನ್ನು ಮೇವಿರುವಲ್ಲಿಗೂ, ನೀರಿರುವಲ್ಲಿಗೂ ನಡೆಯಿಸುತ್ತಾ, ಅವಕ್ಕೆ ಇತರ ಮೃಗಗಳಿಂದ ಸಂಭವಿಸಬಹುದಾದ ತೊಂದರೆಗಳನ್ನು ನಿವಾರಿಸುತ್ತಾ ಕಾಪಾಡುವ ಹಾಗೆ ದೇವರು ಮಾನವರನ್ನು ಕಾಪಾಡುವುದಿಲ್ಲವು. ಮತ್ತೆ ಹೇಗೆಂದರೆ ಯಾರನ್ನು ದೇವರು ಕಾಪಾಡಬೇಕೆಂದು ಅಪೇಕ್ಷಿಸುತ್ತಾನೋ ಅಂಥವರಿಗೆ ಒಳ್ಳೆಯ ಬುದ್ಧಿಯು ಅವರ ಹೃದಯದಲ್ಲಿಯೇ ಸ್ಫುರಿಸುವಂತೆ ಅನುಗ್ರಹಿಸಿ ಕಾಪಾಡುತ್ತಾನೆ " ಅವರು ಆ ತಮ್ಮ ಸುಬುದ್ಧಿಯಿಂದಲೇ ತಮ್ಮನ್ನು ತಾವೇ ಕಾಪಾಡಿಕೊಳ್ಳಬೇಕು. ಸೋಮಾರಿಗಳಾಗಿ, ದೇವರ ಮೇಲೆ ಎಲ್ಲ

ಭಾರವನ್ನೂ ಹಾಕಿದಂತೆ ಭಾವಿಸಿ, ಆಲಸ್ಯದಿಂದ ಪ್ರಯತ್ನಶೀಲತೆಯನ್ನು ಬಿಟ್ಟು, ತಮ್ಮ ಹೊಣೆಗಾರಿಕೆಯನ್ನು ತಿಳಿಯದೆ, ಕೂತುಕೊಳ್ಳಬಾರದೆಂದು ಶಾಸ್ತ್ರಗಳು ಬೋಧಿಸುತ್ತವೆ. ಭಗವದ್ಗೀತೆಯು ಬುದ್ಧಿವಾದವನ್ನು ಈ ವಿಷಯದಲ್ಲೂ ಅನ್ವಯಿಸಿಕೊಂಡು ಅನುಸರಿಸಬೇಕು.

"ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್।
ಆತ್ಮೈವ ಹ್ಯಾತ್ಮನೋ ಬಂಧುಃ ಆತ್ಮೈವ ರಿಪುರಾತ್ಮನಃ ॥"
"ಉದ್ಯೋಗಿನಂ ಪುರುಷಸಿಂಹ ಮುಪೈತಿ ಲಕ್ಷ್ಮೀಃ।
ದೈವೇನ ದೇಯ ಮಿತಿ ಕಾಪುರುಷಾ ವದಂತಿ ॥"

ಸ್ವಸಹಾಯ ಒಂದೇ ಉತ್ತಮ ಸಹಾಯ.

ಬೌದ್ಧಮತವು ಪುರುಷಾರ್ಥ ಸಾಧನವಾದ ಧರ್ಮಾಚರಣೆಯಿಂದ ಕೂಡಿದ ಶೀಲಕ್ಕೆ ಪ್ರಾಮುಖ್ಯವನ್ನು ಉಪದೇಶಿಸಿತು. ಜಾತಿ-ಪದ್ಧತಿಯನ್ನು ಬಿಟ್ಟು ಸರ್ವಸಮಾನವಾದ ಸ್ವಾತಂತ್ರ್ಯವನ್ನು ಬೋಧಿಸಿತು. ಸನಾತನಾರ್ಯ ಧರ್ಮದ ಪ್ರಚಾರವು ಉದಾಸೀನತೆಯಿಂದ ಲುಪ್ತವಾಗಿತ್ತು. ಶೀಲರಹಿತಡಾಂಭಿಕ ಪುರೋಹಿತರಲ್ಲಿ ಜನರಿಗೆ ಸ್ವಾಭಾವಿಕವಾಗಿ ಪ್ರೀತಿ ಗೌರವಗಳು ನಷ್ಟವಾಗುತ್ತಿದ್ದವು. ಯಜ್ಞಯಾಗಗಳಲ್ಲಿ ಪಶುಹಿಂಸೆಯೂ ನೀತಿ ವಿರುದ್ಧವೆಂದು ನಿಂದಿತವಾಗುತ್ತಿತ್ತು. ಇಂತಹ ಸಮಯದಲ್ಲಿ ಬುದ್ಧ ದೇವನ ಆದರ್ಶತ್ಯಾಗ ಜೀವನವೂ ನಿರಹಂಕಾರ ಧರ್ಮಾಸಕ್ತಿಯೂ ಜನಮಾನ್ಯವಾದುದರಲ್ಲಿ ಆಶ್ಚರ್ಯವಿಲ್ಲ. ಧಾರ್ಮಿಕ ಸಂಸ್ಕೃತಿಯು ಬುದ್ಧನ ಉಪದೇಶಗಳಲ್ಲಿ ಜನರಿಗೆ ಪ್ರೀತ್ಯಾದರಗಳನ್ನು ಉಂಟುಮಾಡಿ ಅನುಸರಿಸುವಂತೆ ಮಾಡಿತು. ಬೌದ್ಧಮತವು "ಆಶೆಯೇ ಎಲ್ಲ ದುಃಖಗಳಿಗೆ ಮೂಲವೆಂದೂ, ಆಶಾಜಯದಿಂದಲೇ ಮೋಕ್ಷ ಅಥವಾ ನಿರ್ವಾಣ ಲಾಭವಾಗುವುದೆಂದೂ, ಅಹಿಂಸೆಯೇ ಭೂತದಯೆಯೇ ಉತ್ತಮ ಧರ್ಮವೆಂದೂ ಕರ್ಮಕ್ಕಿಂತ ಶೀಲವೇ ಮೇಲಾದ ಧರ್ಮವೆಂದೂ ಬುದ್ಧನು ರಕ್ಷಕನೆಂದೂ, ಧರ್ಮವೇ ರಕ್ಷಣೋಪಾಯವೆಂದೂ ಮುಖ್ಯವಾಗಿ ಹೇಳುತ್ತಾ

ಬಂದಿದೆ. ಈಶ್ವರನನ್ನು ಈ ಮತವು ಒಪ್ಪುವುದಿಲ್ಲ. ಕಡೆಗೆ ನಿತ್ಯ ವಾದ ಆತ್ಮತತ್ವವನ್ನೂ ಇದರಲ್ಲಿ ಅಂಗೀಕರಿಸಿಲ್ಲ ಆದರೂ ಜೀವನ ಕ್ರಮದಲ್ಲಿ ಆಶಾಜಯ, ದಯೆ, ಶೀಲ, ಧರ್ಮಗಳಿಗೆ ಮುಖ್ಯ ಸ್ಥಾನ ವನ್ನು ಕೊಟ್ಟು ಅನುಸರಿಸುತ್ತಿರುವುದರಿಂದ ಬುದ್ಧಮತವು ಜನಪ್ರಿಯ ವಾಗಿದೆ. "ಬುದ್ಧಂ ಶರಣಂ ಗಚ್ಛಾಮಿ ಧರ್ಮಂ ಶರಣಂ ಗಚ್ಛಾಮಿ ಸಂಘಂ ಶರಣಂ ಗಚ್ಛಾಮಿ" ಇದು ಅವರ ನಿತ್ಯ ಜಪ, ಈ ಸಾಧನಗಳ ವಿಷಯಗಳೂ ಆರ್ಯಧರ್ಮದಲ್ಲೂ ಮುಖ್ಯ ಸ್ಥಾನವನ್ನು ಪಡೆದೇ ಇದ್ದುವು. ಹೇಗೆಂದರೆ ಪುರುಷಾರ್ಥಗಳಲ್ಲಿ ಧರ್ಮವು ಮೊದಲನೆಯ ದಾಗಿದೆ. ಆಶಾಜಯ ಅಥವಾ ವೈರಾಗ್ಯವಿಲ್ಲದೆ ಮೋಕ್ಷ ಲಾಭವಾಗು ವುದಿಲ್ಲ. ದಯೆಯು ಅತ್ಯುತ್ತಮವಾದ ಸಾಧನ ಧರ್ಮವೆಂದು ಹೇಳಿದೆ. ಹೀಗೆ ಬೌದ್ಧಮತದ ವಿಶೇಷೋಪದೇಶಗಳು ಹಿಂದೂ ಮತ ದಲ್ಲಿ (ಸನಾತನಾರ್ಯ ಧರ್ಮದಲ್ಲಿ) ಪ್ರಾಮುಖ್ಯವನ್ನು ಪಡೆದೇ ಇದ್ದುವು. ಆದರೂ ಕಾಲಕ್ರಮದಲ್ಲಿ ಧರ್ಮಪ್ರಚಾರ ಕಾರ್ಯದಲ್ಲಿ ಹಿಂದೂ ಜನರು ಉದಾಸೀನರಾದಾಗ, ಇತರ ಮತ ಧರ್ಮಗಳ ಪ್ರವರ್ತಕರೂ ಅನುಯಾಯಿಗಳೂ ಹೊಸ ಹುರುಪಿನಿಂದ ಪ್ರಚಾರ ಕಾರ್ಯವನ್ನು ಕೈಗೊಂಡು ಮುಂದುವರಿದಾಗ, ಹಿಂದೂಗಳು ಬೌದ್ಧ ಜೈನ ಮತಗಳಿಗೆ ಸೇರಿದುದು ಸ್ವಾಭಾವಿಕವೂ ಅನಿವಾರ್ಯವೂ ಆಯಿತು. ಪುನಃ ಹಿಂದೂಗಳು ತಮ್ಮ ತಪ್ಪನ್ನು ತಿಳಿದು ಧರ್ಮಜ್ಞಾನ ಪ್ರಚಾರ ಕಾರ್ಯಗಳನ್ನು ಕೈಗೊಂಡು ಮುಂದುವರಿಸಿದಾಗ, ಧಾರ್ಮಿಕ ಸಂಸ್ಕೃತಿಯು ಪುನರುಜ್ಜೀವನವನ್ನು ಪಡೆದು ತನ್ನ ಮುಂಚಿನ ಉತ್ತಮ ಸ್ಥಿತಿಯನ್ನು ಪಡೆದು ಸ್ವಾಭಾವಿಕವೂ ಅನಿ ವಾರ್ಯವೂ ಆಯಿತು. ಇದು ಚರಿತ್ರೆಯಲ್ಲಿ ಆಗಾಗ್ಗೆ ಸಂಭವಿಸುವ ಸಂಗತಿಯಾಗಿರುತ್ತದೆ.

ಭೌದ್ಧಮತದ ಏಳು ಬೀಳುಗಳಿಗೆ ಕಾರಣಗಳು.

ಸನಾತನಾರ್ಯಧರ್ಮ (ಹಿಂದೂಮತ)ದಲ್ಲಿ "ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯ ಅಪರಿಗ್ರಹಾ ಯಮಾಃ" ಎಂದು ಅಹಿಂಸೆಗೆ ಅಗ್ರಸ್ಥಾನವನ್ನೇ ಕೊಟ್ಟಿದೆ. ಬ್ರಾಹ್ಮಣರು ಮಾಂಸಾಹಾರವನ್ನು ದುಷ್ಟವೆಂದು ಮನಗಂಡ ಮೇಲೆ ಅದನ್ನು ಕಲಿವರ್ಜ್ಯಗಳಲ್ಲಿ ಸೇರಿಸಿ ನಿಷೇಧಿಸಿ ಈಗ್ಗೆ ಕನಿಷ್ಠ ಪಕ್ಷ ಎರಡುಸಾವಿರ ವರ್ಷಗಳಿಂದಲೂ ಬಿಟ್ಟಿರುತ್ತಾರೆ. ಹೀಗೆ ಬೌದ್ಧಮತದ ಮುಖ್ಯ ಧರ್ಮಗಳು ಆರ್ಯಧರ್ಮದಲ್ಲಿ ಮುಖ್ಯ ಸ್ಥಾನವನ್ನು ಹಿಂದಿನಿಂದಲೇ ಪಡೆದಿವೆ. ಆದರೂ ಅದರ ಪ್ರಚಾರ ಕಾರ್ಯವು ಕಡಿಮೆ ಆಗಿದ್ದಾಗ ಬೌದ್ಧಮತವು ಜನಪ್ರಿಯವಾಗಿ ಬೆಳೆಯಿತು. ಪುನಃ ಆರ್ಯರು ಪ್ರಚಾರಕಾರ್ಯವನ್ನು ಪುನರುಜ್ಜೀವನಗೊಳಿಸಿದಮೇಲೆ ಬೌದ್ಧರ ಸಂಖ್ಯೆಯು ತುಂಬ ಕಡಿಮೆಯಾಯಿತು. ಬೌದ್ಧಮತವು ಇಂಡಿಯಾದಲ್ಲಿ ಇಲ್ಲದೆ ಹೋಯಿತೆನ್ನುವಷ್ಟರಮಟ್ಟಿಗೆ ಹೀನಸ್ಥಿತಿಗೆ ಬಂದಿತು. ಬೌದ್ಧವಿಹಾರಗಳಲ್ಲಿ ಬಿಕ್ಷುಗಳೂ ಭಿಕ್ಷುಣಿಯರೂ ಹೆಚ್ಚಾಗಿ ಸೇರಲು ಅವಕಾಶವಾದುದು, ವಿಶ್ವಧರ್ಮದಲ್ಲಿ ಅನಾದರವೂ ಜೀವಾತ್ಮರನ್ನೂ, ದೇವರನ್ನೂ ಒಪ್ಪದಿರುವುದೂ ಮುಂತಾದ ಕಾರಣಗಳು ಆ ಮತವನ್ನು ಹೀನಸ್ಥಿತಿಗೆ ತಂದುವೆನ್ನಬಹುದು. ಸನಾತನಿಗಳು ಕ್ರೌರ್ಯವನ್ನು ಅವಲಂಬಿಸಿದರೆಂಬ ವಾದಕ್ಕೆ ಪ್ರಮಾಣವಿಲ್ಲ. ಬೌದ್ಧಗ್ರಂಥಗಳಲ್ಲೂ ಅದರ ಉಲ್ಲೇಖವಿಲ್ಲವು. ಧಾರ್ಮಿಕ ಸಂಸ್ಕೃತಿಯಿಂದಲೇ ಪುನರುಜ್ಜೀವನ ಕಾರ್ಯವು ನೆರವೇರಿತು.

ಜೈನಮತದ ಮುಖ್ಯ ಧರ್ಮಗಳು.

ಜೈನಮತವು ದೇವರನ್ನು ಅಂಗೀಕರಿಸಿದೆ. ಆದರೆ ಆ ಈಶ್ವರನು ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ನೆರವೇರಿಸುವವನಲ್ಲವು. ಮನುಷ್ಯರು ಸನ್ಮಾರ್ಗದಲ್ಲಿ ಮುಂದುವರಿಯಬೇಕಾದರೆ ದೇವರು ಒಂದು ಮಾದರಿಯಂತೆ, ಮೇಲುಪಂಕ್ತಿಯಂತೆ ಮಾತ್ರ

ಇರುತ್ತಾನೆ. ನಿತ್ಯರಾದ ಜೀವರೂ ಇದಾರೆಂದು ಜೈನಮತವು ಅಂಗೀಕರಿಸಿದೆ.

"ಜೀವೋऽನಾದಿರನ್ಯಧನಃ ಸ ಗುಣವಾನ್ ಕರ್ತಾ ಚ ಭೋಕ್ತಾ ವಿದನ್
ಸೂಕ್ಷ್ಮೋ ದೇಹಮಿತಃ ಸ ಯಾತಿ ನರಕಂ ತಿರ್ಯಗ್ಗತಿಂ ಚಾಘತಃ ।
ಪುಣ್ಯಾತ್ ಸ್ವರ್ಗಮುಪೈತಿ ಮಾನುಷಗತಿಂ ಪ್ರಾಪ್ನೋತಿ
ತನ್ಮಿಶ್ರಣಾತ್।
ಮುಕ್ತಿಂಗಚ್ಛತಿ ಪಾಪದೋಷವಿಲಯಾತ್ ಇತ್ಯಾಹ ತತ್ವಂ ಜಿನಃ "॥
ತ್ವಂ ಶುದ್ಧಾತ್ಮಾ ಶರೀರಂ ಸಕಲಮಲಯುತಂ ತ್ವಂ ಸದಾನಂದಮೂರ್ತಿಃ
ದೇಹಂ ದುಃಖೈಕಗೇಹಂತ್ವಮಸಿ ಸಕಲವಿತ್ ಕಾಯಮಜ್ಞಾನಪುಂಜಂ ।
ತ್ವಂ ನಿತ್ಯಃ ಶ್ರೀನಿವಾಸಃ ಕ್ಷಣರುಚಿ ಸದೃಶಾಶಾಶ್ವತೈಕಾಂಗಮಂಗಂ।
ಮಾಗಾ ಜೀವಾತ್ರ ರಾಗಂ ವಪುಷಿ ಭಜ ಭಜಾನಂತಸೌಖ್ಯೋದಯಂ
ತ್ವಂ॥

ಜೀವನು ಹುಟ್ಟುಸಾವುಗಳಿಲ್ಲದವನು. ದಯಾಧರ್ಮಾದಿ ಗುಣಗಳು ಳ್ಳವನು ಕರ್ಮಗಳನ್ನು ಮಾಡುವವನು ಅವುಗಳ ಫಲಗಳನ್ನೂ ಅನುಭವಿಸುವವನು. ಸೂಕ್ಷ್ಮವಾದ ಸ್ವರೂಪವುಳ್ಳವನು. ದೇಹದ ಪರಿಮಾಣವುಳ್ಳವನು, ಎಂದರೆ ಇರುವೆಯ ದೇಹದಲ್ಲಿ ಇರುವೆಯಷ್ಟು ಆನೆಯ ದೇಹದಲ್ಲಿರುವಾಗ ಆನೆಯಷ್ಟು ಪರಿಮಾಣವುಳ್ಳವನಾಗಿ ಹಿಗ್ಗುವ ಮತ್ತು ಹ್ರಸ್ವವಾಗಬಲ್ಲವನು. ಪಾಪದ ಫಲವಾಗಿ ನರಕದಲ್ಲಿ ದುಃಖವನ್ನೂ ತಿರ್ಯಕ್ ಜನ್ಮವನ್ನೂ ಪಡೆಯುತ್ತಾನೆ. ಪುಣ್ಯದಿಂದ ಸ್ವರ್ಗದಲ್ಲಿ ಸುಖವನ್ನೂ ಉತ್ತಮ ಜನ್ಮಗಳನ್ನೂ ಪಡೆಯುತ್ತಾ ಕಡೆಗೆ ಮಾನವಜನ್ಮವನ್ನೂ ಪಡೆಯುತ್ತಾನೆ. ಮಾನವ ಜನ್ಮಪ್ರಾಪ್ತಿಗೆ ಪುಣ್ಯ ಪಾಪಗಳೆರಡೂ ಬೆರೆದಿರುವುದೇ ಕಾರಣವಾಗಿರುತ್ತದೆ. ಪಾಪದೋಷವು ಎಲ್ಲವೂ ಸಂಪೂರ್ಣವಾಗಿ ನಷ್ಟವಾದಾಗ ಮುಕ್ತಿಯನ್ನು ಪಡೆಯುತ್ತಾನೆ. ಹೀಗೆಂದು ಜಿನದೇವನು ಬೋಧಿಸಿದಾನೆ." ಜಿನನೆಂದರೆ ಕರ್ಮವನ್ನು ಜಯಿಸಿದವನೆಂದು ಅರ್ಥವೆಂದು ಉಲ್ಲೇಖವಿದೆ. "ಜಯತಿ ಇತಿಜಿನಃ" "ಮಾರಜಿತ್ ಲೋಕಜಿತ್ ಜಿನಃ" ಎಂಬಂತೆ—ಮಾರನನ್ನು ಎಂದರೆ ಕಾಮಕ್ರೋಧ ಮುಂತಾದುವನ್ನು

ಜಯಿಸಿದವನು, ಲೋಕವನ್ನೂ ಜಯಿಸಿದವನೆಂದು ಅರ್ಥವು. ಬೌದ್ಧ ಮತದಂತೆ ಜೈನಮತವು ದೇಶಾಂತರಗಳಲ್ಲಿ ವ್ಯಾಪಿಸಲಿಲ್ಲ.

ಜೈನ ಬೌದ್ಧ ಮತಗಳ ಮುಖ್ಯ ಉಪದೇಶಗಳು.

ವೇದಗಳ ಪ್ರಾಮಾಣ್ಯವನ್ನೂ ಕರ್ಮಗಳ ಉತ್ಕರ್ಷವನ್ನೂ ಒಪ್ಪದೆ, ಯಜ್ಞಗಳಲ್ಲಿ ಪಶುಹಿಂಸೆಯನ್ನು ಪ್ರತಿಭಟಿಸಿ, ಬ್ರಾಹ್ಮಣಮತದಿಂದ ಒಡೆದು ಪ್ರತ್ಯೇಕವಾದ ಮತಗಳು ಇವೆರಡು. ಬೌದ್ಧರು ಜಾತಿಪದ್ಧತಿಯನ್ನೂ ಒಪ್ಪುವುದಿಲ್ಲ. ಜೈನರು ಒಪ್ಪುತ್ತಾರೆ. ಅಹಿಂಸಾಧರ್ಮವನ್ನು ಯಶಸ್ವಿಯಾಗಿ ಹರಡಿದ ಕೀರ್ತಿಯು ಜೈನ ಬೌದ್ಧ ಮತಗಳ ವಿಶೇಷ ಗುಣವಾಗಿದೆ.

ಮಾಂಸಾಹಾರದ ಸ್ಥಾನಮಾನಗಳು.

ಜನರು ಎಲ್ಲ ದೇಶಗಳಲ್ಲೂ ಪ್ರತಿನಿತ್ಯವೂ ತಮ್ಮ ಆಹಾರಕ್ಕಾಗಿ ಅನಾವಶ್ಯಕವಾಗಿ ಸಾವಿರಗಟ್ಟಲೆಯಾಗ ಲಕ್ಷಗಟ್ಟಲೆಯಾಗಿ ಪ್ರಾಣಿಗಳನ್ನು ಕೊಲ್ಲುತ್ತಿರುವುದನ್ನು ಯಾರೂ ನಿಲ್ಲಿಸಲು ಅಸಮರ್ಥರಾಗಿದಾರೆ. ಹೀಗಿದ್ದರೂ ಅಹಿಂಸಾಧರ್ಮವನ್ನು ಸ್ಥಾಪಿಸುತ್ತೇವೆಂಬ ಅಭಿಮಾನದ ಮಾತಿನಲ್ಲಿ ಅರ್ಥವಿಲ್ಲವೆನ್ನಿಸುತ್ತದೆ. ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಬೌದ್ಧರೂ ಜೈನರೂ ವೀರಶೈವರೂ ಮಾಂಸಾಹಾರವನ್ನು ನಿಷೇಧಿಸಿ ಬಿಟ್ಟಿರುತ್ತಾರೆ. ಪ್ರತ್ಯುದಾಹರಣೆಗಳೂ ಇಲ್ಲವೆನ್ನುವಹಾಗೂ ಇಲ್ಲ. "ಜೀವೋ ಜೀವಸ್ಯ ಜೀವನಂ" ಎಂಬ ವ್ಯಾಪಕವಾದ ತತ್ವವೇನೂ ಸುಳ್ಳಲ್ಲ. ಪರಿಣಾಮ ತತ್ವದ (Theory of Evolution) ದೃಷ್ಟಿಯಿಂದ ಇದನ್ನು ಅನ್ಯಾಯವೆಂದಾಗಲಿ ಅಧರ್ಮವೆಂದಾಗಲಿ ಸ್ಥಾಪಿಸುವುದು ಸುಲಭವಲ್ಲ. ಆದರಿಂದಲೇ ಅಹಿಂಸೆ ಜನಪ್ರಿಯವಾಗದೆ ಇದೆ. ಜನಸಂಖ್ಯೆಯಲ್ಲಿ ಶೇಕಡಾ ಎಂಬತ್ತಕ್ಕಿಂತಲೂ ಹೆಚ್ಚುಮಂದಿ ಮಾಂಸಾಹಾರಿಗಳಾಗಿರುತ್ತಾರೆ. ಮಾಂಸಾಹಾರಿಗಳಲ್ಲಿ ವಿದ್ಯಾವಂತರೂ, ಸತ್ಪುರುಷರೂ, ಪರೋಪಕಾರಿಗಳೂ ಇದ್ದಾರೆ. ಅವರು ಮಾಡಿರುವ ದಾನಧರ್ಮಗಳಿಂದ ಲಕ್ಷಗಟ್ಟಲೆಯಾಗಿ ಜನರು ಪ್ರಯೋಜನವನ್ನೂ ಪಡೆಯುತ್ತಿದಾರೆ. ಆದರೂ ಮಾಂಸಾ

ಹಾರಕ್ಕೆ ಮನಸ್ಸು ಒಗ್ಗದೆ ಇರುವುದರ ಕಾರಣವನ್ನು ಸತ್ಯಾನ್ವೇಷಿಗಳು ಮನಗಂಡು ತಿಳಿಯ ಹೇಳಬೇಕಾಗಿದೆ. ಮಾಂಸಾಹಾರ ನಿವೃತ್ತಿಯು ಜನಪ್ರಿಯವಾಗಲು ಏನನ್ನು ಮಾಡಬೇಕೆಂಬುದು ತಿಳಿಯುತ್ತಿಲ್ಲ. ಸ್ವಾಮಿ ವಿವೇಕಾನಂದರಂತಹ ದೊಡ್ಡವರೂ ಮಾಂಸಾಹಾರವನ್ನು ನಿಷೇಧಿಸದೆ ಇರುವುದೂ ಗಮನಾರ್ಹವಾಗಿದೆ. ಹೇಗೂ ಮಾಂಸಾಹಾರವನ್ನು ನಾವು ಒಪ್ಪಲಾರೆವು. ತತ್ವದೃಷ್ಟಿಯಿಂದ ಜೀವಾತ್ಮರಿಗೂ ಪರಮಾತ್ಮನಿಗೂ ಭೇದವಿಲ್ಲ. ಭೇದವು ಉಪಾಧಿಯಿಂದ ವ್ಯವಹಾರಸ್ಥಿತಿಯಲ್ಲಿ ತೋರುತ್ತಿರುತ್ತದೆಯೇ ಹೊರತು ಅದು ವಾಸ್ತವವಾದುದಲ್ಲ. ಪರತತ್ವದ ಅಜ್ಞಾನದಿಂದ ತೋರುತ್ತಿರುವ ಈ ಭೇದ ಭ್ರಾಂತಿಯೂ ಅಭಿಮಾನವೂ ತತ್ವಜ್ಞಾನದಿಂದ ನಷ್ಟವಾಗುತ್ತದೆ ಎಂಬುದು ಉಪನಿಷತ್ತಿನ ಋಷಿಗಳು ಮನಗಂಡು ಸಾರಿ ಹೇಳಿರುವ ಸಿದ್ಧಾಂತವಾಗಿದೆ. ಬೌದ್ಧರು ಆತ್ಮವಿಚಾರದ ಗೊಡವೆಗೇ ಹೋಗಬೇಕಾಗಿಲ್ಲವೆಂದು ಬುದ್ಧದೇವನು ಉಪದೇಶಿಸಿದ್ದಾನೆ. ನೀತಿಧರ್ಮಗಳನ್ನು ಬಿಡದ ಜೀವನವನ್ನು ಸಾಗಿಸಿದರೆ ಅಷ್ಟೇ ಸಾಕೆಂದು ಅವನ ಮತವು. ಜೀವಾತ್ಮರು ಅನಂತವಾಗಿ ನಿತ್ಯವಾಗಿರುವರೆಂದು ಜೈನರ ಮತವು ಹೇಳುತ್ತದೆ. ಪರಮತಗಳಲ್ಲಿ ಸಹನೆ ಸಹಾನುಭೂತಿಗೌರವಗಳು ಆರ್ಯಧರ್ಮದ ವೈಶಿಷ್ಟ್ಯವಾದುದರಿಂದ ಎಲ್ಲ ಮತಗಳೂ ಈ ನಮ್ಮ ದೇಶದಲ್ಲಿ ತೊಂದರೆ ಇಲ್ಲದೆ ಬಾಳುತ್ತಿವೆ. ಇದು ಧಾರ್ಮಿಕ ಸಂಸ್ಕೃತಿಯ ಗುರುತೆನ್ನುವುದು ಸ್ಪಷ್ಟವಾಗಿದೆ. ಪುಷ್ಪದಂತಾಚಾರ್ಯನ "ತ್ರಯೀಸಾಂಖ್ಯಂ ಯೋಗಃ . . . . . . ." (ಪುಟ ೧೪೫ ನೋಡಿ.) ಎಂಬ ಭಾವವು ಜನಪ್ರಿಯವಾಗಿತ್ತು. ಈ ಕಾಲದಲ್ಲಿ ಕುಮಾರಿಲಭಟ್ಟರು ಕರ್ಮಕಾಂಡದಲ್ಲಿ ಜನರ ಆದರವನ್ನು ಪುನರುಜ್ಜೀವನಗೊಳಿಸಿದರು. ಶ್ರೀ ಶಂಕರಾಚಾರ್ಯರು ಅವತರಿಸಿ ಜ್ಞಾನಕಾಂಡದಲ್ಲಿ ಜನರ ಆದರವು ಹೆಚ್ಚುವಂತೆ ಮಾಡಿದರು. ಪಂಚಾಯತನ ಪೂಜೆಯು ಹೆಚ್ಚಾಗಿ ಜನಪ್ರಿಯವಾಗುತ್ತಾ ಬರವಂತಾಯಿತು.

"ಜ್ಞಾನವಿಹೀನ ಸರ್ವಮತೇನ ಮುಕ್ತಿಂ ನಭಜತಿ ಜನ್ಮಶತೇನ"
"ಆದಿತ್ಯಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಂ"
"ಅಲಿಂಗಾಂಕಮ ಚಕ್ರಾಂಕಂ ಅನರಾಸ್ಥಿ ನಿರಾಮಿಷಂ |
ಅರಕ್ತಂ ಚಾಪ್ಯನುಚ್ಛಿಷ್ಟಂ ಷಣ್ಮತಾಚಾರ ಮಾಚರೇತ್॥"

ಶೈವವೈಷ್ಣವಶಾಕ್ತೇಯ ಸ್ತೋತ್ರಗಳನ್ನು ರಚಿಸಿ ಪ್ರಚಾರಮಾಡಿ ಜನರ ಹೃದಯದ ವೈಶಾಲ್ಯವನ್ನು ಶಂಕರಾಚಾರ್ಯರು ಬೆಳೆಸಿದರು. ಇವರ ಮುಂಚೆ ಪ್ರಚಾರಕ್ಕೆ ಬಂದಿದ್ದ ಭಾಗವತ ಮತವನ್ನೂ ಶೈವಮತವನ್ನೂ ಶಾಕ್ತೇಯ ಮತವನ್ನೂ ಸಹಾನುಭೂತಿಯಿಂದ ಗೌರವಿಸಿ ಷಣ್ಮತಸ್ಥಾಪನಾಚಾರ್ಯರೆನಿಸಿ ಕೊಂಡರು. ಜ್ಞಾನ ದಿಂದಲೇ ಮೋಕ್ಷಪ್ರಾಪ್ತಿಯಾಗುತ್ತದೆ ಎಂಬುದು ಸಿದ್ಧಾಂತವು. ಜ್ಞಾನವೆಂದರೆ ಆತ್ಮನು ಅಸಂಗನು. ಕರ್ತೃತ್ವವೂ ಭೋಕ್ತೃತ್ವವೂ ಅವನ ವಾಸ್ತವ ಸ್ವರೂಪವಲ್ಲ. ಅವನು ಸಚ್ಚಿದಾನಂದ ಸ್ವರೂಪನು. ಇದರಿಂದ ಬ್ರಹ್ಮಾತ್ಮೈಕ್ಯವು ಅನುಭವಕ್ಕೆ ಬರಬೇಕು. ಆ ಜ್ಞಾನಕ್ಕೆ ನಮ್ಮಲ್ಲಿ ಈಗಿರುವ ಅಜ್ಞಾನವೇ ಅಡ್ಡಿಯಾಗಿದೆ. ಈ ಅಜ್ಞಾನವನ್ನು ಜ್ಞಾನವೇ ನಾಶಮಾಡಬಲ್ಲದು. ಈ ಅಜ್ಞಾನಕ್ಕೆ ಮಾಯೆ ಎಂದು ವ್ಯವಹಾರವಿದೆ. ಇದು

"ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ |
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥

ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವಂತೆ ದೇವರಲ್ಲಿ ಭಕ್ತಿಯಿಂದಲೇ ಮಾಯೆಯು ಸುಲಭವಾಗಿ ಕ್ರಮವಾಗಿ ಹೋಗಬೇಕು. ಆ ಭಕ್ತಿಯು ನಿಷ್ಕಾಮವಾಗಿರಬೇಕು. ನಿಷ್ಕಾಮ ಭಕ್ತಿಗೆ ಚಿತ್ತಶುದ್ಧಿಯು ಆವಶ್ಯಕವಾದುದು. ಕರ್ಮಯೋಗದಿಂದ ಚಿತ್ತವು ಶುದ್ಧವಾಗುತ್ತದೆ. ನಿಷ್ಕಾಮಧರ್ಮಾಚರಣೆಗೇ ಕರ್ಮಯೋಗವೆಂದು ಹೆಸರಿದೆ. ಚಿತ್ತದಲ್ಲಿರುವ ಮಲಗಳು ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳು. ನಿಷ್ಕಾಮ ಧರ್ಮಾಚರಣೆಯಿಂದ

ಅದ್ವೈತ ತತ್ತ್ವದ ವಿಶೇಷ ಗುಣಗಳು.

ಈ ಚಿತ್ತಮಲಗಳೂ ನಾಶವಾಗಿ, ಹೊಸಕಾಮಗಳು ಬಂದು ಸೇರದೆ, ಚಿತ್ತವು ಶುದ್ಧಿಯಾದರೆ ನಿಷ್ಕಾಮ ಭಕ್ತಿಯಿಂದ ಜ್ಞಾನವು ಮಾಯೆಯನ್ನು ನಾಶಮಾಡುತ್ತದೆ. ಆಗ ಶಾಬ್ದ ಜ್ಞಾನವು ಅಪರೋಕ್ಷಾನುಭವವಾಗುತ್ತದೆ. ಜೀವಾತ್ಮನು ಎಂದಿನಂತೆ ಪರಮಾತ್ಮನಾಗಿ ಸಚ್ಚಿದಾನಂದಾನಂತಾದ್ವಯ ಬ್ರಹ್ಮರೂಪನಾಗಿರುತ್ತಾನೆ. ಇದೇ ಮೋಕ್ಷವು. ಇದು ಸಾಮಾನ್ಯ ಜನರಿಗೆ ಅರ್ಥವಾಗುವುದಿಲ್ಲ. ಇದು ಪ್ರೌಢಾಧಿಕಾರಿಗಳಿಗೆ ಸರಿಯಾಗಿರುತ್ತದೆ. ನಿರ್ಗುಣ ನಿರವಯವ ನಿರ್ವಿಕಾರಿ ಅಖಂಡ ಜ್ಞಾನ ಘನವೇ ಬ್ರಹ್ಮತತ್ತ್ವವು.

ಜನಜೀವನದಲ್ಲಿ ಮತಧರ್ಮಗಳ ಪ್ರಭಾವ.

ನಮ್ಮಂತಹ ಮಂದಾಧಿಕಾರಿಗಳಿಗೆ ಸಗುಣವೂ ಸಾಕಾರವೂ ಆಗಿರುವ ದೇವರು ಬೇಕು. ಆ ದೇವರು ಸರ್ವಜ್ಞನೂ ಸರ್ವಶಕ್ತನೂ, ಭಕ್ತರ ಪ್ರಾರ್ಥನೆಗಳನ್ನು ಲಾಲಿಸುವವನೂ, ಅವರ ಪಾಪಗಳನ್ನು ಕ್ಷಮಿಸುವವನೂ, ಅವರ ಕೋರಿಕೆಗಳನ್ನು ನೆರವೇರಿಸುವವನೂ, ಆಗಿರಬೇಕು. ಇಂತಹ ಸ್ವರೂಪಕ್ಕೆ ಅಪರ ಬ್ರಹ್ಮ, ಸಗುಣಬ್ರಹ್ಮ, ಹಿರಣ್ಯಗರ್ಭ, ಲಕ್ಷ್ಮೀನಾರಾಯಣ, ಉಮಾಮಹೇಶ್ವರ, ಅರ್ಧನಾರೀಶ್ವರ, ಪರಾಶಕ್ತಿ ತ್ರಿಪುರಸುಂದರೀ ಮುಂತಾದ ನಾಮಗಳನ್ನು ಹೇಳಿ ಭಕ್ತರು ತಮ್ಮ ರುಚಿಸಂಸ್ಕೃತಿಗಳಿಗೆ ಒಪ್ಪಿಬರುವ ರೂಪವನ್ನು ಆರಿಸಿಕೊಂಡು ಅದನ್ನು ಆರಾಧಿಸುತ್ತಾ ಇಷ್ಟಾರ್ಥಗಳನ್ನು ಪಡೆಯುತ್ತಾರೆ. ಮುಸಲ್ಮಾನರೂ ಕ್ರಿಶ್ಚಿಯನ್ನರೂ ನಿರಾಕಾರ ಸಗುಣ ಸ್ವರೂಪವನ್ನು ಆರಾಧಿಸುತ್ತಾರೆ. ಹೀಗೆ ವೇದಾಂತಿಗಳೂ ಅದ್ವೈತಿಗಳೂ ಸಮನ್ವಯ ದೃಷ್ಟಿಯಿಂದ ಸರ್ವಧರ್ಮ ಸಾಮಂಜಸ್ಯವನ್ನು ಮನಗಾಣುತ್ತಾರೆ. ವಿರೋಧವನ್ನು ಗಮನಿಸದೆ ಅವಿರೋಧವನ್ನು ಮನಗಾಣುತ್ತಾರೆ. ಈ ದೃಷ್ಟಿಯಿಂದ ಶಂಕರಾಚಾರ್ಯರು ಪ್ರೌಢಾಧಿಕಾರಿಗಳಿಗಾಗಿ ಭಾಷ್ಯಗಳನ್ನೂ, ಮಂದಾಧಿಕಾರಿಗಳಿಗಾಗಿ ಸಗುಣ ಬ್ರಹ್ಮವೇ ಬೇಕು, ಆದುದರಿಂದ ಆ ಮಂದಾಧಿಕಾರಿಗಳಿಗಾಗಿ

ಸ್ತೋತ್ರಗಳನ್ನೂ, ರಚಿಸಿ ಪ್ರಚಾರಮಾಡಿ ಎಲ್ಲ ಜನರಿಗೂ ಜ್ಞಾನವನ್ನು ಉಂಟುಮಾಡುತ್ತಾ ಉಪಕರಿಸಿರುತ್ತಾರೆ. ಸಂಸಾರಿಗಳಾಗಿರುವವರಿಗೆ ಪ್ರವೃತ್ತಿಧರ್ಮವನ್ನೂ, ಮುಮುಕ್ಷುಗಳಿಗೆ ನಿವೃತ್ತಿಧರ್ಮವನ್ನೂ ಭಗವದ್ಗೀತೆಯು ಬೋಧಿಸುತ್ತದೆಂದು ವಿವರಿಸಿ ತಿಳಿಸಿರುತ್ತಾರೆ. ಈ ದೃಷ್ಟಿಯಿಂದ ನೋಡುವವರಿಗೆ ವೇದಾಂತಕ್ಕೂ ಲೌಕಿಕ ವ್ಯವಹಾರಕ್ಕೂ ಯಾವ ವಿರೋಧವೂ ಇರುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಧಾರ್ಮಿಕ ಸಂಸ್ಕೃತಿಯು ಪರಮಫಲವೇ ಇದಾಗಿದೆ ಎನ್ನಬಹುದು.

> "ಆರ್ಯಾಂಬಾಗರ್ಭಜಾತಃ ಶಿವಗುರುತನಯಃ ಧರ್ಮತತ್ತ್ವೋಪದೇಷ್ಟಾ।
> ಭಾಷ್ಯಸ್ತೋತ್ರಾಣಿ ತನ್ವನ್ ಭುವಿ ಸಕಲ ನಾನುದ್ಧರನ್ ಜ್ಞಾನದಾನಾತ್॥
> ಕುರ್ವನ್ ಕರ್ಮಾಣಿ ಧರ್ಮಂ ದ್ವಿವಿಧ ಮುಪದಿಶನ್ ಕಾಮಿ ನಿಷ್ಕಾಮಿದೃಷ್ಟ್ಯಾ।
> ಸಂಸಾರೇ ಮೋಕ್ಷಮಾರ್ಗೇ ಗುರುರಿಹ ಕೃಪಯಾ ಶಂಕರಸ್ತಂ ನಮಾಮಿ॥

ಶಂಕರಾಚಾರ್ಯರ ಉಪದೇಶ ವಿಶೇಷ.

ಮುಂದಿನ ಕಾಲದಲ್ಲಿ ಶ್ರೀರಾಮಾನುಜಾಚಾರ್ಯರೂ ಶ್ರೀ ಮಧ್ವಾಚಾರ್ಯರೂ ಹಿಂದಿನ ಭಾಗವತ ಮತವನ್ನು ಅನುಸರಿಸಿ ಶ್ರೀವೈಷ್ಣವ, ವೈಷ್ಣವ ಸಂಪ್ರದಾಯಗಳನ್ನು ಸ್ಥಾಪಿಸಿದರು. ಹಾಗೆಯೇ ವೀರಶೈವ ಸಂಪ್ರದಾಯವನ್ನು ಶ್ರೀ ಬಸವೇಶ್ವರರು ಹಿಂದಿನ ಶೈವ ಮತಾನುಸಾರವಾಗಿ ಸ್ಥಾಪಿಸಿದರು. ಈ ಮತಧರ್ಮಗಳಲ್ಲಿ ವಿಶಿಷ್ಟ ಸಂಪ್ರದಾಯ ಅಥವಾ ಆಚಾರಗಳನ್ನು ಮುಂದುಮಾಡಿದರೆ ಪರಸ್ಪರವಾಗಿ ಭೇದವೂ ವಿರೋಧವೂ, ಘರ್ಷಣೆಯೂ ಉಂಟಾಗಿ ಐಕಮತ್ಯವನ್ನು ಸ್ಥಾಪಿಸಲಾಗುವುದಿಲ್ಲವೆಂದು ತೋರಬಹುದು. ಆದರೆ ಇವೆಲ್ಲಕ್ಕೂ ಮೂಲಭೂತವಾದ ಅಭಿಪ್ರಾಯದಂತಿರುವ ವಿಶ್ವಧರ್ಮದ ದೃಷ್ಟಿಯನ್ನು ಮುಂದುಮಾಡಿ ನೋಡಿದರೆ ಅವಿರೋಧವೂ ಸಾಮಂಜಸ್ಯವೂ ಕಾಣಬರುತ್ತದೆ. ಮತಗಳು ಜನರನ್ನು ಕೂಡಿಸುವ ಬದಲು

ಚದರಿಸುವ ಹಾಗಿವೆ ಎಂಬ ಆಕ್ಷೇಪಣೆಯು ವಿಶಿಷ್ಟ ಸಂಪ್ರದಾಯ ಗಳನ್ನು ಮುಂದುಮಾಡಿದುದರ ಫಲವು. ಇದನ್ನು ಈ ಪದ್ಯದಲ್ಲಿ ಸಂಗ್ರಹಿಸಿದೆ.

> ತತ್ತ್ವಸ್ಯೈತದ್ಭವತಿ ನಿಯತಂ ಸ್ಯಾತ್ ಸ್ವರೂಪಂ ಹಿ ನಾನ್ಯತ್
> ಸರ್ವಂ ತತ್ತ್ವಂ ಪರಮುಪದಿದೇಶಾ ಸ್ಮದಾಚಾರ್ಯ ಏವ ।
> ಅಸ್ಮಿನ್ ಭಕ್ತ್ಯಾಭವತಿನಿಯತಂ ಮುಕ್ತಿರನ್ಯತ್ರನಾಸ್ಯಾತ್
> ಇತ್ಯಾದ್ಯುಕ್ತಿರ್ನ ಭವತಿ ಮತಂ ಕಿಂ ತು ವೈರಾದಿಮೂಲಂ ॥

ಪರತತ್ತ್ವದ ಸ್ವರೂಪವು ನಮ್ಮ ಮತದಲ್ಲಿ ವಿವರಿಸಿರುವುದೇ ಸರಿ ಯಾದುದು. ಇತರ ಮತಗಳಲ್ಲಿ ನಿರೂಪಿಸಿರುವುದು ವಾಸ್ತವ ವಾದುದಲ್ಲವು. ಪರತತ್ತ್ವದ ಎಲ್ಲ ವಿಷಯಗಳನ್ನೂ ನಮ್ಮ ಆಚಾರ್ಯರೇ ನಿರೂಪಿಸಿರುತ್ತಾರೆ. ನಮ್ಮ ಆಚಾರ್ಯರಲ್ಲೂ ಅವರ ಉಪದೇಶ ಗಳಲ್ಲೂ ಭಕ್ತಿಯಿಂದ ನಂಬಿಕೆಯನ್ನಿಡುವುದರಿಂದಲೇ ಮೋಕ್ಷವೆಂಬ ಪರಮಪುರುಷಾರ್ಥವೂ ದೊರೆಯುತ್ತದೆ. ಬೇರೆ ರೀತಿಯಿಂದ ದೊರೆಯುವುದಿಲ್ಲ. ಇವೇ ಮುಂತಾದ ಉಪದೇಶದ ಮಾತುಗಳು ಮತವೆನ್ನಿಸಿಕೊಳ್ಳಲಾರವು. ಇಂಥವುಗಳು ಜನರಲ್ಲಿ ದ್ವೇಷ ಜಗಳ ಗಳಿಗೇ ಮೂಲಕಾರಣವಾಗುತ್ತದೆ. ಒಂದು ಕೆಲಸವನ್ನು ಸಾಧಿಸಲೂ, ಒಂದು ಅನಿಷ್ಟವನ್ನು ನಿವಾರಿಸಲೂ, ಆಯಾ ಮತೀಯರು ಒಗ್ಗಟ್ಟಿ ನಿಂದ ಕೆಲಸಮಾಡಿ ಜಯಶಾಲಿಗಳಾಗುವುದನ್ನು ನಾವು ನೋಡಿಯೂ ನೋಡುತ್ತಲೂ ಇದೇವೆ. ಆದುದರಿಂದ ಮತಗಳಲ್ಲಿ ತಮ್ಮ ಅನು ಯಾಯಿಗಳನ್ನು ಒಗ್ಗಟ್ಟಿನಲ್ಲಿ ಸೇರಿಸಿ ಕೆಲಸ ಮಾಡಿಸುವ ಶಕ್ತಿ ಇದೆ. ಎಂಬುದನ್ನು ನಾವೂ ಒಪ್ಪಬೇಕು. ವಿದ್ಯುಚ್ಛಕ್ತಿ (Electricity) ಯಲ್ಲಿ ಶಕ್ತಿಯು, ಕಾರ್ಯನಿರ್ವಾಹ ಸಾಮರ್ಥ್ಯವು ಇದೆ. ಅದನ್ನು ತಿಳಿದವರು ಸರಿಯಾಗಿ ಉಪಯೋಗಿಸಬೇಕು. ಹಾಗೆಯೇ ಮತ ಶಕ್ತಿಯನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ರೀತಿಯನ್ನು ಮುಂದುಮಾಡಿ ಅನುಸರಿಸಿದರೆ ಐಕಮತ್ಯವೂ ಸಹಾನುಭೂತಿಯೂ ಸಹಕಾರವೂ ದೊರೆತು ಕಾರ್ಯವು ಯಶಸ್ವಿಯಾಗುತ್ತದೆ. ಈ

ಕೆಲಸವನ್ನು ವಿಶ್ವಧರ್ಮದ ಆಧಾರದ ಮೇಲೆಯೇ ಮಾಡಬೇಕಾಗಿದೆ.

ವಿಶ್ವಧರ್ಮದ ಅರಿವು ಆಚರಣೆಗಳು ವಿದ್ಯಾಭ್ಯಾಸಕ್ಕೆ ಫಲ.

ಪಾಶ್ಚಾತ್ಯರು ದೇಶಾಭಿಮಾನ ಕುಲಾಭಿಮಾನಗಳನ್ನು ಜನರಲ್ಲಿ ಬೇರೂರಿ ಬೆಳೆಯುವಂತೆ ಮಾಡಲು, ವಿದ್ಯಾರ್ಥಿಗಳಿಗೆ ವ್ಯಾಸಂಗ ವಿಷಯಗಳಲ್ಲಿ ಅವನ್ನು ಸೇರಿಸಿದರು. ಹಾಗೆಯೇ ಪಠ್ಯಪುಸ್ತಕಗಳಲ್ಲೂ ಅವನ್ನು ಅಳವಡಿಸಿದರು. ಆ ವಿದ್ಯಾರ್ಥಿಗಳೂ ದೊಡ್ಡವರಾಗಿ ಸತ್ಪ್ರಜೆಗಳಾದಾಗ ಆ ಚಿಕ್ಕಂದಿನ ವಿದ್ಯೆಯು ಫಲಕಾರಿಯಾಯಿತು. ಹಾಗೆಯೇ ವಿಶ್ವಧರ್ಮವನ್ನೂ (ಆಚಾರ ವಿಶೇಷಗಳನ್ನಲ್ಲ) ತತ್ತ್ವಜ್ಞಾನ ತುಲನದೃಷ್ಟಿಯಿಂದ ವ್ಯಾಸಂಗ ವಿಷಯಗಳನ್ನು ಸೇರಿಸಿ ಪಠ್ಯಪುಸ್ತಕಗಳಲ್ಲಿ ಅಳವಡಿಸಿ ವಿದ್ಯಾಭ್ಯಾಸ ಕ್ರಮವನ್ನು ರೂಪಿಸಿ ನಡೆಸಿದರೆ ಎಲ್ಲ ಮತೀಯರಲ್ಲೂ ಐಕಮತ್ಯ ಸಹಾನುಭೂತಿ ಸಹಕಾರಗಳನ್ನು ನಿರೀಕ್ಷಿಸಬಹುದೆಂದು ತೋರುತ್ತದೆ. ಹಿಂದೆ ವಿಶ್ವಧರ್ಮ ಪ್ರಚಾರಸ್ಥಾಪನೆಗಳಿಗಾಗಿ ಅಶೋಕ ಚಕ್ರವರ್ತಿಯೂ, ಅಕ್ಬರ್ ಚಕ್ರವರ್ತಿಯೂ ಪ್ರಯತ್ನಗಳನ್ನು ಮಾಡಿದರು. ಮಹಾಪುರುಷರಾದ್ದರಿಂದ ಅವರು ಇರುವವರೆಗೆ ಯಶಸ್ವಿಯಾಗಿದ್ದು ಮುಂದಿನ ಕಾಲದಲ್ಲಿ ಕ್ರಮವಾಗಿ ಅವರಂತೆ ವಿಶಿಷ್ಟಗುಣವುಳ್ಳ ಮಹಾಪುರುಷರ ಆಶ್ರಯ ಬೆಂಬಲಗಳಿಲ್ಲದೆ, ನಷ್ಟವಾಯಿತು.

"ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಂ ।
ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ ॥"
"ತ್ವಯಿ ಮಯಿ ಸರ್ವತ್ರೈಕೋ ವಿಷ್ಣುಃ
ವ್ಯರ್ಥಂ ಕುಪ್ಯಸಿಮಯ್ಯಸಹಿಷ್ಣುಃ ।"
"ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ
ಮನೀಷಾ ಮಮ ॥"

ಅನಂತರದಲ್ಲಿ ಶ್ರೀ ಶಂಕರಾಚಾರ್ಯರೂ ಶ್ರೀ ರಾಮಾನುಜಾಚಾರ್ಯರೂ ಮತಸಂಪ್ರದಾಯಗಳಲ್ಲಿ ವಿಶ್ವಧರ್ಮದ ಪ್ರಾಮುಖ್ಯವನ್ನು ಸ್ಥಾಪಿಸಲು ಪ್ರಯತ್ನಿಸಿದರು. ಅವರಿರುವವರೆಗೆ ಆ ಪ್ರಯೋಗವು

ಯಶಸ್ವಿಯಾಗಿದ್ದು ಆ ಮೇಲೆ ತಕ್ಕ ಜನರಿಲ್ಲದೆ ಬಿದ್ದುಹೋಗುತ್ತಾ ಇದೆ. ಈಗ ರಾಮಕೃಷ್ಣಪರಮಹಂಸರೂ ಮಹಾತ್ಮಾಗಾಂಧಿಯ ವರೂ ವಿಶ್ವಧರ್ಮಕ್ಕೆ ಪ್ರಾಧಾನ್ಯವನ್ನು ಕೊಡುವ ರೀತಿಯಲ್ಲಿ ಭಜನೆಯ ರೀತಿಯನ್ನು ಸ್ಥಾಪಿಸಿದ್ದರು. ಅವರಿರುವವರೆಗೆ ಸ್ವಲ್ಪ ಮಟ್ಟಿಗೆ ಫಲಕಾರಿಯಾಗಿದ್ದು ಈಚೆಗೆ ನಷ್ಟವಾಗುತ್ತಿದೆ. ಇಂತಹ ಪ್ರಯತ್ನಗಳು ಶಾಶ್ವತವಾಗಿ ಫಲಕಾರಿಯಾಗಬೇಕಾದರೆ ವಿದ್ಯಾ ಭ್ಯಾಸ ಕ್ರಮದಲ್ಲಿ ವಿಶ್ವಧರ್ಮದ ವ್ಯಾಸಂಗಕ್ಕೆ ಇತರ ವಿಷಯ ಗಳೊಡನೆ ಸರಿಸಮಾನವಾದ ಸ್ಥಾನವನ್ನುಕೊಟ್ಟು, ಪಠ್ಯಪುಸ್ತಕಗಳಲ್ಲಿ ಅದರ ಶಿಕ್ಷಣವನ್ನು ಅಳವಡಿಸಿದರೆ, ಈಗಿನ ವಿದ್ಯಾರ್ಥಿಗಳೇ ಮುಂದಿನ ತಲೆಮಾರಿನಲ್ಲಿ ಗೃಹಸ್ಥರೂ ಸತ್ಪ್ರಜೆಗಳೂ ಆಗುತ್ತಾರೆ. ಅವರ ಪ್ರತಿನಿಧಿಗಳೂ ನಾಯಕರೂ ವಿಶ್ವಧರ್ಮದ ಆಧಾರದ ಮೇಲೆ ಆಡಳಿತ ವನ್ನು ರೂಪಿಸಲೂ ಸ್ಥಾಪಿಸಲೂ ಸಾಧ್ಯವಾಗುತ್ತದೆ. ಈ ತಲೆಮಾರಿ ನವರು ಈ ಪ್ರಯತ್ನವನ್ನು ನೆರವೇರಿಸಿದರೆ ಮುಂದಿನ ತಲೆಮಾರಿನಲ್ಲಿ ಅದರ ಸಾಫಲ್ಯವನ್ನು ಕಾಣಲು ಸಾಧ್ಯವಾಗುತ್ತದೆ. ಈಗ ಪ್ರಯತ್ನ ವನ್ನು ಮಾಡದಿದ್ದರೆ ಮುಂದೆ ಫಲವು ದೊರೆಯುವುದಿಲ್ಲ. ವಿಶ್ವಧರ್ಮ ಯುತ ವಿದ್ಯಾಭ್ಯಾಸಕ್ರಮಕ್ಕೆ ಈಗಲೇ ಪ್ರಯತ್ನಿಸೋಣ.

ದ್ವೇಷವು ಕ್ಷಮೆ ಯಿಂದರೇ ನಾಶವಾಗ ಬೇಕು.

ಪ್ರಪಂಚದ ಮೊದಲನೆ ಮಹಾಯುದ್ಧವು 1918ರಲ್ಲಿ ಮುಗಿ ದಾಗ ಇನ್ನು ಮುಂದೆ ಯುದ್ಧವೇ ಆಗದಂತೆ ತಡೆಗಟ್ಟಲು ಈ ಯುದ್ಧವನ್ನು ಪ್ರಾರಂಭಿಸಿ ದ್ದೇವೆಂದು ನಾಯಕರು ಘೋಷಿಸಿದ್ದರು. ಯುದ್ಧದಲ್ಲಿ ತೊಡಗಿದ್ದ ಎರಡು ಪಕ್ಷಗಳ ವರೂ ತಮ್ಮದೇ ಧರ್ಮ ಯುದ್ಧವೆಂದೂ ಧರ್ಮಸ್ಥಾಪನೆಯೇ ತಮ್ಮ ಉದ್ದೇಶವೆಂದೂ ಹೇಳುತ್ತಿದ್ದರು. ಈ ಎರಡು ಹೇಳಿಕೆಗಳೂ ನಿಜ ವಾಗಲಿಲ್ಲ, ಸಫಲವಾಗಲಿಲ್ಲ. ಕಾರಣವು ಮುಂದಾಳುಗಳಲ್ಲಿ ವಿಶ್ವ ಧರ್ಮದ ಬೆಂಬಲವಿಲ್ಲದಿದ್ದುದೇ ಆಗಿದೆ. ಯುದ್ಧದಲ್ಲಿ ತೊಡಗಿದ್ದ ವರೂ ಅವರ ಸಂಬಂಧಿಗಳೂ ಪ್ರಪಂಚದ ಇತರರೂ ಸಾವು

ನೋವು ಸಂಕಟಗಳಿಂದ ಅರ್ಥಹಾನಿ, ಮಾನಹಾನಿಗಳಿಂದ ದುಃಖ ಪಡಬೇಕಾಯಿತು. ಇದರಿಂದ ನೊಂದು ತಿಳಿವಳಿಕೆಯುಳ್ಳ ಹಿರಿಯರಾದ ಕೆಲವರು ಮುಖಂಡರು ಸೇರಿ, ಲೀಗ್ ಆಫ್ ನೇಷನ್ಸ್ (League of Nations) ವಿಶ್ವದ ಜನಾಂಗಗಳ ಸಂಸ್ಥೆಯನ್ನು ಸ್ಥಾಪಿಸಿದರು. ಹಾಗೆಯೇ ವಿಶ್ವ ಜನಾಂಗಗಳ ನ್ಯಾಯಸ್ಥಾನವನ್ನೂ (The World Court of Justice at Hague) ಸ್ಥಾಪಿಸಿದರು. ಇದು ವಿಶ್ವಧರ್ಮದ ಗುರುತೆನ್ನಬಹುದು. ಆದರೆ ಜನಸಾಮಾನ್ಯದಲ್ಲಿ ಧಾರ್ಮಿಕ ಸಂಸ್ಕೃತಿಯು ಬಲಗೊಂಡಿರಲಿಲ್ಲವಾದುದರಿಂದ, ಅವರ ಮುಖಂಡರೂ ನಾಯಕರೂ ಈ ಸಂಸ್ಥೆಗಳಿಗೆ ತಕ್ಕ ಮನ್ನಣೆಯನ್ನು ಕೊಡಲಿಲ್ಲವಾದುದರಿಂದ, ಜನಾಂಗ ಸಂಸ್ಥೆಯೂ ಯಶಸ್ವಿಯಾಗಲಿಲ್ಲ. ಯುದ್ಧವನ್ನು ಯುದ್ಧದಿಂದ ನಿಲ್ಲಿಸಲಾಗುವುದಿಲ್ಲವೆಂಬ ಅಂಶವನ್ನು ಆ ಜನಾಂಗಗಳು ಇನ್ನೂ ಒಪ್ಪಿಕೊಂಡಿಲ್ಲ: ದ್ವೇಷವು ಅಪಕಾರ ಪ್ರತೀಕಾರಗಳಿಂದ ಶಾಂತವಾಗುವುದಿಲ್ಲ.

"ನ ಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥"

ಯುದ್ಧವು ಯುದ್ಧದಿಂದ ನಿಲ್ಲದು.

ಎಂದರೆ. ಕಾಮವೇ ಅದಕ್ಕೆ ಅಡ್ಡಿಬಂದರೆ ಕ್ರೋಧವಾಗುತ್ತದೆ. ಪ್ರತೀಕಾರಮಾಡಿದಹಾಗೆಲ್ಲ ಅದು ಬೆಳೆಯುತ್ತದೆಯೇ ಹೊರತು ಶಾಂತವಾಗುವುದಿಲ್ಲ. ಬೆಂಕಿಗೆ ಸೌದೆಯನ್ನು ಹಾಕಿದರೆ ಹೆಚ್ಚು ಹೆಚ್ಚಾಗಿ ಉರಿಯು ಬೆಳೆಯುತ್ತದೆಯೇ ಹೊರತು ಶಾಂತವಾಗುವುದಿಲ್ಲ. ಅದರಿಂದ ಎರಡನೆಯ ಮಹಾಯುದ್ಧಕ್ಕೆ ಸಿದ್ಧತೆಗಳಾಗುತ್ತಿದ್ದುವು. ನಿಶ್ಶಸ್ತ್ರೀಕರಣ (Disarmament conference) ಸಭೆಯೂ ಫಲಕಾರಿಯಾಗಲಿಲ್ಲ. ಜನಾಂಗಗಳಲ್ಲಿ ಪರಸ್ಪರವಾಗಿ ಸಂಶಯ ಅಪನಂಬಿಕೆಗಳು ಬೆಳೆದು, ಮದ್ದುಗುಂಡುಗಳ, ಶಸ್ತ್ರಾಸ್ತ್ರಗಳ ತಯಾರಿಕೆಯೂ ಪೈಪೋಟಿಯಿಂದ ಎರಡು ಪಕ್ಷಗಳವರಲ್ಲೂ ಹೆಚ್ಚಿತು. ಮನಸ್ಸಿನಲ್ಲಿ ದ್ವೇಷವೂ, ಕೈಯಲ್ಲಿ ಶಸ್ತ್ರಾಸ್ತ್ರಗಳ

ಸಮೃದ್ಧಿಯೂ ಇದ್ದರೆ ಯುದ್ಧಕ್ಕೆ ಎಷ್ಟು ದೂರ? ಕೂಡಲೆ 1939ರಲ್ಲಿ ಎರಡನೆಯ ಮಹಾ ಯುದ್ಧವಾರಂಭವಾಯಿತು. ಸಾವು ನೋವು ಸಂಕಟಗಳೂ ಅರ್ಥಹಾನಿ, ಮಾನಹಾನಿಗಳೂ ಅಪರಿಮಿತ ವಾಗಿ ಸಂಭವಿಸಿದುವು. ಎಲ್ಲಕ್ಕಿಂತಲೂ ದೊಡ್ಡ ಅಧರ್ಮವೆಂದರೆ ಅಮೆರಿಕಾ ಸರ್ಕಾರವು ಆಟಂಬಾಂಬನ್ನು ಪ್ರಯೋಗಿಸಿ ಜಪಾನಿನಲ್ಲಿದ್ದ ಎರಡು ದೊಡ್ಡ ಪಟ್ಟಣಗಳನ್ನು ಒಂದು ಗಂಟೆಯೊಳಗಾಗಿ ನಾಶ ಮಾಡಿ ನಿರ್ನಾಮ ಮಾಡಿದುದು. ಹೆಂಗಸರು ಮಕ್ಕಳು ಗೃಹಸ್ಥರೂ ಸಭ್ಯರೂ ಲಕ್ಷಗಟ್ಟಲೆಯಲ್ಲಿ ಬೆಂದುಹೋದರು. ಯುದ್ಧದಲ್ಲಿ ನೊಂದು ಉಳಿದವರಲ್ಲಿ ಹಿರಿಯರು ಕೆಲವರು ಜನಾಂಗಗಳ ಮತ್ತೊಂದು ಸಂಸ್ಥೆ (The United Nations Organisation) ಯನ್ನು ಸ್ಥಾಪಿಸಿದರು. ಭದ್ರತಾ ಸಮಿತಿ (Security Council) ಯನ್ನೂ ರಚಿಸಿದರು. ಆದರೇನು? ಧಾರ್ಮಿಕ ಸಂಸ್ಕೃತಿಯ ಬೆಂಬಲ ವಿಲ್ಲದಿರುವಾಗ ಇವು ಯಶಸ್ವಿಯಾಗವು. ಹಿರಿಯ ಜನಾಂಗಗಳಾದ ಅಮೆರಿಕಾ, ರಷ್ಯಾ, ಬ್ರಿಟನ್, ಫ್ರಾನ್ಸ್‌ಗಳಲ್ಲಿ ಪರಸ್ಪರವಾಗಿ ಅಸೂಯೆ ಅಪನಂಬಿಕೆಗಳಿವೆ. ಜನಾಂಗಗಳಿಗೆ ಸದಸ್ಯತ್ವವನ್ನು ಕೊಡುವುದ ರಲ್ಲಿಯೂ ಕಚ್ಚಾಟಗಳಾಗುತ್ತಿವೆ. ವಿಷಯಗಳು ಬೇಗ ತೀರ್ಮಾನ ವಾಗುತ್ತಿಲ್ಲ. ಇದರಿಂದ ಹೆಚ್ಚು ಪ್ರಯೋಜನವನ್ನು ನಿರೀಕ್ಷಿಸು ವಂತಿಲ್ಲ.

ಧಾರ್ಮಿಕ ಸಂಸ್ಕೃತಿಯ ಫಲ ಗಾಂಧೀಜಿ ಯವರು.

ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ಮೂರ್ತಿವಂತ ಉದಾಹರಣೆಯಾಗಿ ಮಹಾತ್ಮಾ ಗಾಂಧಿ ಯವರು ನಮ್ಮ ಸ್ವರಾಜ್ಯಕ್ಕಾಗಿ ನಿಷ್ಕಾಮ ಕರ್ಮಯೋಗಿಯಾಗಿ ದುಡಿದರು. ಸ್ವರಾಜ್ಯವು ಬಂದಮೇಲೆ ಕೇಂದ್ರ ಸರ್ಕಾರದ ಅಧ್ಯಕ್ಷ ಪದವಿಯನ್ನಾಗಲಿ, ಮುಖ್ಯ ಪ್ರಧಾನಿಯ ಪದವಿಯನ್ನಾಗಲಿ ಸ್ವೀಕ ರಿಸಿ ಸಹಾಯಮಾಡಬೇಕೆಂದು ಮುಖಂಡರೂ ಜನತೆಯೂ ಪ್ರಾರ್ಥಿ ಸಿದರು. ಅವರು ಅದನ್ನು ಅಂಗೀಕರಿಸದೆ ಹಿಂದೂ–ಮುಸಲ್ಮಾನ

ಜನರಿಗೆ ಐಕ್ಯಭಾವನೆಯನ್ನು ಬಲಗೊಳಿಸುವುದಕ್ಕಾಗಿ ಪೂರ್ವ ಬಂಗಾಳದಲ್ಲಿ ಹಳ್ಳಿಯಿಂದ ಹಳ್ಳಿಗೆ ಪಾದಚಾರಿಯಾಗಿ ಸಂಚರಿಸುತ್ತಾ ಪ್ರಚಾರ ಕಾರ್ಯದಲ್ಲಿ ತೊಡಗಿದ್ದರು. " ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ । ಲೋಕೋತ್ತರಾಣಾಂ ಚೇತಾಂಸಿ ಕೋಹಿ ವಿಜ್ಞಾತುಮರ್ಹತಿ ॥ " ಗಾಂಧಿಯವರು ಪೂರ್ವಬಂಗಾಳದಲ್ಲಿ ಸಾಧ್ಯ ವಾದಷ್ಟು ಪ್ರಚಾರಕಾರ್ಯವನ್ನು ನೆರವೇರಿಸಿ, ದೆಹಲಿಗೆ ಬಂದು ಪ್ರತಿ ನಿತ್ಯದಲ್ಲೂ ವಿಶ್ವಧರ್ಮದ ಅರಿವುಆಚರಣೆಗಳನ್ನು ಜನರಲ್ಲಿ ರೂಢಿಗೆ ಬರುವುದಕ್ಕಾಗಿ ಭಜನೆಯನ್ನು ಏರ್ಪಡಿಸಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು. ಸಾವಿರಗಟ್ಟಲೆಯಾಗಿ ಲಕ್ಷಗಟ್ಟಲೆಯಾಗಿ ಜನರ ಮನಸ್ಸುಗಳು ವಿಶ್ವಧರ್ಮದ ಕಡೆಗೆ ಒಲಿದುಬರಲಾರಂಭವಾಗಿತ್ತು. ಭಾರತೀಯರಾದ ನಮ್ಮೆಲ್ಲರ ದುರದೃಷ್ಟದಿಂದ ವಿನಾಯಕ ಗೋಡ್ಸೆ ಎಂಬ ಬ್ರಾಹ್ಮಣ ವಕೀಲನು ಗಾಂಧಿಯವರನ್ನು ಗುಂಡಿಕ್ಕಿ ಕೊಂದನು. " ರಾಮರಾಮ " ಎನ್ನುತ್ತಲೇ ಗಾಂಧಿಯವರು ಶರೀರವನ್ನು ಬಿಟ್ಟರು. ಹಿಂದುಗಳು, ಅದರಲ್ಲೂ ಬ್ರಾಹ್ಮಣರು ತಲೆತಗ್ಗಿಸು ವಂತಾಯಿತು. ಇಡೀ ದೇಶವೇ ದುಃಖದಲ್ಲಿ ಮುಳುಗಿತು. " ದೈವೀವಿಚಿತ್ರಾಗತಿಃ " ಇದನ್ನು ವಿಧಿವಿಲಾಸವೆನ್ನಬೇಕು. ಶ್ರೀ ರಾಜಾಜಿಯವರು ಹೇಳಿದಂತೆ ದೇವರು ಎಷ್ಟರವರೆಗೆ ಗಾಂಧಿಯವ ರಿಂದ ಭಾರತಕ್ಕೆ ಸೇವೆ ಸಲ್ಲಬೇಕೆಂದು ಸಂಕಲ್ಪಿಸಿದ್ದನೋ ಅಲ್ಲಿಯ ವರೆಗೆ ಅವಕಾಶವನ್ನು ಕೊಟ್ಟಿದ್ದು ಆ ಮೇಲೆ ಅವರನ್ನು ವಾಪಸು ತೆಗೆದುಕೊಂಡನು. " ಧರ್ಮಸ್ಯ ಸೂಕ್ಷ್ಮಾಗತಿಃ " ಎಂದು ವಿವರಿಸಿ ಸಮಾಧಾನವನ್ನು ತಿಳಿಸಿದರು. "ನಿಮಿತ್ತಮಾತ್ರಂ ಭವ ಸವ್ಯ ಸಾಚಿನ್ । " ಎಂಬಂತೆ ನಾವೆಲ್ಲ ಆ ದೇವನ ಕೈಗೊಂಬೆಗಳು ಎಂದು ತಿಳಿಯಬೇಕು. ಧಾರ್ಮಿಕ ಸಂಸ್ಕೃತಿಯು ಜನರನ್ನು ಕಾಮಕ್ರೋಧ ಗಳಿಗೆ ಪರವಶರಾಗದಂತೆಯೂ ಧರ್ಮಾನುಸರಣದಲ್ಲಿ ಆದರ ಉಳ್ಳವ ರಾಗಿರುವಂತೆಯೂ ಮಾಡುವುದರಲ್ಲಿ ಪ್ರಭಾವಶಾಲಿಯಾಗಿರಬಲ್ಲದೆಂಬ ವಿಶೇಷ ಗುಣವನ್ನೂ ನಾವು ಗಮನಿಸಬಹುದು. ಭಾರತೀಯರು

ಕ್ರೋಧಪರವಶರಾಗದೆ ಗೋಡ್ಸೆಯನ್ನು ಕ್ರಮವಾಗಿ ನ್ಯಾಯಸ್ಥಾನದಲ್ಲಿ ವಿಚಾರಣೆಮಾಡಿ, ಆತುರಪಡದೆ ಅವನಿಗೆ ಸ್ವರಕ್ಷಣೆಗಾಗಿ ಹೇಳಬೇಕಾದುದನ್ನು ಹೇಳಲು ಅವಕಾಶವನ್ನು ಕೊಟ್ಟು ಕಡೆಗೆ ಅವನೇ ಮೊದಲಿನಿಂದಲೂ ತಪ್ಪನ್ನು ಒಪ್ಪಿಕೊಂಡಿದ್ದುದರಿಂದ ಮರಣಶಿಕ್ಷೆಯನ್ನು ವಿಧಿಸಿದರು. ಧಾರ್ಮಿಕ ಸಂಸ್ಕೃತಿಯ ರೀತಿಯು ಇದೆನ್ನಬಹುದು. ಗಾಂಧಿಯವರು ಸ್ವರ್ಗಸ್ಥರಾದರೂ ಅವರ ಧಾರ್ಮಿಕ ಸಂಸ್ಕೃತಿಯ ಪ್ರಭಾವವು ನಮ್ಮೆಲ್ಲರ ಮೇಲೂ ಇದೆ. ಅವರು ಹೇಳಿಕೊಟ್ಟ ವಿಶ್ವಧರ್ಮದ ಪ್ರಾರ್ಥನೆಯ ವಾಕ್ಯವು ಹೀಗಿದೆ :

"ಈಶ್ವರ ಅಲ್ಲಾ ತೇರೆ ನಾಮ್, ಸಬ್‌ಕೋ ಸನ್ಮತಿ ದೇ ಭಗವಾನ್"

ಎಂದರೆ, ಓ ದೇವರೇ, ಹಿಂದುಗಳು ನಿನ್ನನ್ನು ಈಶ್ವರನೆನ್ನುತ್ತಾರೆ. ಮುಸಲ್ಮಾನರು ಅಲ್ಲಾ ಎನ್ನುತ್ತಾರೆ. ನಾಮಗಳಲ್ಲಿ ಭೇದವು ಕಂಡುಬಂದರೂ ಅವುಗಳ ಅರ್ಥವಾದ ದೇವತತ್ತ್ವದಲ್ಲಿ ಭೇದವಿಲ್ಲವು. ಅದು ಒಂದೇ ಆಗಿದೆ. ಹೀಗೆಂಬ ಒಳ್ಳೆಯ ಬುದ್ಧಿಯನ್ನು ಎಲ್ಲರಿಗೂ ಅನುಗ್ರಹಿಸಿ, ಜನರು ಪರಸ್ಪರವಾಗಿ ಜಗಳವಾಡದಂತೆ, ಒಮ್ಮತ ಸಮ್ಮತದಿಂದ ಸಹಕರಿಸುತ್ತಾ ಮುಂದುವರಿಯುವಂತೆಮಾಡಿ ಕಾಪಾಡು—ಎಂದು ಅರ್ಥವು. ಇದು ವೇದವಾಕ್ಯದ ಪ್ರತಿಧ್ವನಿಯೇ ಆಗಿದೆ :—

"ಏಕಂ ಸದ್ವಿಪ್ರಾ ಬಹುಧಾ ವದಂತಿ"

"ಆನೀದವಾತಂ ಸ್ವಧಯಾ ತದೇಕಂ"

ಹೀಗೆ ವಿಶ್ವಧರ್ಮದಲ್ಲಿ ಆದರ, ಪರಧರ್ಮದಲ್ಲಿ ಸಹನೆ ಗೌರವಗಳು, ಹೃದಯವೈಶಾಲ್ಯವೂ ಭಾರತಾರ್ಯರಲ್ಲಿ ವೈದಿಕ ಕಾಲದಿಂದಲೂ ಅನುಸ್ಯೂತವಾಗಿ ಬೆಳೆದು ಬಲಗೊಳ್ಳುತ್ತಾ ಬರುತ್ತಿದೆ. ಇದು ಅದ್ವೈತಿಗಳಲ್ಲಿ ಹೆಚ್ಚು ಪ್ರಾಮುಖ್ಯವನ್ನು ಪಡೆದಿದೆ ಎಂಬುದನ್ನು ಗಮನಿಸಿ ನಾವೂ ಮನೋವೈಶಾಲ್ಯವನ್ನು ಬೆಳೆಯಿಸುತ್ತಿರಬೇಕು. ಅದೇ ಈ ಜಗತ್ತೆಲ್ಲವನ್ನೂ ಗೌರವಿಸುವ ಒಳಗೊಳ್ಳುವ ವಿಶಾಲ ಮನೋಧರ್ಮ

ವಾಗಿದೆ. ಇದನ್ನೇ All absorbing tendency of the Hindu mind ಎನ್ನುತ್ತಾರೆ.

ಶ್ರೀ ಶಂಕರಾಚಾರ್ಯರ ವಿಶೇಷಗುಣ.

ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ಹುಟ್ಟು ಬೆಳವಣಿಗೆಗಳನ್ನು ಪರಿಶೀಲಿಸಿದರೆ ಕುರುಡು ಪದ್ಧತಿಗಳನ್ನು ವಿರೋಧಿಸುವ ಚಳುವಳಿಗಳೂ ಆಗಾಗ್ಗೆ ಉಂಟಾಗುತ್ತಿದ್ದುದು ಕಾಣಬರುತ್ತದೆ. ಅಂತಹ ಚಳುವಳಿಗಳು ಕೇವಲ ನಾಶಕಾರಿಯಾಗಿರದೆ ರಚನಾತ್ಮಕವಾಗಿದ್ದುದೂ ಗೊತ್ತಾಗುತ್ತದೆ. ಗುಣಗೌರವ ಆದರಾತಿಥ್ಯಗಳನ್ನು ಗಮನಿಸದೆ ದರ್ಪಾಹಂಕಾರಗಳಿಂದ ಕೂಡಿದ ಕರ್ಮಾಚರಣೆಗೆ ಪ್ರತಿಭಟನೆಯನ್ನು ದಕ್ಷಯಜ್ಞದ ಕಥೆಯಲ್ಲಿ ಕಾಣಬಹುದು. ಹಾಗೆಯೇ ನರಬಲಿಯನ್ನು ನಿಲ್ಲಿಸುವುದಕ್ಕೂ ಕ್ಷತ್ರಿಯರನ್ನು ಬ್ರಾಹ್ಮಣ ಮಟ್ಟಕ್ಕೆ ಏರಿಸುವುದಕ್ಕೂ ಹೂಡಿದ ಪ್ರತಿಭಟನೆಯನ್ನು ವಿಶ್ವಾಮಿತ್ರನ ಉಪಾಖ್ಯಾನದಲ್ಲಿ ನೋಡಬಹುದು. ಈಚೆಗೆ ಚರಿತ್ರೆಯ ಕಾಲದಲ್ಲಿ ಪ್ರಜಾಹಿತಕ್ಕೆ ಸಂಬಂಧವಿಲ್ಲದೆ ಪ್ರಾಣಿಹಿಂಸೆಯಿಂದ ಕಲುಷಿತವಾಗಿ ಬ್ರಾಹ್ಮಣ ಮತಧರ್ಮಗಳ ಅತಿರೇಕಗಳನ್ನು ಗೌತಮಬುದ್ಧನು ಯಶಸ್ವಿಯಾಗಿ ಪ್ರತಿಭಟಿಸಿದನೆನ್ನಬಹುದು. ಹಾಗೆಯೇ ಜ್ಞಾನಬಾಹಿರವಾದ ಒಣಕರ್ಮಗಳ ವೈಭವಾಡಂಬರಗಳನ್ನು ಪ್ರತಿಭಟಿಸಿ, ಮಾನವ ಜನ್ಮದ ಸಾರ್ಥಕತೆಯು ಜ್ಞಾನದಿಂದಲೇ ಆಗಬೇಕೆಂಬ ಅಂಶವನ್ನು ಜನಾದರಪಾತ್ರವಾಗುವಂತೆ ಮಾಡಿದವರಲ್ಲಿ ಶ್ರೀ ಶಂಕರಾಚಾರ್ಯರು ಮುಖ್ಯರು ಎನ್ನಬಹುದು.

"ಜ್ಞಾನವಿಹೀನಃ ಸರ್ವಮತೇನ ಮುಕ್ತಿಂ ನ ಭಜತಿ ಜನ್ಮಶತೇನ॥"

ಹಿಂದಿನ ಮೂಲಮತಗಳಿಂದ ಇಂದಿನ ವಿವಿಧ ಮತಗಳು ಹುಟ್ಟುವುದಕ್ಕೆ ಇಂತಹ ಪ್ರತಿಭಟನೆಗಳೇ ಕಾರಣವಾದುವು. ಸ್ವತಂತ್ರ ವಿಚಾರ ಸರಣಿಯು ಕಲಾಕ್ರಮದಲ್ಲಿ ತೋರಿಸಿದ ವೈವಿಧ್ಯ, ವೈಚಿತ್ರ್ಯ, ವೈಪುಲ್ಯಗಳು ಗಮನಾರ್ಹವಾಗಿವೆ. ಜಗತ್ತಿನಲ್ಲಿ ಅತ್ಯಂತ ಪ್ರಾಚೀ

ನವಾದ ಜ್ಞಾನಭಂಡಾರವೆನಿಸಿರುವ ವೇದದಲ್ಲಿಯೇ ನಾಗರಿಕತೆಯ ಉಚ್ಚವರ್ಗದ ಲಕ್ಷಣಗಳನ್ನು ಕಾಣಬಹುದು. ಅನೇಕ ದೇವರುಗಳನ್ನು ಏಕದೇವನ ಅನೇಕ ರೂಪಗಳೆಂದು ನೋಡುವ ವಿವೇಕವು ಭಾರತಾರ್ಯರಲ್ಲಿ ಆಗಲೇ ಮೂಡಿತ್ತು. ಧಾರ್ಮಿಕ ಸಂಸ್ಕೃತಿಯ ಈ ಪ್ರತಿಭೆಯು ಉಪನಿಷತ್ತುಗಳ ಕಾಲದಲ್ಲಿ ಮುಂದುವರೆದು ಉತ್ತಮ ಸ್ಥಿತಿಯನ್ನು ಪಡೆಯಿತು. ಆಗಿನವರು ಧ್ಯಾನಯೋಗದಿಂದ ಹತ್ತಿದ ಮೆಟ್ಟಿಲಿನ ಮಟ್ಟಕ್ಕೆ ಇಷ್ಟು ಸುಧಾರಿತವೆನ್ನಿಸಿಕೊಂಡಿರುವ ಈಗಿನ ಕಾಲದವರು ಕೂಡ ಹತ್ತಲಾರದೆ ಆ ಹಿಂದಿನವರ ಅಸಾಧಾರಣ ಬುದ್ಧಿ ವೈಭವ ವಿಸ್ತಾರಗಳನ್ನು ಕೊಂಡಾಡುತ್ತಿರುತ್ತಾರೆ.

**ವಿಶಾಲ ಧರ್ಮದ ಉದಾಹರಣೆಗಳು.**

ಎಲ್ಲ ದೇವರಲ್ಲೂ ಅಂತರ್ಯಾಮಿಯಾಗಿರುವ ಒಬ್ಬ ಮಹಾದೇವನನ್ನು ಮನಗಂಡು, ಅವನು ಅಚಿಂತ್ಯನೂ ಅವ್ಯಕ್ತನೂ ಆಗಿದ್ದಾನೆಂದೂ ಅವನೇ ಮಾತಿಗೂ ಮನಸ್ಸಿಗೂ ನಿಲುಕದ ಪರಬ್ರಹ್ಮ ತತ್ತ್ವವೆಂದು ಸಾರಿಹೇಳಿದರು. ಆ ವೈದಿಕಾರ್ಯರು ಆಲೋಚನಾ ಪ್ರಪಂಚದಲ್ಲಿ ಮುಂದುವರಿಯುತ್ತಿದ್ದಂತೆ ವ್ಯವಹಾರ ಪ್ರಪಂಚದ ಕಾರ್ಯಪರತೆಯಲ್ಲೂ ದಕ್ಷತೆಯುಳ್ಳವರಾಗಿದ್ದರು. ಜನರ ಜೀವನವನ್ನು ಉತ್ತಮಗೊಳಿಸುವ ಸೌಕರ್ಯಗಳಿಲ್ಲದಿದ್ದ ಆ ಕಾಲದಲ್ಲೂ ಅವರು ವೇದಗಳು ಕರ್ಮಪ್ರಧಾನವಾದರೂ,ಉಪನಿಷತ್ತುಗಳು ಜ್ಞಾನ ಪ್ರಧಾನವಾದರೂ, ಜ್ಞಾನಕರ್ಮಗಳು ಒಂದನ್ನು ಬಿಟ್ಟು ಇನ್ನೊಂದಿಲ್ಲವೆಂದೂ, ಉಪನಿಷತ್ತಿನಲ್ಲಿ ಜ್ಞಾನವೂ ವೇದಗಳಲ್ಲಿ ಕರ್ಮವೂ ಮುಖ್ಯ ಉಪದೇಶವಾಗಿ ಇರುವುದನ್ನು ತಿಳಿಸಿದರು. ಅವೆರಡನ್ನೂ ಸಮರಸದಲ್ಲಿ ಜೋಡಿಸಿ ವಿದ್ಯಾಪ್ರಸಾರ ಕಾರ್ಯವನ್ನು ಮಾಡಿದರು. ಜ್ಞಾನ ಪ್ರಸಾರದಲ್ಲೂ ಕರ್ಮಾನುಷ್ಠಾನದಲ್ಲೂ ಜನ್ಮ ಅಥವಾ ಅರ್ಥ ದೃಷ್ಟಿಯಿಂದ ಹೆಚ್ಚು ಕಡಿಮೆಗಳನ್ನು ಒಪ್ಪದೆ ಯೋಗ್ಯತೆಯನ್ನು ಮಾತ್ರ ಮುಖ್ಯವೆಂದು ಹೇಳಿ, ನಡೆದ ಕೀರ್ತಿಯು ಅವರ ವಿಶೇಷ ಗುಣವು. ಜಾನಶ್ರುತಿ ಎಂಬ ರಾಜನು ರೈಕ್ವನೆಂಬ ಬಂಡಿಯವನಿಂದ ಜ್ಞಾನವನ್ನು

ಪಡೆಯಲು ಅವನ ಶಿಷ್ಯನಾದನು. ಕುಲಗೋತ್ರಗಳನ್ನು ತಿಳಿಯದ ಜಾಬಾಲನು ಸತ್ಯಕಾಮನಾಗಿದ್ದುದರಿಂದ ಗುರುಗಳಿಂದ ಪರಿಗ್ರಹೀತನಾಗಿ ಇತರರೊಡನೆ ವಿದ್ಯಾಭ್ಯಾಸವನ್ನು ಪಡೆದನು. ಸುರಗಣಕ್ಕೆ ಸೇರಿದ ಇಂದ್ರನೂ, ಅಸುರಗಣಕ್ಕೆ ಸೇರಿದ ವಿರೋಚನನೂ ಸಹಪಾಠಿಗಳಾಗಿ ವಿದ್ಯಾಭ್ಯಾಸಮಾಡಲು ಅವಕಾಶ ದೊರೆಯಿತು. ಜನಕನಂತಹ ಚಕ್ರವರ್ತಿಯ ಆಸ್ಥಾನದಲ್ಲಿ ಯಾಜ್ಞವಲ್ಕ್ಯನಂತಹ ದೊಡ್ಡ ಪಂಡಿತನೊಡನೆ ವಿದುಷಿಯರಾದ ಮಹಿಳೆಯರೂ ಗಹನವಾದ ವೇದಾಂತ ತತ್ವ ವಿಷಯಗಳಲ್ಲೂ ಚರ್ಚೆಯಲ್ಲಿ ಭಾಗವಹಿಸಬಲ್ಲವರಾಗಿದ್ದರು. ಉಪನಿಷತ್ಕಾಲದಲ್ಲಿ ಧಾರ್ಮಿಕ ಸಂಸ್ಕೃತಿಯ ಉದಾರ ನೀತಿಯನ್ನು ಇಲ್ಲೂ ಕಾಣಬಹುದು. ನೈಮಿಶಾರಣ್ಯ ಮುಂತಾದ ಶಾಂತ ವಾತಾವರಣಗಳಲ್ಲೂ ಪವಿತ್ರ ಕ್ಷೇತ್ರಗಳಲ್ಲೂ ಯಜ್ಞ ಯಾಗಗಳ ಸದಸ್ಸುಗಳಲ್ಲೂ ವಿದ್ವಾಂಸರು ಸೇರಿಸಿದಾಗಲೂ ವೇದಶಾಸ್ತ್ರಗಳಲ್ಲಿ ಪರಿಣತರಾದ ಋಷಿಗಳು ಸೇರಿ ವಿಚಾರಗಳನ್ನು ಮಾಡುತ್ತಾ ಜಿಜ್ಞಾಸುಗಳಿಗೆ ಜ್ಞಾನದಾನ ಕಾರ್ಯವನ್ನು ಅನ್ಯಾದೃಶವಾಗಿ ನೆರವೇರಿಸುತ್ತಿದ್ದರು. ಹೀಗೆ ವೇದಗಳ ಉಪನಿಷತ್ತುಗಳ, ಪುರಾಣೇತಿಹಾಸಗಳ ಕಾಲಗಳಲ್ಲಿ ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯೂ ಜನಜೀವನದ ರೀತಿ ನೀತಿಗಳೂ ಸಾಹಿತ್ಯವೂ ಪರಸ್ಪರವಾಗಿ ಪೂರಕ ಪೋಷಕಗಳಾಗಿರುತ್ತಾ ಉತ್ತಮಗೊಳ್ಳುತ್ತಿದ್ದವು.

**ದರ್ಶನಗಳ ವಿಶೇಷ ಗುಣಗಳು.**

ದರ್ಶನಗಳು ಆರು ಇವೆ. ಇವು ಆಸ್ತಿಕದರ್ಶನಗಳು. ಇವು ದೇವರು ಇದ್ದಾನೆಂದೂ, ವೇದಗಳು ಪ್ರಮಾಣಗಳೆಂದೂ, ವೇದೋಕ್ತಕರ್ಮಗಳೂ ಧರ್ಮಗಳೆಂದೂ, ಇಹಜೀವನ ಕ್ರಮದಲ್ಲಿ ನೀತಿ ಧರ್ಮಗಳನ್ನು ಬಿಡದೆ ಆಚರಿಸುತ್ತಿರಬೇಕೆಂದೂ, ಅದರಿಂದಲೇ ಇಹದಲ್ಲಿ ಶಾಂತಿ ನೆಮ್ಮದಿ ಸುಖಗಳೂ ಪರದಲ್ಲಿ ಸದ್ಗತಿ ಮೋಕ್ಷ ಸುಖಗಳೂ ಲಭಿಸುತ್ತವೆಂದೂ, ಬೋಧಿಸುತ್ತವೆ. ಇವನ್ನು ಮೂರು ಜೋಡಿಗಳಾಗಿ ಹೆಸರಿಸುವುದು ರೂಢಿಯಲ್ಲಿದೆ. ಸಾಂಖ್ಯ, ಯೋಗ ; ನ್ಯಾಯ,

ವೈಶೇಷಿಕ ; ಪೂರ್ವೋತ್ತರಮೀಮಾಂಸಾ, ಅಥವಾ ಮೀಮಾಂಸಾ, ವೇದಾಂತ, ಎಂದು ಪ್ರಸಿದ್ಧವಾಗಿವೆ. ಬಾಹ್ಯ ಪ್ರಕೃತಿಯನ್ನು ಪರಿಶೀಲಿಸುವ ಮಾನವನು ಸ್ವಾಭಾವಿಕವಾದ ತನ್ನ ಜಿಜ್ಞಾಸೆಯಿಂದ ತನ್ನ ಐದು ಜ್ಞಾನೇಂದ್ರಿಯಗಳ ಮೂಲಕ ತನಗೆ ಉಂಟಾಗುವ ಅನುಭವಗಳ ಆಧಾರದ ಮೇಲೆ ತಿಳಿವಳಿಕೆಯನ್ನು ಪಡೆಯುತ್ತಲೂ ಸಿದ್ಧಾಂತಗಳನ್ನೂ ರೂಪಿಸಿಕೊಳ್ಳುತ್ತಲೂ ಮುಂದುವರಿಯುತ್ತಾನೆ. ಶಬ್ದ ಸ್ಪರ್ಶ ರೂಪ ರಸ ಗಂಧಗಳ ಅನುಭವದಿಂದ ಅವಕ್ಕೆ ಆಧಾರ ವಾದ ಆಕಾಶ, ವಾಯು, ತೇಜಸ್, ಜಲ, ಪೃಥಿವೀ, ಎಂಬ ಐದೂ ಸ್ಥೂಲ ಭೂತಗಳೂ, ಮೂಲವಸ್ತುಗಳೂ ಐದು ಎಂದು ನ್ಯಾಯ ವೈಶೇಷಿಕರು ಸಾರಿದರು. ಸಾಂಖ್ಯರು ಇನ್ನೂ ಹಿಂದಿನ ಮೂಲಕಾರಣವನ್ನು ಮನಸ್ಸು, ಅಹಂಕಾರ, ಚಿತ್ತ, ಬುದ್ಧಿಗಳ ಅಥವಾ ಮಹತ್‌ತತ್ವಗಳ ಮೂಲಕ ಪ್ರಕೃತಿಯೇ ಎಲ್ಲಕ್ಕೂ ಕಾರಣವಾದ ಏಕಮೂಲ ವಸ್ತು ವೆಂದು ತಿಳಿಸಿದರು. ಹೀಗೆ ಪ್ರಕೃತಿ, ಪುರುಷ, ಎಂದು ಎರಡು ತತ್ವಗಳು, ಸ್ವತಂತ್ರಗಳು, ನಿತ್ಯಗಳೆಂದು ಹೇಳಿದರು. ಯೋಗದರ್ಶನವು "ಕ್ಲೇಶ ಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷ ವಿಶೇಷ ಈಶ್ವರಃ" ಎಂದು ಎಲ್ಲಕ್ಕೂ ಮಿಗಿಲಾದ ಈಶ್ವರ ತತ್ವವನ್ನು ಒಪ್ಪಿದೆ. ಪೂರ್ವಮೀ ಮಾಂಸಕರು ಶಬ್ದವೇ, ವೇದವೇ ಪ್ರಮಾಣವೆಂದೂ, ಕರ್ಮವೇ ಫಲ ದಾಯಕವೆಂದೂ ಹೇಳಿದರು. ಎಲ್ಲ ದಾರ್ಶನಿಕರೂ ಈ ಪ್ರಪಂಚ ವನ್ನು ಆತ್ಮಾ, ಅನಾತ್ಮಾ, ಎಂದು ವಿಂಗಡಿಸಿದಾರೆ. ಅನಾತ್ಮಾ, ಅಚಿತ್, ಜಡ, ಭೂತ, ಪ್ರಕೃತಿ ಎಲ್ಲವೂ ಪರ್ಯಾಯ ನಾಮಗಳು. ನ್ಯಾಯ ವೈಶೇಷಿಕರು ಪರಮಾಣುಗಳಿಂದ ಆಗುವ ಪರಿಣಾಮ ಕಾರ್ಯಗಳೇ ಪಂಚಭೂತಗಳೆನ್ನುತ್ತಾರೆ. ಸಾಂಖ್ಯಯೋಗರು ಇನ್ನೂ ಹಿಂದಕ್ಕೆ ಹೋಗಿ ತ್ರಿಗುಣಾತ್ಮಕವಾದ ಪ್ರಕೃತಿಯ ಕಾರ್ಯವೇ ಈ ಪ್ರಪಂಚವೆನ್ನುತ್ತಾರೆ. ಪ್ರಕೃತಿಯು ಸ್ವತಂತ್ರವು. ಆತ್ಮನಿಗೆ ಅಧೀನ ವಲ್ಲವೆಂದು ಇವರ ಮತ. ಸತ್ವ, ರಜಸ್, ತಮಸ್, ಎಂಬ ಮೂರು ಪ್ರಕೃತಿಯ ಗುಣಗಳು ಎಂದರೆ ಭೂತ ಸೂಕ್ಷ್ಮ ರೂಪಗಳು. ಸತ್ವದ

ಪರಿಣಾಮ ಸುಖವು, ರಜಸ್ಸಿನ ಪರಿಣಾಮ ಚಟುವಟಿಕೆ ದುಃಖವು, ತಮಸ್ಸಿನ ಪರಿಣಾಮವು ಆಲಸ್ಯ, ಮೋಹವು. ಈ ಮೂರು ಪ್ರಕೃತಿಯಿಂದ ಉಂಟಾಗುವ ಭೂತಸೂಕ್ಷ್ಮಕಣ ರೂಪಗಳೂ ಸ್ಥೂಲಭೂತ ಕಾರ್ಯಗಳೂ ವ್ಯಕ್ತವೆನಿಸುತ್ತವೆ. ಕಾರಣವಾದ ಅಣುಗುಣ ಪ್ರಕೃತಿಗಳು ಅವ್ಯಾಕೃತ ಅಥವಾ ಅವ್ಯಕ್ತವೆನಿಸುತ್ತವೆ. ಕಾರ್ಯರೂಪಕ್ಕೆ ಪರಿಣಮಿಸುವುದೇ ಸೃಷ್ಟಿಯು, ಇರುವಿಕೆಯೇ ಸ್ಥಿತಿಯು, ಕಾರಣ ರೂಪಕ್ಕೆ ತಿರುಗುವುದೇ ಪ್ರಳಯವು. ಪೂರ್ವಮೀಮಾಂಸಕರೂ ಈ ಪ್ರಕ್ರಿಯೆಯನ್ನು ಒಪ್ಪಿದ್ದಾರೆ.

ಶ್ರೀ ಮಧ್ವಾಚಾರ್ಯರ, ಶ್ರೀ ರಾಮಾನುಜಾಚಾರ್ಯರ. ವೈಷ್ಣವ, ದ್ವೈತ, ಮಾಧ್ವಮತದ ಮುಖ್ಯೋಪದೇಶಗಳನ್ನು ಈ ಪದ್ಯಗಳಲ್ಲಿ ಸಂಗ್ರಹಿಸಿ ಹೇಳಿದೆ.—

> "ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ
> (ಭೇದಃ) ಭಿನ್ನಾ ಜೀವಗಣಾಃ ಹರೇರನುಚರಾಃ ನೀಚೋಚ್ಚ
> ಭಾವಂ ಗತಾಃ ।
> ಮುಕ್ತಿರ್ನೈಜ ಸುಖಾನುಭೂತಿಃ ಅಮಲಾ ಭಕ್ತಿಶ್ಚ ತತ್ಸಾಧನಂ
> ಹ್ಯಕ್ಷಾದಿ ತ್ರಿತಯಂ ಪ್ರಮಾಣ ಮಖಿಲಾಮ್ನಾಯೈಕವೇದ್ಯೋಹರಿಃ ।"

ಮಧ್ವಾಚಾರ್ಯರ ರಾಮಾನುಜಾಚಾರ್ಯರ ಮತ ವಿಶೇಷಗಳು.

ಶ್ರೀ ಮಾಧ್ವ ಸಂಪ್ರದಾಯದ ದ್ವೈತಿಗಳು ಪ್ರಕೃತಿಯು ಅಸ್ವತಂತ್ರವೆಂದೂ, ಈಶ್ವರಾಧೀನವೆಂದೂ, ಚಿತ್, ಅಚಿತ್, ಈಶ್ವರ ಎಂದು ಮೂರು ಮೂಲತತ್ವಗಳೆಂದೂ, ಈಶ್ವರನು ಈ ಚರಾಚರ ಪ್ರಪಂಚಕ್ಕೆ, ಅದರ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾಗಿರುತ್ತಾನೆಂದೂ ಹೇಳುತ್ತಾರೆ. ಹರಿಯೇ ಸರ್ವೋತ್ತಮನೆಂದೂ, ಜಗತ್ತು ಸತ್ಯವೆಂದೂ, ಭೇದವೂ ನಿತ್ಯವೆಂದೂ, ಜೀವರು ಭಿನ್ನರು, ಅನೇಕರು, ನಿತ್ಯರೆಂದೂ, ಹರಿಗೆ ಅಧೀನರೆಂದೂ, ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಹೆಚ್ಚು ಕಡಿಮೆಯ ಸ್ಥಿತಿಯಲ್ಲಿ ನೀಚೋಚ್ಚ ಭಾವಗಳನ್ನು ಪಡೆದಿರುತ್ತಾರೆಂದೂ, ತಮ್ಮ ಸ್ವರೂಪ

ಸುಖಾನುಭವವೇ ಮುಕ್ತಿ ಎಂದೂ, ಅದು ಹರಿಭಕ್ತಿಯಿಂದಲೇ ಉಂಟಾಗುತ್ತದೆಂದೂ, ಮುಕ್ತಿಯಲ್ಲೂ ಯೋಗ್ಯತಾನುಸಾರವಾದ ತಾರತಮ್ಯ ಉಂಟೆಂದೂ, ಅಪ್ರಾಕೃತವಾದ ಆ ವೈಕುಂಠ ಲೋಕದಲ್ಲಿ ಅಸೂಯಾದಿಗಳು ಉಂಟಾಗುವುದಿಲ್ಲವೆಂದೂ ನಂಬುತ್ತಾರೆ. ಕಾಲಾಂತರದಲ್ಲಿ ದೇಶಾಂತರದಲ್ಲಿ ಮುಕ್ತಿಯು ದೊರೆಯುತ್ತದೆ ಎನ್ನುತ್ತಾರೆ. ಶ್ರೀವೈಷ್ಣವ, ವಿಶಿಷ್ಟಾದ್ವೈತ, ರಾಮಾನುಜಮತದ ಮುಖ್ಯೋಪದೇಶಗಳನ್ನು ಈ ಪದ್ಯದಲ್ಲಿ ಸಂಗ್ರಹಿಸಲಾಗಿದೆ.—

" ಮಾರ್ಗೇ ರಾಮಾನುಜೀಯೇ ಸಕಲಚಿದಚಿತ ಶ್ಚಾಂಶಶೇಷಾಶ್ಯಶರೀರಂ
ಶೇಷೀ ನಾರಾಯಣ ಸ್ಯ್ಯಾತ್ ಅನವಧಿಗುಣಯುಕ್ ಬ್ರಹ್ಮ
ಲಕ್ಷ್ಮೀ ವಿಶಿಷ್ಟಃ ।
ಜೀವಾಃ ಭಿನ್ನಾಣುರೂಪಾಃ ಪರಮಸಮತಯಾ ದಿವ್ಯವೈಕುಂಠ
ಲೋಕೇ
ಮುಕ್ತಿಃ ಭಕ್ತ್ಯಾ ಪ್ರಪತ್ತ್ಯಾ ಭವತಿ ಚ ನಿಯತಂ ಕರ್ಮಯುಕ್
ಜ್ಞಾನಲಭ್ಯಾ ॥ "

ಶ್ರೀರಾಮಾನುಜ ಸಂಪ್ರದಾಯದ ಶ್ರೀವೈಷ್ಣವರೆಂಬ ವಿಶಿಷ್ಟಾದ್ವೈತಿಗಳು ಈ ಚಿತ್ ಮತ್ತು ಅಚಿತ್‌ಗಳು ಈಶ್ವರನಿಗೆ ಬ್ರಹ್ಮತತ್ವಕ್ಕೆ ಅಂಗ, ಅವಯವ, ಶರೀರ, ಶೇಷ ಅಥವಾ ಅಂಶಗಳೆಂದೂ ಈಶ್ವರನು ಶರೀರೀ, ಶೇಷೀ, ಅಂಶೀ ಎಂದೂ, ಬ್ರಹ್ಮತತ್ವದ ಚಿದಂಶದಲ್ಲಿ ಧರ್ಮ ಪರಿಣಾಮವೂ, ಅಚಿತ್ತಾದ ಪ್ರಕೃತ್ಯಂಶದಲ್ಲಿ ಸ್ವರೂಪ ಪರಿಣಾಮವೂ ಆಗಿ ಸೃಷ್ಟಿಯಾಗಿ ಸ್ಥಿತಿಯನ್ನು ಪಡೆದಿರುತ್ತದೆಂದೂ, ಇದೆಲ್ಲವೂ ಕಾರಣ ರೂಪದಲ್ಲಿ ನಿತ್ಯವೆಂದೂ ಕಾರ್ಯರೂಪದಲ್ಲಿ ಅನಿತ್ಯವೆಂದೂ, ಸ್ಥೂಲಕಾರ್ಯತ್ವ ಪ್ರಾಪ್ತಿಯೇ ಸೃಷ್ಟಿ ಎಂದೂ, ಸೂಕ್ಷ್ಮಕಾರಣತ್ವ ಪ್ರಾಪ್ತಿಯೇ ಪ್ರಳಯವೆಂದೂ, ಮಾನವರ ಅದೃಷ್ಟದ ಪ್ರೇರಣೆಯಿಂದ ಪರಮಾಣು ಪ್ರಕೃತಿಗಳಲ್ಲಿ ಈಶ್ವರಾಜ್ಞೆಯಿಂದ ಚಲನಸ್ಪಂದಗಳುಂಟಾಗಿ ಸೃಷ್ಟಿಯಾಗುತ್ತದೆ. ಎಂದೂ ಒಪ್ಪಿರುತ್ತಾರೆ.

**ಶ್ರುತ್ಯರ್ಥ ನಿರ್ಣಯದಲ್ಲಿ ತೊಡಕುಗಳು.**

ಈ ಅತೀಂದ್ರಿಯ ವಿಷಯಗಳಲ್ಲಿ ಶ್ರುತಿಯೇ ಪ್ರಮಾಣವೆನ್ನುತ್ತಾರೆ. ಶೇಷಿಯೂ ಅಂಶಿಯೂ ಆಗಿರುವ ನಾರಾಯಣನೇ ಬ್ರಹ್ಮತತ್ತ್ವ ಸ್ವರೂಪನು. ನಿತ್ಯತತ್ತ್ವ ಸ್ವರೂಪಳಾದ ಶ್ರೀ ಲಕ್ಷ್ಮೀದೇವಿಯಿಂದ ಅವಿನಾಭಾವದಿಂದ ಕೂಡಿಯೇ ಇರುತ್ತಾನೆ. ಈ ಸಗುಣಸಾಕಾರ ಸ್ವರೂಪವೇ ಪರತತ್ತ್ವ ಸ್ವರೂಪವು. ಜೀವರು ಭಿನ್ನರೂ ಅನಂತರೂ ಅಣುರೂಪರೂ ಆಗಿರುತ್ತಾರೆ. ಅವರು ಭಕ್ತಿಯಿಂದಲೂ ಪ್ರಪತ್ತಿಯಿಂದಲೂ ನಾರಾಯಣನನ್ನು ಸಂತೋಷಪಡಿಸಿ ಮುಕ್ತಿಯನ್ನು ಆ ದಿವ್ಯವಾದ ವೈಕುಂಠ ಲೋಕಕ್ಕೆ ಹೋಗಿ ಅಲ್ಲಿ ನಾರಾಯಣ ಸಾರೂಪ್ಯವನ್ನು ಎಲ್ಲರೂ ಸಮವಾಗಿ ಪಡೆಯುತ್ತಾರೆ. ಯೋಗ್ಯತಾತಾರತಮ್ಯಗಳಿಲ್ಲವು. ಮುಕ್ತಿಗೆ ಕರ್ಮದಿಂದ ಕೂಡಿದ ಜ್ಞಾನವೇ ಕಾರಣವೆಂದು ನಂಬುತ್ತಾರೆ. ಶ್ರುತಿಯೇ ಮುಖ್ಯ ಪ್ರಮಾಣವೆಂದು ಅಂಗೀಕರಿಸಿರುತ್ತಾರೆ.

ಇವರೆಲ್ಲರೂ ದ್ವೈತಿಗಳು. ಎಂದರೆ ನಿತ್ಯವಾದ ಅನೇಕ ತತ್ತ್ವಗಳನ್ನು ಎಂದರೆ ಪ್ರಪಂಚ, ನಿತ್ಯ. ಅನೇಕ ಜೀವರೂ, ನಿತ್ಯರು. ಈಶ್ವರನೂ ನಿತ್ಯನು. ಎಂಬ ಮೂರು ತತ್ತ್ವಗಳನ್ನು ಒಪ್ಪುತ್ತಾರೆ. ಇದೆಲ್ಲವೂ ಪ್ರಮಾತೃ ದೃಷ್ಟಿಯಿಂದ ಗೊತ್ತಾದ ನಂಬಬೇಕಾದ ವಿಷಯಗಳು. ವೈದಿಕಶಾಸ್ತ್ರ ದೃಷ್ಟಿಯಿಂದ ಮಾರ್ಪಡತಕ್ಕವುಗಳಾಗಿವೆ. ವಿಚಾರ ವಿಮರ್ಶ ದೃಷ್ಟಿ ಅಥವಾ ಪಾರಮಾರ್ಥಿಕ ದೃಷ್ಟಿಯಿಂದ ತತ್ತ್ವಸ್ವರೂಪವನ್ನು ನಿರ್ಧರಿಸಬೇಕು. ಈ ವ್ಯಾವಹಾರಿಕವಾದ ಜಾಗ್ರತ್ ಕಾಲೀನವಾದ ದೃಷ್ಟಿಯಿಂದ ಗೊತ್ತಾದ ನಂಬಿಕೆಯ ವಿಷಯಗಳು ಅವಸ್ಥಾತ್ರಯದಲ್ಲಿ ಉಂಟಾಗುವ ಅನುಭವಗಳ ವಿಮರ್ಶೆಯಿಂದ ಮಾರ್ಪಡುತ್ತವೆ. ಶಬ್ದಪ್ರಮಾಣದ ದೃಷ್ಟಿಯಲ್ಲಿ ದ್ವೈತಪರವಾಗಿರುವಂತಿರುವ, ವಿಶಿಷ್ಟಾದ್ವೈತ ಪರವೆಂತಿರುವ, ಅದ್ವೈತ ಪರವೆಂತಿರುವ ಶ್ರುತಿಗಳಿಗೆ ಇಂಥದೇ ತಾತ್ಪರ್ಯವೆಂದು ನಿರ್ಣಯಿಸುವುದು ಸರ್ವಸಮ್ಮತವಾಗುವುದಿಲ್ಲ. ಶ್ರುತ್ಯರ್ಥವನ್ನು ಪ್ರತ್ಯಕ್ಷಾನುಮಾನಗಳಿಗೆ ಅವಿರೋಧ

ವಾಗಿರುವಂತೆಯೇ ಗೊತ್ತುಮಾಡಬೇಕು. "ನ ಹಿ ಶ್ರುತಿಶತಮಪಿ ಘಟಂ ಪಟಯಿತುಮೀಷ್ಟೇ" "ಶ್ರುತ್ಯಾದಯಃ ಅನುಭವಾದಯಶ್ಚಯಥಾ ಸಂಭವ ಮಿಹ ಪ್ರಮಾಣಂ" ಎಂಬ ದೃಷ್ಟಿಯನ್ನು ಅವಲಂಬಿಸಿ ಅದ್ವೈತಿಗಳು ಅರ್ಥನಿರ್ಣಯ ಮಾಡುತ್ತಾರೆ. ಸುಷುಪ್ತಿಯಲ್ಲಿ ಶುದ್ಧಾತ್ಮನ ಸ್ವರೂಪವನ್ನೂ, ಕನಸಿನಲ್ಲಿ ಮನಸ್ಸಂಸ್ಕಾರ ವಿಶಿಷ್ಟಾತ್ಮವನ್ನೂ, ಜಾಗ್ರತ್ತಿನಲ್ಲಿ ಸ್ಥೂಲಭೌತ ಪ್ರಪಂಚ, ಜ್ಞಾನ ವಿಶಿಷ್ಟಾತ್ಮನ ಸ್ವರೂಪವನ್ನೂ ಪರಿಶೀಲಿಸಿ ವಾಸ್ತವ ತತ್ವಸ್ವರೂಪವನ್ನು ಗೊತ್ತುಮಾಡಿಕೊಳ್ಳಲು ತೊಡಗುತ್ತಾರೆ.

ಅವಸ್ಥಾತ್ರಯಃ ಬ್ರಹ್ಮಸೂತ್ರದಲ್ಲಿನ ಆಚಾರ್ಯರುಗಳು.

ಸುಷುಪ್ತ್ಯನುಭವವು ನಿತ್ಯದೂಟವಿದ್ದಂತೆ ಎನ್ನಬಹುದು, ಸ್ವಪ್ನಾನುಭವವು ಹಬ್ಬದೂಟದಂತೆ, ಜಾಗ್ರದನುಭವವು ಮದುವೆಯ ಔತಣದ ಊಟದಂತೆ, ವೈಭವದ ಗದ್ದಲದ ಗೊಂದಲ ಹೆಚ್ಚು ಎನ್ನಬಹುದು. ಬ್ರಹ್ಮಸೂತ್ರಗಳ ರಚನೆಯಾದ ಕಾಲದಲ್ಲಿಯೇ ಜೀವಾತ್ಮ ಪರಮಾತ್ಮರಿಗೆ ಭೇದವೇ, ಅಭೇದವೇ, ಭೇದಾಭೇದವೇ ಯಾವುದು ಪರಮಾರ್ಥವು? ಎಂಬ ವಿಚಾರವಿತ್ತು. ಆತ್ಮನ ದರ್ಶನಕ್ಕೆ ಶ್ರವಣ ಮನನ ನಿದಿಧ್ಯಾಸನಗಳು ಆವಶ್ಯಕಗಳೆಂದು ಬೃ. ಉ. ೪. ೫. ೬ರಲ್ಲಿ ಹೇಳಿದೆ. "ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ, ಮೈತ್ರೇಯಿ ಆತ್ಮನೋವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನ ಇದಂ ಸರ್ವಂ ವಿದಿತಂ" "ನವಾಅರೇ ಪತ್ಯುಃಕಾಮಾಯಪತಿಃಪ್ರಿಯೋ ಭವತಿ ಆತ್ಮನಸ್ತುಕಾಮಾಯ ಪತಿಃ ಪ್ರಿಯೋ ಭವತಿ........ನವಾಅರೇ ಸರ್ವಸ್ಯ ಕಾಮಾಯ ಸರ್ವಂಪ್ರಿಯಂ ಭವತಿ ಆತ್ಮನಸ್ತು ಕಾಮಾಯ ಸರ್ವಂಪ್ರಿಯಂಭವತಿ, ಆತ್ಮಾವಾ ಅರೇದ್ರಷ್ಟವ್ಯಃ" ಇಲ್ಲಿ ಆತ್ಮನು ಯಾರು ಎಂದು ವಿಚಾರಿಸಿ, ಜೀವಾತ್ಮನು ಪರಮಾತ್ಮನೇ ಎಂದು ಸೂತ್ರಕಾರರು ನಿರ್ಣಯಿಸಿದ್ದಾರೆ. ಹಾಗಾದರೆ ಶ್ರುತಿಯಲ್ಲಿ ಆತ್ಮನಿಗಾಗಿ ಎಲ್ಲವೂ ಪ್ರಿಯವಾಗಿರುತ್ತವೆ. ಎಂದು ಜೀವಾತ್ಮನ

ಧರ್ಮವನ್ನು ಹೇಳಿರುವುದರ ಸಮನ್ವಯ ಹೇಗೆ? ಎಂದು ಆಕ್ಷೇಪಿಸಿ ಸೂತ್ರದಲ್ಲಿ ಮೂರು ಜನ ಆಚಾರ್ಯರ ಅಭಿಪ್ರಾಯವನ್ನು ಕೊಟ್ಟಿದೆ. ೧. ಜೀವಾತ್ಮನಿಗೂ ಪರಮಾತ್ಮನಿಗೂ ಅಭೇದವಿರುವಂತೆ ಭೇದವೂ ಇದೆ ಎಂದು ಆಶ್ಮರಥ್ಯಾಚಾರ್ಯರಮತ. ೨. ಜೀವನು ಈಗ ಪರಮಾತ್ಮನಿಗಿಂತ ಬೇರೆಯಾಗಿದ್ದರೂ ಜ್ಞಾನಧ್ಯಾನಾದಿಗಳಿಂದ ಪರಮಾತ್ಮನಲ್ಲಿ ಅಭೇದವನ್ನು ಪಡೆಯುವನು. ಎಂದು ಔಡುಲೋಮಿ ಆಚಾರ್ಯರಮತ. ೩. ಪರಮಾತ್ಮನೇ ಜೀವರೂಪದಿಂದ ತೋರಿ ಕೊಳ್ಳುತ್ತಿದ್ದಾನೆ. ಆದುದರಿಂದ ಜೀವಪರಮರಿಗೆ ಯಾವಾಗಲೂ ಅಭೇದವೇ ಇರುವುದು. ಎಂದು ಕಾಶಕೃತ್ಸ್ನಾಚಾರ್ಯರಮತ. ಈ ಮೂರನೆಯ ಮತವೇ ಉಪನಿಷತ್ತಿನ ತಾತ್ಪರ್ಯವೆಂದು ಶ್ರೀ ಶಂಕರಾಚಾರ್ಯರು ಸಿದ್ಧಾಂತವನ್ನು ವಿವರಿಸಿರುತ್ತಾರೆ. ಅದ್ವೈತ ದರ್ಶನದ ಮುಖ್ಯಾಂಶಗಳನ್ನು ಈ ಪದ್ಯದಲ್ಲಿ ಸಂಗ್ರಹಿಸಿ ಹೇಳಿದೆ.—

"ಅದ್ವೈತೇ ಬ್ರಹ್ಮಸತ್ಯಂ, ಜಗದಿದಮನೃತಂ, ಮಾಯಯಾ ಭಾಸಮಾನಂ,
ಜೀವೋ ಬ್ರಹ್ಮ ಸ್ವರೂಪೋಽಪ್ಯ ಹಮಿತಿ ಮಮ ಚೇತ್ಯಸ್ತಿದೇಹೇಽಭಿಮಾನಾನ್ ।
ಶ್ರುತ್ಯಾಬ್ರಹ್ಮಾ ಹಮಸ್ಮೀತ್ಯನುಭವ ಉದಿತೇ ನಷ್ಟಕರ್ಮಾಭಿಮಾನಃ
ಮಾಯಾಸಂಸಾರ ಮುಕ್ತೋಽಿಹ ಭವತಿ ಸದಾ ಸಚ್ಚಿದಾನಂದರೂಪಃ ॥"

ಅದ್ವೈತ ಮತದ ಉಪದೇಶಗಳು.

ಎಂದರೆ ಅದ್ವೈತ ಸಿದ್ಧಾಂತದ ದೃಷ್ಟಿಯಲ್ಲಿ ಬ್ರಹ್ಮತತ್ವ ಒಂದೇ ತ್ರಿಕಾಲಾಬಾಧ್ಯವಾದ ತತ್ವವು. ಈ ಚರಾಚರ ಜಗತ್ತು ವ್ಯಾವಹಾರಿಕ ದೃಷ್ಟಿಯಲ್ಲಿ ತೋರುತ್ತಿರುತ್ತದೆ. ಪಾರಮಾರ್ಥಿಕ ದೃಷ್ಟಿಯಿಂದ ಇದು ನಿಜವಾದುದಲ್ಲ. ಇದಕ್ಕೆ ಅಧಿಷ್ಠಾನವಾಗಿರುವ ಆತ್ಮತತ್ವದ ವಾಸ್ತವಸ್ವರೂಪದ ಅಜ್ಞಾನ ಅಥವಾ ಮಾಯೆಯಿಂದ ಈ ಜಗತ್ತು ನಿಜವಾಗಿರುವಂತೆ ತೋರುತ್ತಿರುತ್ತದೆ. ಜೀವಾತ್ಮನು ತನ್ನ ವಾಸ್ತವವಾದ ಸಚ್ಚಿದಾನಂದ ರೂಪದಲ್ಲಿ ಬ್ರಹ್ಮತತ್ವದೊಡನೆ

ಅಭಿನ್ನತತ್ತ್ವವಾಗಿರುತ್ತಾನೆ. ಆದರೂ ಆ ಜ್ಞಾನವಿಲ್ಲದಿರುವುದರಿಂದ, ಈ ಅಜ್ಞಾನವೆಂಬ ಮಾಯೆಯ ಪ್ರಭಾವದಿಂದ ಈ ದೇಹದಲ್ಲಿ "ನಾನು ನನ್ನದು" ಎಂಬ ಅಭಿಮಾನದಿಂದ ಈ ದೇಹದಲ್ಲಿರುವಂತೆ ತೋರುತ್ತಿದ್ದಾನೆ. ಈ ದೇಹಕ್ಕೂ ಆತ್ಮನಿಗೂ ಬೇರೆ ಯಾವ ಸಂಬಂಧವನ್ನೂ ಹೇಳಲಾಗುವುದಿಲ್ಲ. "ತತ್ತ್ವಮಸಿ" "ಅಹಂ ಬ್ರಹ್ಮಾಸ್ಮಿ" ಎಂದು ಮುಂತಾದ ಶ್ರುತಿವಾಕ್ಯದ ಉಪದೇಶದಿಂದಲೇ ಬ್ರಹ್ಮವೂ ಆತ್ಮನೂ ಸಚ್ಚಿದಾನಂದರೂಪದಲ್ಲಿ ಅಭಿನ್ನತತ್ತ್ವಗಳು. ಎಂಬ ಅಪರೋಕ್ಷಾನುಭವವು ಉಂಟಾಗುತ್ತದೆ. ಕರ್ಮದಲ್ಲೂ ಫಲದಲ್ಲೂ ಅಭಿಮಾನವೂ ತಪ್ಪುತ್ತದೆ. ಆಮೇಲೆ ಜೀವನು ಕರ್ತೃತ್ವ, ಭೋಕ್ತೃತ್ವ, ಜನನ, ಮರಣ, ಪ್ರವಾಹರೂಪವಾದ ಈ ಸಂಸಾರದಲ್ಲಿ ಸುಖ ದುಃಖಾನುಭವದ ನಿರ್ಬಂಧದಿಂದ ಬಿಡುಗಡೆಯನ್ನು ಪಡೆದು ಎಂದಿನಂತೆ ಸಚ್ಚಿದಾನಂದಾದ್ವಯರೂಪದಲ್ಲಿರುತ್ತಾನೆ. ಇದೇ ಮೋಕ್ಷವು.

ಶೈವಶಾಕ್ತೇಯ ವೈಷ್ಣವ ಮತಗಳು.

ಈ ಎರಡು ವೈಷ್ಣವ ಮತಗಳೂ ಹಿಂದಿನ ವಾಸುದೇವ ಭಾಗವತಮತದ ಪರಿಷ್ಕರಣದಿಂದ ಬೆಳೆದಿವೆ. ಇವುಗಳಂತೆಯೇ ಶೈವಮತವೂ ಶಾಕ್ತೇಯ ಮತವೂ ರೂಪಗೊಂಡು ಬೆಳೆದವು. ಉಪನಿಷತ್ಕಾಲದ ಅನಂತರದಲ್ಲಿ ಬೌದ್ಧಮತಕ್ಕಿಂತ ಮುಂಚೆ ಈ ವೈಷ್ಣವ ವಾಸುದೇವ ಭಾಗವತಮತವು ಪ್ರಚಾರವನ್ನು ಪಡೆಯಿತು. ಶೈವ ಮತವೂ ಶಾಕ್ತೇಯಮತವೂ ಭಾಗವತ ಮತಕ್ಕೂ ಹಿಂದಿನವೆನ್ನಬೇಕಾಗಿದೆ. ಹರಪ್ಪ ಮೋಹೆಂಜೋದಾರೋ ಸ್ಥಳಗಳಲ್ಲಿ ಭೂಶೋಧನೆಯಿಂ ಆಗಿನ ಕಾಲದಲ್ಲೂ ಲಿಂಗದಲ್ಲಿ ಶಿವಪೂಜೆಯು ರೂಢಿಯಲ್ಲಿದ್ದುದು ಗೊತ್ತಾಗಿದೆ. ಇವುಗಳಂತೆಯೇ ಶಾಕ್ತೇಯ ಮತವೂ ರೂಢಿಗೆ ಬಂದಿದ್ದುದು ಗೊತ್ತಾಗುತ್ತದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ "ಏಕೋಹಿರುದ್ರೋನ ದ್ವಿತೀಯಾಯತಸ್ಥುಃಯ ಇಮಾನ್ ಲೋಕಾನ್ ಈಶತೆ ಈಶಿನೀಭಿಃ" ಎಂದರೆ ಯಾರು ತನ್ನ ಗುಣಶಕ್ತಿ ವಿಶೇಷದಿಂದ ಈ ಲೋಕಗಳನ್ನೆಲ್ಲವನ್ನೂ ಆಳುತ್ತಿದ್ದಾನೋ · ಆ ರುದ್ರನೊಬ್ಬನೇ ದೇವರು. ಇನ್ನೊಬ್ಬನಿಲ್ಲ. ಹಾಗೆಯೇ

"ಘೃತಾತ್ಪರಂ ಮಂಡಮಿವಾತಿ ಸೂಕ್ಷ್ಮಂಜ್ಞಾತ್ವಾ ಶಿವಂ ಸರ್ವ
ಭೂತೇಷುಗೂಢಂ ।
ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ದೇವಂ ಮುಚ್ಯತೇ
ಸರ್ವಪಾಶೈಃ ॥"

ಎಂದರೆ ಎಲ್ಲ ಪ್ರಾಣಿಗಳಲ್ಲೂ ಗೂಢವಾಗಿದ್ದು ಜಗತ್ತೆಲ್ಲವನ್ನೂ ತಾನೊಬ್ಬನೇ ಆವರಿಸಿಕೊಂಡು ಅತಿಸೂಕ್ಷ್ಮ ದೇವನಾದ ಶಿವನನ್ನು ತಿಳಿದರೆ ಅವಿದ್ಯೆಯಿಂದುಂಟಾದ ಎಲ್ಲ ಬಂಧನಗಳಿಂದಲೂ ಬಿಡುಗಡೆಯಾಗುವುದು ಎಂದು ಹೇಳಿದೆ. ಇದರಂತೆಯೇ

೧. "ತೇಧ್ಯಾನ ಯೋಗಾನುಗತಾ ಅಪಶ್ಯನ್
ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ ॥"

೨. "ನತಸ್ಯಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾ
ಭ್ಯಧಿಕಶ್ಚವರ್ತ್ತೇ ।
ಪರಾಸ್ಯಶಕ್ತಿಃ ವಿವಿಧೈವಶ್ರೂಯತೇ ಸ್ವಾಭಾವಿಕೀಜ್ಞಾನ
ಬಲಕ್ರಿಯಾ ಚ ॥"

೩. "ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇ
ಶ್ವರಂ ।
ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥"
ಶ್ವೇ. ಉ.೪. ೧೦. ಪುಟ ೧೮೮–೧೯೧ ನೋಡಿ.

**ಶಕ್ತಿ ತತ್ವದ ಸ್ವರೂಪ.**

೧. ಎಂದರೆ, ಆ ಯೋಗನಿಷ್ಠರಾದ ಉಪಾಸಕರು ಧ್ಯಾನ ಯೋಗ ಎಂದರೆ, ಮನಸ್ಸಿನ ಏಕಾಗ್ರತೆ ಎಂಬ ಉಪಾಯವನ್ನು ಅನುಸರಿಸಿದವರಾಗಿ ದೇವಾತ್ಮಶಕ್ತಿಯನ್ನು ಎಂದರೆ, ಸ್ವಪ್ರಕಾಶ ಸ್ವರೂಪನಾದ ಪರಮಾತ್ಮನ ಉಪಾಧಿಶಕ್ತಿಯನ್ನೂ, ಅವಿನಾಭಾವದಿಂದ ಆತ್ಮಸ್ವರೂಪವಾಗಿರುವ ಮಾಯಾಶಕ್ತಿಯನ್ನು, ಈ ಎಲ್ಲ ಪ್ರಪಂಚಕ್ಕೂ ಕಾರಣವಾದ ತತ್ವವೆಂದೂ, ಕಾರ್ಯದರೂಪದಿಂದ ಕಾರಣ ರೂಪವು ಕಣ್ಣಿಗೆ ಮರೆಯಾಗಿರುವಂತೆ, ಈ ಆತ್ಮಶಕ್ತಿಯೂ ಇಪ್ಪತ್ತುನಾಲ್ಕು ಬಗೆಯಾಗಿ ಪರಿಣಮಿಸಿರುವ ಮಾಯೆಯ ಅಥವಾ ಪ್ರಕೃತಿಯ ಕಾರ್ಯಗಳಿಂದ ಮರೆಯಾಗಿರುತ್ತದೆ ಎಂದೂ ಮನ

ಗಂಡರು. “ಇಚ್ಛಾಶಕ್ತಿಃ ಉಮಾ ಕುಮಾರೀ” ಎಂದು ಶ್ರುತಿಯೂ ಹೇಳಿದೆ.

೨. ಆ ಪರಮೇಶ್ವರನಿಗೆ ನಮಗೆ ಇರುವಂತೆ ಭೌತಕಾರ್ಯವಾದ ಶರೀರವಾಗಲಿ, ಕರಣವಾದ ಕಣ್ಣು ಮುಂತಾದ ಇಂದ್ರಿಯಗಳಾಗಲಿ ಇಲ್ಲವು. ಆ ಪರಮೇಶ್ವರನಿಗೆ ಸಮಾನರಾದ ಅಥವಾ ಮಿಗಿಲಾದವರು ಯಾರೂ ಇಲ್ಲವು. ಎಲ್ಲರೂ ಅವನಿಗೆ ಅಧೀನರಾಗಿ ಕಡಿಮೆಯಾದವರಾಗಿರುತ್ತಾರೆ ಎಂದು ಭಾವವು. ಆ ಪರಮೇಶ್ವರನ ಶಕ್ತಿಯು ಎಲ್ಲರ ಶಕ್ತಿಗಿಂತ ಮೇಲಾದುದೆಂದೂ, ನಾನಾ ಬಗೆಯಲ್ಲಿ ತೋರಬಲ್ಲದ್ದಾಗಿ ಎಲ್ಲ ಕಾರ್ಯಗಳನ್ನೂ ನಿರ್ವಹಿಸಬಲ್ಲದ್ದಾಗಿದೆ ಎಂದೂ ಗೊತ್ತಾಗುತ್ತದೆ. ಇಂತಹ ಅದ್ಭುತವೂ ಅಚಿಂತ್ಯವೂ ಆಗಿರುವ ಶಕ್ತಿಯು ಆ ಪರಮೇಶ್ವರನಿಗೆ ಸ್ವಾಭಾವಿಕವಾಗಿದೆ. ಇದು ಜ್ಞಾನಕ್ರಿಯಾ ಎಂದರೆ, ಎಲ್ಲ ಬಗೆಯ ತಿಳಿವಳಿಕೆಯನ್ನು ಪಡೆಯಬಲ್ಲದ್ದಾಗಿಯೂ, ಬಲಕ್ರಿಯಾ ಎಂದರೆ, ತನ್ನ ಸನ್ನಿಧಾನಮಾತ್ರದಿಂದ ಈ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳೆಂಬ ವ್ಯವಹಾರದಲ್ಲಿ ತನಗೆ ಉಪಾಧಿಯಾಗಿರುವ ಮಾಯಾ ಶಕ್ತಿಯ ಮೂಲಕ ಪ್ರಪಂಚವೆಲ್ಲವನ್ನೂ ತನ್ನ ಸ್ವಾಧೀನದಲ್ಲಿ ಇಟ್ಟುಕೊಂಡಿರಬಲ್ಲದ್ದಾಗಿಯೂ ಇದೆ ಎಂದೂ ತಾತ್ಪರ್ಯವು.

೩. ಈ ಮಾಯೆಯನ್ನೇ ಪ್ರಕೃತಿ ಎಂದು ತಿಳಿಯುಬೇಕು. ಇದನ್ನೇ ವೇದಾಂತಿಗಳು ಮಾಯೆ ಎಂದೂ, ಸಾಂಖ್ಯಯೋಗರು ಪ್ರಕೃತಿ, ಪ್ರಧಾನ, ಎಂದೂ, ಶಾಕ್ತೇಯರು ಪರಾಶಕ್ತಿ ಎಂದೂ, ಪರಮೇಶ್ವರ ಸ್ವಭಾವವೆಂದೂ, ವ್ಯವಹರಿಸುತ್ತಾರೆ. ಈ ಮಾಯೆಯೇ ಉಪಾಧಿಯಾಗಿವುಳ್ಳ ಈಶ್ವರನನ್ನು ಮಾಯೀ ಎಂದು ತಿಳಿಯುಬೇಕು. ಇದರ ಅವಯವ ಅಥವಾ ಅಂಶಗಳಾದ ಅವಿದ್ಯೆಗಳಿಂದ ಈ ಚರಾಚರ ಪ್ರಪಂಚವೆಲ್ಲವೂ ವ್ಯಾಪ್ತವಾಗಿದೆ ಎಂದೂ ತಿಳಿಯುಬೇಕು. ಇದನ್ನೇ ಈಗಿನ ವೈಜ್ಞಾನಿಕರೂ ಆಶ್ಚರ್ಯದಿಂದ ಧ್ಯಾನಿಸುತ್ತಾರೆಂದು ಹೇಳಿದರೆ ತಪ್ಪಾಗಲಾರದು.

---

# ಐದನೆಯ ಅಧ್ಯಾಯ

## ಧಾರ್ಮಿಕ ಸಂಸ್ಕೃತಿಯೂ ಆಧುನಿಕ ವಿಜ್ಞಾನವೂ

ಈಗಿನ ವೈಜ್ಞಾನಿಕರ ಸಿದ್ಧಾಂತಗಳೂ, ಧರ್ಮತತ್ತ್ವವೂ.

Divine Ordering of Universe—A life time of scientific research has convinced Dr. Robert A Millican that there really is Divinity that guides men's destiny. He told the country's leading physicists that " wise men in all the ages have seen enough to at least make them reverent." He quoted Dr. Albert Einstein as saying " It is enough for me to contemplate the mystery of conscious life perpetuating itself through all eternity; to reflect upon the marvellous structure of the universe which we can dimly perceive and to try humbly to comprehend even an infinitisimal part of the intelligence manifested in nature."

ಪುರುಷ ಸೂಕ್ತದ " ಏತಾವಾನಸ್ಯ ಮಹಿಮಾ " ಎಂಬ ಮಾತು ದೇವನ ಅದ್ಭುತವಾಗಿರುವ ಬುದ್ಧಿಶಕ್ತಿಗಳ ಮಹಿಮೆಯನ್ನು ಸೂಚಿಸುತ್ತದೆ. ಅದರಂತೆಯೇ ಶ್ರೀ ಶಂಕರಾಚಾರ್ಯರ " ಅಸ್ಯ ಜಗತೋ ನಾಮ ರೂಪಾಭ್ಯಾಂ........................................
" ಮನಸಾಪ್ಯಚಿಂತ್ಯರಚನಾರೂಪಸ್ಯ ತದ್ಬ್ರಹ್ಮ " ಶಂ.ಭಾ.೧.೧.೨.

ಎಂಬ ಮಾತೂ ಆ ದೇವನ ಅಚಿಂತ್ಯವೂ ಆಶ್ಚರ್ಯಕರವೂ ಆಗಿರುವ ಬುದ್ಧಿಶಕ್ತಿಗಳ ಅಪಾರವಾದ ಮಹಿಮೆಯನ್ನು ತಿಳಿಸುತ್ತಾ ನಮ್ಮನ್ನೂ ಆಶ್ಚರ್ಯಾನಂದದಲ್ಲಿ ಮಗ್ನರನ್ನಾಗಿ ಮಾಡುತ್ತದೆ. ಇದೇ ರೀತಿಯಲ್ಲಿ ಡಾಕ್ಟರ್ ಆಲ್ಬರ್ಟ್ ಐನ್‌ಸ್ಟೀನ್ ಎಂಬ ವೈಜ್ಞಾನಿಕ ವಿದ್ವಾಂಸರಲ್ಲಿ ಪ್ರಸಿದ್ಧನಾದ ಮುಖಂಡನೂ ಹೇಳಿದ್ದಾನೆ. ಅನಾದ್ಯನಂತ ಕಾಲದ ಲ್ಲೆಲ್ಲಾ ಪ್ರಕೃತಿಯಲ್ಲಿ ಸಂತತವಾಗಿ ಕಾಣಬರುತ್ತಿರುವ ಪ್ರಾಣ ಶಕ್ತಿಯ ರಹಸ್ಯವನ್ನು ಆಲೋಚಿಸುವುದೇ ಸಾಕು. ಪ್ರಕೃತಿಯಲ್ಲಿ ಅಭಿವ್ಯಕ್ತವಾಗಿರುವ ಅದ್ಭುತವಾದ ಬುದ್ಧಿಶಕ್ತಿಯ ಅತ್ಯಲ್ಪ ಭಾಗವನ್ನೇ ತಿಳಿದು ಮನನ ಮಾಡುತ್ತಿರುವುದೇ ನನಗೆ ತೃಪ್ತಿಕರವಾಗಿರುತ್ತದೆ. "That" Millikan said "is as good a definition of God as Ineed·"

"But belief in God is not to belittle man," Millikan believes. "For while the Great Architect had to direct alone the earlier stages of the evolutionary process," Millikan said, "That part of Him that became us–for we are certainly inside, not outside, creation's plan—has been stepping up amazingly the pace of vegetable, animal and human evolution since we began to become conscious of the part we had to play" "It is our sense of responsibility for playing our part to the best of our ability that makes us God-like. In any success both human effort and God's help are necessary. But how much of each is not known."

—ಹಿಂದೂ ಪತ್ರಿಕೆ, ೩೧–೮–೧೯೪೮.

ಇದೇ ಪ್ರಕಾರದಲ್ಲಿ ಡಾಕ್ಟರ್ ರಾಬರ್ಟ್ ಮಿಲಿಕನ್ ಎಂಬ ವೈಜ್ಞಾನಿಕ ವಿದ್ವಾಂಸನೂ ಹೇಳುತ್ತಾನೆ. ಎಲ್ಲ ದೇಶಗಳಲ್ಲೂ ಕಾಲಗಳಲ್ಲೂ ಬುದ್ಧಿವಂತರೂ ವಿವೇಕಿಗಳೂ ಆದ ದೊಡ್ಡವರು ಇದ್ದರು. ಅಂಥವರು ಈ ಪ್ರಪಂಚದಲ್ಲಿ ಕಾಣಬರುವ ಅತಿಮಾನುಷವಾದ ಬುದ್ಧಿ ವಿವೇಕ ಶಕ್ತಿಗಳ ಮಹಿಮೆಯನ್ನು ಮನಗಂಡು ಭಕ್ತಿಯಿಂದ ಕೊಂಡಾಡಿರುತ್ತಾರೆ. ಆ ಅಚಿಂತ್ಯಾದ್ಭುತ ಶಕ್ತಿಯನ್ನೇ ದೇವರೆಂದು ನಾನೂ ಭಾವಿಸುತ್ತೇನೆ. ದೇವರ ಈ ಅಪಾರವಾದ ಬುದ್ಧಿ ಶಕ್ತಿಗಳನ್ನು ಒಪ್ಪಿದ ಮಾತ್ರದಿಂದ ಮಾನವನ ಬುದ್ಧಿಶಕ್ತಿಗಳಿಗೆ ತಕ್ಕ ಸ್ಥಾನಮಾನಗಳಿಲ್ಲವಂತಾಗುವುದಿಲ್ಲ. ಮಾನವನು ತನ್ನ ಜವಾಬ್ದಾರಿಯನ್ನೂ ಹೊಣೆಗಾರಿಕೆಯನ್ನೂ ತಿಳಿದು ತನ್ನ ಬುದ್ಧಿಶಕ್ತಿಗಳಿಗೆ ಅನುಸಾರವಾಗಿ ಪ್ರಯತ್ನವನ್ನು ಮಾಡುತ್ತಿರಲೇಬೇಕು. ಯಾವ ಕೆಲಸವಾದರೂ ಯಶಸ್ವಿಯಾಗಿ ಜಯಪ್ರದವಾಗಬೇಕಾದರೆ ಈ ಎರಡು ಶಕ್ತಿಗಳ ಸಹಕಾರವು ಆವಶ್ಯಕವಾದುದು. ಇದರಲ್ಲಿ ದೇವರ ಭಾಗವೆಷ್ಟು ದೇವನಿಂದ ಅನುಗ್ರಹೀತನಾಗಿರುವ ಮಾನವನ ಭಾಗವೆಷ್ಟು ಎಂಬುದನ್ನು ನಿರ್ಧರಿಸುವುದು ಮಾನವನ ಬುದ್ಧಿಗೆ ಮೀರಿದ ವಿಷಯವಾಗಿರುತ್ತದೆ.

"An examination of the Indian Vedantic doctrine shows that it is, in important aspects, in conformity with the most advanced scientific and philosophic thought of the west and where it is not so, it is the science which will go to Vedanta and not the reverse." Sir John Woodroffe, one of the best scholars and exponents of the sakta religion, has written this in his book, "Sakti and Sakta".

ವಿಜ್ಞಾನ ವೇದಾಂತ ಮತಗಳು.

ಈ ಅಂಶವನ್ನೇ ಸರ್ ಜಾರ್ಜ್ ವುಡ್ರಾಫ್ (ಆರ್ಥರ್ ಆವೆಲಾನ್) ಎಂಬ ಮಹಾಶಯನು ಶಾಕ್ತೇಯ ತಂತ್ರಗಳನ್ನು ಚೆನ್ನಾಗಿ ವ್ಯಾಸಂಗಮಾಡಿ ಪ್ರಕಟಿಸಿರುತ್ತಾನೆ. ಆತನ ಅಭಿಪ್ರಾಯವು ಹೀಗಿದೆ. ಭಾರತೀಯ ವೇದಾಂತದರ್ಶನದ ಸಿದ್ಧಾಂತಗಳನ್ನೂ ಉಪದೇಶಗಳನ್ನೂ ಪರಿಶೀಲಿಸಿದರೆ ಅವು ಪಾಶ್ಚಾತ್ಯ ದೇಶದಲ್ಲಿ ಬೆಳೆದಿರುವ ವಿಜ್ಞಾನಶಾಸ್ತ್ರ ಮತ್ತು ತತ್ವ (ವೇದಾಂತ) ಶಾಸ್ತ್ರಗಳಲ್ಲಿ ನಿರೂಪಿಸಿರುವ ಸಿದ್ಧಾಂತಗಳು ಮತ್ತು ಉಪದೇಶಗಳೊಡನೆ ಮುಖ್ಯಾಂಶಗಳಲ್ಲಿ ಹೊಂದಿಕೊಂಡಿರುವುದು ಕಾಣಬರುತ್ತದೆ. ಅಲ್ಲದೆ ಯಾವುದಾದರೂ ಅಂಶಗಳಲ್ಲಿ ಭೇದವು ಕಂಡುಬಂದರೆ ಆ ವಿಷಯಗಳಲ್ಲಿ ಪಾಶ್ಚಾತ್ಯಶಾಸ್ತ್ರಗಳ ಅಭಿಪ್ರಾಯವನ್ನೇ ಪುನರ್ವಿಮರ್ಶಿಸಿ ಪರಿಷ್ಕರಿಸಿ ತಿದ್ದಿಕೊಳ್ಳಬೇಕಾಗಿರುವುದೂ ಕಂಡುಬರುತ್ತಿದೆಯೇ ಹೊರತು ಭಾರತೀಯ ವೇದಾಂತ ದರ್ಶನದ ಅಭಿಪ್ರಾಯಗಳನ್ನು ತಿದ್ದಿಕೊಳ್ಳಬೇಕಾಗಿಬರುತ್ತಿಲ್ಲವೆಂಬ ಅಂಶವು ಗಮನಾರ್ಹವಾಗಿದೆ.

ಈ ಶಾಕ್ತೇಯ ಮತವು ಶಿವಭಾಗವತ ಮತದಲ್ಲಿ ಸೇರಿ ಒಂದೇ ಆಗಿರುವಂತಿದೆ. ವೀರಶೈವ ಮತವು ಶಿವಭಾಗವತಮತದ ಒಂದು ರೂಪಾಂತರವೆನ್ನಬಹುದು. ವೀರಶೈವರಲ್ಲಿ ಅನೇಕರು ತಮ್ಮ ಮತವನ್ನು ಶಕ್ತಿವಿಶಿಷ್ಟಾದ್ವೈತವೆಂದು ಹೆಸರಿಸುತ್ತಾರೆ. ವೈಷ್ಣವ ಮತವು ವಿಷ್ಣು ವಿಶಿಷ್ಟಾದ್ವೈತವೆಂದೂ ಶೈವಮತವು ಶಿವ ವಿಶಿಷ್ಟಾದ್ವೈತವೆಂದೂ ಅಲ್ಲಲ್ಲಿ ವ್ಯವಹಾರವನ್ನು ಪಡೆಯುತ್ತಿದೆ. ದ್ವೈತಿಗಳು (ಮಾಧ್ವವೈಷ್ಣವರು) ತಮ್ಮ ಮತವನ್ನು ಕೆಲವರು ಸ್ವತಂತ್ರಾದ್ವೈತವೆಂದೂ ಮತ್ತೆ ಕೆಲವರು ಬ್ರಹ್ಮಾದ್ವೈತವೆಂದೂ ಹೆಸರಿಸುತ್ತಿದಾರೆ. ಈ ಮತಗಳು ಅನೇಕವಾಗಿರುವುದು ಕಡೆಯತತ್ವದ ಸ್ವರೂಪ ನಿರ್ಣಯದಲ್ಲಿ ಭಿನ್ನಾಭಿಪ್ರಾಯದಿಂದ ಎಂಬುದು ಗೊತ್ತಾಗುತ್ತದೆ. ಅದು ಹೇಗಾದರೂ ಇರಲಿ. ಜನ ಸಾಮಾನ್ಯದ ದಿನಗಟ್ಟಲೆಯ ಜೀವನವು ಸುಖಕರವಾಗುವುದಕ್ಕೂ ಸುಖೋದರ್ಕವಾಗುವುದಕ್ಕೂ ನೀತಿ ಧರ್ಮ

ಗಳ ಅನುಸರಣೆಯು ಆವಶ್ಯಕ. ಆ ನೀತಿ ಧರ್ಮಗಳು ಈ ಎಲ್ಲ ಮತಗಳಲ್ಲೂ ಇವೆ. ಅವಲ್ಲಿ ಸಮಾನವಾಗಿರುವುದು ವಿಶ್ವಧರ್ಮ ವೆನಿಸುತ್ತದೆ. ಇಂತಹ ಧಾರ್ಮಿಕ ಸಂಸ್ಕೃತಿಗೆ ಪ್ರಾಮುಖ್ಯವನ್ನು ಕೊಡುತ್ತಾ ನಮ್ಮ ಜೀವನವನ್ನು ನಾವು ಸಾಗಿಸುವುದರಲ್ಲಿ ಆಸಕ್ತ ರಾಗಿದ್ದರೆ ಮತಭೇದದಿಂದ ಕೆಡುಕಾಗುವುದಿಲ್ಲ. ಈ ಧರ್ಮದ ವಿಶ್ವ ಧರ್ಮದ ಬೆಂಬಲದಿಂದ ನಡೆದರೆ ಇದುವರೆಗಿನಂತೆಯೇ ನಮ್ಮ ಧಾರ್ಮಿಕ ಸಂಸ್ಕೃತಿಯು ಬಲಗೊಂಡು ನಮ್ಮ ಜೀವನವನ್ನು ಹಸನು ಮಾಡುತ್ತಿರುತ್ತದೆ. ನಮ್ಮ ಜನಾಂಗವೂ ಸಂಸ್ಕೃತಿಯೂ ಮುಂದೆ ಯೂ ಉಳಿದು ಊರ್ಜಿತವಾಗಿರುತ್ತಾ ಇಹಪರ ಸುಖಗಳ ಸಾಧನೆಗೆ ಸಹಾಯಕವಾಗಿರುತ್ತದೆಂಬುದು ನಾವು ಜ್ಞಾಪಕದಲ್ಲಿಡಬೇಕಾದ ಮುಖ್ಯ ವಿಷಯವಾಗಿದೆ.

" ಋತಂ ಚ ಸತ್ಯಂ ಚಾ ಭೀದ್ಧಾತ್ತ ಪಸೋಽಧ್ಯಜಾಯತ ।
ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ !
ಅಹೋರಾತ್ರಾಣಿ ವಿದಧತ್ ವಿಶ್ವಸ್ಯ ಮಿಷತೋ ವಶೀ ।
ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।
ದಿವಂ ಚ ಪೃಥಿವೀಂ ಚಾಂತರಿಕ್ಷಂ . . . . "

" ಸಂವತ್ಸರೋವೈಪ್ರಜಾಪತಿಃ ತಸ್ಯಾಯನೇ ದಕ್ಷಿಣೋತ್ತರೇ (ಣಂಚೋತ್ತರಂ) ಚ " ಪ್ರಶ್ನ ಉಪನಿಷತ್. ಋತ, ಸತ್ಯ, ಎಂದರೆ (Negative and positive currents of electricity) ರಯಿಂ ಚ ಪ್ರಾಣಂಚ. ಬಹುಧಾ ಪ್ರಜಾಃ ಕರಿಷ್ಯತಃ

" ಸಂವತ್ಸರಃ । ಆದಿತ್ಯ ಪ್ರಧಾನಃ । ಸಂವಸಂತ್ಯಸ್ಮಿನ್ನಿತಿ ಪ್ರಸಕ್ತಾನು ಪ್ರಸಕ್ತಂ। ಸಮಸ್ತಾನಿ ಹಿ ಭೂತಾನಿ ಆಸ್ಮಿನ್ ಸಂವ ತ್ಸರೇ ॥ " ಯಾಸ್ಕಃ ನಿರುಕ್ತೇ.

ಅಸುಷು ರಮತೀತಿ ಅಸುರಃ ಎಂದರೆ, ಪ್ರಾಣಶಕ್ತಿ ಹೆಚ್ಚಾಗುಳ್ಳ ಬಲಿಷ್ಠ.

" ಮಹದ್ದೇವಾನಾಮ ಸುರತ್ವಮೇಕಂ ". ಈ ಶಕ್ತ್ಯತಿಶಯ ಸಂಪತ್ತಿಯೇ ದೇವತೆಗಳ ಒಂದು ದೊಡ್ಡತನ.

ಹಗಲಿನಲ್ಲಿ ಮೊಳೆಯುವುದು ಆಹಾರವನ್ನು ರೂಪಾಂತರಗೊಳಿಸುವುದು. ರಾತ್ರಿಯಲ್ಲಿ, ವಿಶ್ರಾಂತಿಯಲ್ಲಿ ಬೆಳೆಯುವುದು.

ಯಥಾಪೂರ್ವಂ ಕ್ರಮವಾಗಿ ಒಂದಾದಮೇಲೆ ಇನ್ನೊಂದರಂತೆ ಸೃಜಿಸಿದನು. ಅರ್ವಾಕ್ ಸ್ರೋತಸ್ ಎಂದರೆ, ಅರ್ವಾಙ್ಮುಖ ಅಥವಾ ಅಭಿಮುಖ, ಎಂದು ಅರ್ಥವು. ಋತ, ಸತ್ಯ, ಸಂವತ್ಸರ, ಅರ್ಣವ, ಅಸುರ, ಬ್ರಹ್ಮ ಮುಂತಾದ ಶಬ್ದಗಳು ಸಾಂಕೇತಿಕವಾದ ಅರ್ಥವನ್ನು ತಿಳಿಸುತ್ತವೆ. ಈ ಮಂತ್ರದ ಅರ್ಥವು ವಿಜ್ಞಾನ ಶಾಸ್ತ್ರಗಳ ಮಾರ್ಗದಲ್ಲಿ ಬಹುದೂರ ಸಮಂಜಸವಾಗಿ ಹೋಗುತ್ತದೆ ಎಂಬುದು ಆಶ್ಚರ್ಯಕರವಾಗಿದೆ. ಛಾಂದೋಗ್ಯೋಪನಿಷತ್ತಿನ "ಸತ್ತ್ವೇವ ಸೌಮ್ಯೇದಮಗ್ರ ಆಸೀತ್ . . . ." ವಾಕ್ಯದ ಅರ್ಥವನ್ನೇ, ತೈತ್ತಿರೀಯೋಪನಿಷತ್ತಿನಲ್ಲಿ ವಿಸ್ತರಿಸಿ ಕ್ರಮಪಡಿಸಿ ಪರಿಷ್ಕರಿಸಿ ಹೀಗೆ ಹೇಳಿದೆ. "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃ ಪೃಥಿವೀ, ಪೃಥಿವ್ಯಾ ಓಷಧಯಃ, ಓಷಧೀಭ್ಯೋ ಅನ್ನಂ ಅನ್ನಾತ್ಪುರುಷಃ" ಹಾಗೆಯೇ ವಿಷ್ಣುಪುರಾಣದಲ್ಲಿ ಹೀಗೆ ಹೇಳಿದೆ. ಇದರಲ್ಲಿ ಸಾಂಕೇತಿಕ (allegorical) ರೀತಿಯಿಂದ ವಿಷಯ ನಿರೂಪಣೆಮಾಡಿರುವಂತೆ ಇದೆ.

"ಅದಿತಿರ್ಧರ್ಮ ಶೀಲಾ ತು ಬಲಶೀಲಾ ದಿತಿ ಸ್ತಥಾ ।
ತಪಶ್ಶೀಲಾ ತು ಸುರಭಿಃ ಮಾಯಾಶೀಲಾ ದನು ಸ್ತಥಾ ॥ ಇತ್ಯಾದಿ

ಇದರಿಂದ ದೇವಾದಿಗಳು ವ್ಯಕ್ತಿಸ್ವರೂಪರಲ್ಲವೆಂದೂ, ಗುಣಸ್ವರೂಪರೆಂದೂ, ಬಗೆಬಗೆಯ ಮನುಷ್ಯ ಪ್ರಕೃತಿಗಳಿಗೆ ಈ ಹೆಸರುಗಳು ಸಲ್ಲುವುವೆಂದೂ ತಿಳಿವಾಗುತ್ತದೆ. ಆ ಪುರಾಣದಲ್ಲಿಯೇ

"ಆಪೋನಾರಾಇತಿ ಪ್ರೋಕ್ತಾ ಆಪೋವೈನರಸೂನವಃ ।" ಇತ್ಯಾದಿ
"ನಿಮಿತ್ತಮಾತ್ರಮೇವಾ ಸೌ ಸೃಜ್ಯಾನಾಂ ಸರ್ಗಕರ್ಮಣಾಂ ॥"
ವಿಷ್ಣು ಪುರಾಣ
ಪ್ರಧಾನ ಕಾರಣೀಭೂತಾಃ ಯತೋ ವೈ ಸೃಜ್ಯಶಕ್ತಯಃ॥ "
೧.೪. ೫೦-೫೧

ವಿಜ್ಞಾನ ಶಾಸ್ತ್ರಗಳ ಪ್ರಕಾರ ಜೀವವು ಮೊಟ್ಟಮೊದಲು ನೀರಿನಲ್ಲಿ ವ್ಯಕ್ತವಾಯಿತು. ಬ್ರಹ್ಮವು "ಸೋऽಕಾಮ ಯತ ಬಹುಸ್ಯಾಂಪ್ರಜಾಯೇಯ". ಎಂಬಲ್ಲಿ ಕಾಣುವ ಕಾಮ ಅಥವಾ ಇಚ್ಛಾ ಶಕ್ತಿಯುಳ್ಳದ್ದಾಗಿರುವ ತತ್ವವು. ಪ್ರಜಾಪತಿಗಳು ಮಾನಸಪುತ್ರರು ಎಂದರೆ, ಮನಶ್ಶಕ್ತಿಗಳು, ಮಾನಸಸೃಷ್ಟಿ ಅಥವಾ ಮುಖ್ಯ ಸೃಷ್ಟಿ, ಮೈಥುನ ಸೃಷ್ಟಿ ಅಥವಾ ಅನುಸೃಷ್ಟಿ. ಈ ವಿಷಯಗಳನ್ನು ವಿಷ್ಣು ಪುರಾಣದಲ್ಲೂ, ಪದ್ಮಪುರಾಣದಲ್ಲೂ, ಬ್ರಹ್ಮಾಂಡ ಪುರಾಣದಲ್ಲೂ, ರಾಮಾಯಣ ಮಹಾಭಾರತಗಳಲ್ಲೂ ಸ್ವಲ್ಪ ಹೆಚ್ಚುಕಡಿಮೆಯಾಗಿ ಹೇಳಿದೆ. ವಿವರಗಳಲ್ಲಿ ಸ್ವಲ್ಪ ಭೇದಗಳು ಕಂಡುಬಂದರೂ, ಒಟ್ಟಿನಲ್ಲಿ ಒಂದು ಬುಡಕಟ್ಟಿನಿಂದ ಎಲ್ಲವೂ ಎಲ್ಲರೂ ಉಂಟಾದ ಕ್ರಮವನ್ನು ನಿರೂಪಿಸಿರುವ ಸಂಗತಿಯು ಮುಖ್ಯವಾದುದು.

ಜೀವ ಪ್ರಗತಿಯ ಮೆಟ್ಟಲುಗಳು.

ಜೀವಜಾತಿಯ ಪ್ರಗತಿಯು ಹೇಗೆ ಆಗಿದೆ ಎಂಬ ದೃಷ್ಟಿಯಿಂದ ನಾಲ್ಕು ಬಗೆಯನ್ನು ಮನಗಾಣಬಹುದು. "ತಸ್ಯಯ ಆತ್ಮಾನಮಾವಿಸ್ತರಾಂವೇದ . . . ." ಪುಟ ೭೭ ನೋಡಿ. ೧. ಸಾಮಾನ್ಯವಾಗಿ ಬೆಳವಳಿಗೆಯನ್ನು ತೋರಿಸದಿರುವ ಮೃತ್ಪಾಷಾಣ ವರ್ಗ ; ೨. ಸ್ಥಾವರ ಪ್ರಾಣಿಯಾದ ಸಸ್ಯವರ್ಗ ; ೩. ಚಲನ, ಹಿತಾಹಿತಪ್ರಾಪ್ತಿ ಪರಿಹಾರಕ್ಕಾಗಿ ಸಂಚರಿಸಬಲ್ಲ ಪಶುಪಕ್ಷಿ ವರ್ಗ; ೪. ಮಾತಾಡಬಲ್ಲ ವಿವೇಕಿಯಾದರೂ ಅರ್ಥ ಕಾಮಪರವಾಗಿರುವ ಮಾನವ ವರ್ಗ; ೫. ಬ್ರಹ್ಮಮುಖವಾಗಿ ಮುಂದುವರಿಯುವ, ವಿಮರ್ಶ, ವಿವೇಚನೆಗಳಿಂದ ಪುರುಷಾರ್ಥಗಳನ್ನು ಸಾಧಿಸುವ ಶ್ರೇಯಸ್ಸನ್ನು ಬಯಸುವ ಮಾನವ ವರ್ಗವೆಂದು ವಿಂಗಡಿಸಬಹುದು. ಈ ವರ್ಗಗಳಲ್ಲಿ ಕ್ರಮವಾಗಿ ಪ್ರಗತಿಯೂ ಕಾಣಬರುತ್ತದೆ. ಈ ಬಗೆಯ ವಿಮರ್ಶ ಕ್ರಮದಿಂದ ವಿಜ್ಞಾನ ಶಾಸ್ತ್ರಗಳಿಗೂ ತುಂಬ ಒಪ್ಪಿಗೆಯಾಗುವ ಹಲವು ವಿಷಯಗಳೂ ನಿಯಮಗಳೂ ಕಂಡುಬರುತ್ತವೆ. ೧. ದೇವಾದಿಗಳು ವ್ಯಕ್ತಿವಿಶೇಷ ಸ್ವರೂಪರಲ್ಲವೆಂತಲೂ ಮನುಷ್ಯರಲ್ಲೂ ಹೊರ ಹೊಮ್ಮುವ

ಗುಣಶಕ್ತಿ ವಿಶೇಷ ಸ್ವರೂಪರೆಂದೂ ಊಹಿಸಲು ಅವಕಾಶವಿದೆ. ೨. ಸೃಷ್ಟಿಕರ್ತನ ಪ್ರಾಮುಖ್ಯವನ್ನು ಹೆಚ್ಚುಮಾಡದೆ ಎಲ್ಲ ವಸ್ತುಗಳೂ ಪ್ರಾಣಿಗಳೂ ತಮ್ಮೊಳಗೆ ಅಡಗಿರುವ, ಕ್ರಮವಾಗಿ ಅನುಕೂಲವಾದಾಗ ಹೊರಹೊಮ್ಮುವ ಸೃಷ್ಟಿಶಕ್ತಿಯ ಪ್ರಭಾವದಿಂದಲೇ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳೂ ನೆರವೇರುತ್ತಾ ಜೀವರ ಪ್ರಗತಿಯೂ ಮುಂದುವರಿಯುತ್ತಿರುತ್ತದೆ. ೩. ಇದನ್ನೇ ಸೃಷ್ಟ್ಯಾತ್ಮಕ ಪರಿವರ್ತನ (Creative Evolution) ಶಕ್ತಿ ಎಂದು ಹೇಳಬಹುದು.

ಸ್ವತಂತ್ರ ವಿಮರ್ಶೆಯ ಮೆಟ್ಟಲುಗಳು.

೪. ಸರ್ವಜ್ಞನೂ ಸರ್ವಶಕ್ತನೂ ಆಗಿರುವ ದೇವನು ಈ ಎಲ್ಲ ಚರಾಚರ ಚೇತನ ಜಡಪ್ರಪಂಚವನ್ನು ಈಗಿರುವಂತೆ ಸೃಜಿಸಿದನೆಂದು ನಂಬುವುದರ ಬದಲಾಗಿ, ಸೃಷ್ಟಿಯು ಕ್ರಮವಾಗಿ ಮೆಟ್ಟಲು ಮೆಟ್ಟಲಾಗಿ, ಹಿಂದಿನ ಅನುಭವದಿಂದ ಮುಂದು ಮುಂದಕ್ಕೆ ಹೆಚ್ಚು ಹೆಚ್ಚು ತೃಪ್ತಿಕರವಾದ ಪದಾರ್ಥಗಳ ಶರೀರಗಳ ಸೃಷ್ಟಿಯು ಮುಂದುವರಿಯುತ್ತಿದೆ ಎಂಬ ತಿಳಿವಳಿಕೆಯು ಹೆಚ್ಚು ಸಂಗತವಾಗಿರುವುದೆಂಬುದು ಗೊತ್ತಾಗುತ್ತದೆ.

೫. ದೇವರು ಮನುಷ್ಯನನ್ನು ಸೃಜಿಸಿ, ಅವನ ಸೌಕರ್ಯಕ್ಕಾಗಿ ಈ ಪ್ರಪಂಚದ ಸೃಷ್ಟಿಯನ್ನು ನೆರವೇರಿಸಿರುವನೆಂಬ ನಂಬಿಕೆಯ ಬದಲಾಗಿ, ಸೃಷ್ಟಿ ಕ್ರಮದಲ್ಲಿ ಕಡೆಗೆ ಮಾನವ ಜನ್ಮವು ಪ್ರಗತಿ ನಿಯಮಗಳಿಗೆ ಅನುಸಾರವಾಗಿ ಉಂಟಾಗಿದೆ ಎಂಬ ತಿಳಿವಳಿಕೆಯು ಉಂಟಾಗುವುದು ಯುಕ್ತತರವಾಗಿರುತ್ತದೆ.

೬. ಸೃಷ್ಟಿಯಲ್ಲಿ ಮೈಥುನ ಪದ್ಧತಿಯಿಂದ ಪ್ರಜಾವೃದ್ಧಿ ಕಾರ್ಯವು ನೆರವೇರುವಂತೆ ಮಾನಸಸೃಷ್ಟಿಯಿಂದಲೂ, ಸಂಕಲ್ಪ, ಕ್ರತುಶಕ್ತಿಯಿಂದಲೂ ಸೃಷ್ಟಿಕಾರ್ಯವು ಮುಂದುವರಿಯಬಹುದೆಂಬುದೂ ಗೊತ್ತಾಗುತ್ತದೆ.

೭. ಈ ಪ್ರಗತಿಮಾರ್ಗದಲ್ಲಿ ಶ್ರೇಷ್ಠಸ್ಥಾನವನ್ನು ಗಳಿಸಿರುವ ಮಾನವನು ಈಗಿರುವ ಮತ್ತು ಪಡೆಯಬೇಕಾದ ಉತ್ತಮ

ಪುರುಷಾರ್ಥಕ್ಕಿಂತಲೂ ಮಿಗಿಲಾದುದನ್ನು ಕಾಣಬಹುದು ಎಂಬುದು ಅಸಂಭವವಲ್ಲ. ಪ್ರಗತಿ ಕ್ರಮವು ಮಾನವನಲ್ಲಿ ಕೊನೆಗೊಂಡಿತು. ಎಂದು ನಿರ್ಬಂಧದಿಂದ ಒಪ್ಪಬೇಕಾಗಿಲ್ಲ ವಿಚಾರಕ್ಕೆ ವಿಮರ್ಶೆಗೆ ಸ್ವಾತಂತ್ರ್ಯ ಉಂಟು.

೮. ಕಡೆಯದಾಗಿ ಹೇಗಾದರೂ ಪ್ರಗತಿಶೀಲನಾದ ಚೇತನನು ಸ್ವಪ್ರಯತ್ನದಿಂದ ಪರಿಪೂರ್ಣತೆಯನ್ನು ಪಡೆಯುತ್ತಾನೆ. ಅದಕ್ಕೂ "ಉದ್ಧರೇದಾತ್ಮನಾತ್ಮಾನಂ" ಎಂಬಂತೆ ಮಾನವನು ತೆರೆದ ಮನಸ್ಸಿನಿಂದ ಆತ್ಮಪ್ರತ್ಯಯದಿಂದ ಸಿದ್ಧನಾಗಿರಬೇಕು.

ಧಾರ್ಮಿಕ ಸಂಸ್ಕೃತಿ, ಮತಗಳು, ವಿಜ್ಞಾನ

ಒಟ್ಟಿನಲ್ಲಿ ಹೀಗೆ ಸಹಾನುಭೂತಿಯುಳ್ಳ ತೆರೆದ ಮನಸ್ಸಿನಿಂದ ವಿಮರ್ಶೆಯನ್ನು ಮುಂದುವರೆಸುವುದರಿಂದ ನಮ್ಮ ಧಾರ್ಮಿಕ ಸಂಸ್ಕೃತಿಗೆ ಸಹಾಯವಾಗುತ್ತದೆಯೇ ಹೊರತು ಹಾನಿಯಾಗುವುದಿಲ್ಲ. ವೈಜ್ಞಾನಿಕರ ವಾದಗಳೂ ಸಿದ್ಧಾಂತಗಳೂ ನಮ್ಮ ವೇದೋಪನಿಷತ್ತುಗಳ ಪುರಾಣೇತಿಹಾಸ ಕಾವ್ಯಗಳ ಅಭಿಪ್ರಾಯಗಳೂ ಪರಸ್ಪರವಾಗಿ ವಿರುದ್ಧವಲ್ಲವೆಂದೂ, ಸಮನ್ವಯವು ದೊರೆಯುತ್ತದೆಂದೂ ಮನಗಾಣಲು ಅವಕಾಶವಾಗುತ್ತದೆ. ವಿಶ್ವಧರ್ಮದ ತಿಳಿವಳಿಕೆ, ನಡೆವಳಿಕೆ ಮತ್ತು ಚಟುವಟಿಕೆಗಳಿಂದ ಎಲ್ಲರಿಗೂ ಕಲ್ಯಾಣವಾಗುತ್ತದೆ. ಅಲ್ಲದೆ ನಮ್ಮ ಭವಿಷ್ಯವೂ ಉತ್ತಮವಾಗುವುದರಲ್ಲಿ ಸಂದೇಹವಿಲ್ಲವು. ಇತರ ಮತಗಳಲ್ಲೂ ಒಳ್ಳೆಯ ವಿಷಯಗಳಿವೆ. ಅವನ್ನೂ ನಾವು ಪರಿಶೀಲಿಸುವುದರಿಂದ ನಮ್ಮಲ್ಲಿ ಸಹಾನುಭೂತಿ ಗುಣವು ಫಲಕಾರಿಯಾಗುವಂತೆ ಬಲಗೊಳ್ಳುತ್ತದೆ. ಉದಾಹರಣೆಗೆ–

"God made man after his own image" ಎಂದು ಬೈಬಲ್ಲಿನಲ್ಲಿ ಹೇಳಿದೆ. ದೇವನಿಗೂ ಮಾನವನಿಗೂ ಯಾವ

ಧಾರ್ಮಿಕ ಸಂಸ್ಕೃತಿಯು ಪ್ರಗತಿ ಸಹಕಾರಿ.

ರೂಪ ವಿಶೇಷದಲ್ಲಿ ಸಾಮ್ಯವಿದೆ ? ಎಂದು ಪರಿಶೀಲಿಸಿದರೆ ಸಚ್ಚಿದಾನಂದಾಂಶದಲ್ಲಿ ಎಂದು ನಮ್ಮ ಸಾಹಿತ್ಯವು ತಿಳಿಸುತ್ತದೆ. ಆದರೆ

ಈ ಅಂಶವನ್ನು ಕ್ರಿಶ್ಚಿಯನ್ನರೂ ಆಲೋಚಿಸುವ ಹಾಗೆ ಮಾಡಲು ನಾವು ಪ್ರಚಾರಕಾರ್ಯವನ್ನು ಮಾಡಬೇಕು. ಹಾಗೆಯೇ ಮುಸಲ್ಮಾನರ ಖುರಾನಿನಲ್ಲಿ "ಅದಂಕೂಖುದಾ ಮತ್‌ಕಹೋ, ಆದಂ ಖುದಾ ನಹಿ, ಲೇಕಿನ್ ಖುದಾಕೆ ನೂರ್ಸೆ ಆದಂ ಜುದಾ ನಹಿ" ಎಂಬ ಅಭಿಪ್ರಾಯುವನ್ನು ಸೂಚಿಸಿರುತ್ತದೆ. "ಮಾನವನನ್ನು ದೇವನೆನ್ನಬೇಡ. ಏಕೆಂದರೆ ಮನುಷ್ಯನು ದೇವನಲ್ಲ. (ಈ ಅಂಶವನ್ನು ವೈಷ್ಣವರೂ ಹೇಳುತ್ತಾರೆ. ಶ್ರೀವೈಷ್ಣವರೂ ಸ್ವಲ್ಪಮಟ್ಟಿಗೆ ಒಪ್ಪುತ್ತಾರೆ) ಆದರೆ ಮಾನವನು ದೇವರ ಬೆಳಕಿಗಿಂತ ಬೇರೆ ಅಲ್ಲ" ಎಂದರೆ ದೇವರ ಬೆಳಕೆನ್ನುವುದು ಯಾವುದು ? ಎಂಥದು ? ಎಂದು ವಿಮರ್ಶಿಸಿದರೆ ಜ್ಞಾನವೆಂಬ ಬೆಳಕು ಎಂದು ಗೊತ್ತಾಗುತ್ತದೆ. ಇದರಿಂದ ದೇವರೂ ಜೀವರೂ ಜ್ಞಾನಸ್ವರೂಪದಲ್ಲಿ ಅಭಿನ್ನರೆಂದು ಗೊತ್ತಾಗುತ್ತದಲ್ಲವೆ ? ಹೀಗೆಯೇ ನೀತಿಧರ್ಮಗಳ ವಿಷಯದಲ್ಲೂ ಸಾಮ್ಯವಿರುತ್ತದೆ. "ತುಜೆ ಯಾದ್ ಹೈ, ತೇರಪೈದಾ ಯಿಷ್ಕೆ ವಖತ್ ಸಬ್ ಹಸ್ತೇಥೇ ತು ರೋತಾಥ, ಐಸಿ ಜಿಂದಗಿ ಬಸರ್‌ಕರ್‌ಕಿ ತೇರೆ ಮರ್‌ನೆ ವಖತ್, ಸಬ್ ರೋವೇ ಔರ್ ತುಹಸೆ" ಎಂದರೆ "ಮಾನವನೇ, ನಿನಗೆ ಜ್ಞಾಪಕವಿದೆಯೇ ? ನೀನು ಹುಟ್ಟಿದಾಗ ನಂಟರಿಷ್ಟರೆಲ್ಲರೂ ಸಂತೋಷಪಟ್ಟರು. ನೀನು ಮಾತ್ರ ಅಳುತ್ತಿದ್ದೆ. ಆದುದರಿಂದ ನಿನ್ನ ಜೀವನ ಕ್ರಮವನ್ನು ಹಾಗೆ ರೂಪಿಸಿಕೋ, ಹೇಗೆಂದರೆ ನಿನ್ನ ಮರಣದಲ್ಲಿ ಅವರೆಲ್ಲರೂ ದುಃಖಿಸುವಂತೆಯೂ, ನೀನು ಮಾತ್ರ ಸುಖಿಸುವಂತೆಯೂ ಆಗಬೇಕು."

In the beginning there was the word, and the word was with God." ಎಂದರೆ, ಸೃಷ್ಟಿಯ ಪ್ರಾರಂಭದಲ್ಲಿ ಶಬ್ದವು ಇತ್ತು. ಮತ್ತು ಆ ಶಬ್ದವು ದೇವರಲ್ಲಿತ್ತು. "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ . . . ."

Think not that ye not be judged.
Do unto others as you would be done by.
" ಆತ್ಮನೋ ಯ ದ್ಯದಿಷ್ಟಂ ಸ್ಯಾತ್ ಪರೇಷಾಂ ತತ್ತದಾಚರೇತ್ |
ಆತ್ಮನಃ ಪ್ರತಿಕೂಲಾನಿ ಪರೇಷಾಂ ತಾನಿ ನಾ ಚರೇತ್ ||"
' ಆತ್ಮವತ್ಸರ್ವಭೂತಾನಿ ಯಃ ಪಶ್ಯತಿ ಸ ಪಶ್ಯತಿ ||"
" ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರ ಪೂಜನಂ ||"
೩೬೨, ೩೬೭ನೆಯ ಪುಟ ನೋಡಿ.

ಬೈಬಲ್, ಖುರಾನ್ ಗಳಲ್ಲಿಯೂ ಕೆಲವು ತತ್ವಗಳು.

ಇಂತಹ ಕೆಲವು ಉದಾತ್ತ ಭಾವಗಳು ಬೈಬಲಿನಲ್ಲೂ ಖುರಾನಿನಲ್ಲೂ ಇದ್ದರೂ ಆ ಮತಾನುಯಾಯಿಗಳು ಇವನ್ನು ವಿಚಾರದಿಂದ ಮುಂದುವರಿಸಿರುವುದು ಕಾಣಬರುತ್ತಿಲ್ಲ. ಇದಕ್ಕೆ ಅವರ ಸಂಸ್ಕೃತಿಯ ಮಟ್ಟಗಳೇ ಕಾರಣಗಳಾಗಿವೆ. ಮತಪರಿವರ್ತನೆಯಲ್ಲಿ ಅನುಚಿತವಾದ ರೀತಿಯಿಂದಲೂ ಮುನ್ನುಗ್ಗುತ್ತಿರುವುದನ್ನು ನೋಡಿದರೆ, ತಮ್ಮ ಮತವೇ ಶ್ರೇಷ್ಠವೆಂದು ಹಟದಿಂದ ನಂಬುವುದನ್ನು ನೋಡಿದರೆ, ಅವರ ಸಂಸ್ಕೃತಿಯ ಅಂತಸ್ತು ತಿಳಿದು ಬರುತ್ತದೆ. ಈ ಅಂಶವು ಶೈವ, ವೈಷ್ಣವ ಮತಾನುಯಾಯಿಗಳಿಗೂ ಅನ್ವಯಿಸುತ್ತದೆಂಬುದನ್ನೂ ಮರೆಯುವಹಾಗಿಲ್ಲವು. ಪುಟ ೨೪೯ ನೋಡಿ.

ಇಂತಹ ಒಳ್ಳೆಯ ವಿಷಯಗಳನ್ನು ಇತರ ಮತಗಳಲ್ಲಿಯೂ ಇರುವವುಗಳನ್ನೂ ನಾವು ಪರಿಶೀಲಿಸುವುದರಿಂದ ನಮ್ಮಲ್ಲಿ ವಿಶ್ವಧರ್ಮದ ಅರಿವು ಆಚರಣೆ ಪ್ರಚಾರಣೆಗಳಿಗೆ ತುಂಬ ಸಹಾಯವಾಗುತ್ತದೆ. ಅಲ್ಲದೆ, ಈ ಜಗತ್ತಿನ ಭವಿಷ್ಯ ಕಲ್ಯಾಣಸಾಧನೆಯು ಶಾಂತಿ ಸುಖಗಳು ದೇಶದಲ್ಲಿ ನೆಲೆಸುವುದಕ್ಕೆ ಅನುಕೂಲ್ಯವು ಉಂಟಾಗುತ್ತದೆ. ಬುದ್ಧನನ್ನು ದೇವರ ಹತ್ತು ಅವತಾರಗಳಲ್ಲಿ ಒಂದೆಂದು ಒಪ್ಪಿ ಗೌರವಿಸಿದ ನಮ್ಮ ಪೂರ್ವಿಕರ ಉದಾತ್ತ ಮನೋಭಾವವು ವಿಶ್ವಧರ್ಮದ ಅರಿವು ಆಚರಣೆಗಳಿಗೆ ಉದ್ಗಮಸ್ಥಾನವಾಗಿ ಮೆರೆದಿದೆ. ಆ ಧಾರ್ಮಿಕ ಸಂಸ್ಕೃತಿಯ ವಾತಾವರಣದಲ್ಲಿ ಹುಟ್ಟಿ ಬೆಳೆದಿರುವ

ನಾವೂ ಜೀಸಸ್ ಕ್ರೈಸ್ತನನ್ನೂ ಮಹಮದ್ ಪೈಗಂಬರನನ್ನೂ ದೇವರ ಅವತಾರವೆಂದು ಒಪ್ಪಿ ಗೌರವಿಸುವುದು ನ್ಯಾಯವೂ, ಸ್ವಾಭಾವಿಕವೂ, ಶುಭೋದರ್ಕವೂ ಆಗಿದೆ ಎಂದರೆ ತಪ್ಪಾಗಲಾರದು.

ವಿಶ್ವಧರ್ಮದ ಸ್ವರೂಪವನ್ನು ಈಗಿನ ಕಾಲಕ್ಕೆ ತಕ್ಕಂತೆ ಹೀಗೆ ಹೇಳಬಹುದು.

ಸ್ನಾನಂ, ಸಂಧ್ಯಾಜಪಃ, ಪೂಜಾ, ಸ್ವಾಧ್ಯಾಯಃ ಅತಿಥಿಸತ್ಕೃತಿಃ ।
ಪರೋಪಕರಣಂ, ದಾನಂ, ಧರ್ಮಃ ಸರ್ವಾರ್ಥ ಸಿದ್ಧಿದಃ ॥

ಪ್ರತಿನಿತ್ಯದಲ್ಲೂ ಶುದ್ಧವಾದ ನೀರಿನಲ್ಲಿ ಸ್ನಾನವನ್ನು ಮಾಡುವುದು, ಪ್ರಾತಸ್ಸಾಯಂ ಸಂಧ್ಯಾಕಾಲಗಳಲ್ಲಿ ಗಾಯತ್ರೀ ಜಪವನ್ನು ಮಾಡುವುದು, ಒಳ್ಳೆಯ ತಿಳಿವಳಿಕೆಯನ್ನು ಕೊಡುವ ಗ್ರಂಥಗಳನ್ನು ಓದುವುದು ಮತ್ತು ತಿಳಿವಳಿಕೆಯನ್ನು ಹರಡುವುದು, ಮನೆಗೆ ಬರಬಹುದಾದ ಅತಿಥಿ ಅಭ್ಯಾಗತರನ್ನು ಸತ್ಕರಿಸುವುದು, ಇತರರಿಗೆ ನಮ್ಮ ಕೈಲಾದಷ್ಟು ಸಹಾಯವನ್ನು ಮಾಡುವುದು, ಸಾಧ್ಯವಾದಷ್ಟು ಬಡಬಗ್ಗರಿಗೆ ದಾನವನ್ನು ಮಾಡುವುದು, ಇದೇ ವಿಶ್ವಧರ್ಮವು. ಇದನ್ನು ಎಲ್ಲರೂ ಪ್ರತಿದಿನವೂ ಆಚರಿಸಬಹುದು. ಆಚರಿಸಬೇಕು. ಇದರಿಂದ ದೇಶದಲ್ಲಿ ಶಾಂತಿಯೂ ಜನರಿಗೆ ಸುಖವೂ ತಪ್ಪದೆ ದೊರೆಯುತ್ತದೆ.

ವಿಶ್ವಧರ್ಮದ ಸ್ವರೂಪ ವಿವರಗಳು.

ಈಚೆಗೆ ಸುಮಾರು ನೂರಾರು ವರ್ಷಗಳಿಂದ ಅನೇಕ ಸಂಸ್ಥೆಗಳು ಅವಿರ್ಭವಿಸುತ್ತಿವೆ. ಶ್ರೀ ರಾಮಕೃಷ್ಣ ಸಮಾಜ, ಥಿಯಾಸಫಿ ದಿವ್ಯಜ್ಞಾನ ಸಮಾಜ, ಬ್ರಹ್ಮಸಮಾಜ, ಆರ್ಯಸಮಾಜ, Indian National Congress, Servants of India Society, ಅಖಿಲ ಭಾರತ ಹಿಂದೂ ಮಹಾಸಭೆ, ರಾಷ್ಟ್ರೀಯ ಸ್ವಯಂ ಸೇವಕ ಸಮಾಜ, ಭೂದಾನಯಜ್ಞ, Scout movement, ಶ್ರಮದಾನಯಜ್ಞ ಮುಂತಾದವು ನಾನಾ ಬಗೆಗಳಲ್ಲಿ

ಆಧ್ಯಾತ್ಮಿಕ, ರಾಜಕೀಯ, ಸಾಮಾಜಿಕ ಕಾರ್ಯಕ್ಷೇತ್ರಗಳಲ್ಲಿ ಉತ್ತಮ ವಾದ ಸೇವೆಯನ್ನು ದೇಶಕ್ಕೂ ಜನರಿಗೂ ಸಲ್ಲಿಸುತ್ತಿವೆ. ಇವುಗಳ ಲ್ಲಿಯೂ ವಿಶ್ವಧರ್ಮದ ಅರಿವು ಆಚರಣೆಗಳನ್ನು ನಾವು ಮನಗಾಣ ಬಹುದು. ಇವೆಲ್ಲವೂ ವರ್ಣಧರ್ಮವನ್ನೂ ಜಾತಿಪದ್ಧತಿಯನ್ನೂ ತಿರಸ್ಕರಿಸಿ ಜನಪ್ರಿಯವಾಗಿ ಜನಸೇವಾ ಕಾರ್ಯವನ್ನು ಮುಂದುವರೆ ಯಿಸುತ್ತಿವೆ. ವಿಶ್ವಧರ್ಮಕ್ಕೆ ವಿರೋಧಿಗಳಾದ ಜಸ್ಟಿಸ್ ಸಮಾಜ, ಕಷಗಂ ಸಮಾಜಗಳನ್ನೂ ನಾವು ನೋಡುತ್ತಿದ್ದೇವೆ. ಇವೆಲ್ಲದರ ಪರಿಣಾಮವಾಗಿ ಕಡೆಗೆ ವಿಶ್ವಧರ್ಮದ ಅರಿವು ಆಚರಣೆಗಳು ಪುನರು ಜ್ಜೀವನಗೊಂಡು ಕಡೆಯಲ್ಲಿ ಜನರ ಶ್ರೇಯಸ್ಸಾಧನೆಗೆ ನೆರವಾಗ ಬಹುದೆಂದು ನಿರೀಕ್ಷಿಸಬಹುದಾಗಿದೆ. ಇವು ಚಾತುರ್ವರ್ಣ್ಯ ಕ್ರಮವು ದುಷ್ಟವೆಂದು ಹೇಳಿಬಿಟ್ಟಿವೆ. ಆದರೂ ವಿಶ್ವಧರ್ಮದಲ್ಲಿ ಆದರವುಳ್ಳ ವಾಗಿವೆ. ಚತುರಾಶ್ರಮ ಧರ್ಮಗಳನ್ನು ಮಹಾತ್ಮನಾದ ಕಾಳಿ ದಾಸ ಮಹಾಕವಿಯೂ ಬೋಧಿಸಿರುವಂತೆ,

> ಶೈಶವೇಽಭ್ಯಸ್ತ ವಿದ್ಯಾನಾಂ ಯೌವನೇ ವಿಷಯೈಷಿಣಾಂ ।
> ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ॥
>
> ತ್ಯಾಗಾಯ ಸಂಭೃತಾರ್ಥಾನಾಂ ಸತ್ಯಾಯ ಮಿತಭಾಷಿಣಾಂ।
> ಯಶಸೇ (ಧರ್ಮಾಯ) ವಿಜಿಗೀಷೂಣಾಂ ಪ್ರಜಾಯೈ ಗೃಹಮೇಧಿನಾಂ॥

ಎಂಬಂತೆ ಜನರ ಜೀವನ ಕ್ರಮದ ಈ ಆದರ್ಶವು ಜನಪ್ರಿಯವಾಗಿ ಸರ್ವಜನರಲ್ಲೂ ಆಚರಣೆಗೆ ಬಂದು ಕಲ್ಯಾಣ ಸುಖದಲ್ಲಿ ಪರಿಣಾಮ ವನ್ನು ಪಡೆಯಲಿ.

ವಿಶ್ವಧರ್ಮದ ಆಚರಣೆ ಯಿಂದಲೇ ಮುಂದಿನ ಕಲ್ಯಾಣ ಸಾಧನೆ ಸಾಧ್ಯ.

ಇದುವರೆಗಿನ ವಿಮರ್ಶೆಯಿಂದ ಮಾನವನು ಸುಖಪ್ರಾಪ್ತಿ ಗಾಗಿಯೂ ದುಃಖ ನಿವೃತ್ತಿಗಾಗಿಯೂ ದುಡಿ ಯುತ್ತಿದ್ದಾನೆಂಬುದು ಗೊತ್ತಾಗುತ್ತದೆ. ಆದುದರಿಂದ ಇವೆರಡೇ ಮಾನವ ಜನ್ಮದಲ್ಲಿ ಸಾಧಿಸಬೇಕಾದ ಫಲವೆಂದು ಒಪ್ಪಿದ ಹಾಗಾ ಯಿತು. ಒಂದು ಮನೆಯಲ್ಲಿ ಒಬ್ಬರು

ಖಾಯಿಲೆಯಿಂದ ನರಳುತ್ತಿದ್ದರೆ ಆ ಮನೆಯಲ್ಲಿ ಯಾರಿಗೂ ಸುಖ ವಾಗದು. ಒಂದು ಗ್ರಾಮದಲ್ಲಿ ಒಂದು ಮನೆಯವರು ದುಃಖಿತ ರಾಗಿದ್ದರೆ ಆ ಗ್ರಾಮಕ್ಕೆ ಪೂರ್ಣ ಸುಖವಿರುವುದಿಲ್ಲ. ಹಾಗೆಯೇ ಒಂದು ದೇಶದಲ್ಲಿ ಒಂದು ಊರು ಕಷ್ಟದಲ್ಲಿದ್ದರೆ ಆ ದೇಶದಲ್ಲಿ ಸಮಗ್ರ ವಾದ ಸುಖ ಶಾಂತಿಗಳಿರುವುದಿಲ್ಲ. ಅದರಂತೆಯೇ ಒಂದು ದೇಶ ಹಿಂದುಳಿದು ಕ್ಲೇಶಪಡುತ್ತಿದ್ದರೆ ಇಡೀ ಜಗತ್ತಿಗೂ ನಿಜವಾದ ಸುಖ ವಾಗದೆ ಇರುತ್ತದೆ. ಆದುದರಿಂದಲೇ ನಮ್ಮ ದುಃಖ ನಿವೃತ್ತಿಗೆ ನಾವು ಪ್ರಯತ್ನಿಸುವ ಹಾಗೆ ಇತರರ ದುಃಖ ನಿವೃತ್ತಿಗೂ ಮತ್ತು ಸುಖಪ್ರಾಪ್ತಿಗೂ ಪ್ರಯತ್ನಶೀಲರಾಗಿರಬೇಕು. "All for one and one for all" ಎಂಬ ಗಾದೆಯಂತಹ ವಿಶ್ವಧರ್ಮದ ಮಾತು ಎಲ್ಲರ ಆದರಕ್ಕೆ ಪಾತ್ರವಾಗಲು ಅರ್ಹವಾಗಿರುತ್ತದೆ. ದುಃಖವು ಆತ್ಯಂತಿಕವಾಗಿ ನಿರ್ಮೂಲವಾಗಿ, ತಿರುಗಿ ಬರದಹಾಗೆ ನಾಶವಾಗಬೇಕು; ಮತ್ತು ಎಲ್ಲಕ್ಕಿಂತಲೂ ಮಿಗಿಲಾದ ಸುಖದ ಪ್ರಾಪ್ತಿಯೇ ವಿವೇಕಿಗಳ ಗುರಿಯಾಗಿರಬೇಕಾಗುತ್ತದೆ. ಇಂತಹ ಗುರಿಯನ್ನು ಧರ್ಮದಿಂದಲೇ ಸಾಧಿಸಲು ಸಾಧ್ಯವಾಗುತ್ತದೆ. ಆದುದರಿಂದ ಪ್ರತಿಯೊಬ್ಬರೂ ತಮ್ಮ ಸ್ವಾತಂತ್ರ್ಯವನ್ನು ಸ್ವಲ್ಪಮಟ್ಟಿಗೆ ಮೊಟಕುಮಾಡಿಕೊಂಡು, ತಮ್ಮ ಸುಖವನ್ನು ಕೊಂಚಮಟ್ಟಿಗೆ ಬಿಟ್ಟು, ದುಡಿದಹೊರತು ಇತರರ ಇಷ್ಟಪ್ರಾಪ್ತಿ ಅನಿಷ್ಟ ಪರಿಹಾರಗಳನ್ನು ಸಾಧಿಸಲಾಗುವುದಿಲ್ಲ. ಧರ್ಮದ ತಿಳಿವಳಿಕೆ, ಧಾರ್ಮಿಕ ನಡೆವಳಿಕೆ, ಧರ್ಮಾರ್ಥವಾದ ಚಟುವಟಿಕೆಗಳು, ವೈಯಕ್ತಿಕವಾದ ಮತ್ತು ಸಾಮಾಜಿಕವಾದ ಹಿತಪ್ರಾಪ್ತಿಗೂ ಅಹಿತನಿವಾರಣೆಗೂ ಮುಖ್ಯವಾದ, ಖಚಿತವಾದ ಸಾಧನಗಳಾಗಿವೆ. ಒಳ್ಳೆಯ ಮನುಷ್ಯನು ಈ ಅಂಶವನ್ನು ಅನುಭವ, ವಿಚಾರ, ವಿಮರ್ಶೆಯಿಂದ ಮನಗಾಣುತ್ತಾನೆ. ಅಂಥ ವನು ತನ್ನ ಸ್ವಾತಂತ್ರ್ಯವನ್ನೂ ಸುಖವನ್ನೂ ಮುಖ್ಯವಾಗಿ ಎಣಿಸದೆ ಇತರರ ಹಿತಾಹಿತ ಪ್ರಾಪ್ತಿ ಪರಿಹಾರಗಳಿಗಾಗಿ ದುಡಿಯಲು ಹಿಂಜರಿ ಯುವುದಿಲ್ಲ. ಅಲ್ಲದೆ ಅಂತಹ ದುಡಿಮೆಯಲ್ಲಿಯೇ ತನ್ನ ಸುಖ, ಶಾಂತಿ, ನೆಮ್ಮದಿಗಳನ್ನು ತಪ್ಪದೆ ಅನುಭವಿಸುತ್ತಾನೆ.

ಈ ವಿಷಯವನ್ನು ಕವಿಯೊಬ್ಬರು ಹೀಗೆ ಸೂಚಿಸಿರುತ್ತಾರೆ.

ವಿಶ್ವಧರ್ಮದಿಂದಲೇ ಶಾಂತಿ ಸುಖ ಸಾಧನೆ.

" ಸ್ವಾತಂತ್ರ್ಯವನು ದೇವ ಏಕೆ ಎಮಗಿತ್ತೆ ? ಅದು ನೀತಿಯಿಂದೆಮ್ಮ ಬೀಳಿಪ ಯುಕುತಿ ಏನ್ಕೆ ? ತರುಲತೆಗಳು ಅರಿವಿನೊಳು ನರನಿಗೆ ಎಣೆ ಇರದಿದ್ದರೂ ನಿನ್ನ ಆಣತಿಯನು ಅರಿದು ದುಗುಡ ಬಡದೆ, ಫಲಪುಷ್ಪಗಳ ತಳೆದು ಪರಹಿತವನು ಎಸಗುತಲೇ ನಿನ್ನ ಒಲವು ಜಾಣ್ಮೆಗಳ ತೋರಿಪ ಹರ್ಷದೊಳು ಇರಲು ನಮಗೇಕೆ ಸ್ವಾತಂತ್ರ್ಯ ? ಹಾಗೆಯೇ ಶುಕಪಿಕಂಗಳಿಗೆ ನೀನು ಅತಿಮತಿಯನು ಈಯದಿರೆ, ನಲಿದು ನುಣ್ಚರದಲಿ ಅವು ಪಾಡಿ ಸುಳಿದಾಡಿ, ನಿನ್ನ ನಿಂದಿಸದೆ ಮೇಣ್ ಅನ್ಯರನು ಕುಂದಿಸದೆ ನಿನ್ನ ರಚನೆಯ ಸೊಬಗ ತೋರಿಪ ಹರ್ಷದೊಳು ಇರಲು," ನಮಗೇಕೆ ಸ್ವಾತಂತ್ರ್ಯ ?

" ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ |
ಸಂತೋಷಂ ಜನಯೇತ್ಪ್ರಾಜ್ಞಃ ತದೇವೇಶ್ವರ ಪೂಜನಂ ‖ "

ಇದೇ ಧರ್ಮವು. ವಿಶ್ವಧರ್ಮವು. ಈ ಧರ್ಮದಿಂದಲೇ ಶಾಂತಿ ಸುಖ ಗಳು ದೊರೆಯುತ್ತವೆ. ಇದಕ್ಕಾಗಿಯೇ ನಾವು ದುಡಿದು ಮಾನವ ಜನ್ಮದ ಸಾರ್ಥಕತೆಯನ್ನು ಪಡೆಯಬೇಕು. ಈ ಧಾರ್ಮಿಕ ವಾತಾವ ರಣದಲ್ಲಿ ಧಾರ್ಮಿಕ ಸಂಸ್ಕೃತಿಯಿಂದ ಸ್ಫೂರ್ತಿಯನ್ನು ಪಡೆದಿರುವ ನಮ್ಮ ಮೆಚ್ಚಿನ ನಾಯಕರಾದ ನೆಹರುರವರು ಜಗತ್ತಿನ ಇತರ ದೇಶಗಳಿಗಿಂತ ಮುಂಚಿತವಾಗಿ ಈ ಧಾರ್ಮಿಕ ಸಂದೇಶವನ್ನು ಇತರ ದೇಶಗಳಿಗೂ ನಾಯಕರಿಗೂ ಮನಗಾಣಿಸುವ ದೂತರಾಗಿ ದುಡಿಯುತ್ತಿದ್ದಾರೆಂಬುದು ಸ್ವಾಭಾವಿಕವೂ, ಅನಿವಾರ್ಯವೂ ಆಗಿದೆ. ಪಂಚಶೀಲ ತತ್ವಗಳು ಈ ಧರ್ಮದ, ವಿಶ್ವಧರ್ಮದ ವಿವರ ಗಳಾಗಿವೆ ಎಂಬುದನ್ನು ಎಲ್ಲರೂ ಮನಗಾಣಬಹುದಾಗಿದೆ.

" ಆತ್ಮವತ್ಸರ್ವ ಭೂತಾನಿ ಯಃ ಪಶ್ಯತಿ ಸ ಪಶ್ಯತಿ |
ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ‖

ಈ ವಿಷಯವನ್ನು ಎಲ್ಲರೂ ತಿಳಿಯುವಂತಾಗಲಿ. ಈ ಧರ್ಮವನ್ನು ಎಲ್ಲರೂ ಆಚರಿಸುವಂತಾಗಲಿ ಎಂದು ದೇವರನ್ನು ಜನತಾ ರೂಪಿಯಾದ ಜನಾರ್ದನನನ್ನು ಪ್ರಾರ್ಥಿಸುತ್ತಾ ಪ್ರತಿಯೊಬ್ಬರೂ ತಮ್ಮ ಕೈಯಿಂದಾಗುವ ಸೇವೆಯನ್ನು ಎಲ್ಲರಿಗೂ ಸಲ್ಲಿಸಬೇಕು. ಇದೇ ಪ್ರತಿಯೊಬ್ಬರೂ ನೆರವೇರಿಸಬೇಕಾದ ಧರ್ಮವಾಗಿದೆ. ತಿಳಿವಳಿಕೆಯನ್ನು ಚೆನ್ನಾಗಿ ಶೀಘ್ರವಾಗಿ ಸಂಪಾದಿಸಬಲ್ಲವರು ತಾವು ಪಡೆದಿರುವ ತಿಳಿವಳಿಕೆಯನ್ನು ಇತರರಲ್ಲಿ ಹರಡಬೇಕು. ದೇಶದ ಆಡಳಿತವನ್ನು ದಕ್ಷತೆಯಿಂದ ನಿರ್ವಹಿಸಬಲ್ಲವರು ಮುಖಂಡರೂ ಪ್ರಜಾನಾಯಕರೂ ಆಗಿ ಸರ್ಕಾರದ ಕಾರ್ಯಕಲಾಪಗಳನ್ನು ನಿರ್ವಹಿಸಬೇಕು. ಅಂಥವರು ಶೌರ್ಯ ಧೈರ್ಯಗಳಿಂದ ದೇಶದ ಒಳಗಿನ ದುಷ್ಟರಿಂದಲೂ ಹೊರಗಿನ ಶತ್ರುಗಳಿಂದಲೂ ಜನರನ್ನು ಕಾಪಾಡಲು ಮುಂದಾಗಿರಬೇಕು. ದೇಶದ ಸಂಪತ್ತನ್ನು ಹೆಚ್ಚಿಸಲು ಕುಶಲರಾದವರು ವ್ಯವಸಾಯದಿಂದ ಆಹಾರ ಪದಾರ್ಥಗಳನ್ನು ಬೆಳೆಯುವುದರಲ್ಲಿಯೂ, ಜನರ ಉಪಯೋಗಕ್ಕೆ ಬೇಕಾದ ವಸ್ತುಗಳನ್ನು ತಯಾರಿಸುವುದರಲ್ಲಿಯೂ ದುಡಿದು, ಬೆಳೆದ ಮತ್ತು ತಯಾರಿಸಿದ ಪದಾರ್ಥಗಳನ್ನು ಜನರೆಲ್ಲರಿಗೂ ಯಥೋಚಿತವಾಗಿ ವ್ಯಾಪಾರ ವಾಣಿಜ್ಯಗಳಿಂದ ಹಂಚಬೇಕು. ದೇಹಶಕ್ತಿಯುಳ್ಳವರು ಶ್ರಮದಾನಗಳನ್ನು ವಂಚನೆ ಅಸೂಯೆಗಳಿಲ್ಲದೆ ನೆರವೇರಿಸಬೇಕು. ಇವರೆಲ್ಲರೂ ತಮ್ಮ ಗೃಹಕೃತ್ಯ ನಿರ್ವಾಹಕ್ಕೆ ಆವಶ್ಯಕವಾದಷ್ಟು ಮಾತ್ರ ಪ್ರತಿಫಲವನ್ನು ಪಡೆಯಬೇಕು. ಅತ್ಯಾಶೆ ದುರಾಶೆಗಳನ್ನು ತಲೆ ಎತ್ತದಂತೆ ಮಾಡುತ್ತಿರಬೇಕು. ಈ ಧರ್ಮವನ್ನು ಎಲ್ಲರೂ ಆಚರಿಸುತ್ತಿದ್ದರೆ ಎಲ್ಲರಿಗೂ ಶಾಂತಿ ಸುಖಗಳು ತಪ್ಪದೆ ಖಚಿತವಾಗಿ ದೊರೆಯುತ್ತವೆ. ಧರ್ಮವು ಸತ್ಯಸ್ವರೂಪವಾಗಿದೆ. ಸತ್ಕರ್ಮಗಳೇ ಧರ್ಮದ ಸ್ವರೂಪವಾಗಿವೆ. ಜಗತ್ತಿಗೆ ಧರ್ಮವೇ ನೆಲೆ. ಧರ್ಮವೇ ದೇವರು. ಇದೇ ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ಸ್ವರೂಪವಾಗಿದೆ; ಮತ್ತು ಅದರಿಂದ ಉಂಟಾಗುವ ಫಲವೂ ಆಗಿದೆ. ಈ ಧರ್ಮದಲ್ಲಿ ಆದರವೂ ನಿಷ್ಠೆಯೂ ಎಲ್ಲರಿಗೂ ಉಂಟಾಗುವಂತೆ ಮಾಡು

ವುದೇ ಸಂಸ್ಕೃತಿ ಪ್ರಚಾರದ, ಇಂತಹ ಗ್ರಂಥಗಳ ರಚನೆಯು ಮತ್ತು ಪ್ರಕಟನೆಯು ಉದ್ದೇಶವಾಗಿದೆ.

ಉಪಸಂಹಾರ.

ಭಾರತಾರ್ಯರ ಧಾರ್ಮಿಕ ಸಂಸ್ಕೃತಿಯ ಈ ಸಂಕ್ಷಿಪ್ತ ಚರಿತ್ರೆಯಲ್ಲಿ ಮುಖ್ಯವಾಗಿ ಜನಜೀವನವು ಧರ್ಮದ ತಿಳಿವಳಿಕೆ ಆಚರಣೆಗಳಿಂದ ಹೇಗೆ ಮಾರ್ಪಡುತ್ತಾ ಮೇಲ್ಪಡುತ್ತಿರುತ್ತದೆ, ಜನರ ದಿನಗಟ್ಟಲೆಯ ಜೀವನ ಕ್ರಮದಲ್ಲಿ ಕಾಣಬರುವ ಸಂಸ್ಕೃತಿಯು ವಿಶ್ವ ಧರ್ಮಮೂಲವಾಗಿರುತ್ತಾ ಹೇಗೆ ಬೆಳೆದು ಮುಂದುವರಿಯುತ್ತದೆ, ಜೀವನವೂ, ಸಂಸ್ಕೃತಿಯೂ, ಧರ್ಮವೂ ಹೇಗೆ ಪರಸ್ಪರವಾಗಿ ಪೂರಕ ಪೋಷಕಗಳಾಗಿರುತ್ತಾ ಜನರ ಶಾಂತಿ ಸುಖಗಳನ್ನು ಹೇಗೆ ಹೆಚ್ಚಿಸಲು ಸಹಾಯಕಾರಿಗಳಾಗಿರುತ್ತವೆ ಎಂಬ ಅಂಶವನ್ನು ಸಂಗ್ರಹವಾಗಿ ಆದರೂ ಸಾಧ್ಯವಾದಷ್ಟು ವಿಶದವಾಗಿ ತಿಳಿಸಲು ಪ್ರಯತ್ನಿಸಲಾಗಿದೆ. ಜನರ ನಡೆ ನುಡಿ ಭಾವಗಳು ಒಳ್ಳೆಯುವಾಗಿದ್ದರೆ ಅದನ್ನೇ ಧಾರ್ಮಿಕ ಸಂಸ್ಕೃತಿ ಎನ್ನಬಹುದು. ಭಾರತೀಯರ ಈ ಸಂಸ್ಕೃತಿಯು ಸುಮಾರು ನಾಲ್ಕುಸಾವಿರ ವರ್ಷಗಳಿಂದ ಬೆಳೆದು ಬರುತ್ತಿದೆ. ಈ ವಿಷಯುವನ್ನು ಆಯಾ ಕಾಲಗಳಲ್ಲಿ ರಚಿತವಾದ ಗ್ರಂಥಗಳಲ್ಲಿ ದೊರೆಯುವ ಪ್ರಮಾಣಗಳಿಂದ ನಿರೂಪಿಸಲಾಗಿದೆ. ಇದರಲ್ಲಿ ಸಂಸ್ಕೃತ ಭಾಷೆಯೂ ಸಾಹಿತ್ಯವೂ ಹೇಗೆ ಪ್ರಾಮುಖ್ಯವನ್ನು ಪಡೆದಿವೆ ಎಂಬ ಅಂಶವೂ ಗೊತ್ತಾಗುತ್ತದೆ. ಈ ಸಂಸ್ಕೃತಿಯು ಇತರ ಸಂಸ್ಕೃತಿಗಳ ಸಂಪರ್ಕ ಆಘಾತಗಳನ್ನು ಕಾಲಕ್ರಮದಲ್ಲಿ ಪಡೆದು ಎದುರಿಸಿತು. ಆದರೂ ಅದು ಅವುಗಳಿಂದ ನಷ್ಟವಾಗದೆ ಉಳಿದು ಊರ್ಜಿತವಾಗಿರುವುದು ಈ ಸಂಸ್ಕೃತಿಯ ವಿಶೇಷ ಗುಣವಾಗಿದೆ. ಆದರೆ ವೈದಿಕಾರ್ಯರಲ್ಲಿ ಕಾಮ್ಯಕರ್ಮಗಳಿಂದ ಧರ್ಮದ ತಿಳಿವಳಿಕೆಯು ಕಡಿಮೆಯಾಗಿ ವಿಶ್ವಧರ್ಮಾಚರಣೆಯಲ್ಲಿ ಅನಾದರವು ಬೆಳೆದಾಗ ಅದನ್ನು ಪ್ರತಿಭಟಿಸಿಯೋ ಎನ್ನುವ ಹಾಗೆ ಬೌದ್ಧಮತವು ಹುಟ್ಟಿ ಹಬ್ಬಿತು. ಸತ್ಯ, ಅಹಿಂಸೆ, ಸಹಾನುಭೂತಿ, ಸಹಕಾರ, ಆಶಾ

ಜಯ, ಶಾಂತಿ ಸುಖಲಾಭ ಮುಂತಾದ ಧರ್ಮಗಳನ್ನು ಬುದ್ಧ ದೇವನು ಪ್ರಚಾರ ಆಚರಣೆಗಳಿಂದ ಜನಪ್ರಿಯವಾಗುವಂತೆ ಮಾಡಿದನು. ಬೌದ್ಧಮತವು ಭಾರತದಲ್ಲಿ ಮಾತ್ರವಲ್ಲದೆ ಇತರ ದೇಶಗಳಲ್ಲೂ ಎಂದರೆ ಪರ್ಷಿಯಾ, ಅರೇಬಿಯಾ, ಚೀನಾ, ಜಪಾನ್, ಮಲಯಾ, ಜಾವಾ ಮುಂತಾದ ದೇಶಗಳಿಗೂ ದ್ವೀಪಾಂತರಗಳಿಗೂ ಹರಡುವಂತಾಯಿತು. ಅದರೂ ಅದು ಇತರ ಮತಗಳಲ್ಲಿನ ಗುಣವನ್ನು ಗ್ರಹಿಸಲಾರದೆ ಗೌರವಿಸಲಾರದೆ ಪರಿವರ್ತನದಲ್ಲಿ ಆಸಕ್ತವಾಗಿ ಸ್ವಮತಾಂಧತೆಯನ್ನು ಹೊರಹೊಮ್ಮಿಸಿತು. ಅದು ಈಗಲೂ ಹಾಗೆಯೇ ಇದೆ. ಆಗ ವೈದಿಕಾರ್ಯರು, ತಮ್ಮಲ್ಲೂ ಆನುವಂಶಿಕವಾಗಿ ಬಂದಿದ್ದರೂ ಸುಪ್ತವಾಗಿದ್ದ ಧಾರ್ಮಿಕ ಸಂಸ್ಕೃತಿಯು ಎಚ್ಚರಗೊಳ್ಳಲು, ಸೂಕ್ಷ್ಮಧರ್ಮಗಳ ತಿಳಿವಳಿಕೆಯಿಂದ, ಕಾರ್ಯಕ್ಷೇತ್ರದ ವಿಸ್ತರಣೆಯಿಂದ, ಪುನಃ ವಿಶ್ವಧರ್ಮಾಚರಣ ಪ್ರಚಾರಣಗಳನ್ನು ಕೈಗೊಂಡರು. ಅದರ ಫಲ ಪರಿಣಾಮವಾಗಿ ಬೌದ್ಧಮತವು ವೈದಿಕಾರ್ಯ ಮತದಲ್ಲಿ ಲೀನವಾಗಲು ವಿಶಾಲವಾದ ಹಿಂದೂ ಮತವಾಯಿತು. ಇದು " This is the all absorbing tendency of the Hindu mind." ಎಂದು ವರ್ಣಿತವಾಗಿದೆ. ಇದರ ಪ್ರಭಾವದಿಂದ ವೈದಿಕ ಧರ್ಮವು ತನ್ನ ವಿಶ್ವಧರ್ಮದ ಸ್ವರೂಪವನ್ನು ಹೊರಹೊಮ್ಮಿಸಿತು. ಆಮೇಲೆ ಕ್ರಿ.ಶ. ಎಂಟನೆಯ ಶತಮಾನದಲ್ಲಿ ಪಾರ್ಸಿ ದೇಶದಲ್ಲಿದ್ದ ಅಗ್ನಿಪೂಜಕ ಜರತುಷ್ಟ್ರ ಮತವು ಮುಸಲ್ಮಾನ್ ಮತದ ನಿರ್ಬಂಧ ಕ್ರೌರ್ಯಗಳಿಂದ ಪಾರಾಗಲು ಇಲ್ಲಿಗೆ ಬಂದು ಆಶ್ರಯವನ್ನು ಪಡೆದು ಈವರೆಗೂ ಬಾಳುತ್ತಿದೆ. ಆಮೇಲೆ ಕ್ರಿ.ಶ. ಹತ್ತನೆಯ ಶತಮಾನದಲ್ಲಿ ಭಾರತದ ಮೇಲೆ ಮತಾಂಧವೂ ದ್ರವ್ಯಾಶೆಯುಳ್ಳದ್ದೂ ಆಗಿ ದಾಳಿ ಮಾಡಲು ಬಂದ ಮುಸಲ್ಮಾನ್ ಮತದಿಂದ ಆಘಾತವಾಯಿತು. ಆ ವೇಳೆಗೆ ಭಾರತೀಯರಲ್ಲಿ ಅಜ್ಞಾನದಿಂದ, ಅಂತಶ್ಛಿದ್ರಗಳಿಂದ, ಅನೈಕಮತ್ಯದಿಂದ, ದೂರಾಲೋಚನೆ ಇಲ್ಲದಿರುವಿಕೆಯಿಂದ, ಕುರುಡು ವೈರಾಗ್ಯ ಶಾಂತಿಪ್ರಿಯತೆ ಇವುಗಳ

ಪರಿಣಾಮವಾಗಿ ಮುಸಲ್ಮಾನರು ಜಯವನ್ನು ಗಳಿಸಲೂ, ಈ ದೇಶ ದಲ್ಲಿಯೇ ನೆಲೆಸಲೂ, ರಾಜ್ಯವನ್ನು ಸ್ಥಾಪಿಸಲೂ ಸಾಧ್ಯವಾಯಿತು. ಅನಂತರದಲ್ಲಿ ಕ್ರಿಶ್ಚಿಯನ್ನರು ಈ ದೇಶಕ್ಕೆ ವ್ಯಾಪಾರವಾಣಿಜ್ಯಗಳಿಂದ ದ್ರವ್ಯ ಸಂಪಾದನೆಗಾಗಿ ಬಂದರು. ಹಿಂದೂ ಜನರಲ್ಲಿ ಧರ್ಮದ ತಿಳಿವಳಿಕೆ ಧಾರ್ಮಿಕ ನಡೆವಳಿಕೆಗಳು ಮಲಿನವಾಗಿದ್ದುವು. ಪರಮತ ಸಹನೆಯು ಗುಣವಾದರೂ ಅತಿಯಾದರೆ ದೋಷವೇ ಆಗುತ್ತದೆ. ಮುಸಲ್ಮಾನರು ಹೆಚ್ಚಾಗಿ ನಿರ್ಬಂಧ ಹಿಂಸೆಗಳಿಂದಲೂ, ಪ್ರಲೋಭನೆ ಗಳಿಂದಲೂ, ಹಿಂದುಗಳನ್ನು ಮತಪರಿವರ್ತನೆಯಿಂದ ಮುಸ್ಲಿಂ ಮತಕ್ಕೆ ಸೇರಿಸಿಕೊಳ್ಳುತ್ತಿದ್ದರು. ಆದರೂ ಹಿಂದೂ ಮತತತ್ವದ ಪ್ರಭಾವದ ಫಲವಾಗಿ ಸೂಫಿ ಮತವು ಬಲಗೊಂಡು ಬೆಳೆದುದನ್ನು ನೆನಪಿನಲ್ಲಿಡಬೇಕು. ಇದನ್ನು ಕಂಡರೂ ಹಿಂದುಗಳು ಧರ್ಮಾಸಕ್ತಿ ಯನ್ನು ಕಳೆದುಕೊಂಡಿದ್ದುದರಿಂದ ತಕ್ಕ ಪ್ರತೀಕಾರವನ್ನು ಮಾಡ ಲಾಗಲಿ ಆತ್ಮರಕ್ಷಣೆಯಲ್ಲಾಗಲಿ ಅಶಕ್ತರಾಗಿಯೂ ಉದಾಸೀನ ರಾಗಿಯೂ ಇದ್ದರು. ಕ್ರಿಶ್ಚಿಯನ್ನರು ಎಂದರೆ ಪೋರ್ಚುಗೀಸರೂ, ಫ್ರೆಂಚರೂ, ಬ್ರಿಟೀಷರೂ, ಕ್ರಮವಾಗಿ ಈ ದೇಶದಲ್ಲಿ ವಸತಿಗಳನ್ನು ಸಂಪಾದಿಸಿಕೊಂಡರು. ಅವರು ವಾಣಿಜ್ಯ, .ರಾಜಕೀಯ ಕಾರ್ಯ ಕ್ಷೇತ್ರಗಳಲ್ಲಿ ದೇಶಾಭಿಮಾನ ಕುಲಾಭಿಮಾನಗಳಿಂದ ಮುಂಮುವರಿ ದಿದ್ದರು. ಔದ್ಯೋಗಿಕ ಮತ್ತು ವೈಜ್ಞಾನಿಕ ಕಾರ್ಯ ಕ್ಷೇತ್ರದಲ್ಲೂ ಅವರು ಇತರರನ್ನು ಮೀರಿಸುತ್ತಿದ್ದರು. ಅಜ್ಞಾನದಿಂದ ಹಿಂದೂ ಮತವನ್ನು ತೆಗಳುತ್ತಿದ್ದ ಕ್ರಿಶ್ಚಿಯನ್ ಪಾದ್ರಿಗಳೂ ಹಿನ್ನೆಲೆಯಲ್ಲಿರುತ್ತಾ ಹಿಂದೂಗಳನ್ನು ತಮ್ಮ ಮತಕ್ಕೆ ಪರಿವರ್ತಿಸುತ್ತಿದ್ದರು. ಆದರೂ ಅವರಲ್ಲಿಯೂ ಪರಸ್ಪರವಾಗಿ ಅಸೂಯೆಯಿಂದ ಕದನಗಳಾಗುತ್ತಿದ್ದವು. ಮತಪರಿವರ್ತನೆಯಿಂದ ರಾಜಕೀಯದಲ್ಲೂ ಕೆಲವು ಕಾಲದವರೆಗೆ ಸಹಾಯವಾಗುತ್ತಿತ್ತು. ಆದರೆ ಕಾಲಕ್ರಮದಲ್ಲಿ ಜನರಲ್ಲಿ ವಿದ್ಯಾ ಭ್ಯಾಸವು ಹೆಚ್ಚಾಗಿ ಹರಡಿ, ಜನಸಾಮಾನ್ಯದ ತಿಳಿವಳಿಕೆ, ಗುಣದೋಷ ಗಳ ವಿಮರ್ಶೆ, ಇವುಗಳಲ್ಲಿ ಶಕ್ತಿಯು ಹೆಚ್ಚಿತು. ತುಲನಾತ್ಮಕ ದೃಷ್ಟಿ

ಯಿಂದ ಮತಗಳ, ಸಾಹಿತ್ಯಗಳ ಪರಿಶೀಲನೆಯಿಂದ ಪಾಶ್ಚಾತ್ಯರೇ ಹಿಂದೂ ಮತಧರ್ಮ ಸಾಹಿತ್ಯಗಳ ಉತ್ಕರ್ಷವನ್ನು ಮನಗಂಡು ಪ್ರಕಟಿಸಿದರು. ಈಚೆಗೆ ನಮ್ಮವರೂ ಪ್ರಚಾರ ಕಾರ್ಯವನ್ನು ಪುನಃ ಕೈಗೊಂಡುದರಿಂದಲೂ ಮತಪರಿವರ್ತನೆಗಳು ಕಡಿಮೆಯಾಗಿ ನಿಂತು ಹೋಗುತ್ತಿವೆ ಎಂದೂ ಹೇಳಬಹುದಾಗಿದೆ. ಅಷ್ಟೇ ಅಲ್ಲದೆ ಹಿಂದೂ ಮತದ ಉಪದೇಶ ವಿಶೇಷಗಳನ್ನು ಪಾಶ್ಚಾತ್ಯರೂ, ಅವರಲ್ಲೂ ವಿದ್ಯಾವಂತರಾಗಿರುವವರು ಮನಗಂಡು ಅಭಿನಂದಿಸಿ ಪ್ರಚಾರಮಾಡುತ್ತಲೂ, ಹೆಚ್ಚುಹೆಚ್ಚಾಗಿ ಅನುಸರಿಸುತ್ತಲೂ ಇದ್ದಾರೆ. ಹಿಂದೂಮತಧರ್ಮದಲ್ಲಿ ಮುಖ್ಯವೂ ವಿಶಿಷ್ಟವೂ ಆಗಿರುವ ವಿಶ್ವಧರ್ಮದ ಪ್ರಭಾವದಿಂದ ಅದು ಅಳಿಯದೆ ಉಳಿದು ಊರ್ಜಿತವಾಗಿದೆ ಎಂಬುದು ಗೊತ್ತಾಗುತ್ತದೆ. ಹೀಗೆ ನಮ್ಮ ಈ ಧಾರ್ಮಿಕ ಸಂಸ್ಕೃತಿಯು ಏಳುಬೀಳುಗಳನ್ನು ಕಂಡರೂ ಕಡೆಗೆ ಜಯವನ್ನು ಪಡೆಯುತ್ತಾ ಯಶಸ್ವಿಯಾಗುತ್ತಿದೆ. ಈಗ ನಮ್ಮ ನಾಯಕೋತ್ತಮರಾದ ನೆಹರುರವರು ಪ್ರಚಾರ ಮಾಡುತ್ತಿರುವ ಪಂಚಶೀಲಗಳು ಈ ಧಾರ್ಮಿಕ ಸಂಸ್ಕೃತಿಯ ರೂಪಾಂತರಗಳಾಗಿವೆ. ಇವು ಪ್ರಪಂಚದಲ್ಲಿರುವ ಇತರ ದೇಶಗಳ ನಾಯಕರ ಒಪ್ಪಿಗೆಯನ್ನೂ ಪಡೆಯುತ್ತಾ ಎಲ್ಲ ದೇಶಗಳಲ್ಲೂ ಹಬ್ಬುತ್ತಿವೆ. ಇದರಿಂದ ಜಗತ್ತಿನಲ್ಲಿ ಯುದ್ಧಗಳು ನಿಂತು ಶಾಂತಿ ಸುಖಗಳು ನೆಲೆಸುವಂತಾಗುತ್ತನೆ ಎಂದು ನಂಬಲು ಬರವಸೆ ಯುಂಟಾಗುತ್ತಿದೆ.

ಮಾನವನ ದಿನಗಟ್ಟಲೆಯ ಜೀವನ ಕ್ರಮವು ಕಲಾಮಯವಾಗಿ ಪರಿಷ್ಕಾರಗಳನ್ನು ಪಡೆಯುತ್ತಾ ತುಂಬು ಜೀವನದ ಪೂರ್ಣತೆಯ ಕಡೆಗೆ ಮುಂದುವರಿಯುತ್ತಿದೆ. ಆಹಾರ, ಬಟ್ಟೆ, ಮನೆ, ಇತರರೊಡನೆ ವ್ಯವಹಾರ ಇವುಗಳಲ್ಲಿ ಜನರು ಹೆಚ್ಚುಹೆಚ್ಚಾಗಿ ಮೇಲ್ಮೆಯನ್ನು ಪ್ರೇಯಸ್ಸನ್ನು ಸಾಧಿಸುತ್ತಿದ್ದಾರೆ. ಇದರಂತೆಯೇ ಆಂತರವಾದ ಜೀವನವೂ ಎಂದರೆ, ವಿಶಾಲವಾದ ಮನಸ್ಸು, ಉದಾರವಾದ ಹೃದಯ ಇವುಗಳಿಂದ ಆಧ್ಯಾತ್ಮಿಕ ಜೀವನಕ್ರಮವೂ ಉತ್ತಮಗೊಳ್ಳುತ್ತಾ

ಪ್ರಗತಿಯ ಮಾರ್ಗದಲ್ಲಿ ಶ್ರೇಯಸ್ಸನ್ನೂ ಸಾಧಿಸಲಾಗುತ್ತದೆ. ಕಾಮವು ಧರ್ಮಕ್ಕೆ ಅವಿರೋಧವಾಗಿ ಅನುಸಾರಿಯಾಗಿ ಇದ್ದರೆ "ಧರ್ಮಾವಿರುದ್ಧೋ ಭೂತೇಷು ಕಾಮೋऽಸ್ಮಿ ಭರತರ್ಷಭ ।" ಎಂಬಂತೆ ಪ್ರೇಮವಾಗುತ್ತದೆ. ಮರ್ತ್ಯ ಪ್ರೇಮವು, ಧಾರ್ಮಿಕ ಸಾಹಿತ್ಯದಲ್ಲಿ ಅಮರವಾಗಿ ಕಾಣಬಹುದಾಗಿರುವಂತೆ, ದಿವ್ಯ ಪ್ರೇಮವಾಗಿ ರೂಪಗೊಳ್ಳುತ್ತದೆ. ಹಾಗೆಯೇ ವ್ಯಕ್ತಿ ಪ್ರೇಮವೂ ಧಾರ್ಮಿಕ ಸಂಸ್ಕೃತಿಯ ಪ್ರಭಾವದಿಂದ ವಿಶ್ವಪ್ರೇಮವಾಗಿ ಫಲಿಸುತ್ತದೆ. "ಅಯಂ ನಿಜಃ ಪರೋವೇತಿ ಗಣನಾ ಲಘುಚೇತಸಾಂ । ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ ॥" ತಿಳಿದವರು ತಿಳಿವಳಿಕೆಯಲ್ಲಿ ಹಿಂದಾಗಿರುವವರಿಗೆ ಮೃದುಮಧುರವಾದ ರೀತಿಯಲ್ಲಿ ಸಹಾಯಮಾಡುವಂತಾಗಲಿ, "ಸತಾಂ ಮೈತ್ರೀ ಪುನಸ್ತ್ವೇದೃಶೀ" ಎಂಬಂತೆ ನೀರಕ್ಷೀರ ನ್ಯಾಯವನ್ನು ಅನುಸರಿಸಿ ಪರೋಪಕಾರಿಗಳಾಗಿರಲಿ. "ಪರೋಪಕಾರಾಯ ವಹಂತಿ ನದ್ಯಃ ಪರೋಪಕಾರಾಯ ದುಹಂತಿ ಗಾವಃ । ಪರೋಪಕಾರಾಯ ಫಲಂತಿ ವೃಕ್ಷಾಃ ಪರೋಪಕಾರಾರ್ಥ ಮಿದಂ ಶರೀರಂ ॥ ಪರೋಪಕಾರಾಯ ಸತಾಂ ವಿಭೂತಯಃ ॥" ಇದು ಧಾರ್ಮಿಕ ಸಂಸ್ಕೃತಿಯ ಮಾತೆಂಬುದು ಸ್ಪಷ್ಟವಾಗಿದೆ. Learn to love man in and through God.

ವಿದ್ಯಾ ವಿವಾದಾಯ ಧನಂ ಮದಾಯ
ಶಕ್ತಿಃ ಪರೇಷಾಂ ಪರಿಪೀಡನಾಯ ।
ಖಲಸ್ಯ, ಸಾಧೋರ್ವಿಪರೀತ ಮೇತತ್
ಜ್ಞಾನಾಯ ದಾನಾಯ ಚ ರಕ್ಷಣಾಯ ॥
ಸರ್ವ ಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ। ಭ.ಗೀ-೬.೨೯
ಯೋ ಮಾಂಪಶ್ಯತಿ ಸರ್ವತ್ರ ಸರ್ವಂಚಮಯಿ ಪಶ್ಯತಿ। ಭ.ಗೀ-೬.೩೦

The centre of God is everywhere but the circumference of God is nowhere.

—*Swami Vivekananda.*

ದುಷ್ಟನಿಗೆ, ಧಾರ್ಮಿಕ ಸಂಸ್ಕೃತಿ ಇಲ್ಲದವನಿಗೆ ವಿದ್ಯೆಯುಎದುರಾಳಿಯನ್ನು ವಾದವಿವಾದದಿಂದ ಸೋಲಿಸಬೇಕೆಂದು ಪ್ರೇರಕವಾಗುತ್ತದೆ.

ಹಾಗೆಯೇ ಧನವು ಅಂಥವನಲ್ಲಿ ಮದವನ್ನುಂಟುಮಾಡಿ ಇತರರಲ್ಲಿ ಸಹಾನುಭೂತಿ ಸಹಕಾರಗಳನ್ನು ತಪ್ಪಿಸುತ್ತದೆ. ಅದರಂತೆಯೇ ದೇಹಶಕ್ತಿಯೂ ವೈಜ್ಞಾನಿಕಸಾಧನಗಳ ಶಕ್ತಿಯೂ ಇತರರನ್ನು ಪೀಡಿಸುವಂತೆ ಮಾಡುತ್ತದೆ. ಆದರೆ ಸತ್ಪುರುಷನಾದ, ಧಾರ್ಮಿಕ ಸಂಸ್ಕೃತಿಯುಳ್ಳವನಿಗೆ ಆ ವಿದ್ಯೆಯು ಶ್ರೇಯಸ್ಕರವಾದ ಜ್ಞಾನ ವಿವೇಚನೆಗಳನ್ನುಂಟುಮಾಡುತ್ತದೆ. ಹಾಗೆಯೇ ಆ ಸಾಧುವಿನಲ್ಲಿ ಧನವು ಇತರರಿಗೆ ಸಹಾಯಮಾಡಲು ಪ್ರೇರಿಸುತ್ತದೆ. ಅದರಂತೆಯೇ ಬಲವು ಇತರರನ್ನು ಕಾಪಾಡಲು ತೊಡಗುವಂತೆ ಮಾಡುತ್ತದೆ. ಇದು ಧಾರ್ಮಿಕ ಸಂಸ್ಕೃತಿಯಿಂದಾಗುವ ಉತ್ತಮ ನಡೆವಳಿಕೆಯು.

ವೇದಾಂತದೃಷ್ಟಿಯಿಂದಲೂ ಧಾರ್ಮಿಕ ಸಂಸ್ಕೃತಿಯು ಸತ್ಪರಿಣಾಮವನ್ನೇ ಉಂಟುಮಾಡುತ್ತದೆ ಎನ್ನಬಹುದು. ಹೇಗೆಂದರೆ—

ಕಲಾವತಃ ಸ್ವೈವ ಕಲಾ ಯಯಾಽಧಃಕ್ರಿಯತೇ ಭವಃ ।
ಅನ್ಯಾಭಿಶ್ಚ ಕಲಾಭಿಃ ಕಿಂ ಯಾಭಿರಂಕಃ ಪ್ರದರ್ಶ್ಯತೇ ॥

ತಿಳಿವಳಿಕೆಯ ತನಿಬೆಳಕನ್ನು ಬೆಳದಿಂಗಳಿನಂತೆ ಆಬಾಲ ವೃದ್ಧರೂ ಅಪೇಕ್ಷಿಸುತ್ತಾರೆ. ಆದರೆ ಜ್ಞಾನವು ಇಹಪರ ಸುಖಗಳಿಗೆ ಸಾಧನವಾಗಿರುವಂತೆ, ಸಂಸಾರ ನಿರ್ಬಂಧದ ದುಃಖವನ್ನೂ ದಾಟಿ ಪರಮಪುರುಷಾರ್ಥವಾದ ಶಾಂತಿ ಸುಖಕ್ಕೂ ಕಾರಣವಾಗುವಂತೆ ಮಾಡಿಕೊಳ್ಳುವುದೇ " ಕಲಾಸೀಮಾ ಕಾವ್ಯಂ " ಎಂಬಂತೆ ಕಲೆ ಅಥವಾ ಜಾಣತನದ ಪರಮಾವಧಿಯಾಗುತ್ತದೆ.

ಅಭಿಮಾನಃ ತ್ಯಕ್ತವ್ಯಃ ತ್ಯಕ್ತುಂ ಯದಿ ಶಕ್ಯತೇ ನಾಸೌ ।
ಅಭಿಮಾನಃ ಕರ್ತವ್ಯಃ ಕಿಂತು ಸ ಸರ್ವತ್ರ ಕರ್ತವ್ಯಃ ॥

ಜ್ಞಾನ ವೈರಾಗ್ಯಗಳನ್ನು ಪಡೆದಿರುವವನು ದೇಹ ಮುಂತಾದ ಎಲ್ಲ ವಿಷಯುಗಳಲ್ಲೂ "ನಾನು, ನನ್ನದು," ಎಂಬುದಾಗಿ ಅಹಂಕಾರ ಮಮಕಾರ ರೂಪವಾಗಿರುವ ಅಭಿಮಾನವನ್ನು ಬಿಡಬೇಕು. ಹಾಗೆ ಬಿಡಲಾಗದೆ ಹೋದರೆ ಆ ಪ್ರೀತ್ಯಭಿಮಾನಗಳನ್ನು ಮಾಡಲೇಬೇಕು. ಆದರೆ ಆ ಪ್ರೀತ್ಯಭಿಮಾನಗಳ ರೀತಿಯು ಎಲ್ಲ ಚರಾಚರ ಪ್ರಪಂಚ

ವನ್ನೂ ಒಳಗೊಳ್ಳಬಲ್ಲಷ್ಟು ವಿಶಾಲವಾದುದಾಗಿರಬೇಕು. ಇದರಿಂದ ವಿಶ್ವಧರ್ಮದ ಪರಮ ಫಲವಾದ ಶಾಂತಿಸುಖವು ಎಲ್ಲರಿಗೂ ದೊರೆಯು ವಂತಾಗುತ್ತದೆ. ಹಾಗೆಯೇ

> ಭಾರ್ಯಾ ಪುತ್ರಾಃ ಧನ ಮಧಿಕೃತಿಃ ಜ್ಞಾನಮಾರೋಗ್ಯ ಮಾಯುಃ
> ಸೌವರ್ಣೀ ಸ್ಯಾತ್ ಗುಣಯುಕ್ ಅಗುಣಾತ್ವಾಯಸೀ ಶೃಂಖಲೈವ |
> ಭೋಗ ಶ್ಚೈಷಾಂ ಋಣಪರಿಹೃತೌ ಕೇವಲಂ ದುರ್ಬಲಾನಾಂ
> ದ್ವೇಷೋತ್ಪತ್ತಿರ್ ಯದಿ ಭವತಿ ಸಾ ವಿಶ್ವಮಾಯಾ ಪ್ರಸಿದ್ಧಾ ||

ಹೆಂಡತಿ, ಮಕ್ಕಳು, ಐಶ್ವರ್ಯ, ಅಧಿಕಾರ, ತಿಳಿವಳಿಕೆ, ಆರೋಗ್ಯ, ಆಯುಸ್ಸು ಇವೆಲ್ಲವೂ ಪ್ರವೃತ್ತಿ ಧರ್ಮಪರರಾದ ನಮ್ಮಂತಹ ಸಾಮಾನ್ಯ ಜನರಿಂದ ಅಪೇಕ್ಷಿಸಲ್ಪಡುತ್ತವೆ. ಇವು ಒಳ್ಳೆಯುವಾಗಿದ್ದರೆ ಎಂದರೆ—ಪ್ರೀತಿಸುವ, ಸೇವಿಸುವ ಹೆಂಡತಿ, ಅಂತಹ ಗಂಡನು, ಬುದ್ಧಿ ವಂತರೂ ವಿನಯಶೀಲರೂ ಆಗಿರುವ ಮಕ್ಕಳು, ಧರ್ಮದಿಂದ ಸಂಪಾ ದಿಸಿದ ಹಣ, ಪರೋಪಕಾರದಲ್ಲಿ ಆಸಕ್ತಿಯುಳ್ಳ ಅಧಿಕಾರ, ಶ್ರೇಯ ಸ್ಕರವಾದ ತಿಳಿವಳಿಕೆ, ದೇಹಾರೋಗ್ಯ, ದೀರ್ಘಾಯುಸು — ಹೀಗಿ ದ್ದರೆ, ಇಂತಹ ಸನ್ನಿವೇಶವೂ ನಿವೃತ್ತಿ ಧರ್ಮಪರನಾಗಿರುವ ಜ್ಞಾನಿಗೆ ಚಿನ್ನದಿಂದ ಮಾಡಿರುವ ಬೇಡಿಗಳಂತಿರುತ್ತವೆ. ಹಾಗಿಲ್ಲದೆ ಇವೆಲ್ಲವೂ ದುಷ್ಟವಾಗಿದ್ದರೆ ಕಬ್ಬಿಣದ ಬೇಡಿಗಳಂತಿರುತ್ತವೆ. ಹೇಗಾದರೂ ಎರಡು ಬಗೆಯುವೂ ಬೇಡಿಗಳೇ ಆಗಿರುತ್ತವೆ ಎಂಬುದನ್ನು ಮರೆಯದಿರಬೇಕು. ಇವನ್ನು ಅನುಭವಿಸುವುದೂ ದುರ್ಬಲರಿಗೆ ಮಾತ್ರ ಇರುವ ಅನುಮತಿ (A concession to the weak minded good man) ಮಾತ್ರವಾಗಿದೆ. ಇದನ್ನೂ ಋಣತ್ರಯದ ಪರಿಹಾರಕ್ಕಾಗಿ ಮಾತ್ರ ಪಡೆಯಬೇಕು. ಈ ಅಂಶದಲ್ಲೂ ಜನರಿಗೆ ದ್ವೇಷಬುದ್ಧಿಯುಂಟಾಗು ವಿಕೆಯು ಕಂಡುಬಂದರೆ ಅದೇ ಜಗತ್ಪ್ರಸಿದ್ಧವಾಗಿರುವ ಮಾಯಾ ಶಕ್ತಿಯ ಪ್ರಭಾವವಾಗಿದೆ ಎಂಬುದನ್ನು ನೆನಪಿನಲ್ಲಿಟ್ಟಿರಬೇಕು. ಹಾಗಿ ದ್ದರೆ ಅದರಿಂದ ಅಹಂಕಾರವಾಗಲಿ ಪರಾಪಕಾರದಲ್ಲಿ ಪ್ರವೃತ್ತಿಯಾಗಲಿ ಉಂಟಾಗದೆ ಕೆಡುಕಾಗದಂತಿರುತ್ತದೆ.

ಇದೆಲ್ಲವನ್ನೂ ಒಟ್ಟಿನಲ್ಲಿ ಪರಿಶೀಲಿಸಿದರೆ ಜೀವನವು ಒಂದು ಯಜ್ಞದಂತಿದೆ. ಈ ಅಭಿಪ್ರಾಯವು ಭೂದಾನಯಜ್ಞ, ಶ್ರಮದಾನ, ಸೂತ್ರಯಜ್ಞಗಳಲ್ಲಿ ಈಗಲೂ ಪರಿಚಯವಾಗುತ್ತಿದೆ. ಪ್ರಕೃತಿಪರಿಣಾಮವಾದದ (The theory of evolution) ದೃಷ್ಟಿಯಲ್ಲಿ ಇದು ಸ್ಪಷ್ಟವಾಗಿ ಕಾಣುತ್ತದೆ. ಉಪಾಧಿಗುಣ ವಿಕಾಸಕ್ರಮದ ಅಥವಾ ಆತ್ಮಗುಣ ವಿಕಾಸಕ್ರಮ (Creative evolution)ದ ದೃಷ್ಟಿಯಲ್ಲೂ ಇದನ್ನು "ತತ್‌ಸೃಷ್ಟ್ವಾ ತದೇವಾನು ಪ್ರಾವಿಶತ್ . . . " ಎಂಬಂತೆ ಸೃಷ್ಟ್ಯಾತ್ಮಕ ಪರಿವರ್ತನೆಯ ದೃಷ್ಟಿಯಿಂದಲೂ ಇದನ್ನು ಯಜ್ಞವೆನ್ನಲು ಅಡ್ಡಿ ಇಲ್ಲವು. ಮೇಲೆ ೩೯೭–೪೦೦ ಪುಟಗಳಲ್ಲಿ ಸೂಚಿಸಿರುವಂತೆ ವಿಜ್ಞಾನಕ್ಕೂ, ಧಾರ್ಮಿಕ ಸಂಸ್ಕೃತಿ, ವೇದಾಂತಕ್ಕೂ ಸಂಪರ್ಕವು ಉಂಟಾಯಿತು. ಪ್ರಯೋಗ, ಪರೀಕ್ಷೆಗಳಿಗೆ ಗುರಿಪಡಿಸಲಾಗದಿದ್ದುದರಿಂದ ಧರ್ಮ, ದೇವರು, ಆತ್ಮ ಎಂಬ ಭಾವಗಳನ್ನು ನಂಬದಿದ್ದ ವಿಜ್ಞಾನವು ಈಚೆಗೆ ತನ್ನ ಅಭಿಪ್ರಾಯಗಳನ್ನು ತಿದ್ದುಕೊಳ್ಳುತ್ತಲೂ, ಪರಿಷ್ಕರಿಸಿಕೊಳ್ಳುತ್ತಲೂ ಇದೆ. ವಿಜ್ಞಾನಿಗಳಲ್ಲಿ ಅಗ್ರಗಣ್ಯನಾದ Dr. Albert Einstein ಎಂಬಾತನು ಹೀಗೆ ಹೇಳಿದಾನೆ :

> "My religion consists of a humble admiration of the illimitable superior spirit who reveals himself in the slight details we are able to perceive in our frail and feeble minds. That deeply emotional conviction of the presence of a superior reasoning power, which is revealed in the incomprehensible Universe, forms my idea of God"

ವಿಜ್ಞಾನವು ಭೌತಶಕ್ತಿ, ಪ್ರಾಣಶಕ್ತಿ, ವಾಕ್‌ಶಕ್ತಿ, ಬುದ್ಧಿಶಕ್ತಿ, ಚೇತನಶಕ್ತಿಗಳನ್ನೂ ಒಪ್ಪಿಕೊಳ್ಳುತ್ತಿದೆ ಎಂಬುದನ್ನು ನೆನಪಿನಲ್ಲಿಡಬೇಕು. ಹೀಗೆ ಈ ಧಾರ್ಮಿಕ ಸಂಸ್ಕೃತಿಯು ಜೀವನದ ಎಲ್ಲ ಬಗೆಯ ಕಾರ್ಯಕ್ಷೇತ್ರದಲ್ಲೂ ವ್ಯಾಪಿಸಿದೆ. ರಾಜಕೀಯ, ಸಾಮಾಜಿಕ,

ಆರ್ಥಿಕ, ವೈಜ್ಞಾನಿಕ ಕ್ಷೇತ್ರಗಳಲ್ಲೂ ಈ ಸಂಸ್ಕೃತಿಯು ಪ್ರಭಾವಶಾಲಿಯಾಗಿದೆ. ಈ ಸಂಸ್ಕೃತಿಯಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳೂ ಕರ್ಮ, ಭಕ್ತಿ, ಧ್ಯಾನ, ಜ್ಞಾನವೆಂಬ ಸಾಧನಗಳೂ ಆತ್ಮ, ಪುಣ್ಯ, ಪಾಪ, ಶುದ್ಧಿ, ಸಿದ್ಧಿ ಮುಂತಾದ ಅಭಿಪ್ರಾಯಗಳೂ ಹಾಸುಹೊಕ್ಕಿನಂತೆ ಸೇರಿಕೊಂಡಿವೆ. ಇವನ್ನು ರಾಜಕೀಯ ಕ್ಷೇತ್ರದಿಂದಲೂ ಬಿಡಿಸಬಾರದು, ಸಾಧ್ಯವೂ ಅಲ್ಲ. ಹೀಗಿದ್ದರೂ (Secular State) ಎಂಬ ಮುಂತಾದ ವಾದದಲ್ಲಿ ಹುರುಳಿಲ್ಲವೆನ್ನಬೇಕು. ಇಂತಹ ವಿಶ್ವಧರ್ಮದ ಅರಿವಿನಿಂದ ಉಂಟಾಗಿ, ಬೆಳೆಯುತ್ತಾ ಬಂದಿರುವ ಧಾರ್ಮಿಕ ಸಂಸ್ಕೃತಿಗೆ ವಿಸ್ತರಣ ಸಹಾಯಬೆಂಬಲ ಪ್ರೋತ್ಸಾಹಗಳನ್ನು ಕೊಡುತ್ತಾ ವಿಶ್ವಶಾಂತಿಯನ್ನು ಸ್ಥಾಪಿಸಲೂ ಕಾಪಾಡಲೂ ಸಾಧ್ಯವಾಗುತ್ತದೆ. ಇದನ್ನು ನಮ್ಮ ಮುಖಂಡರೂ ನಾಯಕರೂ ತಿಳಿಯುವಂತಾಗಲೆಂದು ವಿಶ್ವಧರ್ಮ ಸ್ವರೂಪಿಯಾದ ದೇವರಲ್ಲಿ ಪ್ರಾರ್ಥಿಸಿ ನಡೆಯುತ್ತಿರಬೇಕು. ಈ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರ ಉಪದೇಶಾಮೃತವಾಣಿಯನ್ನು ಉದಾಹರಿಸಿ ಈ ಗ್ರಂಥವನ್ನು ಇಲ್ಲಿಗೆ ಮುಗಿಸಲಾಗುತ್ತದೆ.

> "So my patriotism is for me a stage in my journey to the land of eternal freedom and peace. Thus it will be seen that for me there are no politics bereft of religion. They subserve religion. Politics, bereft of religion, are a death trap because they kill the soul. · · · If I seem to take part in politics, it is only because politics encircles us like the coils of a snake from which we cannot get out, no matter how one tries. I wish to wrestle with the snake. I am trying to introduce religion into politics. · · · The whole of my life is saturated with the religious spirit. I could not live for a second without religion." —*Freedom and Culture.*

ಜನಜೀವನದಲ್ಲಿ ಕಾಣಬರುವ ರಾಜಕೀಯ, ಸಾಮಾಜಿಕ, ಆರ್ಥಿಕ, ವೈಜ್ಞಾನಿಕ, ಮುಂತಾದ ಕಾರ್ಯಕ್ಷೇತ್ರಗಳನ್ನು ಮತ ಧರ್ಮ

ಗಳಿಂದ ಬಿಡಿಸಲಾಗುವುದಿಲ್ಲ. ಬಿಡಿಸಲು ಪ್ರಯತ್ನಿಸಲೂ ಬಾರದು. ವಿಶ್ವಧರ್ಮದ ಆಧಾರದ ಮೇಲೆ ಬೆಳೆದಿರುವ ಧಾರ್ಮಿಕ ಸಂಸ್ಕೃತಿಯು ಪ್ರಭಾವದಿಂದ ಈ ಎಲ್ಲ ಕ್ಷೇತ್ರಗಳಲ್ಲೂ ಸ್ವಾತಂತ್ರ್ಯ ಶಾಂತಿ ಸುಖ ಗಳನ್ನು ಪಡೆಯಲಾಗುತ್ತದೆ. ಹಾಗೆಯೇ ಮಾಡೋಣ. ಎಂಬುದೇ ಇದರ ತಾತ್ಪರ್ಯವಾಗಿದೆ.

ಈ ಉದ್ದೇಶವು ನೆರವೇರುವಂತೆ ಭಗವಂತನು ಅನುಗ್ರಹಿಸು ತ್ತಿರಲಿ. "ಯತೋ ಧರ್ಮಃ ತತೋ ಜಯಃ, ಯತೋ ಅಧರ್ಮ ಸ್ತತೋಽಜಯಃ."

> ಶಿವೇ ತವ ಕೃಪಾ ದದೌ ಗೃಹಕಳತ್ರವಿತ್ತಾದಿಕಂ
> ಸುತಾನ್ ದುಹಿತೃತತ್ಸುತಾನ್ ಸುಕೃತಯುಕ್ತ ಕಾಶ್ಚಿತ್ ಕೃತಾಃ ।
> ಅಲಂಮತಿರಿಹಾಸ್ತು ಮೇ ವ ಮ ಕದಾಸ್ಯಂತ ಮಾಶಾ ವ್ರಜೇತ್
> ಪ್ರಬೋಧ ಸುಖ ಮರ್ಥಯೇ ಪರವಿರಕ್ತಿ ಮುಕ್ತೀ ಮುದಾ ॥

ಎಂದರೆ, ಮಂಗಳಕರಳಾದ ತಾಯಿಯೇ, ನಿನ್ನಕೃಪೆಯಿಂದ ನಾನು ಮನೆ ಹೆಂಡತಿ ಐಶ್ವರ್ಯ ಮುಂತಾದುದನ್ನೂ, ಮಕ್ಕಳು ಮೊಮ್ಮಕ್ಕ ಳನ್ನೂ ಯಥಾಯೋಗ್ಯವಾಗಿ ಪಡೆದಿದ್ದೇನೆ. ಜನ್ಮಸಾರ್ಥಕ್ಯಕ್ಕಾಗಿ ಕೆಲವು ಒಳ್ಳೆಯ ಗ್ರಂಥಗಳನ್ನು ಬರೆದು ಸೇವೆಯನ್ನು ಸಲ್ಲಿಸಿದೇನೆ. ಐಹಿಕ ಫಲಗಳಲ್ಲಿ ನನಗೆ ಇಷ್ಟು ಸಾಕು ಎಂಬ ತೃಪ್ತಿ ಮನೋಭಾವವು ಉಂಟಾಗಿರಲಿ. ಇನ್ನೂ ಹೆಚ್ಚಾಗಿ ಆಶಿಸುತ್ತ ಹೋದರೆ ಆಶೆಯು ಕೊನೆ ಗಾಣದೆ ಹೋಗುತ್ತದೆ. ಆದುದರಿಂದ ಜ್ಞಾನಾನಂದ, ವೈರಾಗ್ಯ, ಮೋಕ್ಷಗಳನ್ನು ಸಂತೋಷವಾಗಿ ಪಡೆಯಲಿಚ್ಛಿಸುತ್ತಿದೇನೆ.

"ಸತ್ಯಮೇವ ಜಯತೇ ನಾನೃತಂ" ಓಂ ತತ್ಸತ್.

**ಓಂ ಶಾಂತಿ ಶ್ಶಾಂತಿ ಶ್ಶಾಂತಿಃ**

WD 248—GPB—2,000—20-1-58